# ದಕ್ಕಲ ಜಾಂಬಪುರಾಣ ಮತ್ತು ಗಂಗಭಾರತದ ಬಹುಪಠ್ಯಗಳ ಕಥನ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸುತ್ತಿರುವ ಮಹಾಪ್ರಬಂಧ)


ಸಂಶೋಧಕರು

**ಚಂದ್ರಶೇಖರ.ಬಿ.**

ಮಾರ್ಗದರ್ಶಕರು

**ಡಾ. ಮೊಗಳ್ಳಿ ಗಣೇಶ್**

ಪ್ರಾಧ್ಯಾಪಕರು

ಜಾನಪದ ಅಧ್ಯಯನ ವಿಭಾಗ





ಸಮಾಜ ವಿಜ್ಞಾನಗಳ ನಿಕಾಯ

ಜಾನಪದ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೨೦

# ದಕ್ಕಲ ಜಾಂಬಪುರಾಣ ಮತ್ತು ಗಂಗಭಾರತದ ಬಹುಪಠ್ಯಗಳ ಕಥನ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸುತ್ತಿರುವ ಮಹಾಪ್ರಬಂಧ)


ಸಂಶೋಧಕರು
**ಚಂದ್ರಶೇಖರ.ಬಿ.**

ಮಾರ್ಗದರ್ಶಕರು
**ಡಾ. ಮೊಗಳ್ಳಿ ಗಣೇಶ್**
ಪ್ರಾಧ್ಯಾಪಕರು
ಜಾನಪದ ಅಧ್ಯಯನ ವಿಭಾಗ





ಸಮಾಜ ವಿಜ್ಞಾನಗಳ ನಿಕಾಯ
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೨೦

# ಮಾರ್ಗದರ್ಶಕರ ದೃಢೀಕರಣ ಪತ್ರ

**ಚಂದ್ರಶೇಖರ.ಬಿ.** ಇವರು **'ದಕ್ಕಲ ಜಾಂಬಪುರಾಣ ಮತ್ತು ಗಂಗಭಾರತದ ಬಹುಪಠ್ಯಗಳ ಕಥನ'** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯ ಸಮಾಜ ವಿಜ್ಞಾನಗಳ ನಿಕಾಯದ **ಜಾನಪದ ಅಧ್ಯಯನ ವಿಭಾಗಕ್ಕೆ** ಸಲ್ಲಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ದಿನಾಂಕ :** 24.3.22
**ಸ್ಥಳ : ವಿದ್ಯಾರಣ್ಯ**

**(ಡಾ. ಮೊಗಳ್ಳಿ ಗಣೇಶ್)**
ಮಾರ್ಗದರ್ಶಕರು ಹಾಗೂ ಪ್ರಾಧ್ಯಾಪಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ–೫೮೩ ೨೭೬**

# ಸಂಶೋಧಕರ ಪ್ರಮಾಣ ಪತ್ರ

**ಚಂದ್ರಶೇಖರ.ಬಿ.** ಇವರು **'ದಕ್ಕಲ ಜಾಂಬಪುರಾಣ ಮತ್ತು ಗಂಗಭಾರತದ ಬಹುಪಠ್ಯಗಳ ಕಥನ'** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು **ಡಾ. ಮೊಗಳ್ಳಿ ಗಣೇಶ್**, ಪ್ರಾಧ್ಯಾಪಕರು ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯ ಸಮಾಜ ವಿಜ್ಞಾನಗಳ ನಿಕಾಯದ **ಜಾನಪದ ಅಧ್ಯಯನ ವಿಭಾಗಕ್ಕೆ** ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

**ದಿನಾಂಕ :** 16/10/2020
**ಸ್ಥಳ : ವಿದ್ಯಾರಣ್ಯ**

**ಚಂದ್ರಶೇಖರ.ಬಿ.**
ಪಿಎಚ್.ಡಿ. ಸಂಶೋಧನ ವಿದ್ಯಾರ್ಥಿ
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ-೫೮೩ ೨೭೬**

# ಪರಿವಿಡಿ

ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ಸ್ವರೂಪ, ಮಹತ್ವ, ವಿಧಾನ ಮತ್ತು ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

೧.೧. ಅಧ್ಯಯನದ ಉದ್ದೇಶ ಮತ್ತು ಸ್ವರೂಪ

೧.೨. ಅಧ್ಯಯನದ ಮಹತ್ವ

೧.೩. ಅಧ್ಯಯನದ ವಿಧಾನ

೧.೪. ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ಸ್ವರೂಪ, ಮಹತ್ವ, ವಿಧಾನ ಮತ್ತು ಇದುವರೆಗೂ ನಡೆದ ಅಧ್ಯಯನಗಳ ಸಮೀಕೆ

## ಪ್ರಸ್ತಾವನೆ

ಮಾನವ ವಿಕಾಸದ ಆದಿಗೆ ಹಲವು ವರ್ಷಗಳ ಇತಿಹಾಸವಿದೆ ನಾಗರೀಕತೆಯ ಆದಿಯು ಅಸಮಾನತೆಗಳಿಂದ ಕೂಡಿದ್ದು. ವರ್ತಮಾನದಲ್ಲಿ ಅಸಮಾನ ಸಮಾಜವಾಗಿ ಪರಿವರ್ತಿತಗೊಂಡಿದ್ದು. ಇದು ಮುಂದುವರೆದು ೨೧ನೇ ಶತಮಾನದ ಭಾರತ ತನ್ನ ಎಲ್ಲಾ ಅಸಮಾನತೆಗಳನ್ನು ಒಳಗೊಂಡು ಅತ್ಯಂತ ಸಂಕೀರ್ಣ ಸಾಮಾಜಿಕ ವ್ಯವಸ್ಥೆಯನ್ನು ಹೊಂದಿದೆ. ಕುಲ ಪದ್ಧತಿಯು ಭಾರತವನ್ನು ಜಾತಿ ಪ್ರಧಾನ ಸಮಾಜವಾಗಿ ರೂಪಿಸಿದೆ. ಈ ಜಾತಿ ಪ್ರಧಾನ ಸಮಾಜದಲ್ಲಿ ದಕ್ಕಲಿಗರದು ಅತ್ಯಂತ ದುಃಖದ ಸಂಕಥನ ಸಮಾಜದ ಅತ್ಯಂತ ತಳಸಮುದಾಯದ ದಕ್ಕಲಿಗರು ಪರಿಶಿಷ್ಟ ಜಾತಿಗೆ ಸೇರಿದ ಮಾದಿಗರ ಉಪಜಾತಿಗಳಲ್ಲಿ ಒಂದಾಗಿದೆ. ಮಾದಿಗರು ಜಾತಿಯ ವ್ಯವಸ್ಥೆಯಲ್ಲಿ ಕೆಳಸ್ಥರದಲ್ಲಿದವರು. ಇವರಿಗಿಂತಲೂ ದೂರವಾಗಿ ಬದುಕುತ್ತಾ ಬಂದವರು ದಕ್ಕಲಿಗರು. ಇವರು ಮೂಲತಃ ಆಂಧ್ರಪ್ರದೇಶದಿಂದ ವಲಸೆ ಬಂದು ಕರ್ನಾಟಕದ ನಾನಾ ಭಾಗಗಳಲ್ಲಿ ಅಲೆಮಾರಿ ಜೀವನ ನಡೆಸುತ್ತಿದ್ದಾರೆ. ಇವರಿಗೆ ತಮ್ಮದೇ ಆದ ಒಂದು ನೆಲೆಯಿಲ್ಲ ಆದರೂ ಇವರದೆ ಆದ ಕೌಟುಂಬಿಕ ಸಾಮಾಜಿಕ ವ್ಯವಸ್ಥೆ ಇದೆಯೆಂಬುದೇ ಕುತೂಹಲದ ಸಂಗತಿ. ಇವರು ಅಲೆಮಾರಿ ಜೀವನ ನಡೆಸುತ್ತಾ. ಮಾದಿಗರ ಕೇರಿಗಳ ಪಕ್ಕದಲ್ಲಿ ಗುಡಿಸಲುಗಳನ್ನು ಹಾಕಿಕೊಂಡು ಮಾದಿಗರ ಮನೆಗಳಲ್ಲಿ ಭಿಕ್ಷೆಯನ್ನು ಬೇಡಿ ಬದುಕನ್ನು ಸಾಗಿಸುತ್ತಿದ್ದಾರೆ.

ದಕ್ಕಲಿಗರನ್ನು ದಕ್ಕಲಿಗರು, ದೊಕ್ಕಲಿಗರು, ಡಕ್ಕಲರು, ಡೊಕ್ಲಾರು, ದಕ್ಕಲರ್, ದಕ್ಕಲಿಗ ಎಂಬ ಹೆಸರುಗಳಿಂದ ಕರೆಯುವರು. ಮಾದಿಗರು ಈ ಸಮುದಾಯಗಳನ್ನು ಹೊರಗಿನ ಮಗ, ದತ್ತು ಮಗ, ಹೊಟ್ಟೆ ಮಗ, ಮನೆ ಮಗ ಎಂದು ಕರೆದರೆ ಆಂಧ್ರಪ್ರದೇಶಗಳಲ್ಲಿ ವಾಸಿಸುವ ದಕ್ಕಲಿಗರು ತೆಲುಗು ಭಾಷೆಯಲ್ಲಿ ದಕ್ಕಲವಾಡು, ದಕ್ಕೊಲೋಳು, ಡೊಕ್ಕಲು, ದಕ್ಕಲವಾರು ಎಂದು ಕರೆಯುತ್ತಾರೆ. ಹೀಗೆ ಕರೆಯುವ ದಕ್ಕಲ ಸಮುದಾಯಗಳು ಭಾರತದ ನಾನಾ ಭಾಗಗಳಲ್ಲಿ ನೆಲೆಸಿದ್ದಾರೆ. ದಕ್ಕಲ ಸಮುದಾಯಗಳು ಕರ್ನಾಟಕದಲ್ಲಿ ತುಮಕೂರು, ಬೆಳಗಾವಿ,

ಕೋಲಾರ, ಚಿಕ್ಕಬಳ್ಳಾಪುರ, ಹೊಸಪೇಟೆ, ರಾಯಚೂರು, ಬೆಂಗಳೂರು ಗ್ರಾಮಾಂತರ ಮುಂತಾದ ಕಡೆ ನೆಲೆಸಿರುವುದು ಕಂಡು ಬರುತ್ತದೆ.[೧]

ಈ ಸಮುದಾಯಗಳ ಬಗ್ಗೆ ಚರ್ಚೆ ಮಾಡುವ ಸಂದರ್ಭದಲ್ಲಿ ಹಲವಾರು ಪುರಾಣದ ಕಥೆಗಳು ದೊರೆಯುತ್ತವೆ. ಕನ್ನಡ ಸಾಹಿತ್ಯದಲ್ಲಿ ಅನೇಕ ಸಾಹಿತ್ಯಕಾರರು ತಮ್ಮದೇ ಆದ ಹಿನ್ನೆಲೆಯಲ್ಲಿ ರಾಮಾಯಣ ಮತ್ತು ಮಹಾಭಾರತಗಳನ್ನು ವಿಧವಿಧವಾಗಿ ಚರ್ಚಿಸಿದ್ದಾರೆ. ಆದರೆ ದಕ್ಕಲಿಗರು ಜಾಂಬ ಪುರಾಣವನ್ನು ಮಹಾಕಾವ್ಯಗಳಷ್ಟೇ ಪ್ರಾಮುಖ್ಯತೆಯನ್ನು ಕೊಟ್ಟು ಜಾಂಬ ಪುರಾಣದ ಗಂಗಭಾರತವನ್ನು ಹಾಡಿನ ರೂಪದಲ್ಲಿ ದೃಶ್ಯದಲ್ಲಿ ರೂಪದಲ್ಲಿ ಪ್ರದರ್ಶಿಸುತ್ತಿರುವುದು ವಿಶಿಷ್ಟವಾದ ಜಾನಪದ ಕಥಾ ರೂಪವಾಗಿದೆ. ಇವರು ಮೂಲತಃ ಭಾಷೆ ತೆಲುಗು ಭಾಷಿಕರಾಗಿದ್ದು, ಇದರಲ್ಲಿ ಗಂಗಭಾರತವೆಂಬ ಕಥೆಯನ್ನು ಹೇಳುವ ಜಾನಪದ ಕಥಾ ಪ್ರಕಾರವಾಗಿದೆ. ಈ ಪುರಾಣವನ್ನು ದೃಶ್ಯದ ರೂಪದಲ್ಲಿ ತಂದು ನಾಟಕಗಳನ್ನು ಪ್ರದರ್ಶಿಸುತ್ತಾ ತಮ್ಮ ಸಾಂಸಾರಿಕ ಜೀವನವನ್ನು ನಡೆಸುತ್ತಿದ್ದಾರೆ. ಜಾಂಬಪುರಾಣವನ್ನು ಗಂಗಭಾರತದ ಗೇಯ ಕಥೆಯನ್ನಾಗಿ ಹಾಡುವುದು ಈ ಸಮುದಾಯಗಳಲ್ಲಿ ಕಾಣಬಹುದು.

ದಕ್ಕಲ ಸಮುದಾಯವು ಅಲೆಮಾರಿ ಮಾದಿಗ ಸಮುದಾಯಗಳಲ್ಲೇ ಅತ್ಯಂತ ಹಿಂದುಳಿದ ಉಪಪಂಗಡವಾಗಿ ಹೀನಾಯ ಸ್ಥಿತಿಯಲ್ಲಿದ್ದಾರೆ. ಇಂದಿಗೂ ಈ ಸಮುದಾಯಗಳು ವಲಸೆ ಹೋಗುವುದು ಕಂಡುಬರುತ್ತದೆ. ಈ ಸಮುದಾಯಗಳು ಒಂದು ಕಡೆ ಪರಿಪೂರ್ಣವಾಗಿ ನೆಲೆಯೂರಿ ನಿಲ್ಲಲು ಸಾಧ್ಯವಾಗದೇ ಇರುವುದಕ್ಕೆ ಸಾಮಾಜಿಕ ಅಸಮಾನತೆ ಆರ್ಥಿಕ ದೌರ್ಬಲ್ಯ ಶಿಕ್ಷಣದ ಕೊರತೆ ಇಂದಿಗೂ ಸಮಾಜದೊಡನೆ ಮುಖಾಮುಖಿಯಾಗಲು ಸಾಧ್ಯವಾಗುತ್ತಿಲ್ಲ. ಈ ಸಮುದಾಯಗಳ ಸಾಂಪ್ರದಾಯಿಕ ನಂಬಿಕೆಗಳಿಂದ ಹೊರಬರಲು ಸಾಧ್ಯವಾಗದೆ ಇಂದಿಗೂ ಕೆಲವು ಪ್ರದೇಶಗಳಲ್ಲಿ ಭಿಕ್ಷೆ ಬೇಡುವುದಾಗಿದೆ. ಇಂತಹ ಸ್ಥಿತಿ ತಮ್ಮ ಮುಂದಿನ ಪೀಳಿಗೆಗೆ ಬರಬಾರದು ಎಂದು ಸ್ವಲ್ಪಮಟ್ಟಿಗೆ ಚೇತರಿಸಿಕೊಳ್ಳುವುದಕ್ಕೆ ಪ್ರಯತ್ನಿಸುತ್ತಿದ್ದಾರೆ. ಆದರೆ ಅಲ್ಪ ಉದ್ಯೋಗಗಳನ್ನು ತೋಡಿಕೊಂಡು ಅಲ್ಪ ತೃಪ್ತ ಜೀವನ ನಡೆಸುತ್ತಿರುವ ಸಮುದಾಯಗಳಾಗಿವೆ.

## ೧.೧. ಅಧ್ಯಯನದ ಉದ್ದೇಶಗಳು ಮತ್ತು ಸ್ವರೂಪ

ಈ ಅಧ್ಯಯನದಲ್ಲಿ ದಕ್ಕಲ ಸಮುದಾಯಗಳ ಪೌರಾಣಿಕ ಹಿನ್ನೆಲೆ, ಸಾಮಾಜಿಕ ಹಿನ್ನೆಲೆ, ವರ್ತಮಾನದ ಕಸುಬುಗಳನ್ನು ಸಾಮಾಜಿಕ ಆರ್ಥಿಕ ಹಾಗೂ ಶೈಕ್ಷಣಿಕ ವ್ಯವಸ್ಥೆಯನ್ನು ಹಾಗೂ ಗಂಗಾಭಾರತ ಹಾಡಿನ ನೆಲೆಯಲ್ಲಿ ದರುವಿನ ಮಹತ್ವ ಈ ಸಮುದಾಯಗಳ ಪಾರಂಪರಿಕ ಆಚರಣೆಗಳ ಬಗ್ಗೆ ವಿವರಿಸಲು ಪ್ರಯತ್ನಿಸಲಾಗಿದೆ. ಈ ಹಿನ್ನೆಲೆಯಲ್ಲಿ ಅಧ್ಯಯನದ ಉದ್ದೇಶವನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

೧. ದಕ್ಕಲ ಸಮುದಾಯಗಳ ಸಾಮಾಜಿಕ ಹಿನ್ನೆಲೆಯನ್ನು ವಿವರಿಸುವುದು.

೨. ದಕ್ಕಲಿಗರಲ್ಲಿ ಗಂಗಭಾರತದ ಹುಟ್ಟಿನ ಉದ್ದೇಶ ತಿಳಿಯುವುದು.

೩. ಗಂಗಭಾರತದಲ್ಲಿ ದಕ್ಕಲಿಗರ ಅಸ್ಮಿತೆಯನ್ನು ಹುಡುಕುವುದು.

೪. ಗಂಗಭಾರತವು ಸೇರಿದಂತೆ ಜಾನಪದದಲ್ಲಿ ದರುವಿನ ಮಹತ್ವ ತಿಳಿಯುವುದು.

೫. ದಕ್ಕಲ ಸಮುದಾಯಗಳ ಕುಲಸಂಬಂಧಿ ವಿವರಗಳು ಹಾಗೂ ಪಾರಂಪರಿಕ ಆಚರಣೆಗಳ ಬಗ್ಗೆ ವಸ್ತುನಿಷ್ಠವಾಗಿ ಅಧ್ಯಯನ ಮಾಡುವುದು.

೬. ದಕ್ಕಲ ಸಮುದಾಯಗಳ ಆಚರಣೆಗಳು ಮೂಲ ಪುರಾಣಗಳೊಂದಿಗೆ ಸಂಬಂಧ ತಿಳಿಸುವುದು.

೭. ದಕ್ಕಲರ ವರ್ತಮಾನದ ಸಾಮಾಜಿಕ, ಆರ್ಥಿಕ, ಸ್ಥಿತಿಗತಿಗಳನ್ನು ಅಧ್ಯಯನ ಮಾಡುವುದು.

೮. ವಾಸ್ತವ ಶೈಕ್ಷಣಿಕ ಮತ್ತು ರಾಜಕೀಯ ಸ್ಥಿತಿಗತಿಗಳನ್ನು ಚರ್ಚಿಸುವುದು.

೯. ಸರ್ಕಾರದಿಂದ ಇಲ್ಲಿಯ ತನಕ ಯಾವ ರೀತಿಯ ಪ್ರಯೋಜನಗಳನ್ನು ಪಡೆದು ದಕ್ಕಲ ಸಮುದಾಯಗಳು ಬೆಳವಣಿಗೆ ಹೊಂದಿವೆ ಎಂದು ನೋಡುವುದು.

೧೦. ದಕ್ಕಲ ಸಮುದಾಯಗಳು ಸರ್ಕಾರದಿಂದ ಏಕೆ ನಿರ್ಲಕ್ಷ್ಯಕ್ಕೆ ಒಳಗಾಗಿವೆ ಹಾಗೂ ಉದ್ದೇಶವೇನು? ಎಂದು ತಿಳಿಯುವುದೆ ಈ ಅಧ್ಯಯನದ ಉದ್ದೇಶವಾಗಿದೆ.

ದಕ್ಕಲ ಸಮುದಾಯಗಳು ಹಲವಾರು ಸಮಸ್ಯೆಗಳನ್ನು ತಮ್ಮ ಒಡಲಿನಲ್ಲಿ ಇಟ್ಟುಕೊಂಡು ಸಾಮಾಜಿಕ ಬೆಂಬಲವಿಲ್ಲದೆ ತಮ್ಮ ಪುರಾಣಗಳನ್ನು ನೆಚ್ಚಿಕೊಂಡು ತಮ್ಮ ಸಮುದಾಯಗಳ ಸಂಖ್ಯಾಬಲವು ಇಲ್ಲದೆ ವರ್ತಮಾನದ ಸಮಾಜದೊಂದಿಗೆ ಎದುರಿಸಲು ಪರದಾಡುತ್ತಿವೆ. ಸರಿಯಾದ ಉದ್ಯೋಗವಿಲ್ಲದೆ ಈಗಲೂ ಭಿಕ್ಷೆ ಬೇಡಿ ತಿನ್ನುವ ಪರಿಸ್ಥಿತಿ ಈ ಸಮುದಾಯಗಳದ್ದಾಗಿದೆ. ಸರ್ಕಾರದಿಂದ ಕನಿಷ್ಠ ಸೌಲಭ್ಯಗಳು ಇಲ್ಲದೆ ಜೀವನಕ್ಕಾಗಿ ದೈಹಿಕ ಶ್ರಮವಹಿಸುವ ಅಲ್ಪ ತೃಪ್ತ ಜನರಾಗಿದ್ದಾರೆ. ತುತ್ತು ಅನ್ನಕ್ಕೂ ಪರದಾಡುವ ಪರಿಸ್ಥಿತಿ ಎದುರಾಗಿದೆ. ಈ ಸಮುದಾಯಗಳು ದಿನ ಕೂಲಿ ಕೆಲಸಗಾರರಾಗಿ ದುಡಿದು ಜೀವನ ಸಾಗಿಸುತ್ತಿದ್ದಾರೆ. ಪಾರಂಪರಿಕ ಜ್ಞಾನಾವನ್ನು ಮುಂದುವರಿಸುವ ಈ ಸಮುದಾಯಗಳು ತಮ್ಮ ಮೂಲ ಪುರಾಣವನ್ನು ನಂಬಿ ಜೀವಿಸುವ ಈ ಸಮುದಾಯಗಳ ಸಮಾಜದೊಡನೆ ಹೇಗೆ ಸಂಘರ್ಷಿಸುತ್ತಿವೆ ಎಂದು ತಿಳಿಯುವ ಪ್ರಯತ್ನ ಅಧ್ಯಯನದಲ್ಲಿ ಮಾಡಲಾಗಿದೆ.

"ದಕ್ಕಲರ ಜಾಂಬಪುರಾಣ ಮತ್ತು ಗಂಗಭಾರತದ ಬಹುಪಠ್ಯಗಳ ಕಥನ" ಎಂಬ ಶೀರ್ಷಿಕೆಯಡಿಯಲ್ಲಿ ಅಧ್ಯಯನವನ್ನು ಕೈಗೊಂಡಿದ್ದು ಅದಕ್ಕೆ ಸಂಬಂಧಿಸಿದಂತೆ ಪರಿವಿಡಿಯನ್ನು ಮಾಡಿಕೊಂಡಿದ್ದು ಎಂಟು ಅಧ್ಯಾಯಗಳಾಗಿ ಮಾಡಲಾಗಿದೆ.

ಮೊದಲನೇ ಅಧ್ಯಾಯದಲ್ಲಿ ಪ್ರಸ್ತಾವನೆ, ಅಧ್ಯಯನದ ಉದ್ದೇಶ, ಸ್ವರೂಪ, ಮಹತ್ವ ವಿಧಾನ ಮತ್ತು ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆಗಳನ್ನೊಳಗೊಂಡಿದೆ.

ಎರಡನೇ ಅಧ್ಯಾಯದಲ್ಲಿ ದಕ್ಕಲ ಸಮುದಾಯದ ಚಾರಿತ್ರಿಕ ಮತ್ತು ಸಾಮಾಜಿಕ ಹಿನ್ನೆಲೆಯನ್ನು ಕುರಿತು ಚರ್ಚಿಸಲಾಗಿದೆ.

ಮೂರನೇ ಅಧ್ಯಾಯದಲ್ಲಿ ದಕ್ಕಲ ಜಾಂಬ ಪುರಾಣದ ಗಂಗಭಾರತ ವಸ್ತುವಿಷಯ ಚಾರಿತ್ರಿಕ ಕಥೆಗಳನ್ನು ತಿಳಿಸಲಾಗಿದೆ. ಹಾಗೂ ಈಗಾಗಲೇ ಅಧ್ಯಯನ ಮಾಡಿದ ಜಾಂಬ ಪುರಾಣದ ಕಥೆಗಳನ್ನು ತಿಳಿಸಲಾಗಿದೆ.

ನಾಲ್ಕನೇ ಅಧ್ಯಾಯದಲ್ಲಿ ಗಂಗಭಾರತದ ಚಾರಿತ್ರಿಕ ಹಾಡುಗಳಲ್ಲಿ ದರುವಿನ ಮಹತ್ವದ ಬಗ್ಗೆ ವಿವರಿಸಲಾಗಿದೆ.

ಐದನೇ ಅಧ್ಯಾಯದಲ್ಲಿ ದಕ್ಕಲರ ಸಮುದಾಯಗಳ ರಕ್ತ ಸಂಬಂಧಗಳು ೧೨ ಕುಲಗೋತ್ರಗಳ ಬಗ್ಗೆ ಹಾಗೂ ಅವರ ಆಚರಣೆಗಳ ವಿಧಿವಿಧಾನಗಳ ಬಗ್ಗೆ ತಿಳಿಸಲಾಗಿದೆ

ಆರನೇ ಅಧ್ಯಾಯದಲ್ಲಿ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ರಾಜಕೀಯ ಸ್ಥಿತಿಗತಿಗಳು ಹಾಗೂ ಸರ್ಕಾರದ ಸೌಲಭ್ಯಗಳು ಪಡೆಯುವುದರಲ್ಲಿ ವಿಫಲತೆಯ ಬಗ್ಗೆ ಚರ್ಚಿಸಲಾಗಿದೆ.

ಏಳನೇ ಅಧ್ಯಾಯದಲ್ಲಿ ದಕ್ಕಲರ ಭಾಷಾ ಸಾಹಿತ್ಯದ ವಸ್ತುವಿಷಯ ಬಗ್ಗೆ ತಿಳಿಸಲಾಗಿದೆ.

ಎಂಟನೇ ಅಧ್ಯಾಯವು ಸಮಾರೋಪವಾಗಿದ್ದು, ಈ ಅಧ್ಯಯನದಲ್ಲಿ ಕಂಡುಕೊಂಡ ಫಲಿತಗಳನ್ನು ನೀಡಲಾಗಿದೆ. ಅನುಬಂಧದಲ್ಲಿ ಪರಾಮರ್ಶನ ಗ್ರಂಥಗಳು, ವಕ್ತೃ ವಿವರ ಮತ್ತು ಛಾಯಾಚಿತ್ರಗಳನ್ನು ಒಳಗೊಂಡಿದೆ.

### ೧.೨. ಅಧ್ಯಯನದ ಮಹತ್ವ

ಇಂದು ಸಾಹಿತ್ಯ ಎಂಬುವುದು ಮುಗಿಯುವ ಅಧ್ಯಯನವಾಗಿದೆ ಪೂರ್ವ ಹಳೆಗನ್ನಡದಿಂದ ಹಿಡಿದು ಆಧುನಿಕ ಸಾಹಿತ್ಯದ ದಕ್ಕಲ ಸಮುದಾಯದಲ್ಲಿ ಗಂಗಭಾರತವನ್ನು ಹಾಡುವ ಪ್ರದರ್ಶಿಸುವವರನ್ನು ಭೇಟಿ ಮಾಡಿ ಮಾಹಿತಿಯನ್ನು ಸಂಗ್ರಹಿಸಲಾಗಿದೆ ಹಾಗೂ ದಕ್ಕಲ ಸಮುದಾಯಗಳ ಮೇಲೆ ನಡೆದ ಅಧ್ಯಯನಗಳನ್ನು ಅವಲೋಕಿಸಲಾಗಿದೆ. ಕೋಲಾರ ಜಿಲ್ಲೆಯ ಪ್ರದೇಶಗಳಲ್ಲಿ ನೆಲೆಸಿರುವ ದಕ್ಕಲ ಸಮುದಾಯಗಳ ಸ್ಥಿತಿಗತಿಗಳನ್ನು ವಿಶ್ಲೇಸುವ ಸಲುವಾಗಿ ಕ್ಷೇತ್ರಕಾರ್ಯ ಕೈಗೊಳ್ಳಲಾಗಿದ್ದು, ಈ ಸಮುದಾಯಗಳ ಅನುಭವಾತ್ಮಕ ಭಾವನೆಗಳನ್ನು ಆಧರಿಸಿ ಈ ಸಮುದಾಯಗಳಲ್ಲಿನ ವರ್ತಮಾನದ ಸಮಸ್ಯೆಗಳನ್ನು ಗಮನದಲ್ಲಿರಿಸಿ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಹಾಗೂ ಪುರಾಣದ ನಡುವಿನ ಈ ಸಮುದಾಯಗಳ ಸಂಬಂಧಗಳ ಬಗ್ಗೆ ವಿವರಿಸಲು ಪ್ರಯತ್ನಿಸಲಾಗಿದೆ. ಈ ಹಿನ್ನೆಲೆಯಲ್ಲಿ ಈ ಕೆಳಗಿನ ವಿಧಾನಗಳನ್ನು ಕೈಗೊಳ್ಳಲಾಗಿದೆ.

**ಚಾರಿತ್ರಿಕ ವಿಧಾನ**

ಪ್ರಸ್ತುತ ಅಧ್ಯಯನದಲ್ಲಿ ದಕ್ಕಲ ಸಮುದಾಯದ ಚಾರಿತ್ರಿಕ ಬೆಳವಣಿಗೆಯನ್ನು ಅಧ್ಯಯನಕ್ಕೊಳಪಡಿಸಲಾಗಿದೆ. ದಕ್ಕಲ ಸಮುದಾಯಗಳ ಮೇಲೆ ನಡೆದ ಅಧ್ಯಯನಗಳನ್ನು ಗಮನಿಸಲಾಗಿದೆ. ಮಾಸ್ಪೀಕ ಸಮುದಾಯಗಳು ಹಾಗೂ ಸಿಂದ್ ಮಾದಿಗರ ಬಗ್ಗೆ ನಡೆದ ಅಧ್ಯಯನಗಳನ್ನು ಗಮನಿಸಲಾಗಿದೆ. ಇದರ ಜೊತೆಯಲ್ಲಿ ಬೇರೆ ಬೇರೆ ಸಾಹಿತ್ಯ ಕೃತಿಗಳನ್ನು, ದಕ್ಕಲಿಗರ ಕುರಿತು ಬರೆದ ಕಥೆಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಏಕೆಂದರೆ ಮೂಲ ಪುರಾಣಗಳು ಸ್ವಲ್ಪ ಮಟ್ಟಿಗೆ ಭಿನ್ನವಾಗಿದ್ದರು ಈ ಸಮುದಾಯಗಳ ಪುರಾಣವನ್ನು ಹಲವು ವಿಧಾನಗಳಲ್ಲಿ ಹೇಳಿರುವ ಅಂಶಗಳನ್ನು ಗಮನಿಸಲಾಗಿದೆ. ಭೂತ ಮತ್ತು ಭವಿಷ್ಯದ ದಿನಗಳನ್ನು ಗಮನಿಸಬೇಕಾದರೆ ವರ್ತಮಾನದವರೆಗೂ ಭಾರತದ ಮಹಾಕಾವ್ಯಗಳನ್ನು ಮತ್ತು ಅನೇಕ ಪುರಾಣಗಳನ್ನು ತಮ್ಮದೆ ಆದ ಹಿನ್ನೆಲೆಯಲ್ಲಿ ಅನೇಕ ಸಾಹಿತಿಗಳು ಬರೆದಿರುವ ಅಂಶವನ್ನು ತಿಳಿಯುತ್ತೇವೆ. ಹಾಗೆಯೇ ಅದೇ ಪುರಾಣದ ಹಿನ್ನೆಲೆಯಲ್ಲಿ ಅಸ್ಪೃಶ್ಯರಲ್ಲೇ ಅಸ್ಪೃಶ್ಯರಾದ ದಕ್ಕಲಿಗರು ತಮ್ಮದೇ ಆದ ಜಾಂಬ ಪುರಾಣವನ್ನು ಗಂಗಭಾರತವನ್ನು ಗೇಯ ಕಥೆಯನ್ನಾಗಿ ಹಾಡಿ ದೃಶ್ಯದ ಮೂಲಕ ಹೇಗೆ ಪ್ರದರ್ಶಿಸುತ್ತಿದ್ದರು ಎಂಬುವುದನ್ನು ವಸ್ತುನಿಷ್ಠವಾಗಿ ಅಧ್ಯಯನ ಮಾಡಲಾಗಿದೆ. ಈ ಸಮುದಾಯಗಳ ಸಾಮಾಜಿಕ ಸ್ಥಿತಿಗತಿಗಳನ್ನು ಒಳಗೊಂಡಂತೆ ಆರ್ಥಿಕ, ಶೈಕ್ಷಣಿಕ, ರಾಜಕೀಯ ಸ್ಥಿತಿಗತಿಗಳು ಈ ಅಧ್ಯಯನದ ಮುಖ್ಯ ಅಂಶಗಳಾಗಿದ್ದು, ಶತಮಾನಗಳಿಂದ ಅಲೆಮಾರಿಗಳು ನಿರಂತರ ದಮನಗಳ ನಡುವೆಯೂ ತಮ್ಮ ನಂಬಿಕೆಗಳನ್ನು ಮೂಲೆ ಗುಂಪಾಗಿಸದೆ ತಮ್ಮ ಪಾರಂಪರಿಕ ಜ್ಞಾನವನ್ನು ಕಾಪಾಡಿಕೊಂಡು ಸಮಾಜದಲ್ಲಿ ಎದುರಾಗುವ ಸಮಸ್ಯೆಗಳಿಗೆ ತಲೆಯೊಡ್ಡಿದೆ. ತಮ್ಮ ಸಂಸ್ಕೃತಿಯನ್ನು ಮುಂದುವರೆಸಿದ ನಿತ್ಯದ ಬದುಕನ್ನು ಅವರ ಸಾಂಸ್ಕೃತಿಕತೆಗೂ ಮತ್ತು ಕಾನೂನಿನ ನೀತಿಗಳಿಗೂ ಒಂದು ಕಂದರವೇ ಏರ್ಪಟ್ಟಂತಿದೆ ಇಂತಹ ಸಂದರ್ಭದಲ್ಲಿ ಇವರ ಸಮಸ್ಯೆಗಳನ್ನು ಸರ್ಕಾರಕ್ಕೆ ಎತ್ತಿತೋರುವ ಹಾಗೂ ಕನಿಷ್ಠ ಸೌಲಭ್ಯಗಳನ್ನು ಕಲ್ಪಿಸುವುದಕ್ಕೆ ಸಹಕಾರಿಯಾಗಲಿ ಮುಂದಿನ ಭವಿಷ್ಯದಲ್ಲಿಯಾದರು ದಕ್ಕಲ ಸಮುದಾಯಗಳು ಸಮಾಜದಲ್ಲಿ ಉತ್ತಮ ಬದುಕು ಕಟ್ಟಿಕೊಳ್ಳುವುದಕ್ಕೆ ನೆರವಾಗಲಿ ಎಂಬುವುದೆ ಈ ಅಧ್ಯಯನದ ಮಹತ್ವವಾಗಿದೆ.

**೧.೩. ಅಧ್ಯಯನದ ವಿಧಾನ**

ಪ್ರಸ್ತುತ ಅಧ್ಯಯನವು ಪ್ರಾಥಮಿಕ ಆಕರವಾದ ಕ್ಷೇತ್ರಕಾರ್ಯ ಮಾಹಿತಿಯನ್ನೇ ಹೆಚ್ಚಾಗಿ ಅವಲಂಬಿಸಿದೆ. ಹೀಗೆ ಕ್ಷೇತ್ರಕಾರ್ಯದ ಮೂಲಕ ಬದುಕಿನ ಗೌಪ್ಯತೆಗಳು ಬಹುತೇಕ ಈ ಸಮುದಾಯಗಳ ಪುರಾಣಗಳಲ್ಲೇ ಅಡಗಿರುವುದರಿಂದ ಚಾರಿತ್ರಿಕ ದಾಖಲೆಗಳನ್ನು ಗ್ರಹಿಸಬೇಕಾಗುತ್ತದೆ. ಹೀಗಾಗಿ ದಕ್ಕಲ ಸಮುದಾಯದ ಚಾರಿತ್ರಿಕ ರೂಪಾಂತರಗಳನ್ನು ಅಧ್ಯಯನಕ್ಕೊಳಪಡಿಸಿ ಗೌಪ್ಯ ಅಂಶಗಳನ್ನು ಎತ್ತಿಹಿಡಿಯುವುದಕ್ಕೆ ಪ್ರಯತ್ನಿಸಲಾಗಿದೆ.

## ಪ್ರಶ್ನಾವಳಿ ವಿಧಾನ

ದಕ್ಕಲಸಮುದಾಯದ ವರ್ತಮಾನದ ಸ್ಥಿತಿಗತಿಗಳನ್ನು ಕಂಡುಕೊಳ್ಳುವ ಸಲುವಾಗಿ ಕೆಲವು ಮಾದರಿಗಳನ್ನು ಆಯ್ಕೆ ಮಾಡಿಕೊಂಡು ದಕ್ಕಲ ಸಮುದಾಯಗಳ ಸಂಪೂರ್ಣ ಚಿತ್ರಣವನ್ನು ಕಲೆಹಾಕುವ ಪ್ರಯತ್ನ ಮಾಡಲಾಗಿದೆ. ಸದರಿ ಪ್ರಶ್ನಾವಳಿಯ ಮೂಲಕ ಮಾಹಿತಿ ಸಂಗ್ರಹಿಸಿ, ಈ ಸಮುದಾಯಗಳ ಪುರಾಣಗಳ ಬಗ್ಗೆ ಹಾಗೂ ಜೀವನದ ವಿಧಿವಿಧಾನಗಳ ಬಗ್ಗೆ ದೊರೆತ ಮಾಹಿತಿಯನ್ನು ಕ್ರೋಢೀಕರಿಸಲಾಗಿದೆ. ಹಾಗೆ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ರಾಜಕೀಯ ಸ್ಥಿತಿಗತಿಗಳ ಬಗ್ಗೆ ಪ್ರಶ್ನಾವಳಿಗಳು ಮಾಡಿಕೊಂಡು ಈ ಸಮುದಾಯಗಳ ವೃತ್ತಿಗಳನ್ನು ಸಂದರ್ಶನ ಮಾಡಲಾಗಿದೆ. ಕೋಲಾರ ಜಿಲ್ಲೆಗೆ ಸಂಬಂಧಿಸಿದ ದಕ್ಕಲ ಸಮುದಾಯಗಳ ಅಂಕಿ-ಸಂಖ್ಯೆಗಳ ಮೂಲಕ ಪಡೆಯುವ ಪ್ರಶ್ನಾವಳಿ, ವ್ಯಕ್ತಿ ಸಂದರ್ಶನಕ್ಕಾಗಿ ಪ್ರಶ್ನಾವಳಿ ಸಮುದಾಯಗಳು ವಾಸಿಸುವ ಗ್ರಾಮ, ಪಟ್ಟಣ, ನಗರಗಳಲ್ಲಿ ಮಾಹಿತಿ ಪಡೆಯಲು ಪ್ರಶ್ನಾವಳಿಯು ಈ ಅಧ್ಯಯನಕ್ಕೆ ಬಳಸಲಾಗಿದೆ.

## ವ್ಯಕ್ತಿ ಸಂದರ್ಶನ

ದಕ್ಕಲ ಸಮುದಾಯಗಳನ್ನು ಗಮನದಲ್ಲಿ ಇರಿಸಿಕೊಂಡು ಕೋಲಾರ ಜಿಲ್ಲೆಗೆ ಸಂಬಂಧಿಸಿದಂತೆ ಅವರು ವಾಸಿಸುವ ಪ್ರದೇಶದ ದಕ್ಕಲ ಸಮುದಾಯದ ವಯೋಮಾನದ ವ್ಯಕ್ತಿಗಳನ್ನು ಸಂದರ್ಶನಕ್ಕೆ ಒಳಪಡಿಸಲಾಗಿದೆ. ಸಮುದಾಯದ ಸಂಪೂರ್ಣ ಮಾಹಿತಿ ತಿಳಿದಿರುವ ಈ ಸಮುದಾಯದ ಪ್ರಮುಖರನ್ನು ಸಂದರ್ಶಿಸಿ ಸಮಗ್ರ ತಿಳುವಳಿಕೆಯನ್ನು ಕೂಡಿಹಾಕಲಾಗಿದೆ. ಈ ಸಮುದಾಯದ ವ್ಯಕ್ತಿಗಳ ಪ್ರಸ್ತುತ ಅನುಭವವನ್ನು ಪ್ರಧಾನವಾಗಿ ಸ್ವೀಕರಿಸಲಾಗಿದೆ. ಹಾಗೆ ಸಂದರ್ಶನದ ವಿಧಾನದಲ್ಲಿ ಪಡೆದ ಅನುಭವಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಒಳಪಡಿಸಲಾಗಿದೆ.

## ಧ್ವನಿ ಮುದ್ರಣ ಮತ್ತು ಛಾಯಾಚಿತ್ರ ವಿಧಾನ

ದಕ್ಕಲ ಸಮುದಾಯಗಳು ವಾಸಿಸುವ ಪ್ರದೇಶಗಳಿಗೆ ಕ್ಷೇತ್ರ ಕಾರ್ಯ ಕೈಗೊಂಡು ಜೊತೆಗೆ ಹೋಗುವಾಗ ಜಂಗಮವಾಣಿಯ (ಮೊಬೈಲ್) ಸಹಾಯದಿಂದ ದಕ್ಕಲ ಸಮುದಾಯದ ವ್ಯಕ್ತಿಗಳ ಧ್ವನಿಯನ್ನು ಧ್ವನಿ ಮುದ್ರಣ ಮಾಡಿ ಪರಿಷ್ಕರಿಸಿ ಅಧ್ಯಯನಕ್ಕೆ ಅನುಕೂಲವಾಗುವಂತೆ ಕಲೆ ಹಾಕಿದ ಮಾಹಿತಿಯನ್ನು ಜೋಡಿಸಿ ಬಳಸಿಕೊಳ್ಳಲಾಗಿದೆ. ದಕ್ಕಲ ಸಮುದಾಯಗಳು ವಾಸಿಸುವ ಗುಡಿಸಲುಗಳು ಗುಡಾರಗಳು, ಮನೆಗಳೂ ತಮ್ಮ ಕಸುಬುಗಾಗಿ ಬಳಸುತ್ತಿರುವ ಸಲಕರಣೆಗಳು ಛಾಯಾಚಿತ್ರಗಳನ್ನು ಸೆರೆ ಹಿಡಿದು ಅಧ್ಯಯನದಲ್ಲಿ ಬಳಸಲಾಗಿದೆ.

## ಭೌಗೋಳಿಕ ವಿಧಾನ

ಅಧ್ಯಯನಕ್ಕೆ ಆಯ್ದುಕೊಂಡ ಕೋಲಾರ ಜಿಲ್ಲೆಯ ಪ್ರದೇಶಗಳಲ್ಲಿ ವಾಸಿಸುತ್ತಿರುವ ದಕ್ಕಲ ಸಮುದಾಯಗಳನ್ನು ಆಯ್ಕೆ ಮಾಡಿಕೊಂಡು ಕೋಲಾರ ಜಿಲ್ಲೆಯ ಎಲ್ಲಾ ಭೌಗೋಳಿಕ ಪ್ರದೇಶದ

ದಕ್ಕಲ ಸಮುದಾಯದ ಜೀವನ ವಿಧಾನ, ಅವರ ಪುರಾಣಗಳು ವೃತ್ತಿ, ಆಹಾರ ಪದ್ಧತಿ, ಕುಲಕಸುಬುಗಳು, ಆಚರಣೆಗಳು, ಭಾಷೆ, ಕಲೆ ಮುಂತಾದ ಮಾಹಿತಿಯನ್ನು ಅವರ ಸಮಸ್ಯೆಗಳನ್ನು ಅಧ್ಯಯನಕ್ಕೆ ಒಳಪಡಿಸಿ ಚರ್ಚಿಸಲಾಗಿದೆ.

**ಮನಃಶಾಸ್ತ್ರೀಯ ವಿಧಾನ**

ಮನಃಶಾಸ್ತ್ರೀಯ ವಿಧಾನದಲ್ಲಿ ಅಧ್ಯಯನಕ್ಕೆ ಒಳಪಡಿಸಿರುವ ವ್ಯಕ್ತಿ ನೀಡುವ ಮಾಹಿತಿಯಲ್ಲಿ ಹೊಸತನವಿದೆಯೇ ಅಥವಾ ಕೇಳಿದ ಪ್ರಶ್ನೆಗೆ ಮಾತ್ರ ಉತ್ತರ ನೀಡುತ್ತಿದ್ದಾನೆಯೆ ವ್ಯಕ್ತಿಯ ಜ್ಞಾನ ಹೇಗಿದೆ? ವ್ಯಕ್ತಿ ಸಮರ್ಥನೋ೭ ಅಥವಾ ಉದಾಸೀನ ಮನೋಭಾವದವನೋ ಸಂಕೋಚದ ಸ್ವಭಾವದವನೋ ಅಥವಾ ಸ್ನೇಹಮಯಿಯೋ ಬೇರೆಯವರ ಬಗ್ಗೆ ಅನುಕಂಪ ಹೊಂದಿದ್ದಾನೋ ಸೂಕ್ಷ್ಮವೇದಿಯೋ ಅಥವಾ ಸುಭದ್ರನೋ ಎಂಬುದನ್ನು ಗಮನವಿರಿಸಿ, ಅವನು ನೀಡುವ ಹೊಸತನದ ಉತ್ತರವನ್ನು ಪ್ರಸ್ತುತ ಸಂದರ್ಭದಲ್ಲಿ ಬಳಸಿಕೊಳ್ಳಲಾಗಿದೆ.

**ಮಾನವಶಾಸ್ತ್ರೀಯ ಅಧ್ಯಯನ**

ಮಾನವಶಾಸ್ತ್ರೀಯ ಅಧ್ಯಯನದ ಮುಖಾಂತರ ದಕ್ಕಲ ಸಮುದಾಯಗಳ ಜನರ ವರ್ತನೆ ಹಾವಭಾವಗಳು ಹಿಂದಿನ ಮತ್ತು ಪ್ರಸ್ತುತದ ಬಗ್ಗೆ ತಿಳಿಯಲು ಸಹಾಯವಾಯಿತು. ಸಮುದಾಯದ ಸಂಸ್ಕೃತಿ ಸಾಮಾಜಿಕ ಜೀವನದ ಮೇಲಾದ ಪರಿಣಾಮಗಳನ್ನು ತಿಳಿದು ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ.

**ಸಾಂದರ್ಭಿಕ ವಿಧಾನ**

ಕ್ಷೇತ್ರಕಾರ್ಯದ ಸಂದರ್ಭದ ಕೆಲವು ದಕ್ಕಲ ಸಮುದಾಯಗಳ ವಿಶೇಷ ಆಚರಣೆಗಳು ಮತ್ತು ಆ ಸಂದರ್ಭದಲ್ಲಿ ಹೆಚ್ಚಿನ ಮಾಹಿತಿ ಸಂಗ್ರಹಿಸಲಾಗಿದೆ.

**ಸಾಂಪ್ರದಾಯಿಕ ವಿಧಾನ**

ದಕ್ಕಲ ಸಮುದಾಯಗಳ ಆಚರಣೆಗಳ ಬಗೆ ಅದರಲ್ಲೂ ಜನಪದೀಯ ಆಚರಣೆಗಳಾದ ಉಡುಗೆ-ತೊಡುಗೆ ಆಚಾರ-ವಿಚಾರ, ಆಹಾರ ಪದ್ಧತಿ, ದೈವಾರಾಧನೆ, ಧಾರ್ಮಿಕ, ವಾರ್ಷಿಕ ಆವರ್ತನೆಯ ಆಚರಣೆಗಳು, ಕೃಷಿ, ಪಶುಪಾಲನೆ ಮುಂತಾದ ಸಮಗ್ರ ವಿಷಯಗಳ ಮಾಹಿತಿಯನ್ನು ಸಮುದಾಯದ ಪ್ರಧಾನ ವ್ಯಕ್ತಿಯ ಮುಖಾಂತರ ತಿಳಿದು ಸಾಂಪ್ರದಾಯಿಕ ಅಧ್ಯಯನದಲ್ಲಿ ತಿಳಿಸಲಾಗಿದೆ.

**ವ್ಯಕ್ತಿ ಸಿದ್ಧಾಂತ**

ದಕ್ಕಲ ಸಮುದಾಯಗಳ ಜನರಲ್ಲಿ ಗಂಗಭಾರತ ಪುರಾಣದ ಬಗ್ಗೆ ಹೇಳುವ ವಿಧಾನಗಳು ಭಿನ್ನವಾಗಿವೆ. ಹಾಗೂ ಇವರ ಕಲೆಗಳು, ವಿಚಾರದ ನಿಲುವುಗಳು ಅವರ ಜ್ಞಾನ ಪರಂಪರೆಯನ್ನು ಗಮನಿಸಿ ಪ್ರಸ್ತುತ ಅಧ್ಯಯನದಲ್ಲಿ ಅಳವಡಿಸಿಕೊಳ್ಳಲಾಗಿದೆ.

## ವಿಕಾಸಾತ್ಮಕ ಸಿದ್ಧಾಂತ

ಭಾರತೀಯ ಸಮಾಜದಲ್ಲಿ ಹಲವು ಸಮುದಾಯಗಳು ವಾಸಿಸುತ್ತಿದ್ದು, ಈ ಸಮುದಾಯಗಳು ಹಲವು ಜಾತಿ ಜನಾಂಗಗಳಿಂದ ಕೂಡಿದ್ದು, ಈ ಜಾತಿ ಜನಾಂಗಗಳು ತಮ್ಮದೇ ಆದಂತಹ ಭಾಷೆ, ಕಥೆ ಆಚರಣೆಗಳು ಒಳಗೊಂಡಿದ್ದು, ಈ ಜಾತಿ ಜನಾಂಗಗಳಲ್ಲಿ ದಕ್ಕಲರು ಅತ್ಯಂತ ಕೆಳಸ್ಥರ ಸಮುದಾಯವಾಗಿದೆ. ಹಿಂದಿನಿಂದ ಇಲ್ಲಿಯವರೆಗೆ ನಡೆದು ಬಂದ ಹಾದಿಯನ್ನು ಗಮನಿಸಿದಾಗ ಅಂದಿನ ಅಲೆಮಾರಿತನ ಜೀವನಕ್ಕೆ ಇಂದಿನ ವರ್ತಮಾನ ಹೊಸ ಗಾಳಿ ಬೀಸಿ ಸ್ವಲ್ಪಮಟ್ಟಿಗೆ ಚೇತರಿಸಿಕೊಂಡಿರುವುದು ಕಂಡು ಬರುತ್ತದೆ. ಏಕೆಂದರೆ ೧೯ರ ದಶಕದಲ್ಲಿ ಬ್ರಿಟಿಷರ ತುಳಿತಕ್ಕೆ ಒಳಗಾಗಿ ಒಂದು ಕಡೆ ನೆಲೆ ನಿಲ್ಲಲು ತಮ್ಮದೇ ಆದಂತಹ ಸ್ಥಳವಿಲ್ಲದೇ ಅಲೆಮಾರಿಗಳಾಗಿ ತಮ್ಮ ಮಾದಿಗರ ಮನೆಗಳಲ್ಲಿ ಬಿಕ್ಷೆ ಬೇಡುವಂತಹ ಪಾರಂಪರಿಕ ಪದ್ಧತಿಗಳನ್ನು ಅಳವಡಿಕೊಂಡು ಅಲೆಮಾರಿಗಳಾಗಿ ಉಳಿಯಬೇಕಾಯಿತು ಅಂದಿನ ಸಂದರ್ಭದಲ್ಲಿ ಜಾತಿ ಪದ್ಧತಿ ಎಂಬ ಅಂಟುರೋಗದಲ್ಲಿ ಮೇಲ್ವರ್ಗ ಹಾಗೂ ಕೆಳವರ್ಗ ಎಂಬ ತಾರಾತಮ್ಯದಲ್ಲಿ ಅಲೆಮಾರಿ ಸಮುದಾಯಗಳು ನೆಲೆಕಾಣಲು ಸಾಧ್ಯವಾಗದೆ ಅಲೆಮಾರಿಗಳಾಗಿ ಉಳಿಯಬೇಕಾಯಿತು. ವಸಾಹತುಶಾಹಿ ಗಾಳಿಗೆ ಸಿಲುಕಿ ಅಲೆಮಾರಿ ಸಮುದಾಯಗಳು ಕನಿಷ್ಠ ಪಕ್ಷ ಉಸಿರು ಬಿಡಲು ಸಾಧ್ಯವಾಯಿತು. ಹೀಗೆ ವಸಾಹತುಶಾಹಿ ನಂತರ ಇಂದಿನವರೆಗೆ ದಕ್ಕಲ ಸಮುದಾಯಗಳ ಜೀವನದ ವಿಧಿವಿಧಾನಗಳನ್ನು ಅಭ್ಯಸಿಸಿ ಅಧ್ಯಯನದಲ್ಲಿ ತೊಡಗಿಸಿಕೊಳ್ಳಲಾಗಿದೆ.

## ೧.೪. ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

ಕನ್ನಡ ನಿಘಂಟುನಲ್ಲಿ ದಕ್ಕಲರ ಬಗ್ಗೆ ತಿಳಿಸಿರುವ ಅರ್ಥ ಮಾದಿಗರಲ್ಲಿನ ಒಂದು ಒಳ ಪಂಗಡ ಹಾಗೂ ಅವರ ದಕ್ಕಲದವನು ಊರಿಗೆ ವಲಸೆ ಬಂದಿರುವ ದಕ್ಕಲದವರು ಎಂದು ತಿಳಿಸಿದ್ದಾರೆ. ಆದರೆ ನಿಕರವಾದ ಅರ್ಥ ನಿಘಂಟುನಲ್ಲಿ ತಿಳಿಸಿರುವುದು ಕಂಡುಬಂದಿಲ್ಲ. ದಕ್ಕಲ ಪದದ ಅರ್ಥವಾಗಲೀ ದಕ್ಕೆ ಎಂದರೆ ಏನು ಎಂಬ ಅರ್ಥವಾಗಲೀ ಪ್ರಸ್ಥಾಪಿಸಿಲ್ಲ. ಆದರೆ ದಕ್ಕು ಎಂಬುದಕ್ಕೆ ಧೈರ್ಯ ಎಂಬ ಅರ್ಥವನ್ನು ನೀಡಿರುವುದು ಗಮನಿಸಬಹುದು.

ಎಡ್ಗರ್ ಥರ್‌ಸ್ಟನ್ ದಕ್ಷಿಣ ಭಾರತದ ಜಾತಿ ಜನಾಂಗಗಳ ಬಗ್ಗೆ ಅಧ್ಯಯನ ಮಾಡಿರುವ "ದಕ್ಷಿಣ ಭಾರತದ ಜಾತಿಗಳು ಮತ್ತು ಬುಡಕಟ್ಟುಗಳು"[Castes and tribes southern India] vol-2ರಲ್ಲಿ ದಕ್ಕಲ ಜಾತಿ ಜನಾಂಗದ ಬಗ್ಗೆ ಪ್ರಸ್ತಾಪಿಸಿರುವುದು ತಿಳಿಯಬಹುದು. ಉದಾ:- Dakkela or Dakali is the name of a class of mendicants who beg from madigas only in the kwrhool district they are said to have divided the district with the mushtis and hot to beg except with in their own limits.

The following story is told as regards the origin of the Dakkala. A smith was asked to make a bottle (marriage bodge) for Siva's wedding and for this swipes

required bellows fore pot hammer etc. Jambuvadu called his eldest son and prepared the various implement's from sundry parts of the body except the back bone. Being highly pleased at this the gods endowed the backbone with life and the son went to his father jambuvadu who failed to recognize him and refused to admit him.

He was told that he meet live as a begger attached to the madigas and was called Dakkala because he was brought to life from a ventebral column (dakka).

The Dakkala wander from place to place they may not enter modiga however outside which meals are given to them by mater only as female are not allowed to serve them madiga women may not tread on the toot steps of the Dakkala.

ಥರ್‌ಸ್ಟನ್ ಅವರ ಜಾತಿ ಮತ್ತು ಬುಡಕಟ್ಟುಗಳ ಅಧ್ಯಯನದಲ್ಲಿ ದಕ್ಕಲಿಗರು ಮಾದಿಗರ ಜಾತಿಯಲ್ಲಿ ಒಂದು ಉಪಪಂಗಡ ಹಾಗೂ ದಕ್ಕಲಿಗ ಎಂಬ ಹೆಸರು ಬಂದಿರುವುದು ಪ್ರಸ್ತಾಪಿಸುತ್ತಾ ಅದಿಜಾಂಬವನು ಶಿವ-ಪಾರ್ವತಿಯ ವಿವಾಹಕ್ಕೆ ತಾಳಿಯ ಅಗತ್ಯವಿದ್ದು ಅದನ್ನು ತಯಾರಿಸಲು ಸಲಕರಣೆಗಳು ಇಲ್ಲದೆ ಇದ್ದಾಗ ತನ್ನ ಮಗನಾದ ಯುಗ ಮುನಿಯ ದೇಹದ ಬೆನ್ನು ಮೂಳೆಯನ್ನು ಬಿಟ್ಟು ಉಳಿದ ಎಲ್ಲಾ ಮೂಳೆಗಳಿಂದ ಸಲಕರಣೆಗಳನ್ನು ತಯಾರಿಸಿ ಬೆನ್ನು ಮೂಳೆಯ ದಟ್ಟವನ್ನು ಬೆಲಿನಾಚೆ ಬಿಸಾಡುತ್ತಾನೆ. ಆ ದಟ್ಟಕ್ಕೆ ಶಿವ ಪಾರ್ವತಿಯರು ಜೀವ ನೀಡುತ್ತಾರೆ. ಆದರೆ ಮಾದಿಗರ ದಕ್ಕಯಿಂದ ಹುಟ್ಟಿದ ಶರೀರ ಇವನು ಮುಂದೆ ದಕ್ಕಲ ಎಂದು ಕರೆಯಲಾಗುತ್ತದೆ ಎಂದು ಅದಿಜಾಂಬವ ಹೇಳುತ್ತಾನೆ. ನಂತರ ಇವನು ಮಾದಿಗರ ಕೆರೆಗಳಲ್ಲಿ ಭಿಕ್ಷೆ ಬೇಡಿ ತಿನ್ನಬೇಕು ಎಂದು ಹೇಳಿದ ಅಂದಿನಿಂದ ಇಂದಿನವರೆಗೂ ಮಾದಿಗರ ದಕ್ಕಲ ಮಗುವಾಗಿ ದಕ್ಕಲ ಸಮುದಾಯವಾಗಿ ಇರುವುದು ಇದರಲ್ಲಿ ಗಮನಿಸಬಹುದು. ಮಾದಿಗರ ಸಮುದಾಯಗಳಲ್ಲಿ ಪುರುಷರು ಮಾತ್ರ ಭಿಕ್ಷೆ ಹಾಕಬೇಕು. ಸ್ತ್ರೀಯರಿಗೆ ಭಿಕ್ಷೆ ನೀಡುವ ಅಧಿಕಾರವಿಲ್ಲ ಎಂಬ ಅಂಶವನ್ನು ಇದರಲ್ಲಿ ಗಮನಿಸಲಾಗಿದೆ.

೧೯೭೭ರ ಸಾಲಿನಲ್ಲಿ ಕರ್ನಾಟಕ ಸ್ಟೇಟ್ ಗೆಜೆಟೆಯರನಲ್ಲಿ ಹಲವಾರು ಪಂಗಡಗಳ ಬಗ್ಗೆ ತಿಳಿಸುತ್ತ ಪರಿಶಿಷ್ಟ ಜಾತಿಗಳಲ್ಲಿ ಒಳ ಜಾತಿಗಳು ಹಾಗೂ ಆ ಜಾತಿಗಳಲ್ಲಿ ದಕ್ಕಲ ಜಾತಿ ಜನಾಂಗಗಳು ಹೇಗೆ ಸೇರಿಕೊಂಡಿದೆ ಎಂಬುವುದನ್ನು ತಿಳಿಸಿರುವುದು ಕಂಡು ಬರುತ್ತವೆ ಇದರಲ್ಲಿ The madiga are also known as the loft hand caste (Edagai) who are found in a sizable number in the district scattered all over they are called by various names such as padmajatiyavaru Jambavas matangas and begaras Jambava is the name given to a sub division the goddevses of the castes are matangi and maramma there are sub divided into single and double winnows there is "one more division called Dakkalaru". The Jambava are the priests or gurus of madigas who have mathas for

themselves and suffix muni to their personal names madigas have a number of exogamous divisions known as kulas or bedigas have a number of amour divisions and animal such as belli kula Kadabara kula belada kula. Hanumanthara kula etc. The marriage negotiations are started from the boy's side and tera is present there are also jogs and nilagararu among them they pay reverence to their patron swnt haralayya. The dead are buried and pollution is observed for is three day's by the agnates on Yugadi Vinayaka chathurthi and mahalaya new moon day the members of the family go farting to the burial ground after a bath worship the give return home and install a kalasha and worship it they work on leathers and also have taken to agriculture but most of these are agricultural labours. They are non-vegetarian tamate and ramdolu are the instrument they use in the village festivals.

ಮಾದಿಗರಿಗೆ ಇನ್ನೊಂದು ಹೆಸರು ಇದೆ. ಹಿಡಿಗ ಅವರು ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ವಾಸಿಸುತ್ತಾರೆ. ಅನೇಕ ಜಾತಿ ನಾಮಧೇಯಗಳಿಂದ ಕರೆಯಲ್ಪಡುತ್ತಾರೆ. ಅವರು ಪದ್ಮ ಜಾತಿಯವರು, ಜಾಂಬವರು, ಮಾತಂಗರು, ಬೇಗರು ಅವರು ಒಂದು ಪಂಗಡಕ್ಕೆ ಜಾಂಬವ ಎಂಬ ಹೆಸರು. ಅವರ ದೇವತೆಗಳ ಹೆಸರು ಮಾತಂಗಿ ಮತ್ತು ಮಾರಮ್ಮ ಅವರ ಇನ್ನೊಂದು ಪಂಗಡ ತಣಗಿ ಬುವದವರು ವಿನ್ನಿ ಪಂಗಡ ಎರಡು ಪಂಗಡಗಳಾಗಿ ವಿಭಜಿಸಲ್ಪಪಡುತ್ತದೆ. ಈ ಪಂಗಡಗಳಲ್ಲಿ ಮತ್ತೊಂದು ಪಂಗಡ ದಕ್ಕಲರು ಜಾಂಬವ ಪಂಗಡವು ಮಾದಿಗರ ಪಂಗಡದವರಲ್ಲೆ ಮೇಲ್‌ಜಾತಿಯವರು. ಅವರಿಗೆಲ್ಲರಿಗೂ ಗುರು ಜಾಂಬವ ಮುನಿ ಎಂಬ ಹೆಸರಿನಿಂದ ಕರೆಯುತ್ತಾರೆ. ಮದುವೆಯ ಪ್ರಸ್ತಾಪ ವರನ ಕಡೆಯಿಂದ ಪ್ರಸ್ತಾಪಿಸುತ್ತಾರೆ. ಅದಕ್ಕೇ "ತೇರಾ" ಎಂದು ಕರೆಯುತ್ತಾರೆ. ಅವರಲ್ಲಿ ಜೋಗಿಗಳು ಮತ್ತು ನೀಲಗಾರರು ಇರುತ್ತಾರೆ. ಅವರ ಗುರು ಅರಳಯ್ಯನಿಗೆ ಪೂಜೆ ಸಲ್ಲಿಸುತ್ತಾರೆ. ಹಬ್ಬಗಳು ಆಚರಣೆ ಜನನ ಮರಣಗಳ ವಿಧಿವಿಧಾನಗಳು ನಂತರ ಅವರ ಪೂರ್ವಜರಿಗೆ ಸಲ್ಲಿಸುವ ಪೂಜೆಗಳ ಬಗ್ಗೆ ಕೃಷಿ ಕಾರ್ಮಿಕರ ಬಗ್ಗೆ ನಂತರ ಇವರು ಮಾಂಸಹಾರಿಗಳು ಎಂದು ಇದರಲ್ಲಿ ತಿಳಿಸಲಾಗಿದೆ.[೨]

ಡಾ. ಚಲುವರಾಜು ೧೯೯೩ರಲ್ಲಿ ದಕ್ಕಲರ ಸಂಸ್ಕೃತಿ ಅಧ್ಯಯನದಲ್ಲಿ ದಕ್ಕಲರ ಹುಟ್ಟು ಜಾಂಬವ ಪುರಾಣದ ಯುಗಗಳು ಪೌರಾಣಿಕ ಹಿನ್ನೆಲೆ ಐತಿಹಾಸಿಕ ಹಿನ್ನೆಲೆಯಲ್ಲಿ ಶ್ರೀಕೃಷ್ಣದೇವರಾಯನ ಕಾಲದಿಂದಲೂ ಕರ್ನಾಟಕದಲ್ಲಿ ನೆಲೆಸಿರುವುದು ಹಾಗೂ ಸಾಮಾಜಿಕ ಹಿನ್ನೆಲೆಯಲ್ಲಿ ಭಾರತೀಯ ವರ್ಣ ವ್ಯವಸ್ಥೆಯ ಸಂದರ್ಭದಲ್ಲಿ ದಕ್ಕಲರು ಶೂದ್ರರಾಗಿದ್ದು ಒಳಾಡಳಿತ ವ್ಯವಸ್ಥೆಯಲ್ಲಿ ಆದಿಜಾಂಬವ ಜಾತಿಯಲ್ಲಿನ ಉಪಜಾತಿ ಎಂದು ಗುರುತಿಸಿರುವ ದಕ್ಕಲಿಗರು ಮಹಾರಾಷ್ಟ್ರದಲ್ಲಿ ಮಾಂಗ್‌ರ ಉಪಜಾತಿಯರಾಗಿದ್ದು ಆಂಧ್ರದ ತೆಲುಗು ಮಾದಿಗರಲ್ಲಿ

ಹಾಗೂ ಕರ್ನಾಟಕದಲ್ಲಿ ಮಾದಿಗರ ಉಪಜಾತಿಯವರಾಗಿರುವ ಜಾತಿ ಜನಾಂಗದ ಪ್ರಾಚೀನತೆಯನ್ನು ಚರ್ಚಿಸಿರುವುದು ಈ ಅಧ್ಯಯನದಲ್ಲಿ ಗಮನಿಸಲಾಗಿದೆ.

ಜಾನಕಲ್ ರಾಜಣ್ಣ ಎಂ. ಅವರ 'ದಕ್ಕಲಿಗ' ಕೃತಿಯಲ್ಲಿ ದಕ್ಷಿಣ ಭಾರತದ ದಕ್ಕಲಿಗ ಸಮುದಾಯದ ಜನಸಂಖ್ಯೆ ಮಾಹಿತಿ ಹಾಗೂ ನಗರ ಮತ್ತು ಗ್ರಾಮೀಣವಾರು ಪ್ರದೇಶಗಳಲ್ಲಿ ವಾಸಿಸುವ ಸಮುದಾಯಗಳ ಜನಸಂಖ್ಯೆ ಮತ್ತು ಸ್ತ್ರೀ ಪುರುಷರ ಒಟ್ಟು ವಿವರಗಳನ್ನು ಗಮನಿಸಲಾಗಿದೆ. ನಂತರ ಜಾಂಬವ ಪುರಾಣಕ್ಕೆ ಸಂಬಂಧಿಸಿದ ನಾಲ್ಕು ಕಥೆಗಳು. ದಕ್ಕಲರ ಹುಟ್ಟು ಅವರ ಹಿನ್ನೆಲೆ ಭೂಮಿಯು ಹುಟ್ಟುವ ಮೊದಲು ಜಲಮಯವಾಗಿದ್ದ ಮಾಹಿತಿ, ಈ ಸಮುದಾಯದ ಔಚಿತ್ಯ ಹೆಸರಿನ ಹಿನ್ನೆಲೆ ಬ್ರಹ್ಮಾಂಡದ ಪರಿಕಲ್ಪನೆ ಜನ ಸಮುದಾಯದ ಜೀವನದ ವಿಧಿ ವಿಧಾನಗಳನ್ನು ತಿಳಿಯಬಹುದು.

ಎಲ್ಲಪ್ಪ ಕೆರೆಪುರ ಅವರು ದಕ್ಕಲ ಮಕ್ಕಳು ಅಧ್ಯಯನದಲ್ಲಿ ಅವರ ಸಂಸ್ಕೃತಿಯನ್ನು ಪರಿಚಯಿಸುವಾಗ ಅವರ ಜೀವನ ಕ್ರಮ, ಭಾಷೆ, ಆಚರಣೆ ಮಾದಿಗರೊಡನೆ ಇವರು ಹೊಂದಿರುವ ಸಂಬಂಧ ಸಾಂಸ್ಕೃತಿಕ ಅಂಶಗಳು ಹಾಗೂ ದಕ್ಕಲಿಗರಲ್ಲಿನ ಜಾತಿ ಪದ್ದತಿ ಹಾಗೂ ಇತ್ತೀಚೆಗೆ ಅವರಲ್ಲಿ ಬದಲಾವಣೆ ಹೊಂದುತ್ತಿರುವ ಸಾಂಸ್ಕೃತಿಕ ಅಂಶಗಳು, ಬೇಟೆಯಾಡುವ ಕೌಜುಗಳ ಗೂಡುಗಳು, ದಕ್ಕಲಿಗರಿಗೆ ಸಂಬಂಧಿಸಿದ ಹೆಚ್ಚಿನ ಲೇಖನಗಳು ಇವರಲ್ಲಿ ಕಂಡು ಬರುತ್ತದೆ. ಕಿನ್ನರಿ ಗಾಯನಕ್ಕೆ ಸಂಬಂಧಪಟ್ಟ ಚಿತ್ರಗಳನ್ನು ಒದಗಿಸಿರುವುದು ಇವರ ಅಧ್ಯಯನದಲ್ಲಿ ಗಮನಿಸಬಹುದು ನಂತರ ೧೯೯೨ರಲ್ಲಿ ಪ್ರಜಾವಾಣಿ ಸಾಪ್ತಾಹಿಕ ಪುರವಣಿಯಲ್ಲಿ ಲೇಖನ ವಿಭಾಗದಲ್ಲಿ ಪ್ರಕಟವಾಗಿರುವುದು. ಜಾನಕಲ್ ರಾಜಣ್ಣ ಅವರು ತಮ್ಮ ಅಧ್ಯಯನದಲ್ಲಿ ಹೇಳಿಕೊಂಡಿರುವುದು ತಿಳಿಯಬಹುದು ಪುರವಣಿಯ ಪ್ರಸ್ತಾಪ ಡಾ. ಚಲುವರಾಜು ಅವರು ಹೆಚ್ಚಿನ ಮಾಹಿತಿ ನೀಡಿರುವುದು ಗಮನಿಸಲಾಗಿದೆ.

೧೯೯೩ರಲ್ಲಿ ಲಕ್ಷ್ಮೀಪತಿ ಕೋಲಾರ ಅವರು ಅಧ್ಯಯನ ಮಾಡಿದ ಮಾಸ್ಟೀಕರ ಸಂಸ್ಕೃತಿಯಲ್ಲಿ ಮಾಸ್ಟೀಕರು ಸಿಂಧ ಮಾದಿಗರು ದಕ್ಕಲರ ಉಪ ಪಂಗಡಗಳು. ಮಾದಿಗರ ಜಾತಿಯ ಉಪ ಪಂಗಡಗಳು ಎಂಬ ಅಂಶ ಹಾಗೂ ಮಾಸ್ಟೀಕರ ಹುಟ್ಟು ಕಂಚಿಯ ಶಾಸನ ಚೋಳರ ಆಳ್ವಿಕೆಯಲ್ಲಿ ಮಾಸ್ಟೀಕರ ಪ್ರಸ್ತಾಪ ನಂತರ ತಂಗಡಿ ದ್ಯಾವರ ದಕ್ಕಲರ ಹುಟ್ಟು ಅರುಂಧತಿ ಕಲ್ಯಾಣದ ಮಾಹಿತಿ ಆದಿಜಾಂಬವ ಮಾದಿಗರು ಹಾಗೂ ಅವರ ಉಪಪಂಗಡಗಳ ತಾತ ಎಂದು ಹೇಳಿರುವ ಅಂಶವನ್ನು ತಿಳಿಯಲಾಗಿದೆ. ಪಣ ಸಮಾಜದ ಎಡಗೈ-ಬಲಗೈ ಸಂಬಂಧ ಎಂತಹುದು? ಪಣ ಸಮಾಜದ ವಿಂಗಡಣೆಯ ಸ್ವರೂಪವೇನು? ಎಂಬ ಅಂಶವನ್ನು ತಿಳಿಯಬಹುದು. ದರುವಿನ ಬಗ್ಗೆ ಪ್ರಸ್ತಾಪಿಸದಿದ್ದರೂ ಅದಕ್ಕೆ ಸಂಬಂಧಿಸಿದ ಹಾಡುಗಳು, ಅವರ

ಜೀವನ ಕ್ರಮ, ಆಚರಣೆಗಳು, ವಲಸೆ ಜೀವನದ ವಿಧಾನ, ಆ ಪ್ರದೇಶಕ್ಕೆ ಸಂಬಂಧಿಸಿದ ಭಾಷೆ ಮತ್ತು ಸಾಹಿತ್ಯ ಇದರ ಪೂರ್ಣ ಮಾಹಿತಿ ಇದರಲ್ಲಿ ತಿಳಿಯಬಹುದು.

ಕೋಟಿಗಾನಹಳ್ಳಿ ರಾಮಯ್ಯ ಬರೆದಿರುವ ಸಿಂದ್ ಮಾದಿಗರ ಸಂಸ್ಕೃತಿಯಲ್ಲಿ ಮಾದಿಗ ಜಾತಿಯ ಉಪಪಂಗಡಗಳು ಸಿಂದ್ ಮಾದಿಗರಿಗೂ ಹಾಗೂ ದಕ್ಕಲಿಗರಿಗೂ ಇರುವ ಸಂಬಂಧ ಕೋಲಾರ ಜಿಲ್ಲೆಯ ಮಾಲೂರು ತಾಲ್ಲೂಕಿನ ಮಾತಂಗಪುರದಲ್ಲಿ ಹೆಚ್ಚಿನ ಸಿಂದ್ ಮಾದಿಗರ ಪೂರ್ಣ ಮಾಹಿತಿ ಕಲೆ ಹಾಕಿರುವುದು ಇದರಲ್ಲಿ ಗಮನಿಸಬಹುದು. ನಂತರ ಅರುಂಧತಿ ಕಲ್ಯಾಣ ದಕ್ಕಲ ಜನಾಂಗದ ಪೌರಾಣಿಕ ಹಿನ್ನೆಲೆ ಜಾಂಬವಂತನ ಜಂಬೂದ್ವೀಪ ಸಿಂದ್ ಕತೆಗಳಲ್ಲಿ ಬರುವ ತಾತ ಆದಿ ಜಾಂಬವಂತನಿಗೂ ಶಿಷ್ಟ ಪುರಾಣಗಳಲ್ಲಿ ಬರುವ ಜಾಂಬವಂತನಿಗೂ ಕೆಲವು ಹೋಲಿಕೆ ವ್ಯತ್ಯಾಸಗಳನ್ನು ತಿಳಿಯಬಹುದು. ತಂಗಡಿ ದ್ಯಾವರು ಆಚರಣೆಗಳು ಎಡಗೈ ಬಲಗೈಗಳ ಪಣ ಸಮಾಜದ ಮಾಹಿತಿ ಮಾದಿಗರ ಆಚರಣೆಗಳಲ್ಲಿನ ಶಾಕ್ತೇಯ ಅಂಶಗಳು ಹಾಗೂ ದಕ್ಕಲ ಬಗ್ಗೆ ನೀಡಿರುವ ಸ್ವಲ್ಪಮಟ್ಟಿನ ಮಾಹಿತಿಯನ್ನು ಗಮನಿಸಲಾಗಿದೆ.

ದಕ್ಕಲ ಜಾಂಬವ ಪುರಾಣದ ತೆಲುಗು ಸಾಹಿತ್ಯದಲ್ಲಿ ಜಾಂಬವ ಪುರಾಣ ನಾಟಕ ರೂಪದಲ್ಲಿ ಪ್ರದರ್ಶನಗೊಂಡಿರುವುದು ತಿಳಿಯುತ್ತದೆ. ಜಾಂಬವ ಪುರಾಣದ ನಾಟಕದಲ್ಲಿ ಯುಗಗಳ ಬಗ್ಗೆ ಪ್ರಸ್ತಾಪಿಸುತ್ತಾ ಯಾವ ಯುಗಗಳಲ್ಲಿ ಯಾರು ಜನಿಸಿದರು ಹಾಗೂ ಶ್ರೀಮನ್ ನಾರಾಯಣನು ಬುದ್ದನ ಅವತಾರಿಯಾಗಿ ಹೇಳಿದ ಈ ಪುರಾಣ ನಾರಾಯಣನ ಹುಟ್ಟು ಜಾಂಬವಂತ ಆತನ ವರ್ಣನೆ ಆದಿಶಕ್ತಿಯ ಜನನ ನಂತರ ಆದಿಶಕ್ತಿ ನಾರಾಯಣ ಮತ್ತು ಬ್ರಹ್ಮ ಶಿವನನ್ನು ವಿವಾಹವಾಗುವುದಕ್ಕೆ ಮುಂದಾದಾಗ ನಾರಾಯಣ ಮತ್ತು ಬ್ರಹ್ಮ ನಿರಾಕರಿಸಿದಾಗ ಶಿವ ಜಾಂಬವಂತನ ಸಹಾಯದಿಂದ ಆದಿಶಕ್ತಿಯನ್ನು ಸುಟ್ಟು ಬೂದಿ ಮಾಡಿ ಆ ಬೂದಿಯಿಂದ ಹುಟ್ಟಿದ ಲಕ್ಷ್ಮೀ ಸರಸ್ವತಿ, ಪಾರ್ವತಿಯರನ್ನು ತ್ರಿಮೂರ್ತಿಗಳು ವಿವಾಹವಾಗುವುದರಲ್ಲಿ ಈ ನಾಟಕ ಮುಗಿಯುವುದು ಇದರಲ್ಲಿ ಗಮನಿಸಬಹುದು.

ಪ್ರೊ. ನನುಮಾಸಸ್ವಾಮಿ ಅವರ ವೃತ್ತಿ ಪುರಾಣಾಲು ಎಂಬ ತೆಲುಗು ಜಾತಿಗಳ ಕಲಾ ವೃತ್ತಿಯಲ್ಲಿ ಹಲವಾರು ಜಾತಿ ಕಲಾ ರೂಪಗಳು ಅವುಗಳ ಚಾರಿತ್ರಿಕ ಹಿನ್ನೆಲೆ ಸಾಹಿತ್ಯ ಸಂಸ್ಕೃತಿಯ ಅಂಶಗಳು ಕಥೆಯ ವೃತ್ತಾಂಶಗಳು ಹಾಗೂ ಜಾಂಬವಂತನ ಜನನ ಶಿವ ಪಾರ್ವತಿಯರ ಕಲ್ಯಾಣ ಮೂಲ ಚನ್ನಯ್ಯ ಕಥೆಯ ಸ್ವರೂಪ ಅರುಂಧತಿ ಕಲ್ಯಾಣ ಮತ್ತು ದಕ್ಕಲ ಬಗೆಗಿನ ಹುಟ್ಟು ಅದರ ಹಿನ್ನೆಲೆ ಇಲ್ಲದೆ ಇದ್ದರೂ ಅವರ ಕಲಾ ವೃತ್ತಿಯ ಬಗ್ಗೆ ಪಟದ ಕಥೆಯ ಬಗ್ಗೆ ತಿಳಿಸಿರುವುದು ಇದರಲ್ಲಿ ತಿಳಿಯಬಹುದು. ಸ. ರಘುನಾಥ ಅವರ ದರುವಿನ ಮಹತ್ವ ಮತ್ತು ಗಂಗಭಾರತದ ಗಾರುಡಿಗ ಸಣ್ಣ ಲೇಖನವನ್ನು ಗಮನಿಸಲಾಗಿದೆ.

ಹಾಗೂ ದಕ್ಕಲ ಜಾಂಬವ ಪುರಾಣವು ತೆಲುಗು ನಾಟಕವಾಗಿದ್ದು ಅದನ್ನು ಕನ್ನಡಕ್ಕೆ ಅನುವಾದಿಸಿದ ಸಣ್ಣ ಲೇಖನವನ್ನು ಗಮನಿಸಬಹುದು.

ಎಂ.ಎ. ಶೇರಿಂಗ್ ಅವರು ಸಂಪಾದಿಸಿರುವ 'ದಿ ಟ್ರೈಬ್ಸ್ ಆ್ಯಂಡ್ ಕ್ಯಾಸ್ಟ್ ಆಫ್ ದಿ ಬಾಂಬೆ ಪ್ರೆಸಿಡೆನ್ಸಿ' ೩ನೇ ಪುಟದಲ್ಲಿ ದಕ್ಕಲಿಗ ಸಮುದಾಯ ಮಾಂಗ್ ಜಾತಿಯಲ್ಲಿನ ಒಂದು ಉಪ ಜಾತಿ ಹಾಗೂ ಇವರು ಮಾಂಗ್ ಸಮುದಾಯದಲ್ಲಿ ಭಿಕ್ಷೆಯನ್ನು ಬೇಡಿ ಜೀವಿಸುತ್ತಾರೆ. ನಂತರ ದಕ್ಕಲರ ಹಳೆಯ ದಾಯಾದಿಗಳು ಮಾಂಗ್ ಕುಲದವರು ಎಂದು ಹೇಳಿಕೊಂಡಿರುವ ಅಂಶ ಅವರ ಜೀವನದ ವಿಧಾನಗಳು ಇವರ ಅಧ್ಯಾಯದಲ್ಲಿ ತಿಳಿದು ಬರುತ್ತದೆ.

ಗೆಜಿಡಿಯರ್ ಆಫ್ ಇಂಡಿಯಾದವರು ೧೯೭೭ರಲ್ಲಿ ಹೊರರು ಕೇಂದ್ರ ಸರ್ಕಾರ ೧೯೬೧ರಲ್ಲಿ ಅಂತ್ರೊಪಲಾಜಿಕಲ್ ಸರ್ವೇ ಆಫ್ ಇಂಡಿಯಾದವರು ತಮ್ಮ ಎಂಥ್ನೋಗ್ರಾಫಿಕ್ ನೋಟ್ಸ್ ಆನ್ ಎಸ್.ಸಿ (Anthrographic notes on SC) ಎಂಬ ಅಧ್ಯಯನದಲ್ಲಿ ದಕ್ಕಲಿಗರನ್ನು ದಕ್ಕಲೋರ್ ದಕ್ಕಲಗಾರ ಇವರನ್ನು ವಂಜತ್ರಿಮಂಗ್ ಇವರು ಚನ್ನ ಹೊಲೆಯ ಮೊದಲಗೊಂಡು ದೊಕ್ಕಲೇರು ಹಾಗೂ ಉಳಿದ ೧೩ ಉಪ ಜಾತಿಗಳ ಬಗ್ಗೆ ಹೇಳಿರುವುದು ಅದರಲ್ಲಿ ಮಾದಿಗ ದಲ್ಯ ಮಾಂಗ್ಸ್ ಗಡ್ಡೀರ ಮಾಂಸ್ ಮೋಚಿ ರಾಹುತ್ ವಂಜತ್ರಿ ಸನಾದಿ ಇದರಲ್ಲಿ ದಕ್ಕಲರು ಎಂದು ಹೇಳುವಾಗ ದೊಕ್ಕಾಲೇರು ಎಂದು ಹೇಳಿ ಇವರು ಸಹ ಒಂದು ಪಂಗಡ ಎಂದು ತಿಳಿಸಿದ್ದಾರೆ.

ಡಾ. ಕೆ. ಕೃಷ್ಣಪ್ಪ ನವರ ಸಂಶೋಧನೆ ಕೃತಿಯಾದ ದಕ್ಕಲಿಗ ಸಮುದಾಯದಲ್ಲಿ ದಕ್ಕಲ ಕುಲಶಾಸ್ತ್ರ ಮತ್ತು ಸಂಸ್ಕೃತಿ ಸಾಮಾಜಿಕ ಹಿನ್ನೆಲೆ, ಸಾಮಾಜಿಕ ಸ್ಥಿತಿಗತಿಗಳು, ಆರ್ಥಿಕ ಸ್ಥಿತಿಗತಿಗಳು, ಸಾಮಾಜಿಕತೆ, ಶೈಕ್ಷಣಿಕ ಸ್ಥಾನಮಾನ ವರ್ತಮಾನದ ಸ್ಥಿತಿಗತಿಗಳ ಪಾರಂಪರಿಕ ಕಸುಬುದಾರರ ಸ್ಥಿತಿಗತಿಗಳು, ಕೃಷಿ ಮತ್ತು ಭೂ ಹಿಡುವಳಿದಾರರು, ಬಂಡವಾಳಶಾಹಿಗಳ ನೆಲೆಯಲ್ಲಿ ತಳ ಸಮುದಾಯಗಳು ಹೇಗೆ ನಲುಗುತ್ತಿವೆ. ಹಾಗೂ ವರ್ತಮಾನದ ದಿನಗಳಲ್ಲಿ ದಕ್ಕಲರ ಸಮುದಾಯಗಳ ದೌರ್ಬಲ್ಯಗಳು ಇತ್ತೀಚಿನ ಸಂದರ್ಭದಲ್ಲಿ ದಕ್ಕಲ ಸಮುದಾಯಗಳು ತಮ್ಮ ಜೀವನವನ್ನು ರೂಪಿಸಿಕೊಳ್ಳಲು ಏಕೆ ವಿಫಲವಾಗಿದೆ. ಎಂಬ ಅಂಶವನ್ನು ಇವರ ಅಧ್ಯಯನದಲ್ಲಿ ತಿಳಿಯಬಹುದು.

**ಭೌಗೋಳಿಕತೆಯ ವ್ಯಾಪ್ತಿ**

ದಕ್ಕಲಿಗರ ಮೂಲ ನೆಲೆ ಅಂದಿನ ಆಂಧ್ರಪ್ರದೇಶ. ಆದರೆ ಇತ್ತೀಚೆಗೆ ೨೦೧೪ರಲ್ಲಿ ತೆಲಂಗಾಣ ಪ್ರತ್ಯೇಕ ರಾಜ್ಯವಾಗಿ ಇಬ್ಭಾಗವಾಯಿತು. ಈ ತೆಲಂಗಾಣ ರಾಜ್ಯಕ್ಕೆ ಸೇರಿದ ವರಂಗಲ್ ಪ್ರಾಂತ್ಯ ಈ ಪ್ರಾಂತ್ಯಗಳಲ್ಲಿ ದಕ್ಕಲಿಗರು ಅಧಿಕ ಸಂಖ್ಯೆಯಲ್ಲಿ ವಾಸಿಸುತ್ತಿದ್ದು ಈ ಕುಟುಂಬಗಳಲ್ಲಿ ಕೆಲವರು ಆಂಧ್ರದ ಗಡಿನಾಡು ಪ್ರದೇಶಗಳಾದ ಕರ್ನಾಟಕ, ಮಹಾರಾಷ್ಟ್ರ, ತಮಿಳುನಾಡು ರಾಜ್ಯಗಳಿಗೆ ವಲಸೆ ಬಂದು ನೆಲೆಸಿರುವುದು ಕಂಡುಬರುತ್ತದೆ. ಹೀಗೆ ಬಂದು

ದಕ್ಕಲಿಗರು ಕರ್ನಾಟಕದ ಅನೇಕ ಜಿಲ್ಲೆಗಳಲ್ಲಿ ಅಲೆಮಾರಿಗಳಾಗಿ ಸಂಚರಿಸುತ್ತಾ ಅಲ್ಲೇ ನೆಲೆನಿಂತು ಜೀವಿಸುತ್ತಿರುವುದು ಕಂಡುಬರುತ್ತದೆ. ಹೀಗೆ ಜೀವಿಸುತ್ತಿರುವ ಕುಟುಂಬಗಳು ಕೋಲಾರ ಜಿಲ್ಲೆಯಲ್ಲಿ ಕೆಲವು ಕುಟುಂಬಗಳು ಕಂಡುಬರುತ್ತವೆ.

ಕೋಲಾರ ಜಿಲ್ಲೆಯು ಕರ್ನಾಟಕ ಗಡಿಭಾಗದ ಜಿಲ್ಲೆಯಾಗಿದ್ದರೂ ಇಲ್ಲಿ ನಿಸರ್ಗತೆಯ ಮಡಿಲಲ್ಲಿ ನೆರೆ ರಾಜ್ಯಗಳ ಹೊಂದಾಣಿಕೆಯ ಸಂಪರ್ಕಕ್ಕೆ ಉತ್ತಮವಾದ ಸೇತುವೆಯಾಗಿದೆ. ಕರ್ನಾಟಕದ ದಕ್ಷಿಣ ಬಯಲು ಸೀಮೆಯ ಪೂರ್ವದಲ್ಲಿರುವ ಕೋಲಾರ ಜಿಲ್ಲೆಯ ವಿಸ್ತೀರ್ಣದಲ್ಲಿ ೩೯೬೯ ಚ.ಕಿ.ಮೀಗಳಾಗಿವೆ. ವಿಸ್ತೀರ್ಣದಲ್ಲಿ ಜಿಲ್ಲೆಯ ಭೌಗೋಳಿಕ ವಿಸ್ತೀರ್ಣ ೩೮೮೧೨೮.೧೭ ಹೆಕ್ಟೇರುಗಳ ಪ್ರದೇಶವನ್ನು ಒಳಗೊಂಡಿರುವ ಕೋಲಾರ ಪೂರ್ವಕ್ಕೆ ಆಂಧ್ರಪ್ರದೇಶ ಚಿತ್ತೂರು ಜಿಲ್ಲೆ, ಪಶ್ಚಿಮಕ್ಕೆ ಬೆಂಗಳೂರು ಗ್ರಾಮಾಂತರ, ಉತ್ತರಕ್ಕೆ ಅನಂತಪುರ, ದಕ್ಷಿಣಕ್ಕೆ ತಮಿಳುನಾಡು (ಧರ್ಮಪುರಿ ಜಿಲ್ಲೆ) ರಾಜ್ಯಗಳಿಂದ ಸುತ್ತುವರಿಯಲ್ಪಟ್ಟಿದೆ.

ರಾಜ್ಯದ ಗಡಿಭಾಗವಾಗಿದ್ದ ಈ ಜಿಲ್ಲೆಯಲ್ಲಿ ಹಲವಾರು ಧರ್ಮಗಳು ವಿವಿಧ ಭಾಷೆಗಳು ವಿವಿಧ ಸಂಸ್ಕೃತಿಗಳ ಜನರು ನೆಲೆಸಿದ್ದಾರೆ. ಜಾನಪದ ಸಂಪತ್ತು, ಕಲಾ ರೂಪಗಳ ನೆಲೆಗಳನ್ನು ಇಲ್ಲಿ ಕಾಣಬಹುದು ಹಾಗೂ ಹಲವಾರು ಜಾತಿ ಜನಾಂಗಗಳಲ್ಲಿ ಆಂಧ್ರಪ್ರದೇಶದಿಂದ ವಲಸೆ ಬಂದು ನೆಲೆಸಿರುವ ದಕ್ಕಲ ಕುಟುಂಬಗಳು ಈ ಪ್ರದೇಶಗಳಲ್ಲಿ ನೆಲೆಸಿರುವುದು ತಿಳಿಯುತ್ತದೆ. ಕರ್ನಾಟಕದ ಇನ್ನು ಉಳಿದ ಜಿಲ್ಲೆಗಳು, ಬಳ್ಳಾರಿ, ತುಮಕೂರು, ಹಾಸನ, ಚಿತ್ರದುರ್ಗ, ದಾವಣಗೆರೆ, ಹಾವೇರಿ, ಧಾರವಾಡ, ಬೆಳಗಾವಿ, ರಾಯಚೂರು, ಬಿಜಾಪುರ, ಬಾಗಲಕೋಟೆ, ಗುಲ್ಬರ್ಗಾ ಈ ಪ್ರದೇಶಗಳಲ್ಲಿ ನೆಲೆನಿಂತು ಅಲ್ಲಿನ ಭೌಗೋಳಿಕತೆಗೆ ಹೊಂದಿಕೊಂಡು ಜೀವಿಸುತ್ತಿದ್ದಾರೆ.

ಕೋಲಾರ ಜಿಲ್ಲೆಗೆ ಸಂಬಂಧಿಸಿದ ಪ್ರದೇಶಗಳಲ್ಲಿ ಇರುವ ದಕ್ಕಲ ಸಮುದಾಯಗಳು ಮಾದವಗುರ್ಜೇನಹಳ್ಳಿ, ಚಿಂತಾಮಣಿ ತಾಲ್ಲೂಕಿನ ಬಾಣಮರಿ ಗ್ರಾಮ, ಶ್ರೀನಿವಾಸಪುರ, ಸುಗಟೂರು, ಶಿವನಾಪುರ, ಚಿಕ್ಕಬಳ್ಳಾಪುರ ತಾಲ್ಲೂಕಿನ ಶ್ರೀರಾಮಪುರ, ಮಾಲೂರು ತಾಲ್ಲೂಕು ಈ ಪ್ರದೇಶಗಳಲ್ಲಿ ದಕ್ಕಲರು ಜೀವಿಸುತ್ತಿರುವುದು ಕಂಡುಬರುತ್ತದೆ.

ಕರ್ನಾಟಕ ಆಂಧ್ರದ ಗಡಿ ಪ್ರದೇಶಗಳ ನಡುವೆ ಹೆಚ್ಚಿನ ಭೌಗೋಳಿಕ ವ್ಯತ್ಯಾಸಗಳಲ್ಲಿ ಬಯಲು ಸೀಮೆಗಳಲ್ಲಿ ಬೆಟ್ಟ ಗುಡ್ಡಗಳ ಕುರುಚಲು ಕಾಡುಗಳು ನೆಲೆ ನಿಂತಿರುವ ಜನಪದ ಸಂಸ್ಕೃತಿಯ ಮೇಳವಾಗಿಸುವ ಜಾತಿ ಜನಾಂಗಗಳ ಉಪಜಾತಿಗಳ ಒಂದು ಮುಖ್ಯ ಭಾಗವಾಗಿ ದಕ್ಕಲ ಸಮುದಾಯಗಳು ತಮ್ಮ ತಲೆಮಾರುಗಳು ಕುಲಗಳೊಂದಿಗಿನ ಸಾಂಸ್ಕೃತಿಕ ಸಂಬಂಧಗಳನ್ನು ಉಳಿಸಿಕೊಂಡು ಬಂದು ಉಪಜಾತಿಯಾಗಿ ಬೆಳೆದಿದ್ದರೂ ಬುಡಕಟ್ಟು ಜನಾಂಗದವರಂತೆ ಬಯಲು ಪ್ರದೇಶಗಳಲ್ಲಿ ಶಿಕಾರಿಗಳನ್ನು ನಡೆಸುತ್ತಾ ಪುರಾಣದ ಕಥೆಗಳನ್ನು ಹಾಡುತ್ತಾ ಭಿಕ್ಷೆ ಬೇಡಿ ಜೀವನವನ್ನು ದೂಡುತ್ತಿದ್ದಾರೆ.

ಈಗಿನ ಭೌಗೋಳಿಕ ಪರಿಸರಕ್ಕೆ ಸ್ವಲ್ಪಮಟ್ಟಿನ ಬದಲಾವಣೆಗಳು ಕಂಡುಕೊಂಡು ಕೂಲಿ ಕೆಲಸಗಳನ್ನು ಮಾಡಿಕೊಂಡು ಭಿಕ್ಷೆ ಬೇಡುವುದು ತಕ್ಕ ಮಟ್ಟಿಗೆ ಕಡಿಮೆ ಮಾಡಿರುವುದು ಇಲ್ಲಿನ ಸಮುದಾಯಗಳನ್ನು ಗಮನಿಸಿದರೆ ತಿಳಿಯಬಹುದು. ಈ ಪ್ರದೇಶಗಳಲ್ಲಿ ವಾಸಿಸುತ್ತಿರುವ ದಕ್ಕಲ ಕುಟುಂಬಗಳಿಗೆ ಹೆಸರಿಗೆ ಮಾತ್ರ ದಕ್ಕಲರು ಅಷ್ಟೇ ಆದರೆ ಸರ್ಕಾರದ ದೃಷ್ಟಿಯಲ್ಲಿ ಮಾದಿಗ ಜಾತಿಗೆ ಸೇರಿದವರು ಎಂದು ಪರಿಗಣಿಸಿರುವುದು ಮಾತ್ರ ವಿಪರ್ಯಾಸ. ಇವರನ್ನು ಹೊಲೆಯ ಮಾದಿಗರೆಂಬ ಪರಿಶಿಷ್ಟ ಪಂಗಡಕ್ಕೆ ಸೇರಿದವರು ಎಂದು ಜಾತಿ ಪ್ರಮಾಣ ಪತ್ರದಲ್ಲಿ ತಿಳಿಯುತ್ತದೆ. ಇಲ್ಲಿನ ಕುಟುಂಬಗಳು ದಕ್ಕಲ ಜಾತಿಯ ಪ್ರಮಾಣ ಪತ್ರಕ್ಕಾಗಿ ಅನೇಕ ಬಾರಿ ಸರ್ಕಾರಕ್ಕೆ ಮನವಿ ಮಾಡಿದರೂ ಪ್ರಯೋಜನವಾಗದೆ ಕೈ ಬಿಟ್ಟಿರುವುದು ಈ ಭೌಗೋಳಿಕ ಪ್ರದೇಶಗಳಲ್ಲಿ ಕಂಡುಬರುತ್ತದೆ. ಹೀಗಾಗಿ ಈ ಪ್ರದೇಶದ ದಕ್ಕಲರು ಪರಿಶಿಷ್ಟ ಪಂಗಡಕ್ಕೆ ಸೇರಿದವರು ಎಂದು ಹಾಗೂ ಕೆಲವು ಕುಟುಂಬಗಳು ಭೋವಿ ಜನಾಂಗದವರು ಎಂದು ಗುರುತಿಸಿಕೊಂಡು ಜೀವಿಸುತ್ತಿದ್ದಾರೆ.

**ಜನಸಂಖ್ಯೆ**

ದಕ್ಕಲ ಸಮುದಾಯಗಳ ಮೂಲ ಸ್ಥಾನ ಆಂಧ್ರಪ್ರದೇಶವಾಗಿದ್ದು, ಈ ಕುಟುಂಬಗಳು ಒಂದು ಕಡೆ ನೆಲೆನಿಲ್ಲದೆ ಜೀವನೋಪಾಯಕ್ಕಾಗಿ ಕರ್ನಾಟಕ, ಮಹಾರಾಷ್ಟ್ರ ಮುಂತಾದ ಕಡೆ ವಲಸೆ ಬಂದು ನೆಲೆಸಿರುವುದು ಕಂಡು ಬರುತ್ತದೆ. ಕರ್ನಾಟಕದ ೧೭ ಜಿಲ್ಲೆಗಳಲ್ಲಿ ಬೆರಳೆಣಿಕೆಯಷ್ಟು ಜನ ಜೀವನ ನಡೆಸುತ್ತಿದ್ದಾರೆ. ಜಾನಕಲ್ ರಾಜಣ್ಣನವರ ಅಧ್ಯಯನದಲ್ಲಿ ದಕ್ಕಲ ಒಟ್ಟು ಜನಸಂಖ್ಯೆ ೩೧೬ ಕುಟುಂಬಗಳು ಇದ್ದು ಅದರಲ್ಲಿ ೬೬೫ ಪುರುಷರು ೬೪೦ ಮಹಿಳೆಯರು ಒಟ್ಟು ೧೨೯೫ರಷ್ಟು ಜನ ವಾಸಿಸುತ್ತಿರುವುದು ಇದು ೨೦೦೧ರ ಜನಸಂಖ್ಯಾ ಕೋಷ್ಟಕದಲ್ಲಿ ತಿಳಿಯುತ್ತದೆ. ಆದರೆ ಇದು ಕರ್ನಾಟಕ ರಾಜ್ಯದ ಒಟ್ಟು ಜನಸಂಖ್ಯೆಯಾದರೆ ನಮ್ಮ ಅಧ್ಯಯನದಲ್ಲಿ ಕೋಲಾರ (ಚಿಕ್ಕಬಳ್ಳಾಪುರ) ಜಿಲ್ಲೆಗೆ ಸಂಬಂಧಿಸಿದಂತೆ ಈ ಪ್ರದೇಶದಲ್ಲಿ ಅಧ್ಯಯನದ ಕ್ಷೇತ್ರ ಕಾರ್ಯದಲ್ಲಿ ಒಟ್ಟು ಜನಸಂಖ್ಯೆ ೩೩ ಕುಟುಂಬಗಳು ನೆಲೆಸಿದ್ದು ಅದರಲ್ಲಿ ೩೪ ಪುರುಷರು ೩೬ ಸ್ತ್ರೀಯರು ವಾಸಿಸುತ್ತಿದ್ದಾರೆ.

ಕೋಲಾರ ಜಿಲ್ಲೆಗೆ ಸಂಬಂಧಿಸಿದಂತೆ ಒಟ್ಟು ಜನಸಂಖ್ಯೆ ಹಾಗೂ ಶೇಕಡಾವಾರು ಪ್ರಮಾಣದಲ್ಲಿ ತಿಳಿಸಿದ್ದ ಕುಟುಂಬಗಳ ವಿವರಗಳು ಈ ಕೆಳಕಂಡಂತಿವೆ.

**ಮಾದವಗುರ್ಜೇನಹಳ್ಳಿ:-** ಈ ಕೋಲಾರ ತಾಲ್ಲೂಕಿಗೆ ಸಂಬಂಧಿಸಿದ ಈ ಹಳ್ಳಿಯಲ್ಲಿ ೫ ಕುಟುಂಬಗಳು ವಾಸಿಸುತ್ತಿದ್ದಾರೆ.

೧. ಗೋವಿಂದಪ್ಪ ಹೆಂಡತಿ ದುರ್ಗಮ್ಮ ಇವರ ಮಕ್ಕಳು ಮುನಿಸ್ವಾಮಿ, ರಾಜಪ್ಪ ಮಗಳು ಗಂಗಮ್ಮ ಮೂರು ಜನ ಗೋವಿಂದಪ್ಪ ನಿಧನರಾಗಿದ್ದು ದುರ್ಗಮ್ಮ ಒಬ್ಬ ಜೀವಿಸುತ್ತಿದ್ದು ಇವರ ಮಕ್ಕಳು ಬೇರೆಯಾಗಿ ಇವರ ಕುಟುಂಬಗಳು ಈಗ ಐದು ಕುಟುಂಬಗಳಾಗಿವೆ.

೨. ಮುನಿಸ್ವಾಮಿ ಹೆಂಡತಿ ಕಮಲಮ್ಮ ಇವರ ಮಕ್ಕಳು ಮುನಿರತ್ನ ಸರೀಶ, ಮುನೇಂದ್ರ ಇದು ಒಂದು ಕುಟುಂಬ.

೩. ರಾಜಪ್ಪ ಹೆಂಡತಿ ಸುಶೀಲಮ್ಮ ಇವರ ಮಕ್ಕಳು ಸಂಧ್ಯ, ಸ್ವಪ್ನ, ದಿಲೀಫ್ ಮೂರು ಜನ.

೪. ಗಂಗಮ್ಮ ಗಂಡ ಗೋವಿಂದಪ್ಪ ಇವರ ಮಕ್ಕಳು ಇಬ್ಬರು ನಾರಾಯಣಸ್ವಾಮಿ, ಚಾಂದಿನಿ, ಮಗನಿಗೆ ಮದುವೆಯಾಗಿ ಬೇರೆಯಾಗಿ ಜೀವಿಸುತ್ತಿದ್ದಾನೆ.

೫. ನಾರಾಯಣಸ್ವಾಮಿ ಹೆಂಡತಿ ಸಂಗೀತ ಇವರ ಮಕ್ಕಳು ಬಿಂದು ಮತ್ತೆ ನಿತೀನ್.

**ಶ್ರೀನಿವಾಸಪುರ**

ಶ್ರೀನಿವಾಸಪುರದ ನಗರ ಪ್ರದೇಶದಲ್ಲಿ ವಾಸಿಸುತ್ತಿದ್ದು ರೇಷ್ಮೆ ಗೂಡಿನ ಮಾರುಕಟ್ಟೆ ಪಕ್ಕದ ಬಯಲು ಪ್ರದೇಶದಲ್ಲಿ ೧೨ ಕುಟುಂಬಗಳು ವಾಸಿಸುತ್ತಿದ್ದಾರೆ.

೧. ಲಕ್ಷ್ಮಣ ಹೆಂಡತಿ ಗಂಗಮ್ಮ ಇವರಿಗೆ ಒಂದು ಮಗು ಚೇತನ್ ಒಂದು ಕುಟುಂಬ

೨. ನಾಗರಾಜ ಹೆಂಡತಿ ಜಯಮ್ಮ ಇವರಿಗೆ ಎಂಟು ಜನ ಮಕ್ಕಳು ಗಂಗಾಧರ, ವೆಂಕಟಮ್ಮ, ರತ್ನಮ್ಮ, ಮುನಿಯಮ್ಮ, ರಾಧಾ, ಮುನಿಲಕ್ಷ್ಮೀ, ನಯನ, ಮುನೇಂದ್ರ ಹೆಣ್ಣು ಮಕ್ಕಳಿಗೆ ಮದುವೆಯಾಗಿ ಎಲ್ಲರೂ ಗಂಡನ ಮನೆಯಲ್ಲಿ ವಾಸಿಸುತ್ತಿದ್ದಾರೆ.

೩. ಸೀನಪ್ಪ ಹೆಂಡತಿ ಯಲ್ಲಮ್ಮ ಇವರ ಮಕ್ಕಳು ಲಚ್ಚಮ್ಮ, ಅನು ಇಬ್ಬರು ಹೆಣ್ಣು ಮಕ್ಕಳು.

೪. ಕೃಷ್ಣ ಹೆಂಡತಿ ಕಾಮಾಕ್ಷಿ ಇವರಿಗೆ ಮಕ್ಕಳಿಲ್ಲ ಇದು ಒಂದು ಕುಟುಂಬ.

೫. ದಕ್ಕಲ ಬಂಗಾರಪ್ಪ ಹೆಂಡತಿ ಚಿನ್ನಮ್ಮ ಇವರಿಗೆ ಇಬ್ಬರು ಮಕ್ಕಳು ನಾಗೇಶ, ಲಕ್ಷ್ಮೀ ಇವರದು ಒಂದು ಕುಟುಂಬ.

೬. ದೇವರಾಜ ಹೆಂಡತಿ ರೇಣುಕಾ ಇವರಿಗೆ ಇಬ್ಬರು ಮಕ್ಕಳು ಅಮರೇಂದ್ರ, ಅರ್ಚನ ಇವರದು ಒಂದು ಕುಟುಂಬ.

೭. ಗಂಗಪ್ಪ ಹೆಂಡತಿ ವೆಂಕಟಮ್ಮ ಇವರಿಗೆ ಪವನ್ ಮತ್ತು ಶ್ರಾವಣಿ ಎಂಬ ಇಬ್ಬರು ಮಕ್ಕಳು.

೮. ಪೆದ್ದ ಏಸು ಹೆಂಡತಿ ಲಕ್ಷ್ಮೀ ಇವರಿಗೆ ಗೀತಾ ಎಂಬ ಒಂದು ಹೆಣ್ಣು ಮಗು.

೯. ಮಲ್ಲಪ್ಪ ಹೆಂಡತಿ ಪೆಂಚಲಮ್ಮ ಇವರಿಗೆ ನಾಲ್ಕು ಜನ ಮಕ್ಕಳು ಲಕ್ಷ್ಮಪ್ಪ, ರಂಗ, ಗೌತಮ, ರಾಮಚಂದ್ರ ಇಬ್ಬರಿಗೆ ಮದುವೆಯಾಗಿ ಅವರು ಪ್ರತ್ಯೇಕವಾಗಿ ವಾಸಿಸುತ್ತಿದ್ದಾರೆ.

೧೦. ಲಕ್ಷ್ಮಪ್ಪ ಹೆಂಡತಿ ಕೊಂಡಮ್ಮ ಇವರದು ಒಂದು ಕುಟುಂಬ.

೧೧. ರಂಗ ಹೆಂಡತಿ ಸುಶೀಲ ಇವರದು ಒಂದು ಕುಟುಂಬ.

೧೨. ಚಿಕ್ಕ ಏಸು ಹೆಂಡತಿ ಭಾಗ್ಯ ಇವರದು ಒಂದು ಕುಟುಂಬ ಇಷ್ಟು ಕುಟುಂಬಗಳು ಈ ನಗರ ಪ್ರದೇಶಗಳಲ್ಲಿ ನೆಲೆಸಿದ್ದಾರೆ.

**ಹೆಚ್. ಕ್ರಾಸ್**:- ಶಿಡ್ಲಘಟ್ಟ ತಾಲ್ಲೂಕಿಗೆ ಸೇರಿದ ಹಳ್ಳಿ ಈ ಹಳ್ಳಿಯಲ್ಲಿ ಎರಡು ಕುಟುಂಬಗಳು ನೆಲೆಸಿದ್ದಾರೆ.

೧. ರಾಮಪ್ಪ ಹೆಂಡತಿ ರತ್ನಮ್ಮ ಇವರಿಗೆ ಐದು ಜನ ಮಕ್ಕಳು ಶಿವಕುಮಾರ, ಯಶೋಧ, ಸುಶೀಲ, ಸಾವಿತ್ರಮ್ಮ, ಭಾಗ್ಯ.

೨. ರಾಮಚಂದ್ರಪ್ಪ ಹೆಂಡತಿ ನಿಧನರಾಗಿದ್ದು ಇವರಿಗೆ ಒಂದು ಗಂಡು ಮಗು ಶಿವಕುಮಾರ ಇವನಿಗೆ ಮದುವೆಯಾಗಿದ್ದು ಹೆಂಡತಿ ಮೀನಾ.

**ಸುಗಟೂರು**:- ಶಿಡ್ಲಘಟ್ಟ ತಾಲ್ಲೂಕಿನ ಜಂಗಮಕೋಟೆ ಹತ್ತಿರದ ಹಳ್ಳಿ ಇಲ್ಲಿ ೫ ಕುಟುಂಬಗಳು ನೆಲೆಸಿದ್ದಾರೆ.

೧. ನಾರಾಯಣಸ್ವಾಮಿ ಹೆಂಡತಿ ಜಯಮ್ಮ ಇವರಿಗೆ ಐದು ಜನ ಮಕ್ಕಳು ಮುನಿರಾಜು, ಶಿವಕುಮಾರ, ಲಲಿತ, ದೇವರಾಜ, ಆನಂದ ಎಲ್ಲಾರಿಗೂ ಮದುವೆ ಆಗಿದ್ದು ಇವರು ಪ್ರತ್ಯೇಕವಾಗಿ ವಾಸವಾಗಿದ್ದಾರೆ. ಮೊದಲ ಮಗ ಮತ್ತು ಸೊಸೆ ಚಿಂತಾಮಣಿ ತಾಲ್ಲೂಕಿನ ಬಾಣಮರಿಯಲ್ಲಿ ವಾಸವಾಗಿದ್ದಾರೆ.

೨. ಶಿವಕುಮಾರ ಹೆಂಡತಿ ಸಾವಿತ್ರಮ್ಮ ಇವರಿಗೆ ಮೂರು ಜನ ಮಕ್ಕಳು ರೇಣುಕಾ, ಮೌನಿಷ, ಜಯಶ್ರೀ.

೩. ದೇವರಾಜ ಹೆಂಡತಿ ರೇಣುಕಾ ಇವರಿಗೆ ಇಬ್ಬರು ಮಕ್ಕಳು ಅಮರೇಂದ್ರ, ಅರ್ಚನ.

೪. ಆನಂದ ಹೆಂಡತಿ ಚಂದ್ರಿಕ ಇವರು ನವ ದಂಪತಿಗಳು

೫. ಮುನಿಯಮ್ಮ ಗಂಡ ದೊಡ್ಡಪ್ಪಯ್ಯ ಇವರಿಗೆ ಒಬ್ಬ ಮಗ ವೆಂಕಟೇಶ ಇವನ ಹೆಂಡತಿ ಸರೋಜಮ್ಮ ಇವರಿಗೆ ಒಬ್ಬ ಮಗ ಹರೀಶ್ ಇವರು ಎಲ್ಲಾ ಒಂದೇ ಕುಟುಂಬದಲ್ಲಿ ಜೀವಿಸುತ್ತಿದ್ದಾರೆ.

**ಬಾಣಮರಿ**:- ಚಿಂತಾಮಣಿ ತಾಲ್ಲೂಕಿಗೆ ಸೇರಿದ ಬಾಣಮರಿ ಎಂಬ ಹಳ್ಳಿಯಲ್ಲಿ ೭ ಕುಟುಂಬಗಳು ನೆಲೆಸಿದ್ದಾರೆ.

೧. ದುರ್ಗಪ್ಪ ಹೆಂಡತಿ ಚಂದ್ರಮ್ಮ ಇವರಿಗೆ ಒಂದು ಗಂಡು ಮತ್ತು ಒಂದು ಹೆಣ್ಣು ಚಾಮುಂಡಿ ಮತ್ತು ಮಾಣಿಕ್ಯ.

೨. ಕೃಷ್ಣಪ್ಪ ಹೆಂಡತಿ ಕಮಲಮ್ಮ ಇವರಿಗೆ ಐದು ಜನ ಮಕ್ಕಳು ಅನಿತ, ಸುನೀತ, ಶಿಲ್ಪ, ರವಿ, ದೇವರಾಜ

೩. ನಾಗಪ್ಪ ಹೆಂಡತಿ ರತ್ನಮ್ಮ ಇವರಿಗೆ ನಾಲ್ಕು ಜನ ಮಕ್ಕಳು ಮುರಳಿ, ಮಾನಸ, ವೆಂಕಟೇಶ, ಮಲ್ಲಿಕ ಮುರಳಿ ಎಂಬ ಮಗನಿಗೆ ಮದುವೆಯಾಗಿದ್ದು ಹೆಂಡತಿ ಲಕ್ಷ್ಮೀ ಇವರು ಒಂದೇ ಕುಟುಂಬದಲ್ಲಿ ನೆಲೆಸಿದ್ದಾರೆ.

೪. ಪೆದ್ದಪ್ಪಯ್ಯ ಹೆಂಡತಿ ಜಯಮ್ಮ ಇವರಿಗೆ ನಾರಾಯಣಸ್ವಾಮಿ ಮಗನಿಗೆ ಮದುವೆಯಾಗಿದ್ದು ಹೆಂಡತಿ ಲಲಿತ ಇವರಿಗೆ ಇಬ್ಬರು ಮಕ್ಕಳು ಸುಶೀಲ ಮತ್ತು ಮನು ಎಲ್ಲಾರೂ ಒಂದೇ ಕುಟುಂಬದಲ್ಲಿ ವಾಸವಾಗಿದ್ದಾರೆ.

೫. ಮುನಿರಾಜು ಹೆಂಡತಿ ಮಂಜಮ್ಮ ಇವರಿಗೆ ಮೂರು ಜನ ಮಕ್ಕಳು ಮುನೇಂದ್ರ ಮಂಚೇಂದ್ರ, ಮುರಳಿ.

೬. ಕೆಂಗಣ್ಣ ಹೆಂಡತಿ ಲಕ್ಷ್ಮೀದೇವಮ್ಮ ಹೆಂಡತಿ ರಾಣಿ ಇವರಿಗೆ ಒಂದು ಗಂಡು ಮಗು.

೭. ಮಂಜುನಾಥ ಹೆಂಡತಿ ಮುನಿರತ್ನಮ್ಮ ಇವರಿಗೆ ಮೂರು ಜನ ಮಕ್ಕಳು ಎರಡು ಗಂಡು, ಒಂದು ಹೆಣ್ಣು.

**ಶಿವನಾಪುರ:–** ಹೊಸಕೋಟೆ ತಾಲ್ಲೂಕಿನ ಶಿವನಾಪುರ ಇವರು ಮೊದಲು ಮಾಲೂರು ತಾಲ್ಲೂಕಿನಲ್ಲಿ ಇದ್ದು ಈಗ ಶಿವನಾಪುರದಲ್ಲಿ ನೆಲೆಸಿದ್ದಾರೆ. ಇಲ್ಲಿ ಒಂದು ಕುಟುಂಬ ನೆಲೆಸಿದ್ದು.

೧). ಮುನಿಸ್ವಾಮಿ ಹೆಂಡತಿ ಆಂಜನಮ್ಮ ಇವರಿಗೆ ಒಂದು ಗಂಡು ಮಗು ಒಂದು ಹೆಣ್ಣು ಮಗು ಇದ್ದಾರೆ.

**ದಕ್ಕಲ ಕುಟುಂಬಗಳ ವಿವರಣೆ**

ಹೀಗೆ ದಕ್ಕಲ ಸಮುದಾಯಗಳ ಜನಸಂಖ್ಯೆಯನ್ನು ಆಧರಿಸಿ ಆಯಾ ಪ್ರದೇಶಗಳಿಗೆ ಸಂಬಂಧಿಸಿದ ಜನಸಂಖ್ಯಾ ವೃದ್ಧಿ ಹಾಗೂ ವಂಶ ವೃಕ್ಷದ ಬೆಳವಣಿಗೆಗಳಿಂದ ಮುಂದಿನ ಪೀಳಿಗೆಯನ್ನು ವೃದ್ಧಿಸುವುದಕ್ಕೆ ಈ ಸಮುದಾಯಗಳು ಗಂಡು ಮತ್ತು ಹೆಣ್ಣು ಮಕ್ಕಳನ್ನು ಸಮಾನರಾಗಿ ಬೆಳೆಸುತ್ತಿದ್ದಾರೆ.

ಮಾದವ ಗುರ್ಜೇನಹಳ್ಳಿಯಲ್ಲಿ ವಲಸೆ ಬಂದು ಮೊದಲು ನೆಲೆಯೂರಿದ್ದು ದಕ್ಕಲ ಗೋವಿಂದಪ್ಪ ಮತ್ತು ದುರ್ಗಮ್ಮ. ಇವರ ಮೂಲಕ ಪ್ರಾರಂಭವಾದ ವಂಶಾವೃದ್ಧಿ ಇಂದು ಐದು ಕುಟುಂಬಗಳಾಗಿ ಜೀವಿಸುತ್ತಿದ್ದಾರೆ. ಹಳ್ಳಿಯಲ್ಲಿ ಈ ಸಮುದಾಯಗಳು ೫ ಕುಟುಂಬಗಳಾಗಿ ಒಟ್ಟು ೧೬ ಜನರು ಜೀವಿಸುತ್ತಿದ್ದು. ಇದರಲ್ಲಿ ಮಕ್ಕಳ ಸಂಖ್ಯೆ ೧೦ ನಂತರ ೬ ಗಂಡು

ಮಕ್ಕಳು ೫ ಹೆಣ್ಣು ಮಕ್ಕಳಿದ್ದಾರೆ. ಮುಂದಿನ ಈ ಸಮುದಾಯಗಳ ವೃದ್ಧಿಗೆ ಇವರೇ ದಾರಿ ದೀಪವಾಗಿದ್ದಾರೆ. ಹೀಗಾಗಿ ಇಲಿನ ದಕ್ಕಲ ಸಮುದಾಯಗಳು ಮುಂದೆ ನಶಿಸದಂತೆ ತಮ್ಮ ಮಕ್ಕಳನ್ನು ಬೆಳೆಸಿ ಅವರ ಉತ್ತಮ ಭವಿಷ್ಯಕ್ಕಾಗಿ ಹಾಗೂ ಸಮುದಾಯಗಳ ಬೆಳವಣಿಗೆಗಾಗಿ ಈ ಸಮುದಾಯಗಳು ಶ್ರಮಿಸುತ್ತಿದ್ದಾರೆ.

ಶ್ರೀನಿವಾಸಪುರದಲ್ಲಿ ಒಟ್ಟು ೧೨ ಕುಟುಂಬಗಳು ೪೦ ಜನರು ವಾಸವಾಗಿದ್ದು ೬೩ ಹೆಚ್ಚು ಕುಟುಂಬಗಳಿರುವುದು ಈ ಪ್ರದೇಶದಲ್ಲಿ. ಈ ಸಮುದಾಯಗಳಲ್ಲಿ ೨೨ ಜನ ಮಕ್ಕಳಿದ್ದು ೧೦ ಗಂಡು ಮಕ್ಕಳು ೧೩ ಹೆಣ್ಣು ಮಕ್ಕಳಿದ್ದಾರೆ ಇಲ್ಲಿ ಸಹ ಗಂಡು ಮತ್ತು ಹೆಣ್ಣು ಮಕ್ಕಳನ್ನು ಸಮಾನವಾಗಿ ಬೆಳೆಸುತ್ತಿದ್ದಾರೆ. ಪ್ರತಿ ಕುಟುಂಬದಲ್ಲಿ ಒಂದು ಹೆಣ್ಣು ಒಂದು ಗಂಡು ಮಗು ಇರುವುದು ಕಂಡು ಬರುತ್ತದೆ. ಮುಂದೆ ತಮ್ಮ ಸಮುದಾಯಗಳ ಬೆಳವಣಿಗೆಗೆ ಗಂಡು ಮಕ್ಕಳಿಂದ ಮಾತ್ರ ವೃದ್ಧಿಯಾಗುತ್ತದೆ. ಹೆಣ್ಣು ಮಕ್ಕಳು ಮದುವೆಯ ನಂತರ ಗಂಡನ ಮನೆಗೆ ಹೋಗುತ್ತಾರೆ. ಹಾಗಾಗಿ ಅವರಿಂದ ವಂಶ ವೃದ್ಧಿಯಾಗುವುದಿಲ್ಲ ಎಂಬ ನಂಬಿಕೆ ಈ ಸಮುದಾಯಗಳದ್ದು. ಹಾಗಾಗಿ ಗಂಡು ಮಕ್ಕಳ ಮೇಲೆ ಪ್ರೀತಿ ಹೆಚ್ಚಿರುತ್ತದೆ. ಈ ಪ್ರದೇಶದ ಸಮುದಾಯಗಳು ಮುಂದಿನ ಪೀಳಿಗೆಯ ಕುಡಿಗಳು ಎಂದು ತಮ್ಮ ಸಮುದಾಯಗಳು ನಾಶವಾಗದಂತೆ ಇಲ್ಲಿನ ಕುಟುಂಬಗಳು ಎಚ್ಚರವಹಿಸುತ್ತಿವೆ.

ಹೆಚ್. ಕ್ರಾಸ್ ಈ ಹಳ್ಳಿಯಲ್ಲಿ ಬರಿ ಎರಡು ಕುಟುಂಬಗಳು ಇಲ್ಲಿ ಒಟ್ಟು ೧೦ ಜನ ವಾಸವಾಗಿದ್ದು ೬ ಜನ ಮಕ್ಕಳಿದ್ದು ಅದರಲ್ಲಿ ಎರಡು ಗಂಡು ಮಕ್ಕಳು ನಾಲ್ಕು ಜನ ಹೆಣ್ಣು ಮಕ್ಕಳು ಇವರು ಮೂಲತಃ ಸುಗಟೂರು ಈ ಹಳ್ಳಿಯಿಂದ ವಲಸೆ ಬಂದು ಇಲ್ಲಿ ನೆಲೆಸಿದ್ದಾರೆ. ಇಲ್ಲಿನ ಮುಂದಿನ ವಂಶವನ್ನು ಬೆಳೆಸುವುದಕ್ಕೆ ಇಬ್ಬರು ಗಂಡು ಮಕ್ಕಳು ಇದ್ದು, ಅದರಲ್ಲಿ ಒಬ್ಬರಿಗೆ ಮದುವೆಯಾಗಿದ್ದು ಇನ್ನೂ ಇವರಿಗೆ ಮಕ್ಕಳಾಗಲಿಲ್ಲ. ಹಾಗಾಗಿ ಈ ಹಳ್ಳಿಯಲ್ಲಿ ದಕ್ಕಲ ಸಮುದಾಯ ಬೆಳವಣಿಗೆ ಸ್ವಲ್ಪಮಟ್ಟಿನ ಕಷ್ಟವಿದ್ದರು ಮತ್ತೊಂದು ಗಂಡು ಮಗುವೆ ಈ ಸಮುದಾಯಗಳ ಬೆಳವಣಿಗೆ ಆಸರೆಯಾಗಿದ್ದಾನೆ.

ಸುಗಟೂರು ಜಂಗಮ ಕೋಟೆಯ ಹತ್ತಿರ ಈ ಹಳ್ಳಿಯಲ್ಲಿ ೫ ಕುಟುಂಬಗಳು ಇದ್ದು ಒಟ್ಟು ೨೦ ಜನ ವಾಸವಾಗಿದ್ದಾರೆ.ಇಲ್ಲಿ ಮೊದಲು ನೆಲೆಯೂರಿ ಇಷ್ಟು ಕುಟುಂಬಗಳ ಬೆಳವಣಿಗೆಗೆ ಅಂಜನಪ್ಪ ಮತ್ತು ಅಂಜನಮ್ಮ ಇವರಿಂದ ಇಂದು ೫ ಕುಟುಂಬಗಳಾಗಿ ನೆಲೆನಿಂತಿರುವುದು ಕಂಡುಬರುತ್ತದೆ. ೧೧ ಮಕ್ಕಳಿದ್ದು ಅದರಲ್ಲಿ ೬ ಜನ ಗಂಡು ಮಕ್ಕಳು ೫ ಜನ ಹೆಣ್ಣು ಮಕ್ಕಳು ೬ ಜನ ಗಂಡು ಮಕ್ಕಳ ಮೂರು ಜನರಿಗೆ ಮದುವೆಯಾಗಿದ್ದು ಉಳಿದ ಮೂರು ಜನರಲ್ಲಿ ಒಬ್ಬ ಬಿ.ಕಾಂ ಓದುತ್ತಿದ್ದು ಉಳಿದ ಇಬ್ಬರು ಚಿಕ್ಕ ಮಕ್ಕಳಾಗಿದ್ದಾರೆ. ಮುಂದಿನ

ಸಮುದಾಯವನ್ನು ಬೆಳೆಸಿ ವೃದ್ಧಿಸುವ ಜವಾಬ್ದಾರಿ ಈ ಮಕ್ಕಳ ಮೇಲೆ ಇದೆ. ನಂತರ ತಮ್ಮ ಸಮುದಾಯಗಳು ನಾಶವಾಗದೆ ಹೀಗೆ ಬೆಳೆಯುವುದಕ್ಕೆ ಈ ಮಕ್ಕಳು ಸಾಕ್ಷಿಯಾಗಿದ್ದಾರೆ.

ಚಿಂತಾಮಣಿ ತಾಲ್ಲೂಕಿನ ಬಾಣ ಮರಿಯಲ್ಲಿ ೭ ಕುಟುಂಬಗಳು ಇದ್ದು ೩೫ ಜನ ವಾಸವಾಗಿದ್ದಾರೆ. ಶ್ರೀನಿವಾಸಪುರ ಬಿಟ್ಟರೆ ಹೆಚ್ಚು ಕುಟುಂಬಗಳು ವಾಸವಾಗಿರುವುದು ಬಾಗಾಮರಿಯಲ್ಲಿ. ಇಲ್ಲಿನ ಸಮುದಾಯಗಳಲ್ಲಿ ೧೯ ಮಕ್ಕಳಿದ್ದು ೧೧ ಜನ ಗಂಡು ಮಕ್ಕಳು, ೮ ಜನ ಹೆಣ್ಣು ಮಕ್ಕಳು. ಇಲ್ಲಿನ ಸಮುದಾಯಗಳ ಬೆಳವಣಿಗೆ ಹಾಗೂ ಮುಂದೆಯು ಹೆಚ್ಚಾಗಿ ಬೆಳೆಯುವುದಕ್ಕೆ ಹೆಚ್ಚು ಗಂಡು ಮಕ್ಕಳಿರುವುದು ಸಾಕ್ಷಿಯಾಗಿದೆ. ಈ ಗಂಡು ಮಕ್ಕಳಲ್ಲಿ ಕೆಲವರಿಗೆ ಮದುವೆಯಾಗಿದ್ದು ಅವರಿಗೆ ಮಕ್ಕಳಿದ್ದು ಈ ಸಮುದಾಯಗಳ ಬೆಳವಣಿಗೆ ಮುಂದುವರಿಯುವುದಕ್ಕೆ ದಾರಿಯಾಗಿದೆ. ಹೀಗೆ ಇವರ ವಂಶ ವೃಕ್ಷ ಬೆಳೆದು ಈ ಸಮುದಾಯಗಳು ಕಣ್ಮರೆಯಾಗದೆ ಉಳಿಯುವುದು ಈ ಪ್ರದೇಶದ ದಕ್ಕಲ ಸಮುದಾಯಗಳಲ್ಲಿ ಕಂಡುಬರುತ್ತದೆ.

ಶಿವನಾಪುರ ಹೊಸಕೋಟೆ ತಾಲ್ಲೂಕಿನ ಶಿವನಾಪುರದಲ್ಲಿ ಒಂದು ಕುಟುಂಬ ನೆಲೆಸಿದ್ದು ಇವರು ಮಾಲೂರು ಕಡೆಯಿಂದ ವಲಸೆ ಬಂದು ಇಲಿ ನೆಲೆಸಿದ್ದಾರೆ ಈ ಕುಟುಂಬಕ್ಕೆ ಇರುವುದಕ್ಕೆ ಮನೆ ಇಲ್ಲದೆ ಪಾಳು ಬಿದ್ದಿರುವ ಮನೆಯನ್ನು ತಿಂಗಳಿಗೆ ೨೦೦ ರೂಪಾಯಿ ಬಾಡಿಗೆ ಕೊಟ್ಟು ನೆಲೆಸಿದ್ದಾರೆ ಈ ಕುಟುಂಬದಲ್ಲಿ ೪ ಜನ ವಾಸವಾಗಿದ್ದು ಒಂದು ಗಂಡು ಮತ್ತು ಒಬ್ಬ ಮೊಮ್ಮಗಳು ಇದ್ದಾರೆ ಮೊಮ್ಮಗಳು ಮುನಿಸ್ವಾಮಪ್ಪನ ಮಗಳು ಈ ಪ್ರದೇಶದಲ್ಲಿ ಸಮುದಾಯ ನೆಲೆಯೂರುವುದಕ್ಕೆ ತುಂಬ ಕಷ್ಟಕರವಾಗಿದ್ದು ಈ ಕುಟುಂಬ ಎಷ್ಟು ದಿನ ನೆಲೆನಿಲ್ಲುತ್ತದೆ ಎಂಬುದು ತಿಳಿಯದಾಗಿದೆ. ಒಂದು ಗಂಡು ಮಗುವಿನ ವಂಶಾವೃದ್ಧಿಯ ಬಗ್ಗೆ ತಮ್ಮ ಸಮುದಾಯ ಬೆಳವಣಿಗೆಯ ಬಗ್ಗೆ ಈ ಕುಟುಂಬದ ಮುನಿಸ್ವಾಮಿಯವರಿಗೆ ಸಂದಿಗ್ಧ ಸಂಗತಿಯಾಗಿದೆ.

ಹೀಗೆ ಈ ಸಮುದಾಯಗಳ ಜನಸಂಖ್ಯೆಯನ್ನು ಆಧರಿಸಿ ಗಮನಿಸಿದಾಗ ಈ ಸಮುದಾಯಗಳು ಬೆರಳೆಣಿಕೆಯಷ್ಟು ಮಾತ್ರ ಇದ್ದು ತಮ್ಮ ಸಮುದಾಯಗಳ ವೃದ್ಧಿಗೆ ಶ್ರಮಿಸುತ್ತಿದ್ದಾರೆ. ಜಾನಕಲ್ ರಾಜಣ್ಣನವರು ಇಡೀ ಕರ್ನಾಟಕವನ್ನು ಆಧರಿಸಿ ಒಟ್ಟು ದಕ್ಕಲ ಸಮುದಾಯಗಳ ಜನಸಂಖ್ಯೆಯನ್ನು ಪರಿಗಣಿಸಿ ತಮ್ಮ ಸಂಶೋಧನ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ. ನಂತರ ಒಂದು ಕೋಷ್ಟಕವನ್ನು ತಯಾರಿಸಿ ಜಿಲ್ಲೆ, ತಾಲ್ಲೂಕು ಹಾಗೂ ಹಳ್ಳಿಗಳನ್ನು ಪರಿಗಣಿಸಿ ಅವರ ಒಟ್ಟು ಜನಸಂಖ್ಯೆಯನ್ನು ತಿಳಿಸಿದ್ದಾರೆ. ಈ ಅಂಶವನ್ನು ಗಮನದಲ್ಲಿ ಇರಿಸಿ ನಂತರ ತನ್ನ ಅಧ್ಯಯನ ಕ್ಷೇತ್ರಕಾರ್ಯವನ್ನು ಆಧರಿಸಿ ಕೋಲಾರ ಜಿಲ್ಲೆಗೆ ಸಂಬಂಧಪಟ್ಟ ದಕ್ಕಲ ಜನಸಂಖ್ಯೆಯ ಕೋಷ್ಟಕವನ್ನು ತಿಳಿಸಲಾಗಿದೆ. ಈ ಪ್ರದೇಶಗಳಲ್ಲಿ ಕಡಿಮೆ ಜನಸಂಖ್ಯೆ ಇದ್ದರು. ಈ ಸಮುದಾಯಗಳು ತಮ್ಮ ಮಕ್ಕಳ

ಮುಖಾಂತರ ಸಮುದಾಯಗಳನ್ನು ಬೆಳೆಸಿ ತಮ್ಮ ವಂಶ ಹಾಗೂ ಕುಲಗಳನ್ನು ಬೆಳೆಸಿ ಕುಲ ಸಂಸ್ಕೃತಿಯನ್ನು ಉಳಿಸಿಕೊಳ್ಳುವುದಕ್ಕೆ ಪ್ರಯತ್ನಿಸುತ್ತಿರುವುದು ಕಂಡುಬರುತ್ತದೆ.

ಈ ಸಮುದಾಯಗಳ ಜನಸಂಖ್ಯೆಯನ್ನು ಆಧರಿಸಿ ಕ್ಷೇತ್ರ ಕಾರ್ಯದಲ್ಲಿ ೩೩ ಕುಟುಂಬಗಳು ೧೩೦ ಜನ ವಾಸಿಸುತ್ತಿದ್ದು ಇಷ್ಟು ಜನರಲ್ಲಿ ಮೂರು ವ್ಯಕ್ತಿಗಳಿಗೆ ಮಾತ್ರ ಗಂಗಭಾರತ (ಜಾಂಬವ ಪುರಾಣ)ದ ಕಥೆ ತಿಳಿದಿರುವುದು. ದಕ್ಕಲ ಮುನಿಸ್ವಾಮಿ ಇವರಿಗೆ ಜಾಂಬವ ಪುರಾಣ ಪೂರ್ತಿಯಾಗಿ ತಿಳಿದಿದ್ದು ಇವರು ಗಂಗಭಾರತವನ್ನು ಪ್ರತ್ಯೇಕವಾಗಿ ನಾವು ಹಾಡುವುದಿಲ್ಲ ಜಾಂಬವ ಪುರಾಣದ ಮುಖಾಂತರವೆ ಹಾಡುತ್ತೇವೆ ಎರಡೂ ಒಂದೇ ಆಗಿದೆ ಎಂದು ಹೇಳುತ್ತಾರೆ. ಅದರ ಮಾಹಿತಿಯನ್ನು ತಿಳಿಸಿದರು.ಇದನ್ನು ಹಾಡುವುದು ದಕ್ಕಲ ಮುನಿಸ್ವಾಮಿ ಮತ್ತು ನಾರಾಯಣಸ್ವಾಮಿ ಹಾಗೂ ಅಂಜನಮ್ಮ ಎಂಬುವರಿಗೆ ಕಥೆ ಸ್ವಲ್ಪಮಟ್ಟಿಗೆ ತಿಳಿದಿದೆ.ಅದನ್ನು ಹಾಡುವುದು ಇಬ್ಬರು ಮಾತ್ರ ಮಾದವ ಗುರ್ಜೇನಹಳ್ಳಿಯ ದಕ್ಕಲ ಗೋವಿಂದಪ್ಪ ದಕ್ಕಲ ಪುರಾಣವನ್ನು, ಕಿನ್ನರಿಯನ್ನು ಬಾರಿಸುತ್ತ ತಾಳವನ್ನು ಹಾಕಿ ಇಡೀ ರಾತ್ರಿ ಹಾಡುತ್ತಿದ್ದರು. ಆದರೆ ಇವರು ೫ ತಿಂಗಳಷ್ಟು ಹಿಂದೆ ತೀರಿಕೊಂಡು ಈಗ ಈ ಸಮುದಾಯದಲ್ಲಿ ಯಾರೂ ಅದರ ಬಗ್ಗೆ ತಿಳಿದುಕೊಳ್ಳದೇ ಅದರ ಬಗ್ಗೆ ಗಮನಹರಿಸದಿರುವುದು ತಿಳಿದುಬರುತ್ತದೆ. ಇತ್ತೀಚಿನ ಕಾಲಘಟ್ಟದಲ್ಲಿ ಇಂತಹ ಪುರಾಣಗಳು ಮರೆಯಾಗುತ್ತಿರುವುದಕ್ಕೆ ಇಲ್ಲಿನ ಈ ಸಮುದಾಯವೇ ಸಾಕ್ಷಿಯಾಗಿದೆ. ಆದರೆ ಈ ಪುರಾಣದ ಬಗ್ಗೆ ತಿಳಿದಿರುವ ಈ ಮೂರು ವ್ಯಕ್ತಿಗಳನ್ನು ಪ್ರೋತ್ಸಾಹಿಸಿ ಬೆಳೆಸುವುದು ಎಲ್ಲರ ಕರ್ತವ್ಯವಾಗಿದೆ.

**ಕೊನೆ ಟಿಪ್ಪಣಿಗಳು**

೧. ಜಾನಕಲ್ ರಾಜಣ್ಣ, **ದಕ್ಕಲಿಗ,** ಪು. ೧೧, ೧೫.

೨. **Caste and Tribes southern India, vol-2,** ಪು. ೩೩೬, ೩೩೭.



ಅಧ್ಯಾಯ : ಎರಡು

# ದಕ್ಕಲ ಸಮುದಾಯದ ಚಾರಿತ್ರಿಕ ಮತ್ತು ಸಾಮಾಜಿಕ ಹಿನ್ನೆಲೆ

ಅಧ್ಯಾಯ : ಎರಡು

# ದಕ್ಕಲ ಸಮುದಾಯದ ಚಾರಿತ್ರಿಕ ಮತ್ತು ಸಾಮಾಜಿಕ ಹಿನ್ನೆಲೆ

## ೨.೧. ದಕ್ಕಲ ಸಮುದಾಯಗಳ ಹಿನ್ನೆಲೆ

ಭಾರತೀಯ ಸಮಾಜದಲ್ಲಿ ಹಲವು ಸಮುದಾಯಗಳು ವಾಸಿಸುತ್ತಿದ್ದು ಈ ಸಮುದಾಯಗಳು ಹಲವು ಜಾತಿ ಜನಾಂಗಗಳಿಂದ ಕೂಡಿದೆ. ಈ ಎಲ್ಲಾ ಜಾತಿ ಜನಾಂಗಗಳು ತನ್ನದೇ ಆದಂತಹ ಚರಿತ್ರೆಗಳನ್ನು ಹೊಂದಿದ್ದು ಅದರ ಆಧಾರದ ಮೇಲೆ ತಮ್ಮ ಕುಲ ಬದುಕನ್ನು ಕಟ್ಟಿಕೊಂಡು ಅದರ ಅಡಿಯಲ್ಲಿ ನಂಬಿಕೆಗಳು ಆಚಾರ ವಿಚಾರಗಳು ನಡವಳಿಕೆಗಳನ್ನು ತೊಡಗಿಸಿಕೊಂಡಿರುವುದು ತಿಳಿಯುತ್ತದೆ. ಹೀಗೆ ಈ ಜಾತಿಗಳಲ್ಲಿ ಕಟ್ಟ ಕಡೆಯ ಜಾತಿ (ಅಸ್ಪೃಶ್ಯರಲ್ಲೆ ಅಸ್ಪೃಶ್ಯರು) ದಕ್ಕಲಿಗರು. ಇವರ ಸಾಂಸ್ಕೃತಿಕ ಚರಿತ್ರೆ ಎಲ್ಲಾ ಸಮುದಾಯಗಳಿಗಿಂತ ವಿಭಿನ್ನವಾಗಿದೆ. ಈ ದಕ್ಕಲರು ಮಾದಿಗರ ಕುಲಗಳ ಉಪಕುಲಗಳಲ್ಲಿ ಒಂದು ಉಪಪಂಗಡವಾಗಿದೆ.ಇವರ ಚಾರಿತ್ರಿಕ ಹಿನ್ನೆಲೆ ಮೌಖಿಕವಾಗಿದ್ದರೂ ಎಲ್ಲಾ ಸಮುದಾಯಗಳ ಪುರಾಣಗಳ ಶಿಷ್ಟ ಪುರಾಣಗಳಿಗಿಂತ ದಿಗ್ಭ್ರಮೆಗೊಳಿಸುವಷ್ಟು ಶಕ್ತಿಯುತವಾಗಿದೆ. ಈ ಶಿಷ್ಟ ಜಗತ್ತಿನಲ್ಲಿ ತನ್ನ ಚರಿತ್ರೆಯ ಮೂಲಕ ಸಮುದಾಯದ ಮಹತ್ವವನ್ನು ಸಮಾಜಕ್ಕೆ ಒಪ್ಪಿಸುವತ್ತ ಸಾಗಿದೆ. ಈ ತಳ ಸಮುದಾಯ ತಮ್ಮ ಚರಿತ್ರೆಯನ್ನು ನೆಚ್ಚಿ ನಂಬಿ ಇಂದಿಗೂ ಸಹ ತನ್ನ ಪಾರಂಪರಿಕತೆಯನ್ನು ಬಿಟ್ಟುಕೊಡದೆ ತಮ್ಮಲ್ಲೆ ಗೌಪ್ಯವಾಗಿ ಅಡಗಿಸಿಕೊಂಡಿರುವುದು ಒಂದು ವಿಶೇಷವಾಗಿದೆ.[೧]

ದಕ್ಕಲ ಪುರಾಣ ಲೋಕದ ದೃಷ್ಟಿಯಲ್ಲಿ ಮೇಲ್ಮುಖವಾದದ್ದು ಇದು ಸಾಮಾಜಿಕವಾಗಿ ಹಿಂದುಳಿದರು ಪೌರಾಣಿಕವಾಗಿ ಶ್ರೇಷ್ಠತೆಯನ್ನು ಹೊಂದಿದ್ದಾರೆ. ದಕ್ಕಲರ ಹುಟ್ಟಿಗೆ ಹಾಗೂ ದಕ್ಕಲರು ಎಂಬ ಹೆಸರು ಬರಲು ಈ ಜಾಂಬವ ಪುರಾಣವೆ ಮೂಲ ಕಾರಣವಾಗಿದೆ. ಇದರಲ್ಲಿ ಬರುವ ಆದಿಜಾಂಬವ ತಾತ ಮಾದಿಗರ ಹಾಗೂ ಉಪಪಂಗಡಗಳ ಹುಟ್ಟಿಗೆ ಮೂಲ ಪುರುಷನಾಗಿದ್ದಾನೆ. ಮಾದಿಗರ ಉಪಪಂಗಡಗಳಲ್ಲಿ ಅತ್ಯಂತ ಕೆಳಸ್ತರದವರು ದಕ್ಕಲ ಸಮುದಾಯ. ಇವರನ್ನು ಮಾದಿಗರ ದಕ್ಕಲ ಮಗ ಎಂದು ಕರೆಯುತ್ತಾರೆ. ಈ ಎಲ್ಲಾ ಕುಲಗಳು ಆದಿ ಜಾಂಬವನ ಮೂಲ ಕುಲಗಳಾಗಿವೆ. ಹಾಗೂ ಈ ಕುಲಗಳು ವಿಶ್ವಕರ್ಮನ ಜನಾಂಗದೊಂದಿಗೆ ಸಾಂಸ್ಕೃತಿಕ ಸಂಬಂಧವನ್ನು ಬೆಸೆದುಕೊಂಡಿರುವುದು ತಿಳಿಯುತ್ತದೆ. ಈ ಸಂಬಂಧಗಳ ಚಾರಿತ್ರಿಕ ಹಿನ್ನೆಲೆ ಹೀಗೆ ವಿಸ್ತರಿಸುತ್ತದೆ. ಭೂಮಿ ಮತ್ತು ಆಕಾಶ ಹುಟ್ಟುವುದಕ್ಕೆ ಆರು ತಿಂಗಳು ಮೊದಲು

ಆದಿ ಜಾಂಬವನು ಜನ್ಮ ತಾಳುತ್ತಾನೆ. ಇವನಿಗೆ ಏಳು ಜನ ಮಕ್ಕಳು. ಅವರು ಯುಗಮುನಿ, ಕದರಮುನಿ, ಹಿರಮುನಿ, ಹೆಪ್ಪುಮುನಿ, ಕಂಠಮುನಿ, ಹಾಲಮುನಿ, ಪಂಚಮುನಿ ಎಂಬ ಮಕ್ಕಳು ಹುಟ್ಟುತ್ತಾರೆ. ದೇವತೆಗಳು ಶಿವ-ಪಾರ್ವತಿಯರ ವಿವಾಹ ಮಾಡುವುದಕ್ಕೆ ಮುಂದಾದಾಗ ಮದುವೆಗೆ ಬೇಕಾದ ತಾಳಿ ಮುಂತಾದ ಆಭರಣಗಳು ಇರುವುದಿಲ್ಲ. ಆಗ ವಿಶ್ವಕರ್ಮನ ಬಳಿ ಒಡವೆಗಳನ್ನು ಮಾಡುವುದಕ್ಕೆ ಸಲಕರಣೆಗಳು ಇಲ್ಲವಾಗಿರುತ್ತದೆ. ಆಗ ವಿಶ್ವಕರ್ಮ ಆದಿ ಜಾಂಬವನ ಬಳಿ ಬಂದು ಕೇಳಲು ಆದಿಜಾಂಬವ ಅದಕ್ಕೆ ಸಮ್ಮತಿಸಿ ತನ್ನ ಹಿರಿಯ ಮಗನಾದ ಯುಗಮುನಿಯನ್ನು ಕತ್ತರಿಸಿ ಮುಂದೆ ಯಜ್ಞಸೂತ್ರ, ಮಂಗಳಸೂತ್ರ, ಕಾಲುಸೂತ್ರ ನಿರ್ಮಿಸುವುದಕ್ಕೆ ಮಗನ ತಲೆಬುರುಡೆಯನ್ನು ಅಡಿಗಲ್ಲು ಮಾಡಿ, ಕಣ್ಣುಗಳನ್ನು ಸುಲೋಚನೆ ಮಾಡಿ, ಕಿವಿಗಳನ್ನು ತ್ರಾಸು ಮಾಡಿ, ಮೂಗನ್ನು ಊದು ಕೊಳವೆ ಮಾಡಿ, ಗುಂಡಿಗೆಯನ್ನು ಮೂಸೆ ಮಾಡಿ, ನಾಲಿಗೆಯನ್ನು ವರೆ ಹಚ್ಚುವ ಕಲ್ಲು ಮಾಡಿ, ತಲೆ ಮೆದುಳನ್ನು ಬಿಳಿಗಾರ ಮಾಡಿ, ಹಲ್ಲುಗಳನ್ನು ಹಠಗಳನ್ನಾಗಿ ಮಾಡಿ, ಉಗುರುಗಳನ್ನು ಸಣ್ಣ ಪಾಗಾರಿಗಳನ್ನು ಮಾಡಿ, ದೇಹದ ಚರ್ಮವನ್ನು ಸುಲಿದು ಕುಲುಮೆಗೆ ತಿತ್ತಿಗಳನ್ನು ಮಾಡಿ, ಬೆರಳುಗಳನ್ನು ಶ್ರವಣ ಮಾಡಿ, ಹೊಟ್ಟೆಯೊಳಗಿನ ಕಲ್ಮಶವನ್ನು ನೆಲ್ಲುಹೊಟ್ಟು ಮಾಡಿ, ಕೈಗಳನ್ನು ಸುತ್ತಿಗೆ ಮಾಡಿ, ಹೀರಿ ಮತ್ತು ದೊಮ್ಮೆಗಳನ್ನು ಇದ್ದಿಲು ಮಾಡಿ, ಕಾಲುಗಳನ್ನು ಚಮಟಿಗೆ ಮಾಡಿ, ಕಿವಿಯಲ್ಲಿರುವ ಗುಗ್ಗೆಯನ್ನು ಅರಗು ಮಾಡಿ, ಬಗ್ಗುರಿ ಎಲುಬುಗಳನ್ನು ಕಬ್ಬಿಣದ ಹುಕ್ಕುಗಳನ್ನಾಗಿ ಮಾಡಿ ಪ್ರಪಂಚಕ್ಕೆ ಆಧಾರವಾದ ಸಾಮಾಗ್ರಿಗಳನ್ನು ಮಾಡುವಂತೆ ಸೂಚಿಸಿ ವಿಶ್ವಕರ್ಮನಿಗೆ ಉಳಿದ ಕರುಳನ್ನು ಕಿತ್ತು ಕೊಟ್ಟಾಗ ಆಚಾರಿ ಇದನ್ನು ಇಟ್ಟುಕೊಂಡು ಏನು ಮಾಡಲಿ ಎಂದು ಕೇಳಿದಾಗ ಆದಿಜಾಂಬವ ಇದುವರಿಗೂ ಪಂಚಮುಖಿ ಬ್ರಹ್ಮ ಆಗಿದ್ದೆ. ಇನ್ನು ಮುಂದೆ ಆಚಾರಿಯಾಗಿ ಮುಂದುವರಿಸು ಎಂದು ಜನಿವಾರವನ್ನು ಅವನಿಗೆ ಹಾಕಿದನು.

ಯುಗಮುನಿಯ ದೇಹದ ಭಾಗಗಳು ಒಡವೆಗಳು ಮಾಡುವುದಕ್ಕೆ ಕೊಟ್ಟು ಉಳಿದ ಡಕ್ಕೆ ಮತ್ತು ಮಾಂಸವನ್ನು ತೆಗೆದುಕೊಂಡು ಇದರಿಂದ ಏನು ಪ್ರಯೋಜನವಿಲ್ಲವೆಂದು ಡಕ್ಕೆಯನ್ನು ಬೇಲಿಯಾಚೆ ಬಿಸಾಡಿ ಮಾಂಸವನ್ನು ತಿಪ್ಪೆಯಲ್ಲಿ ಹೂಳುತ್ತಾನೆ. ನಂತರ ಆಚಾರಿಗೆ ಇನ್ನು ನೀನು ಹೋಗಪ್ಪ ಮನೆಗೆ ಬಂಗಾರದ ಬೆಟ್ಟಕ್ಕೆ ತಿತ್ತಿಯಾಗಿ ಒಂದುಗೂಡಿ ಬರುತ್ತದೆ ಎಂದು ಹೇಳಿ ಕಳಿಸುತ್ತಾನೆ. ಆಗ ಆಚಾರಿಯು ದೇವತೆಗಳಿಗೆ ಬೇಕಾದ ಆಭರಣಗಳನ್ನು ಮಾಡಿಕೊಂಡು ದೇವತೆಗಳ ಬಳಿ ಹೋಗುತ್ತಾನೆ. ಅಲ್ಲಿದ್ದ ದೇವತೆಗಳಾದ ದೇವೇಂದ್ರ, ಅಗ್ನಿದೇವ, ವಾಯುದೇವ, ಗಂಗಾಭವಾನಿ ಇತರ ದೇವತೆಗಳು ಆ ಆಭರಣಗಳನ್ನು ನೋಡಿ ಈ ಆಭರಣಗಳಿಗೆ ಬೇಕಾದ ಸಲಕರಣೆಗಳು ಎಲ್ಲಿಂದ ತಂದೆ ಎಂದು ಪ್ರಶ್ನಿಸುತ್ತಾರೆ. ಆಗ ಆಚಾರಿಯು ತಾತನಾದ ಜಾಂಬವ ಮುನಿ ದೊಡ್ಡ ಮಗನಾದ ಯುಗಮುನಿಯನ್ನು ಕತ್ತರಿಸಿ ಅವನ ದೇಹದ ಭಾಗಗಳನ್ನು ಸಲಕರಣೆಗಳು ಮಾಡುವುದಕ್ಕೆ ಕೊಟ್ಟ ಎಂದು ಹೇಳುತ್ತಾನೆ.

ಆಗ ದೇವತೆಗಳು ಆದಿಜಾಂಬ ಮಾಡಿದ ಕೆಲಸಕ್ಕೆ ಬೆರಗಾಗಿ ಎಲ್ಲಿ ಆದಿಜಾಂಬ ಎಂದು ಕೇಳುತ್ತಾರೆ. ಆಗ ಆಚಾರಿಯು ಅರಮನೆಯಲ್ಲಿ ಇರುವನು ಎಂದು ಹೇಳಿದಾಗ ದೇವತೆಗಳು ಭೂಮಿ ಮತ್ತು ಆಕಾಶಕ್ಕೆ ಆರು ತಿಂಗಳು ದೊಡ್ಡವನು ಜಾಂಬವ ಮುನಿ ಆ ಮಹಾನುಭಾವನೆ ಬರಲಿಲ್ಲವೆಂದರೆ ಹೇಗೆ ಹೋಗಿ ಆದಿಜಾಂಬವನನ್ನು ಕರೆದುಕೊಂಡು ಬರಬೇಕು ಎಂದು ಹೇಳುತ್ತಾನೆ. ಆಚಾರಿಯು ಜಾಂಬವಮುನಿಯ ಹತ್ತಿರ ಬಂದು ದೇವತೆಗಳು ಗದ್ದಾಲಿಗೆ ಕರೆಯುತ್ತಿದ್ದಾರೆ ಬರಬೇಕು ಎಂದು ಕೇಳಿದಾಗ ಜಾಂಬವ ಮುನಿ ಹೋಗಯ್ಯ ಹೋಗು ಮದುವೆ ಮಾಡುವುದಕ್ಕೆ ಅವರು, ಸಂತೋಷ ಪಡುವುದು ನೀನು. ನನಗೆ ಎಲ್ಲಿದೆ ಸಂತೋಷ ನನ್ನ ಮಗನು ಸತ್ತು ಐದು ದಿನಗಳಾಗಿದೆ. ನನ್ನ ಅರಮನೆ ಬಿಟ್ಟು ನಾನು ಹೊರಗೆ ಬರುವುದಿಲ್ಲ ನೋಡು ಬೇಲಿಯಾಚೆ ಬಿಸಾಡಿದ ಡಕ್ಕೆ ನನ್ನ ಕಣ್ಣುಮುಂದೆ ಕಾಣುತ್ತಿದೆ. ಅದನ್ನು ಇದುವರಿಗೂ ಒಂದು ನಾಯಿ ತಿಂದಿಲ್ಲ ನರಿ ತಿಂದಿಲ್ಲ ಅದರ ಮೇಲೆ ಹೂಗಳ ಮಳೆ ಸುರಿಯುತ್ತಿದೆ ಅದನ್ನು ನೋಡಿ ನೋಡಿ ನಾನು ಬರುವುದಕ್ಕೆ ಆಗುವುದಿಲ್ಲವಯ್ಯ ಎಂದು ಹೇಳಿದಾಗ ಆಚಾರಿಯು ಈ ವಿಷಯವನ್ನು ದೇವತೆಗಳಿಗೆ ತಿಳಿಸುತ್ತಾನೆ. ಆಗ ದೇವತೆಗಳು ಆದಿಜಾಂಬವ ಭೂಮಿ ಮತ್ತು ಆಕಾಶಕ್ಕೆ ಆರು ತಿಂಗಳು ದೊಡ್ಡವ ಅವನನ್ನು ಕಷ್ಟದಲ್ಲಿ ಬಿಟ್ಟು ನಾವು ಮದುವೆ ಮಾಡುವುದು ಸರಿಯಲ್ಲ ಎಂದು ಜಾಂಬವಂತನ ಬಳಿ ಬರುತ್ತಾರೆ. ದೇವತೆಗಳು ಬಂದು ಜಾಂಬವನು ಮದುವೆಗೆ ಬರುವುದಕ್ಕೆ ನಿರಾಕರಿಸಲು ಕಾರಣವೇನು ಎಂದು ಕೇಳಿದಾಗ ಜಾಂಬವಂತನು ನೋಡಪ್ಪ ನಾನು ಬರುವುದಕ್ಕೆ ನನಗೆ ಅಹಂಕಾರವಿಲ್ಲ. ನನ್ನ ಮಗ ಸತ್ತು ಐದು ದಿನಗಳಾಗುತ್ತದೆ. ಅದು ನನ್ನ ಕಣ್ಣಿಗೆ ಕಾಣುತ್ತಿದೆ ಅದನ್ನು ನೋಡಿ ನೋಡಿ ಹೇಗೆ ಬರುವುದು ಹೇಳಿ ಎಂದಾಗ ದೇವತೆಗಳು ನಿನ್ನ ಮಗುವಿನ ಮೇಲೆ ನಿನಗೆ ಅಕ್ಕರೆ ಇದೆಯೇ ಎಂದು ಕೇಳಿದಾಗ ಜಾಂಬವಮುನಿ ನನ್ನ ಮಗನ ಮೇಲೆ ನನಗೆ ಅಕ್ಕರೆ ಇರುವುದಿಲ್ಲವೆ ಎಂದಾಗ ದೇವತೆಗಳು ನಿನ್ನ ಮಗನನ್ನು ಬದುಕಿಸುತ್ತೇವೆ. ಆಗ ಮದುವೆಗೆ ಬರುತ್ತೀಯ ಎಂದು ಕೇಳುತ್ತಾರೆ. ಇದಕ್ಕೆ ಒಪ್ಪಿಕೊಂಡು ನನ್ನ ಮಗನನ್ನು ಬದುಕಿಸಿದರೆ ಬರುತ್ತೇನೆ ಎಂದು ಹೇಳಿದಾಗ ದೇವತೆಗಳು ಹೂಗಳ ಪಲ್ಲಕ್ಕಿಯನ್ನು ತರಿಸಿ ಆ ಪಲ್ಲಕ್ಕಿಯಲ್ಲಿ ದಕ್ಕೆಯನ್ನು ಇಟ್ಟು ವೇದ ಮಂತ್ರಗಳು ಹೇಳುತ್ತಾರೆ. ಆಗ ಯಥಾವತ್ತಾಗಿ ಆ ಪಲ್ಲಕ್ಕಿಯಲ್ಲಿ ದಕ್ಕೆಯಿಂದ ಮಗು ಎದ್ದು ಕುಳಿತುಕೊಳ್ಳುತ್ತದೆ. ಆಗ ದೇವತೆಗಳು ಆಗೋ ಜಾಂಬವ ತಾತ ನಿನ್ನ ಮಗು ಎಂದು ಹೇಳಿ ನಡಿ ಮದುವೆಗೆ ಹೋಗೋಣ ಎಂದು ಕೇಳುತ್ತಾರೆ.

ಆಗ ಜಾಂಬವ ಮುನಿ ಮತ್ತೊಂದು ಬೇಡಿಕೆ ಇಡುತ್ತಾನೆ. ತಿಪ್ಪೆಯಲ್ಲಿ ಹೂತಿದ್ದ ಮಾಂಸವನ್ನು ಏನು ಮಾಡುವುದು ಎಂದು ಕೇಳುತ್ತಾನೆ. ಆಗ ದೇವತೆಗಳು ಮತ್ತೆ ವೇದ ಮಂತ್ರಗಳನ್ನು ಹೇಳಿದಾಗ ಮಾಂಸದಿಂದ ಒಬ್ಬ ಮಗು ಹುಟ್ಟುತ್ತಾನೆ. ಆ ಮಗು ಹುಟ್ಟಿದ ಕೂಡಲೆ ನಗಾರಿಯನ್ನು ಕಂಕುಳಲ್ಲಿ ಹಾಕಿಕೊಂಡು ಕೈಯಲ್ಲಿ ಕತ್ತಿಯನ್ನು ಹಿಡಿದು ದೊಡ್ಡ ದೊಡ್ಡ ಮುದ್ದೆಗಳನ್ನು ಚಿಕ್ಕ ಚಿಕ್ಕ ಮಾಂಸದ ತುಣುಕುಗಳನ್ನು ಇಟ್ಟುಕೊಂಡು ಓಡಿ ಹೋಗುತ್ತಾನೆ. ಇದನ್ನು ನೋಡಿದ

ದೇವತೆಗಳು ನೋಡು ತಾತ ಒಬ್ಬರಿಗೆ ಇಬ್ಬರು ಹುಟ್ಟಿದ್ದಾರೆ. ನಡಿ ಹೋಗೋಣ ಎಂದಾಗ ಜಾಂಬವ ಮುನಿ ಅವರ ತಂದೆ ಯಾರು ತಾಯಿ ಯಾರು ನೋಡಲಿಲ್ಲ. ಮಾಂಸದಲ್ಲಿ ಹುಟ್ಟಿ ನಾಗರಿಯನ್ನು ಕಂಕುಳಲ್ಲಿ ಇರಿಸಿ ದೊಡ್ಡ ದೊಡ್ಡ ಮುದ್ದೆಗಳು ಚಿಕ್ಕ ಚಿಕ್ಕ ಮಾಂಸದ ತುಣುಕುಗಳನ್ನು ಹಿಡಿದು ನಗಾರಿಯ ಮೇಲೆ ಎಟು ಹಾಕಿಕೊಂಡು ದಾರಿ ಉದ್ದಕ್ಕೂ ಓಡುತ್ತಿದ್ದಾನೆ. ಅವನು ಮಾಸ್ವೀಕನು. ಅವನು ನನ್ನ ಮಗನಲ್ಲ, ಅವನಿಗೆ ನನ್ನ ಕಡೆಯಿಂದ ವರಮಾನ ಕೊಡುವುದಕ್ಕೆ ಏನೂ ಇಲ್ಲ. ಇನ್ನು ದಕ್ಕಯಲ್ಲಿ ಹುಟ್ಟಿರುವ ಇವನು ನನ್ನ ಮಗ ಎಂದಾಗ ದೇವತೆಗಳು ಇವನನ್ನು ಕರೆದುಕೊಂಡು ಹೋಗೋಣ ನಡೆ ಎಂದಾಗ ಜಾಂಬವ ಮುನಿ ನಡಿ ಮಗ ನನ್ನ ಅರಮನೆ ಬಿಟ್ಟು ಐದು ದಿನ ಆಚೆ ಇದ್ದೆ ಬಾರಪ್ಪ ಶಿವನ ಮದುವೆಗೆ ಹೋಗೋಣ ಎಂದು ಮಗುವನ್ನು ಎತ್ತಿಕೊಳ್ಳಲು ಹೋದಾಗ ಜಾಂಬವ ಮುನಿಯ ಬಟ್ಟೆಗಳಿಗೆ ಬೆಂಕಿ ಹತ್ತಿಕೊಳ್ಳುತ್ತದೆ. ಆಗ ಜಾಂಬವಮುನಿ ಬಟ್ಟೆಗಳನ್ನು ಕಿತ್ತು ಎಸೆದು ಮಗು ಸತ್ತು ಪಂಚ ಸಮಸುತ್ರರವಾಯಿತು(ಐದು ದಿನಗಳಾಯಿತು). ಇನ್ನು ಈ ಮಗು ಬದುಕಿ ಜಾತಿ ವೆಸನವಾಯಿತು(ಕುಲಹೀನನಾದ). ನನಗೆ ಮಗುವಿನ ನೆರಳು ಬಿದ್ದು ಬೆಂಕಿ ಹತ್ತಿಕೊಂಡಿತು. ಅರಮನೆಗೆ ಕರೆದುಕೊಂಡು ಹೋದರೆ ಅರಮನೆ ಸುಟ್ಟುಹೋಗುತ್ತದೆ ಎಂದು ಜಾಂಬವ ಮುನಿ ಶಿಶುಹತ್ಯವು ಗೋವು ಹತ್ಯವು ಶಿಶುವಿನ ಹತ್ಯ ಶಾಪ ತಪ್ಪುವುದಿಲ್ಲ ಎಂದು ಸತ್ತು ಬದುಕಿದ ಮಗುವು ಶಿವನಿಗೆ ದಕ್ಕುವುದಿಲ್ಲ ವಿಷ್ಣುವಿಗೆ ದಕ್ಕಲಿಲ್ಲ ಸಕಲ ಕೋಟಿ ದೇವತೆಗಳಿಗೆ ದಕ್ಕಲಿಲ್ಲ ದಕ್ಕೆಯಿಂದ ಹುಟ್ಟಿದ ಮಗು "ದಕ್ಕಲ ಮುನಿ" ಎಂದು ಹೆಸರು ಬರಲು ಕಾರಣವಾಯಿತು.

ಈ ದಕ್ಕಲ ಮುನಿಯ ವಂಶಸ್ಥರು ಈಗಿನ ದಕ್ಕಲ ಸಮುದಾಯಗಳು. ಆ ಕಾಲದ ಯುಗಮುನಿ ಈ ಕಾಲದ ದಕ್ಕಲ ಮುನಿ ಎಂದು ನಿನ್ನ ಮಗನಿಗೆ ಹೆಸರುಟ್ಟಿದ್ದು ಇನ್ನು ಏನು ಕೊಡಬೇಕು ಎಂದು ಕೇಳಿದಾಗ ಜಾಂಬವಮುನಿ ಇವನು ಹೊರಗಡೆ ಇದ್ದರು ನನ್ನ ಮಗನೆ ಒಳಗಡೆ ಇದ್ದರು ನನ್ನ ಮಗನೆ ನನ್ನ ಮಗನಿಗೆ ಎಷ್ಟು ಕೊಟ್ಟರು ನಾನು ಏನು ಹೇಳುವುದಿಲ್ಲ. ಆಗ ದೇವತೆಗಳು ಕುಂತು ಕೇಳಿದರೆ ೧೨ ವರಗಳು ಕೊಡುತ್ತೇವೆ. ನಿಂತು ಕೇಳಿದರೆ ಪಟ್ಟದ ಆನೆ ಕೊಡುತ್ತೇವೆ ನನಗೆ ವರಮಾನ ಕೊಡು ಎಂದು ಕೇಳಿದರೆ ಅವನ ತಲೆಯಷ್ಟು ಬಂಗಾರ ಕೊಡುತ್ತೇವೆ ಎಂದು ಹೇಳಿದಾಗ ಜಾಂಬವ ಮುನಿ ಈಗ ನೀನು ೧೨ ವರಗಳು, ಪಟ್ಟದ ಆನೆ ತಲೆಯಷ್ಟು ಬಂಗಾರ ಕೊಡುತ್ತೀರಾ, ಆದರೆ ಕಾಲ ಎಲೆ ಮೈಲಿ ಹತ್ತಿ ಊರು ಆಗುತ್ತದೆ, ನ್ಯಾಯ ಹೋಗಿ ಕಾಡು ಸೇರುತ್ತದೆ. ಅನ್ಯಾಯ ಊರು ಸೇರುತ್ತದೆ. ಆ ದಿನ ದಕ್ಕಲ ಮಗು ಎಂದು ಊರು ಮುಂದೆ ಗುಡಿಸಲು ಹಾಕಿ ನನಗೆ ೧೨ ವರಗಳು ಪಟ್ಟದ ಆನೆ ತಲೆಯಷ್ಟು ಬಂಗಾರ ಕೊಡುತ್ತೀಯಾ ಕೇಳಿದಾಗ ಕೊಡುವಷ್ಟು ಶಕ್ತಿ ನನ್ನ ಬಳಿ ಇರುವುದಿಲ್ಲ ಎಂದು ಹೇಳುತ್ತಾನೆ. ಅದಕ್ಕೆ ಒಂದು ವ್ಯವಸ್ಥೆಯನ್ನು ಮಾಡುತ್ತೇವೆ. ಅದರ ಪ್ರಕಾರ ಮಗುವಿಗೆ ದಕ್ಕಲಮುನಿ ಎಂದು ಹೆಸರಿಟ್ಟು ಇವನು ಮಾದಿಗರ ಮನೆಯಲ್ಲಿ ಭಿಕ್ಷೆಯನ್ನು ಬೇಡಿ ತಿನ್ನಬೇಕು. ಈ ದಕ್ಕಲ ಮಗ ಬಂದರೆ ಅನ್ನ ಆಹಾರ ೩೧/೨ ರೂಪಾಯಿ ಅಕ್ಕಿ ಧಾನ್ಯಗಳು ಸಂಗ್ರಹಿಸಿ

ಭಿಕ್ಷೆಯಾಗಿ ನೀಡಬೇಕು. ಇವರಿಂದ ಒಳ್ಳೆಯದು ಎಂದು ಅನಿಸಿಕೊಂಡರೆ ಮಾದಿಗರಿಗೆ ಒಳ್ಳೆಯದಾಗುತ್ತದೆ.

ಒಂದು ವೇಳೆ ದಕ್ಕಲ ಮಗ ಊರು ಹೊರಗೆ ಗುಡಿಸಲು ಹಾಕಿ ಹೊಟ್ಟೆ ಹೊಡೆದು ಕಾಲು ಹೊಡೆದು ಬಾಯಿ ಬಡಿದು ಅಯ್ಯೋ ಎಂದು ಕರೆದಾಗ ಭಿಕ್ಷೆ ನೀಡದಿದ್ದರೆ ಇಡೀ ಮಾದಿಗರ ವಂಶವೇ ನಾಶವಾಗುತ್ತದೆ ಎಂದು ಶಾಪವನ್ನು ಕೊಡುತ್ತಾನೆ. ನಂತರ ಜಾಂಬವ ಕೊಟ್ಟ ಛತ್ರಿ, ಶಿವ ಕೊಟ್ಟ ಈಚಲು ಚಾಪೆ, ಬ್ರಹ್ಮ ಕೊಟ್ಟ ಬಿದರು ಕೋಲು, ಮಾಂತಂಗ ಕುಲದವರು ಕೊಟ್ಟ ಊಟ ಬಿಟ್ಟು ಬೇರೆ ಜಾತಿಯಲ್ಲಿ ಊಟ ಕೇಳಿದರೆ ನಿನ್ನ ತಲೆ ಹದಿನಾರು ಚೂರುಗಳಾಗುತ್ತವೆ ಎಂದು ದಕ್ಕಲಿಗರಿಗೆ ಶಾಪಕೊಟ್ಟು ದಕ್ಕಲ ಮುನಿಯನ್ನು ದೇಶಾಂತರ ಕಳಿಸಿರುವುದು. ಹೀಗೆ ದಕ್ಕಲರು ವಲಸಿಗರಾಗಿ ಊರು ಊರು ಸುತ್ತಿ ಭಿಕ್ಷೆ ಬೇಡಿ ತಿನ್ನುವುದೆ ವರವಾಗಿ ಬಂದಿದೆ.

ಹೀಗೆ ಮೌಖಿಕ ಪುರಾಣದ ಹಿನ್ನೆಲೆಯ ಮಹತ್ವದ ಅಂಶವನ್ನು ಒಳಗೊಂಡ ಈ ದಕ್ಕಲ ಸಮುದಾಯಗಳು ಅಸ್ತಿತ್ವದ ಮೂಲ ನೆಲೆ ಆದಿಜಾಂಬವನ ಮುಖಾಂತರ ಎಂಬುವುದು ಸ್ಪಷ್ಟವಾಗುತ್ತದೆ. ಹೀಗಾಗಿ ಸಮಾಜದಲ್ಲಿ ದಕ್ಕಲ ಎಂಬ ಪದ ಒಂದು ವಿಭಿನ್ನ ಅರ್ಥಗಳನ್ನು ಒಳಗೊಂಡಿದ್ದು ದಕ್ಕಲ ಎಂಬುವುದು ಮನುಷ್ಯ ದೇಹದ ದಕ್ಕೆಯಿಂದ ಹುಟ್ಟಿದವ ಹಾಗೂ ಯಾರಿಗೂ ದಕ್ಕದವ ಎಂಬ ಅರ್ಥವನ್ನು ನೀಡಿದರೆ, ಕನ್ನಡ ನಿಘಂಟಿನಲ್ಲಿ ಮಾದಿಗರಲ್ಲಿ ಒಂದು ಉಪಪಂಗಡ ದಕ್ಕಲದವನು, ದಕ್ಕಳ ಎಂಬುದು ದಕ್ಕಡನೋ ಎಂಬ ಅರ್ಥವನ್ನು ತಿಳಿಸಿದ ಪದ ನಿಷ್ಪತ್ತಿಯಲ್ಲಿ ಪ್ರಕಾರ ದಕ್ಕಲಿಗ-ದಕ್ಕ>ಇಗ=ದಕ್ಕಲಿಗ ಎಂದು ಹೇಳಬಹುದು. ಹಾಗೆಯೇ ಡಾ. ಹರಿಲಾಲ್‌ಪವಾರ್ ಅವರ ಡಕ್ಕಲಿಗರು ಎಂಬ ಉಪನ್ಯಾಸ ಗ್ರಂಥ ಮಾಲೆಯಲ್ಲಿ ಡಕ್ಕಲಿಗರು ಎಂಬ ಪದವನ್ನು ಡಕ್ಕೆ ಎಂಬ ಚರ್ಮವಾದ್ಯ ಪರಿಹಾರವಾಗಿದ್ದು ಡಕ್ಕೆಯನ್ನು ಬಾರಿಸುವುದು ಕೆಳವರ್ಗಗಳ ಜನರು ಆಗಾಗಿ ಈ ಡಕ್ಕೆಯ ಬಾರಿಸುವುದರಿಂದ ಡಕ್ಕಲ ಎಂಬ ಪದ ಹುಟ್ಟಿರಬಹುದು ಎಂದು ಹೇಳುತ್ತಾರೆ. ಇನ್ನು ಎಡ್ಗರ್ ಥರ್ಸ್ಟನ್ ಅವರು ಕಾಸ್ಟ್ ಆಂಡ್ ಟ್ರೈಬ್ಸ್ ಆಫ್ ಇಂಡಿಯಾದಲ್ಲಿ ದಕ್ಕಲ, ದಕ್ಕಲಿ, ದಕ್ಕು ಎಂಬ ಪದಗಳನ್ನು ಹೇಳಿದ್ದಾರೆ.[೨]

ಹೀಗೆ ವಿದ್ವಾಂಸರು ತಮ್ಮ ಅಧ್ಯಾಯಗಳಲ್ಲಿ ಹೇಳಿರುವ ಹಾಗೆ ಆಯಾ ಪ್ರದೇಶಗಳಲ್ಲಿ ದಕ್ಕಲರನ್ನು ಕರೆಯುವ ವಿಧಾನ ಕರ್ನಾಟಕದಲ್ಲಿ ದಕ್ಕಲಿಗರು, ದೊಕ್ಕಲಿಗರು, ದಕ್ಕರ್, ದಕ್ಕಲಿಗ ಡೊಕ್ಕಲಿಗ, ಡೊಕ್ಕಯಮಗ ಎಂದು ಕರೆಯುತ್ತಾರೆ. ಇನ್ನು ಕೋಲಾರ ಪ್ರದೇಶಗಳಲ್ಲಿ ಹೆಚ್ಚು ತೆಲುಗು ಭಾಷೆ ಮಾತನಾಡುವುದರಿಂದ ಈ ಪ್ರದೇಶದಲ್ಲಿ ದಕ್ಕಲೋಳ್ಳು ಎಂದು ಕರೆಯುವರು. ಆಂಧ್ರಪ್ರದೇಶದಲ್ಲಿ ತೆಲುಗು ಭಾಷೆಯಾದ್ದರಿಂದ ಇಲ್ಲಿ ದಕ್ಕಲೋಳ್ಳು, ದಕ್ಕಲವಾಡು, ಡೊಕ್ಕಲೋಳ್ಳು ಎಂದು ಕರೆಯುತ್ತಾರೆ. ಮಾದಿಗರು, ದಕ್ಕಲಮಗ, ಡೊಕ್ಕೆಯಮಗ, ದತ್ತು ಮಗ, ಹೊಟ್ಟೆ ಮಗ, ಮನೆ ಮಗ ಎಂದು ಕರೆಯುತ್ತಾರೆ. ಈ ಸಮುದಾಯಗಳಿಗೆ ಒಂದು ನಿರ್ದಿಷ್ಟವಾದ ಹೆಸರು

ಇಲ್ಲ. ಆಯಾ ಪ್ರದೇಶಕ್ಕೆ ತಕ್ಕಂತೆ ದಕ್ಕಲಿಗರನ್ನು ಕರೆಯುತ್ತಾರೆ. ಹೀಗೆ ಆದಿಜಾಂಬವ ಮುನಿ ಬಿಸಾಡಿದ ಡೊಕ್ಕೆ ಇದರಲ್ಲಿ ಹುಟ್ಟಿದ ಮಕ್ಕಳು ದಕ್ಕಲಿಗರಗಿ ಅವರು ಕೊಟ್ಟ ವರದಾನ ಮತ್ತು ಶಾಪಗಳನ್ನು ಇಂದಿಗೂ ಪಾಲಿಸುತ್ತಾ ಸಮಾಜದಿಂದ ದೂರವಾಗಿ ಗುಡಿಸಲುಗಳನ್ನು ಹಾಕಿಕೊಂಡು ಮಾದಿಗರನ್ನು ಅವಲಂಬಿಸಿ ಬದುಕುತ್ತಿದ್ದಾರೆ.

ಈ ಸಮುದಾಯಗಳು ಇತರೆ ಅಲೆಮಾರಿಗಳ ಹಾಗೆ ಬೇರೊಬ್ಬರಲ್ಲಿ ಭಿಕ್ಷೆ ಬೇಡುವುದಿಲ್ಲ ಹಾಗೆ ಇವರು ಬೀದಿ ಭಿಕ್ಷಕರಲ್ಲ. ಇವರದೇ ಆದಂತಹ ಸಂಪ್ರದಾಯಬದ್ಧವಾದ ಪದ್ಧತಿಯಲ್ಲಿ ಮಾದಿಗರ ಕೇರಿಯಲ್ಲಿ ಭಿಕ್ಷೆ ಬೇಡುವ ಒಂದು ಸಾಂಸ್ಕೃತಿಕ ಚೌಕಟ್ಟನ್ನು ಹೊಂದಿರುವ ಸಮುದಾಯವಾಗಿದೆ. ಅವರು ಹೇಳುವ ಮೌಖಿಕ ಪುರಾಣವನ್ನು ನಂಬಿ ಅದನ್ನು ತಮ್ಮ ನಿಜ ಜೀವನದಲ್ಲಿ ಅಳವಡಿಸಿಕೊಂಡು ಸಂತೋಷಕ್ಕೆ ಎಡೆಯಾಗದೆ, ಆತ್ಮಸಾಕ್ಷಿಯಾಗಿ ಜೀವನದ ಕ್ರಮವನ್ನು ವಿವರಿಸುತ್ತಾರೆ. ಸಮಾಜದಲ್ಲಿ ಇವರನ್ನು ದೂರವಾಗಿ ಇಟ್ಟರೂ ಈ ಸಮುದಾಯಗಳು ಮಾದಿಗರ ನಡುವಿನ ಸಂಬಂಧ ಮಾತ್ರ ಸಾಂಸ್ಕೃತಿಕವಾದ ಅಭಿಮಾನದಿಂದ ಕೂಡಿರುವುದಾಗಿದೆ. ಹಾಗೆ ಸಮಾಜದ ಕೆಳಸ್ತರ ಜಾತಿ ಮಾದಿಗರು ಇವರಿಗೆ ಸಮಾಜದಲ್ಲಿ ಜೀವಿಸುವುದಕ್ಕೆ ಕಷ್ಟಕರವಾಗಿದ್ದರೂ ಸಹ ದಕ್ಕಲಿಗರಿಗೆ ಮಾತ್ರ ಉಪವಾಸ ಕಳಿಸುವುದಿಲ್ಲ. ಅವರನ್ನು ಭಾವನಾತ್ಮಕವಾಗಿ ಗೌರವಿಸುತ್ತಾರೆ. ಇದಕ್ಕೆ ಕಾರಣ ಆದಿಜಾಂಬವನು ಇಟ್ಟ ಶಾಪವಿರಬಹುದು ಅಥವಾ ವಚನವಿರಬಹುದು ಆದರೆ ಇಂದಿಗೂ ಮಾದಿಗರು ಮನೆಮಗನಂತೆ ನಿಯಮವನ್ನು ಪಾಲಿಸುತ್ತಿದ್ದಾರೆ.

ವಾಸ್ತವದ ಸ್ಥಿತಿಗತಿಗಳು ಏನೇ ಇರಲಿ ದಕ್ಕಲಿಗ ಎಂಬ ಪದ ಅವಮಾನದಿಂದ ಭಾವಿಸುತ್ತಿದ್ದರೂ ಈ ಸಮುದಾಯಗಳು ಮಾತ್ರ ಆತ್ಮನಿಷ್ಠೆಯಿಂದ ನಾವು ದಕ್ಕಲಿಗರೆಂದು ಹೇಳಿಕೊಳ್ಳುತ್ತಾರೆ. ಈ ಸಮುದಾಯಗಳು ಭಿಕ್ಷಾಟನೆಯಿಂದ ಹೊಟ್ಟೆ ತುಂಬಿಸಿಕೊಳ್ಳಲು ಸಾಧ್ಯವಾಗದೆ ಈಗ ಅನೇಕ ವೃತ್ತಿಗಳಲ್ಲಿ ತೊಡಗಿದ್ದಾರೆ. ಬಡತನ ಅವಮಾನಗಳ ನಡುವೆಯೂ ದಕ್ಕಲಿಗರು ಜೀವನಿಷ್ಠೆಯಿಂದ ಸಾಂಸ್ಕೃತಿಕ ಚರಿತ್ರೆಯ ಮೇಲಿನ ನಂಬಿಕೆ ಅದರ ಮೇಲಿನ ಅಚಲವಾದ ಸಾಂಸ್ಕೃತಿಕತೆಯೇ ಇವರ ಬದುಕಿಗೆ ಆಸರೆಯಾಗಿದೆ.

### ೨.೨. ಕಸುಬು

ಸಮಾಜದ ಒಬ್ಬ ವ್ಯಕ್ತಿ ಒಂದು ಕುಟುಂಬ ನೆಲೆನಿಲ್ಲಲು ಮೂಲವಾದ ಕಸುಬು ಅಗತ್ಯವಾಗಿದೆ. ಭೂಮಿಯ ಮೇಲೆ ಆದಿಮಾನವ ಜನ್ಮತಾಳಿದಾಗಿನಿಂದ ತನ್ನ ಸಂಘ ಪರಿವಾರದೊಂದಿಗೆ ಆಹಾರವನ್ನು ಮೂಲ ಕಸುಬಾಗಿ ಮಾಡಿಕೊಂಡು ಪ್ರಾಣಿಗಳನ್ನು ಬೇಟೆಯಾಡಿ ಹಸಿ ಮಾಂಸವನ್ನು ತಿನ್ನುತ್ತಿದ್ದ ಆದಿ ಮಾನವ ಬರಬರುತ್ತಾ ಅದನ್ನು ಬೇಯಿಸಿ ತಿನ್ನುವುದಕ್ಕೆ ಪ್ರಾರಂಭಿಸಿದ ತದನಂತರದ ಸಮಾಜದಲ್ಲಿ ನಾಗರಿಕತೆ ಬೆಳೆದಂತೆ ಜನರಲ್ಲಿ ಬದಲಾವಣೆಗಳು ಕಂಡುಕೊಂಡು ಹಲವು ಗುಂಪುಗಳಾಗಿ ವಿಂಗಡಣೆಯಾಯಿತು. ಮೂಲ ಕಸುಬನ್ನು ಬೇರೆ ಬೇರೆಯಾಗಿಸಿಕೊಂಡರು. ಬೇಟೆಯಿಂದ ಪ್ರಾರಂಭವಾದ ಮಾನವನ ಕಸುಬು ಕಾಲ ಸರಿದಂತೆಲ್ಲ ಹಲವಾರು ಕಸುಬುಗಳಿಗೆ

ಎಡೆಮಾಡಿಕೊಟ್ಟಿತು. ಯಾವುದೇ ವ್ಯಕ್ತಿ ತನ್ನ ಕುಟುಂಬ ಸಮುದಾಯಕ್ಕಾಗಿ ಹಲವು ಕಸುಬುಗಳನ್ನು ಕೈಗೊಳ್ಳಬೇಕಾಗುತ್ತದೆ. ಹಾಗಾಗಿ ಆ ಸಮುದಾಯದ ವ್ಯಕ್ತಿತ್ವ ಬೌದ್ಧಿಕ ಮಟ್ಟ, ಸಾಮರ್ಥ್ಯ ಮುಖ್ಯವಾಗಿರುತ್ತದೆ. ಇಂತಹ ಸಂದರ್ಭದಲ್ಲಿ ಜೀವನಕ್ಕೆ ಬೇಕಾಗಿರುವುದು ಉದ್ಯೋಗವೇ ಮೂಲ ಕಾರಣವಾಗುತ್ತದೆ. ಪ್ರತಿಯೊಬ್ಬ ವ್ಯಕ್ತಿಯು ತನ್ನ ಸಾಮರ್ಥ್ಯಕ್ಕೆ ತಕ್ಕಂತೆ ಕಸುಬುಗಳನ್ನು ಮಾಡಿಕೊಂಡು ಬರುತ್ತಿದ್ದಾನೆ.

ದಕ್ಕಲಿಗರ ಕುಲ ಕಸುಬು ಇತರ ಸಮುದಾಯಗಳಿಗಿಂತ ಭಿನ್ನವಾಗಿದೆ. ಇವರ ಮೂಲ ಕಸುಬು ಭಿಕ್ಷೆ ಬೇಡುವುದು. ಇದು ಈ ಸಮುದಾಯಗಳಿಗೆ ವರವಾಗಿ ಬಂದಿರುವ ಕುಲ ಕಸುಬು ಆಗಿದೆ. ಪೌರಾಣಿಕ ಹಿನ್ನೆಲೆಯನ್ನು ಗಮನಿಸಿದಾಗ ಆದಿಜಾಂಬವ ಕೊಟ್ಟ ವರವಾಗಿದೆ. ದಕ್ಕಲ ಮಕ್ಕಳು ಮೂಲತಃ ಮಾದಿಗರ ದಕ್ಕೆಯಿಂದ ಹುಟ್ಟಿದವರು ಆದಿಜಾಂಬವಂತನ ಕುಲಗಳಾಗಿವೆ. ಹಾಗಾಗಿ ಮಾದಿಗರ ದತ್ತು ಮಗನಾಗಿದ್ದಾನೆ. ಇವರು ಮಾದಿಗರ ಕೇರಿಯಲ್ಲಿ ಬಿಟ್ಟು ಬೇರೆ ಎಲ್ಲಿಯೂ ಭಿಕ್ಷೆ ಬೇಡುವ ಹಾಗೆ ಇಲ್ಲ. ಒಂದು ವೇಳೆ ಮಾದಿಗರು ಭಿಕ್ಷೆ ನೀಡದೇ ಇದ್ದ ಪಕ್ಷದಲ್ಲಿ ದಕ್ಕಲರು ಶಪಿಸುವುದುಂಟು. ಇವರು ಇಟ್ಟ ಶಾಪದಿಂದ ಆ ಕುಟುಂಬ ಬೆಳವಣಿಗೆ ಇಲ್ಲದೇ ನಾಶವಾಗುತ್ತದೆ. ಇದು ವಿಶ್ವಕರ್ಮ ನೀಡಿರುವ ಶಾಪವಾಗಿದೆ. ಹಾಗಾಗಿ ಮಾದಿಗರು ದಕ್ಕಲ ಮಕ್ಕಳಿಗೆ ಮಾತ್ರ ಭಿಕ್ಷೆ ನೀಡದೆ ಕಳಿಸುವುದಿಲ್ಲ.

ಈ ಸಮುದಾಯಗಳಲ್ಲಿ ಮತ್ತೊಂದು ವಿಶೇಷವೆಂದರೆ ಸೀಮಿತ ಪ್ರದೇಶಗಳಲ್ಲಿ ಭಿಕ್ಷೆ ಬೇಡುವ ಪದ್ಧತಿಯೂ ಇದೆ. ಕೋಲಾರ ಜಿಲ್ಲೆಯ ಮಾದವ ಗುರ್ಜೇನಹಳ್ಳಿಯಲ್ಲಿ ಐದು ಕುಟುಂಬಗಳಿದ್ದು ಇವರಿಗೆ ೧೩೦ ಹಳ್ಳಿಗಳಲ್ಲಿ ಮಾತ್ರ ಭಿಕ್ಷೆ ಬೇಡುವುದಕ್ಕೆ ಬಿಟ್ಟು ಕೊಟ್ಟಿದ್ದರು. ಈ ಹಳ್ಳಿಗಳನ್ನು ಬಿಟ್ಟು ಬೇರೆ ಕಡೆ ಹೋಗುವ ಹಾಗಿಲ್ಲ. ಇವರಿಗೆ ಬಿಟ್ಟುಕೊಟ್ಟ ಹಳ್ಳಿಗಳು ಸುಗಟೂರು, ತೊಟ್ಲಿ, ರಾಜಕಲ್ಲಹಳ್ಳಿ, ಎಸ್.ಅಗ್ರಹಾರ, ಕೊಳಗಂಡನಹಳ್ಳಿ, ಬಂದಿಗಾನಹಳ್ಳಿ, ಮಟ್ನಹಳ್ಳಿ, ನಾಗನಾಳ, ಕಾಕಿನತ್ತ ಮುಂತಾದ ಹಳ್ಳಿಗಳಿಗೆ ಹೋಗಿ ಮಾದಿಗರ ಕೇರಿಯಲ್ಲಿ ನಿಂತು "ಓ ನಿಮ್ಮ ದಕ್ಕಲ ಮಗ ಗೋವಿಂದಪ್ಪ ಬಂದಿದ್ದಾನೆ ಭಿಕ್ಷೆ ನೀಡಿ" ಎಂದು ಮೂರು ಬಾರಿ ಕೂಗಿದಾಗ ಮಾದಿಗರು "ಓ ನಮ್ಮ ದಕ್ಕಲ ಮಗ ಬಂದವ್ನೆ" ಎಂದು ಮಾದಿಗ ಗಂಡಸರು ಅನ್ನ, ಸಾರು, ಮುದ್ದೆಯನ್ನು ಸಂಗ್ರಹಿಸಿ ಭಿಕ್ಷೆಯನ್ನು ನೀಡುವರು. ಪ್ರತಿದಿನವು ಈ ರೀತಿ ಭಿಕ್ಷೆ ಬೇಡುವುದು ಇವರ ಮೂಲ ಕಸುಬು ಆಗಿದೆ. ಮಾದಿಗರು ದಕ್ಕಲರ ಮೇಲೆ ಭಾವನಾತ್ಮಕವಾಗಿ ಗೌರವವನ್ನು ನೀಡಿ ತಮ್ಮ ಕಷ್ಟದಲ್ಲಿಯೂ ದಕ್ಕಲರನ್ನು ಉಪವಾಸ ಕಳುಹಿಸುವುದಿಲ್ಲ.

ಈ ಕುಲಗಳು ಭಿಕ್ಷೆ ಬೇಡುವ ವಿಧಾನವು ಭಿನ್ನವಾಗಿದೆ. ಭಿಕ್ಷೆ ಬೇಡುವ ಸಂದರ್ಭದಲ್ಲಿ ಮಾದಿಗರ ಕೆರೆಯಲ್ಲಿ ಮಂಟಪದಲ್ಲಿ ಕುಳಿತು ಭಿಕ್ಷೆ ನೀಡಿ ಎಂದು ಕೂಗಿ ಕರೆದಾಗ ಮಾದಿಗರು ಪ್ರಶ್ನಿಸುವುದುಂಟು. ಯಾಕೆಂದರೆ ದಕ್ಕಲ ಮಕ್ಕಳಿಗೆ ಜಾಂಬವ ಪುರಾಣದ ಹಿನ್ನೆಲೆ ತಿಳಿದು ಕೊಂಡಿರುವುದು ಅತ್ಯವಶ್ಯಕವಾಗಿದೆ. ಇದನ್ನು ಮಾದಿಗರಿಗೆ ಹೇಳಿದ ಮೇಲೆ ಅವರು ಭಿಕ್ಷೆಯನ್ನು

ನೀಡುವುದು. ಒಂದು ವೇಳೆ ಕಥೆಯ ಬಗ್ಗೆ ತಿಳುವಳಿಕೆ ಇಲ್ಲದ ಪಕ್ಷದಲ್ಲಿ ಮಾದಿಗರು ಇವರಿಗೆ ಭಿಕ್ಷೆ ನೀಡುವುದಿಲ್ಲ. ಇವನು ನಮ್ಮ ದಕ್ಕಲ ಮಗ ಅಲ್ಲ ಎಂದು ನಿರಾಕರಿಸುತ್ತಾರೆ. ಹೀಗಾಗಿ ಈ ಸಮುದಾಯಗಳಲ್ಲಿ ಪ್ರತಿಯೊಬ್ಬರು ಜಾಂಬವ ಪುರಾಣದ ಬಗ್ಗೆ ತಿಳಿದುಕೊಂಡಿರುತ್ತಾರೆ. ಹೀಗೆ ದಕ್ಕಲರು ಮಾದಿಗರಿಗೆ ಚಾರಿತ್ರಿಕ ಹಿನ್ನೆಲೆಯನ್ನು ಮನದಟ್ಟು ಮಾಡಿ ದಿನನಿತ್ಯದ ಕಸುಬನ್ನು ಮುಂದುವರಿಸುತ್ತಿದ್ದಾರೆ. ಒಂದು ವೇಳೆ ಮಾದಿಗರು ಭಿಕ್ಷೆಯನ್ನು ನೀಡದೇ ಇದ್ದರೆ ಅವರು ಹೋಗುವ ದಾರಿಯಲ್ಲಿ ಕರಿಯ ಹಗ್ಗವನ್ನು ಹಾಕುತ್ತಾರೆ. ಆ ಹಗ್ಗವನು ಮಾದಿಗರು ದಾಟುವ ಹಾಗಿಲ್ಲ. ಆ ಹಗ್ಗವನ್ನು ದಾಟಿ ಹೋದರೆ ದಕ್ಕಲರ ಶಾಪಕ್ಕೆ ಗುರಿಯಾಗಿ ಅವರ ಕುಟುಂಬವೇ ನಾಶವಾಗುತ್ತದೆ. ಅದರಿಂದ ತಪ್ಪಿಸಿಕೊಳ್ಳಬೇಕು ಎಂದರೆ ಅವರಿಗೆ ಭಿಕ್ಷೆಯನ್ನು ಕೊಟ್ಟು ಅವರಿಂದ ಒಳ್ಳೆಯವರು ಎಂದು ಅನಿಸಿಕೊಂಡು ತಲೆಯ ಮೇಲೆ ಕೈ ಆಡಿಸಿದ ನಂತರ ಮುಂದೆ ಸಾಗಬೇಕು. ಇದು ದಕ್ಕಲರಲ್ಲಿ ಸಾಂಸ್ಕೃತಿಕ ವಿಶಿಷ್ಟ ಪದ್ಧತಿ ಹಾಗೂ ಒಂದು ವೇಳೆ ಈ ಪದ್ಧತಿಯನ್ನು ಅನುಸರಿಸಲು ನಿರಾಕರಿಸಿದರೆ ಕುಲಸ್ತರನ್ನು ಕರೆಸಿ ನ್ಯಾಯ ಪಂಚಾಯಿತಿ ಮಾಡಿಸುವುದುಂಟು. ಈ ನ್ಯಾಯದಲ್ಲಿ ನಮಗೆ ಭಿಕ್ಷೆ ನೀಡಲಿಲ್ಲ ಎಂದು ದೂರು ನೀಡಿದಾಗ ನ್ಯಾಯದಲ್ಲಿ ದೊಡ್ಡ ತಲೆಗಳು ಏನು ತೀರ್ಮಾನ ತೆಗೆದುಕೊಳ್ಳುತ್ತಾರೋ ಅದಕ್ಕೆ ಬದ್ಧರಾಗಿ ಅವರು ತೀರ್ಮಾನ ಮಾಡಿದಷ್ಟು ದಂಡ ಕೊಟ್ಟು ಭಿಕ್ಷೆಯನ್ನು ನೀಡಬೇಕಾಗುತ್ತದೆ. ಹೀಗೆ ದಕ್ಕಲರು ಮಾದಿಗ ಮೇಲೆ ಅಧಿಕಾರ ಸಾಧಿಸುವುದಕ್ಕೆ ಅವಕಾಶವಿದೆ. ಹೀಗಾಗಿ ಮಾದಿಗರು ದಕ್ಕಲ ಮಗನನ್ನು ಯಾವುದೇ ಕಾರಣಕ್ಕೂ ನೋಯಿಸಿ ವಾಪಸ್ಸು ಕಳುಹಿಸುವುದಿಲ್ಲ. ಇದು ಈ ಕುಟುಂಬಗಳ ವೈಶಿಷ್ಟ್ಯವಾಗಿದೆ.

**ಹುಟ್ಟಿ**

ಈ ಸಮುದಾಯಗಳಲ್ಲಿ ಹುಟ್ಟಿಯು ಕಸುಬುಗೆ ಬೇಕಾದ ಮೂಲ ವಸ್ತು. ಇದನ್ನು ಹಗ್ಗದಿಂದ ಅಥವಾ ಪ್ಲಾಸ್ಟಿಕ್ ವೈರ್‌ನಿಂದ ಹೆಣೆಯುತ್ತಾರೆ. ಹಳ್ಳಿಗೆ ವಲಸೆ ಹೋಗುವಾಗ ತೆಗೆದುಕೊಂಡು ಹೋಗುವ ಹುಟ್ಟಿ. ಇದರ ಒಂದು ವಿಶೇಷವೆಂದರೆ ಈ ಸಮುದಾಯಗಳು ಒಂದು ಹಳ್ಳಿಯಿಂದ ಇನ್ನೊಂದು ಹಳ್ಳಿಗೆ ವಲಸೆ ಹೋದಾಗ ಹಳ್ಳಿಯಿಂದ ಹೊರಗೆ ಗುಡಿಸಲು ಹಾಕಿಕೊಂಡು ಅಥವಾ ಮರಗಳ ಕೆಳಗೆ ವಾಸ್ತವ್ಯ ಹೂಡಿದಾಗ ಇವರು ಭಿಕ್ಷೆಯನ್ನು ಬೇಡಿದಂತಹ ಆಹಾರವನ್ನು ಈ ಹುಟ್ಟಿಯಲ್ಲಿ ಇಡುತ್ತಾರೆ. ಈ ಹುಟ್ಟಿಯ ಮೇಲೆ ಇವರಿಗೆ ಸಾಂಪ್ರದಾಯಿಕ ನಂಬಿಕೆಯುಂಟು. ಹುಟ್ಟಿಯಲ್ಲಿ ಇಟ್ಟ ಆಹಾರವನ್ನು ಯಾವುದೇ ಭೂತಪ್ರೇತಗಳು ಅದರ ಹತ್ತಿರ ಸುಳಿಯದ ಹಾಗೆ ರಕ್ಷಿಸುತ್ತದೆ ಎಂಬ ನಂಬಿಕೆ ಈ ಸಮುದಾಯಗಳಲ್ಲಿದೆ. ಇವರು ಏಳು ದಿನಗಳ ವಾಸ್ತವ್ಯದಲ್ಲಿ ಹಗಲು ಮತ್ತು ರಾತ್ರಿ ಇಡಿ ಊರ ಹೊರಗೆ ಅಥವಾ ಮರಗಳ ಕೆಳಗೆ ವಾಸಿಸುವುದರಿಂದ ಆಹಾರವನ್ನು ರಕ್ಷಿಸಿಕೊಳ್ಳಲು ಹುಟ್ಟಿಯನ್ನು ಆಶ್ರಯಿಸಿ ಅದರ ಮೇಲೆ ನಂಬಿಕೆ ಇಟ್ಟು ಹಾಗೂ ಈ ಸಮುದಾಯಗಳು ಹೆಚ್ಚು ಹೊರಗೆ ಕೂಲಿ ಕೆಲಸಗಳಿಗೆ ವಸ್ತುಗಳ

ಮಾರಾಟಕ್ಕೆ ಹೋಗಿರುತ್ತಾರೆ ಅಂತಹ ಸಂದರ್ಭದಲ್ಲಿ ಗುಡಿಸಲುಗಳಲ್ಲಿ ಒಬ್ಬರೂ ಇರುವುದಿಲ್ಲ. ಆಗ ದೆವ್ವ, ಪಿಶಾಚಿಗಳು ಬರಬಾರದು ಎಂದು ಮಡಿಕೆಯಲ್ಲಿ ತಂದ ಆಹಾರ ಹುಟ್ಟಿಯಲ್ಲಿ ಇಡುತ್ತಾರೆ.

ಹುಟ್ಟಿಯನ್ನು ಹೆಣಿಯುವ ವಿಧಾನವೆಂದರೆ ತೆಂಗಿನ ನಾರು, ಬೇಲಿಗಳಲ್ಲಿ ಬೆಳೆಯುವ ಕತ್ತಾಳೆ ಪಟ್ಟೆಯ ನಾರು ಅಥವಾ ಪ್ಲಾಸ್ಟಿಕ್ ವೈರ್‌ನಿಂದ ಹೆಣಿಯುತ್ತಾರೆ. ಹುಟ್ಟಿಯನ್ನು ಅನುಭವ ಹೊಂದಿರುವ ಗಂಡಸರು ಮಾತ್ರ ಹೆಣೆಯುವುದಕ್ಕೆ ಸಾಧ್ಯ. ಇದನ್ನು ಹೆಣೆಯುವಾಗ ಮೂರು ಗಂಟುಗಳನ್ನು ಹಾಕಿ ಹೆಣೆದಿರುತ್ತಾರೆ. ಅದು ತಳಭಾಗದಲ್ಲಿ ಒಂದು ಗಂಟು ಮಧ್ಯಭಾಗ ಮತ್ತು ಮೇಲಿನ ಭಾಗದಲ್ಲಿ ಇವು ರಕ್ಷಣೆಯನ್ನು ಕೊಡುವ ಗಂಟು ಎಂದು ಇವರ ನಂಬಿಕೆಯಾಗಿದೆ. ದೆವ್ವ, ಪಿಶಾಚಿಗಳಿಂದ ರಕ್ಷಿಸಿ ತಮುಗೂ ದೆವ್ವ ಹಿಡಿಯಬಾರದು ಎಂದು ರಕ್ಷಿಸಿಕೊಳ್ಳುವ ಸಾಧನವಾಗಿದೆ. ಈ ಹುಟ್ಟಿಯನ್ನು ಎಲ್ಲಿಗಾದರೂ ತೆಗೆದುಕೊಂಡು ಹೋಗಬಹುದು. ಹಾಗೂ ಕೂಲಿ ಕೆಲಸದ ವೇಳೆ ಮರಕ್ಕೆ ನೇತು ಹಾಕಿ ಅದರಲ್ಲಿ ಆಹಾರದ ಮಡಿಕೆಯನ್ನು ಇಡುತ್ತಾರೆ. ಈ ಹುಟ್ಟಿಯು ತುಂಬ ವರ್ಷಗಳ ಬಾಳಕೆ ಬರುವ ಹಾಗೆ ಹೆಣೆದು ಜೀವನಕ್ಕೆ ಬೇಕಾದ ರಕ್ಷಣೆಯನ್ನು ಮಾಡಿಕೊಂಡಿರುತ್ತಾರೆ.

**ನವಿಲು ಕಿನ್ನರಿ**

ಈ ಸಮುದಾಯದ ಪ್ರಧಾನ ಸಂಗೀತ ಉಪಕರಣ, ಇದು ಒಂದು ತಂತಿವಾದ್ಯವಾಗಿದೆ. ಈ ತಂತಿವಾದ್ಯ ಈ ಸಮುದಾಯದ ಮೂಲ ಕಸುಬಿಗೆ ಒಂದು ಉಪಕರಣವಾಗಿದೆ ಎಂದು ಹೇಳುವುದರಲ್ಲಿ ಸಂಶಯವಿಲ್ಲ. ಈ ಕಿನ್ನರಿಯನ್ನು ನವಿಲು ಕಿನ್ನರಿ ಎಂದು ಕರೆಯುತ್ತಾರೆ. ಇದು ಪೂರ್ವಿಕರು ಬಳುವಳಿಯಾಗಿ ಕೊಟ್ಟಿರುವ ಉಡುಗೊರೆ ಎಂದು ಹೇಳುವರು. ಇನ್ನು ಕಿನ್ನರಿಯನ್ನು ಸೋರೆ ಬುರೆ (ಸ್ವರ ಬುರ) ಬಿದುರು ಕೋಲು, ಕಬ್ಬಿಣದ ತಂತಿಗಳನ್ನು ಬಳಸಿ ತಯಾರಿಸುತ್ತಾರೆ. ಬಿದುರು ಕೋಲನ್ನು ಮೂರು ಅಡಿ ಉದ್ದವಾಗಿ ನುಣಪಾಗಿ ಮಾಡಿ ಕೋಲಿನ ಮೇಲುಭಾಗ ಸಮತಟ್ಟಾಗಿ ಕೆಳಭಾಗದಲ್ಲಿ ಚೂಪಾಗಿ ಮಾಡಿ ಕಬ್ಬಿಣವನ್ನು ಹಾಕಿರುತ್ತಾರೆ. ನಂತರ ಈ ಉಳ್ಳಕ್ಕೆ ಹನ್ನೊಂದು ಮೆಟ್ಟಿಲುಗಳು ಇವು ಬಿದುರು ಕೋಲುಗಳಿಂದ ಮಾಡಿ ಇವನ್ನು ಬುಗುರಿಯ ಆಕಾರದ ಲಂಬವಾಗಿ ಮಾಡಿರುತ್ತಾರೆ. ಈ ಮೆಟ್ಟಿಲುಗಳು ಎಡ ಬಲ ಭಾಗಗಳಲ್ಲಿ ಹೊಡೆದಿರುತ್ತಾರೆ. ನಂತರ ಎರಡು ಸೋರೆ ಬುರ್ರೆಗಳು ಕೆಳಗೆ ಒಂದು ಸೋರೆ ಬುರ್ರೆಯು ಮೇಲೆ ಭಾಗದಲ್ಲಿ ಹಾಕಿರುತ್ತಾರೆ. ಸೋರೆ ಬುರ್ರೆಗಳ ಮುಂಭಾಗಕ್ಕೆ ಮೂರು ಕೂದಲಿನ ಎಳೆಯಷ್ಟು ಕಬ್ಬಿಣದ ತಂತಿಗಳನ್ನು ಬಿದುರು ಕೋಲಿನ ಮೇಲಿನಿಂದ ಕೆಳಭಾಗದವರಿಗೆ ಬಿಗಿಯಾಗಿ ಎಳೆದು ಕಟ್ಟಿರುತ್ತಾರೆ.

ಈ ಕಿನ್ನರಿಯ ವಿಶೇಷತೆ ಹನ್ನೊಂದು ಸ್ವರಗಳು, ಹನ್ನೊಂದು ನಾದಗಳು ಹೊರ ಹೊಮ್ಮುತ್ತವೆ. ಈ ಸಮುದಾಯಕ್ಕೆ ಆದಿಜಾಂಬವ ಮತ್ತು ದೇವತೆಗಳು ಕೊಟ್ಟ ಉಪಕರಣಗಳಿಂದ ಆಗಿದೆ. ಹಾಗೆ ಜಾಂಬವ ಕೊಟ್ಟ ಕಿನ್ನರಿ ಶಿವ ಕೊಟ್ಟ ಈಚಲು ಚಾಪೆ, ಬ್ರಹ್ಮ ಕೊಟ್ಟ ಬಿದುರು

ಕೋಲು ಇವುಗಳನ್ನು ಕೊಟ್ಟು ಮಾದಿಗರ ಮನೆಯಲ್ಲಿ ಭಿಕ್ಷೆ ಬೇಡುವುದನ್ನು ಬಿಟ್ಟು ಬೇರೆ ಸಮುದಾಯಗಳಲ್ಲಿ ಭಿಕ್ಷೆ ಬೇಡಿದರೆ ನಿಮ್ಮ ತಲೆ ಹದಿನಾರು ಚೂರುಗಳಾಗುತ್ತವೆ ಎಂದು ಶಾಪವನ್ನು ಕೊಟ್ಟು ಅವರನ್ನು ದೇಶಾಂತರ ಕಳುಹಿಸಿದ್ದಾರೆ ಎಂದು ಈ ಪುರಾಣ ಹೇಳುತ್ತದೆ. ಹೀಗೆ ಈ ಕಿನ್ನರಿಯನ್ನು ತಮ್ಮ ಮೂಲ ಕಸುಬಿಗೆ ಒಂದು ಉಪಕರಣವಾಗಿ ಸ್ವೀಕರಿಸಿದ್ದಾರೆ. ಇನ್ನು ಈ ಕಿನ್ನರಿಯಲ್ಲಿ ದೇವರ ನುಡಿ ಹಾಕಿದರೆ ದೇವತೆಗಳು ಕುಣಿಯುತ್ತಾರೆ. ದೆವ್ವಗಳು ನುಡಿ ಹಾಕಿದರೆ ದೆವ್ವಗಳು ಕುಣಿಯುತ್ತವೆ. ನಾಗ ಸ್ವರ ಹಾಕಿದರೆ ನಾಗದೇವತೆಗಳು ಕುಣಿಯುತ್ತಾರೆ ಎಂದು ದಕ್ಕಲ ಮುನಿಸ್ವಾಮಿಯವರು ಹೇಳುವ ಮಾತು. ಈ ಕಿನ್ನರಿಯನ್ನು ನುಡಿಸುತ್ತಾ ರಾತ್ರಿ ಇಡಿ ಜಾಂಬವ ಪುರಾಣವನ್ನು ಹಾಡುತ್ತಾ ಕಿನ್ನರಿಯನ್ನು ತಾಳಕ್ಕೆ ತಕ್ಕಂತೆ ನುಡಿಸಿಕೊಂಡು ಹಾಡುವರು ಕಥೆ ಮುಗಿದ ನಂತರ ಕಾಣಿಕೆಯಾಗಿ ಅನ್ನ, ಸಾರು, ಮುದ್ದೆ, ವಸ್ತ್ರ, ಆರ್ಥಿಕತೆಗೆ ತಕ್ಕಂತೆ ಹಣವನ್ನು ಭಿಕ್ಷೆಯಾಗಿ ಕೊಡುವರು. ಅದನ್ನು ಅವರು ಸ್ವೀಕರಿಸಿ ತಮ್ಮ ಬಿಡಾರಕ್ಕೆ ಹಿಂತಿರುಗುವರು. ಹೀಗೆ ಕಿನ್ನರಿಯನ್ನು ಬಳಸಿಕೊಂಡು ತಮ್ಮ ದಿನ ನಿತ್ಯದ ಜೀವನ ಸಾಗಿಸುತ್ತಿದ್ದಾರೆ. ಇದರಲ್ಲಿ ಕಿನ್ನರಿಯ ಹಾಡುಗಳನ್ನು ಸಮಾಜಕ್ಕೆ ತಮ್ಮನ್ನು ಪರಿಚಯಿಸಿಕೊಳ್ಳುವುದುಂಟು. ಸುಗಟೂರು ಮುನಿಯಮ್ಮ ಕಿನ್ನರಿ ಹಾಡನ್ನು ಈ ರೀತಿ ಹಾಡುತ್ತಾರೆ.

ತಂದನಾನು ತಂದನಾನು ತಾನೇ ಬಂದಾನು ಜಾಂಬವಮುನಿ
ಕಿನ್ನರಿ ನುಡಿಸುತ ಕಿವಿಗಳ ಆಲಿಸುತ ಕಿಡಿ ಕಿಡಿ ಕಾರುತ ತಾನ ನಂದನ
ಎಲೆ ತಂದಾನಾನು ತಾನೆ ಬಂದಾನು ಜಾಂಬು ಮುನಿ
ಸೇರಿದ ಸಭೆಗೆಲ್ಲ ಶರಣೆಂದು ನಿಂದಾನ
ಕಿನ್ನರಿ ಮೇಲಾಣೆ, ನವಿಲು ಮೇಲಾಣೆ
ತಾಯಿ ಆದಿಶಕ್ತಿಯ ಮೇಲಾಣೆ ಸಾಕ್ಷಿಗುರುವಿನಾಣೆ
ಇಲ್ಲಿ ನೆರೆದ ಸಭಿಕರಾಣೆ, ನಾನುಡಿಸೋದೆಲ್ಲ ದೈವದಾಣೆ ಪ।
ಬಂದಾನು ಜಾಂಬವಮುನಿ ಕಿನ್ನರಿ ನುಡಿಸುತ ಕಿವಿಗಳ ಆಲಿಸುತ
ಕೇರಿಯಲಿ ನಿಂದಾನು ಅಯ್ಯಾ ಅಯ್ಯಾ ಕೇಳಿರಣ್ಣಾ
ತಾಯಿ ತಂದೆ ಗೌಡ್ರ ಕೇಳಿರಣ್ಣಾ
ಈ ನೆಲ ನಮ್ಮದಣ್ಣಾ ಈ ಜನ ನಮ್ಮದಣ್ಣಾ
ಬಿತ್ತಿ ಬೆಳೆವ ಈ ಭೂಮಿ ಕಸಿದರಯ್ಯ
ದೊಕ್ಕಲಿಗರು ಎನ್ನುವರಯ್ಯಾ ಮಾದಿಗರಿಗೆ ಮಕ್ಕಳು ನಾವು
ಅಯ್ಯೋ ಮರೆತು ಹೋಗಿವೆ ನಮ್ಮಯ ಮನೆಗಳು
ದಾರ ನಮ್ಮದು ಶಿವನಾರ ಉಡಿದಾರ ನಮ್ಮದು
ಜನಿವಾರ ಇವದಾರ ಬಿಚ್ಚಿಟ್ಟು
ದನದ ಕತ್ತು ಕೊಯ್ದು ಪಾಲು ಮಾಡುವಾಗ

ತಂಗಡಿ ಗಿಡಕ್ಕೆ ಹಾಕಿದ್ವೀಯ್ಯ ಕದ್ದು ನೀವು ದರಿಸಿ ಬಿಟ್ಟರಯ್ಯಾ
ರೆಡ್ಡಿ ನಮ್ಮವರು ಗೌಡ ನಮ್ಮವರು
ಕೋಮುಟಿಗರು ನಮ್ಮ ಮನೆ ಅಳಿಯನಯ್ಯ
ಬ್ರಾಹ್ಮಣರು ನಮ್ಮ ಮನೆ ಬೀಗರಯ್ಯ
ಪೂಜೆ ನಮ್ಮದು ಪೂಜಾ ಮಂದಿರ ನಮ್ಮದು
ಪೂಜಾರಿ ನಮ್ಮ ಮನೆ ಮಗನಯ್ಯ
ಜಂಬೂದ್ವೀಪ ನಮ್ಮದ ಜಂಬೂ ನೇರಳ ನಮ್ಮದು
ಹೆಪ್ಪು ಮುನಿಯ ಕಣ್ಣುಗುಡ್ಡೆಗಳಿವು
ತೆಪ್ಪಗೆ ಕಪ್ಪಕಾಣಿಕೆ ಕೊಡಿರಯ್ಯ
ದೊಕ್ಕಲಿಗರ ಹರಕೆ ಕೇಳಿರಯ್ಯ

ಹೀಗೆ ಸಮಾಜದಲ್ಲಿನ ಅಸಮಾನತೆಯಿಂದ ತಳಸಮುದಾಯಗಳು ನೆಲೆನಿಲ್ಲದೇ ನೊಂದ ಧ್ವನಿಯಲ್ಲಿ ಕಿನ್ನರಿಯ ನುಡಿಸುತ್ತ ತಮ್ಮ ಬೇಡಿಕೆಗಳನ್ನು ಸಮಾಜದ ಮುಂದಿಟ್ಟು ತಮ್ಮ ನೆಲೆಯನ್ನು ಕಂಡುಕೊಳ್ಳುವುದಕ್ಕೆ ಪ್ರಯತ್ನಿಸುತ್ತಿದ್ದಾರೆ. ಕಿನ್ನರಿಯನ್ನು ಕಳೆದುಕೊಂಡರೆ ಇಡಿ ನಮ್ಮ ಸಮುದಾಯವೇ ಇಲ್ಲದಾಗುತ್ತದೆಂಬ ನಂಬಿಕೆ ಇವರಲ್ಲಿ ನೆಲೆಯೂರಿದೆ. ಹಾಗಾಗಿ ಈ ಕಿನ್ನರಿ ದೇವರು ಕೊಟ್ಟ ವರ ಎಂದು ಸುರಕ್ಷಿತವಾಗಿರಿಸುತ್ತಾರೆ.[೩]

**ಪಶುಪಾಲನೆ**

ದಕ್ಕಲ ಸಮುದಾಯಗಳಲ್ಲಿ ಬಹು ಮುಖ್ಯವಾಗಿ ಪಶುಪಾಲನೆಯನ್ನು ಮಾಡುತ್ತಿದ್ದರು. ಇವರ ಜೀವನ ಆಧಾರಕ್ಕೆ ಭಿಕ್ಷೆಯನ್ನು ಮಾಡಿಟ್ಟರೆ, ಜೀವನೋಪಾಯಕ್ಕಾಗಿ ಪ್ರಾಣಿಗಳನ್ನು ಸಾಕುತ್ತಿದ್ದರು. ಇವುಗಳನ್ನು ಸಾಕುವುದರಿಂದ ಎರಡು ರೀತಿಯ ಉಪಯೋಗಗಳಾಗುತ್ತಿದ್ದವು.

ತಮ್ಮ ಉಪಯೋಗಕ್ಕೆ ಬಳಸಿಕೊಳ್ಳುತ್ತಿದ್ದ ಪ್ರಾಣಿಗಳು ಕತ್ತೆ, ಕುದುರೆ, ನಾಯಿ, ಬೆಕ್ಕು ಇವು ವಲಸೆ ಹೋಗುವ ಸಂದರ್ಭದಲ್ಲಿ ವಸ್ತುಗಳನ್ನು ಸಾಗಿಸುವುದಕ್ಕೆ ಹಾಗೂ ಬೇಟೆಯಾಡುವಾಗ ಸಹಾಯಕ್ಕೆ ಬಳಸಿಕೊಳ್ಳುತ್ತಿದ್ದರು.

ಆಹಾರಕ್ಕೆ ಬಳಕೆಯಾಗುತ್ತಿದ್ದ ಪ್ರಾಣಿಗಳು ಕುರಿ, ಮೇಕೆ, ಎಮ್ಮೆ, ಕೋಳಿ, ಹಂದಿ, ಕೌಜುಗ ಪಕ್ಷಿಗಳು ಇವುಗಳನ್ನು ತಮ್ಮ ಆಹಾರಕ್ಕಾಗಿ ಬಳಕೆ ಮಾಡಿಕೊಳ್ಳುತ್ತಿದ್ದರು.

ಈ ಸಮುದಾಯದಲ್ಲಿ ಅತಿ ಹೆಚ್ಚು ಹಂದಿ ಮತ್ತು ಕತ್ತೆಗಳನ್ನು ಸಾಕುತ್ತಿದ್ದರು. ಹಂದಿಗಳನ್ನು ಸಾಕುವುದು ಪೂರ್ವದಿಂದಲೂ ಬೆಳೆಸಿಕೊಂಡ ಬಂದಿರುವ ವೃತ್ತಿಯಾಗಿದೆ. ಆದರೆ ಪ್ರಾಣಿ ಸಾಕಾಣಿಕೆ ಈ ಸಮುದಾಯಗಳಿಗೆ ಪ್ರಯಾಸದ ಕೆಲಸವಾಗಿದೆ. ಏಕೆಂದರೆ ಒಂದು ಕಡೆ ನೆಲೆ ನಿಲ್ಲದೆ ವಲಸೆ ಹೋಗುವುದರಿಂದ ಇದು ಇವರಿಗೆ ಕಷ್ಟಕರವಾದರೂ ಜೀವನೋಪಾಯಕ್ಕಾಗಿ ಮಾಡಲೇಬೇಕಾದ ಕಸುಬು ಆಗಿದೆ. ನಂತರ ಹಂದಿಗಳನ್ನು ಬೆಳೆಸುವುದರಿಂದ ಊರುಗಳಲ್ಲಿ

ಗೌರವ ನೀಡದೆ, ಬೀದಿಗಳಲ್ಲಿ ಒಡಾಡುವುದಕ್ಕೆ ಅವಕಾಶವಿಲ್ಲ. ಹೀಗಾಗಿ ಹಂದಿಗಳ ಪಾಲನೆ ಮಾಡುವುದು ಬಿಟ್ಟಿದ್ದೇವೆ ಎಂದು ಹೇಳುತ್ತಾರೆ. ಇತ್ತೀಚಿಗೆ ಹಂದಿಗಳಿಗೆ ವಿಷವನ್ನು ಇಟ್ಟು ಸಾಯಿಸುತ್ತಾರೆ. ಹಾಗಾಗಿ ಪೂರ್ವಿಕರ ಕುಲಕಸುಬು ಕೈ ಬಿಡಬೇಕಾಯಿತು ಎಂದು ಈ ಸಮುದಾಯಗಳು ಹೇಳುತ್ತಾರೆ. ಇನ್ನು ಆರ್ಥಿಕತೆಯನ್ನು ಸುಧಾರಿಸಲು ಕುರಿ, ಮೇಕೆಗಳನ್ನು ಸಾಕುತ್ತಿದ್ದಾರೆ. ಭಿಕ್ಷೆಯಿಂದ ಹೊಟ್ಟೆ ತುಂಬಿಸಿಕೊಳ್ಳುವುದು ಕಷ್ಟಕರವಾಗಿದೆ ಹಾಗಾಗಿ ಕುರಿ, ಮೇಕೆಗಳನ್ನು ಬೆಳೆಸಿ ಅವುಗಳನ್ನು ಮಾರಿ ಅದರಿಂದ ಆರ್ಥಿಕತೆಯನ್ನು ಸುಧಾರಿಸಿಕೊಳ್ಳುತ್ತಿದ್ದಾರೆ.

ಪಶುಪಾಲನೆಯಲ್ಲಿ ಕತ್ತೆಗಳನ್ನು ತಮ್ಮ ವಸ್ತುಗಳನ್ನು ಸಾಗಿಸಲು ಬಳಸುತ್ತಿದ್ದರು. ಆದರೆ ಬದಲಾವಣೆಯ ಪರಿವರ್ತನೆಯಲ್ಲಿ ಕತ್ತೆಗಳನ್ನು ಕೈಬಿಟ್ಟು ಸಾರ್ವಜನಿಕ ವಾಹನಗಳು ಹಾಗೂ ಕಾಲ್ನಡಿಗೆಯನ್ನು ಅವಲಂಬಿಸಿದ್ದಾರೆ. ಈ ಸಮುದಾಯಗಳು ೨೦ರ ದಶಕದ ಹಿಂದಿನ ದಿನಗಳಲ್ಲಿ ಪಶುಪಾಲನೆ ಮಾಡುವುದಕ್ಕೆ ಬೇಕಾದ ಸ್ಥಳಾವಕಾಶವಿತ್ತು. ಆದರೆ ಇಂದಿನ ಸಾಮಾಜಿಕತೆಯಲ್ಲಿ ಅವಕಾಶವು ಇಲ್ಲದೆ ಪಶುಪಾಲನೆಯು ಕಷ್ಟಕರವಾಗಿ ಪರಿಣಮಿಸಿ ಕತ್ತೆ ಹಂದಿಗಳನ್ನು ಬಿಟ್ಟು ಕುರಿ, ಮೇಕೆಗಳನ್ನು ಮಾತ್ರ ಬೆಳೆಸುತ್ತಿರುವುದು ಸಮುದಾಯಗಳಲ್ಲಿ ಕಾಣಬಹುದು. ಕುರಿ, ಮೇಕೆಗಳನ್ನು ತಮ್ಮ ಮನೆಯ ಪಡಸಾಲೆಯಲ್ಲಿ ತಡಿಕೆಯನ್ನು ಕಟ್ಟಿ ಬೆಳೆಸುವುದರಿಂದ ಇವುಗಳಿಗೆ ಪ್ರತ್ಯೇಕವಾದ ಸ್ಥಳದ ಅವಶ್ಯಕತೆ ಇರುವುದಿಲ್ಲ. ಹಾಗಾಗಿ ಇವುಗಳನ್ನು ಬೆಳೆಸಿ ಜೀವನಕ್ಕೆ ಆಧಾರವಾಗಿರಿಸಿದ್ದಾರೆ. ಇನ್ನು ನಾಯಿಗಳನ್ನು ಬೇಟೆಯಾಡುವುದಕ್ಕೆ ಪಾಲನೆ ಮಾಡುತ್ತಿದ್ದಾರೆ. ಇವರ ಅಲೆಮಾರಿತನದಲ್ಲಿ ಇವು ಇವರ ರಕ್ಷಣೆಯನ್ನು ಹಾಗೂ ಗುಡಿಸಲುಗಳನ್ನು ಕಾಯುತ್ತಿದ್ದವು ಎಂದು ಮನದಟ್ಟಾಗುತ್ತದೆ.

**ಕೃಷಿ**

ಅಲೆಮಾರಿ ಸಮುದಾಯಗಳಲ್ಲಿ ಭೂ ಒಡೆತನ ಎಂಬುವುದು ಕನಸಿನ ಮಾತಾಗಿದೆ. ಈ ಸಮುದಾಯಗಳು ಒಂದು ಕಡೆ ನೆಲೆನಿಲ್ಲದೆ ವಲಸೆಯಿಂದಾಗಿ ಭೂ ಒಡೆತನ ದಕ್ಕದ ವಿಚಾರವಾಗಿದೆ. ತಮ್ಮ ಗುಡಾರಗಳನ್ನು ಸರ್ಕಾರದ ಒಡೆತನದಲ್ಲಿ ಕಟ್ಟಿಕೊಂಡಿರುವ ಈ ಕುಟುಂಬಗಳಿಗೆ ಭೂಮಿಯ ಹಂಗು ಎಲ್ಲಿದೆ ತಮ್ಮ ಪೂರ್ವಿಕರು ತಮಗಾಗಿ ಏನೇನೂ ಮಾಡಿಲ್ಲ. ನಮಗೆ ತಿಳುವಳಿಕೆ ಬಂದಾಗಿನಿಂದ ನಾವು ಊರು ಊರು ಸುತ್ತುತ್ತಿದೆವು ಅಷ್ಟೇ. ನಮಗೆ ಮನೆ ಮಟ ಇಲ್ಲ. ಇನ್ನು ಭೂಮಿ ಎಲ್ಲಿಂದ ಬರುತ್ತದೆ ನಮಗೆ ಬುದ್ಧಿ ಬೆಳವಣಿಗೆ ಆದ ನಂತರ ಒಂದು ಕಡೆ ನೆಲೆ ನಿಂತಿದ್ದೇವೆ. ಅದು ಸರ್ಕಾರಿ ಭೂಮಿಯಲ್ಲಿ ಗುಡಿಸಲು ಹಾಕಿಕೊಂಡು ಬೇರೆಯವರ ಭೂಮಿಯಲ್ಲಿ ಕೂಲಿ ನಾಲಿ ಮಾಡುತ್ತಿದ್ದೇವೆ. ನಮ್ಮ ಕೃಷಿಯಲ್ಲಿ ಒಡೆತನ ನಮಗೆಲ್ಲಿ? ಎಂದು ದಕ್ಕಲರು ಹೇಳುವ ಮಾತನ್ನು ಗಮನಿಸಬಹುದು.

ಭೂ ಒಡೆತನವಿಲ್ಲದ ದಕ್ಕಲ ಸಮುದಾಯದ ಚಾರಿತ್ರಿಕ ಹಿನ್ನೆಲೆಯನ್ನು ಕೆದಕಿದಾಗ ಹಿಡಿ ಭೂಮಿ ಸೃಷ್ಟಿಗೆ ಮೂಲ ಕಾರಣ ಈ ದಕ್ಕಲ ಕುಲಗಳು. ಹೆಪ್ಪು ಮುನಿಯ ಜಲಮಯವಾಗಿದ್ದ

ಭೂಮಿಯನ್ನು ಹೆಪ್ಪು ಮಾಡಿ ಹಿಡಿ ಭೂಮಿಯ ಸೃಷ್ಟಿಗೆ ಕಾರಣನಾದ. ಇನ್ನು ಜಾಂಬಮುನಿಯ ಮಕ್ಕಳಲ್ಲಿ ಹೆಪ್ಪುಮುನಿಯ ಒಬ್ಬ. ಭೂ ಸೃಷ್ಟಿಗೆ ಮೂಲವಾದರು ಆದಿಜಾಂಬವ ಇಟ್ಟ ಶಾಪವೋ ಅಥವಾ ಸಮುದಾಯಗಳಲ್ಲಿ ಜಾತಿ ಚಕ್ರಕ್ಕೆ ಸುಳಿಯಾಗಿ ಸಿಕ್ಕಿ ಶ್ರಮ ಶಕ್ತಿಯ ಸಾಧನ ಸಂಪತ್ತುಗಳಿಂದ ದೂರವಾಗಿರುವುದು ಕಾರಣವೋ? ಹಿಡಿ ಭೂಮಂಡಲದ ಹಕ್ಕು ದಾರಿಕೆ ಇರುವ ಇವರಿಗೆ ವರ್ತಮಾನದಲ್ಲಿ ನೆಲೆನಿಂತ ಸ್ಥಳವು ಇವರದಾಗಲಿಲ್ಲ. ಅದು ಒಬ್ಬರ ಹಂಗಿನಲ್ಲಿ ನೆಲೆ ನಿಲ್ಲಬೇಕಾಗಿದೆ. ಹೀಗಿರುವಾಗ ದಕ್ಕಲರು ಕೃಷಿ ಕನಸು ಕನಸಾಗಿ ಉಳಿಯುವುದಾಗಿದೆ. ಕೋಲಾರ ಜಿಲ್ಲೆಯಲ್ಲಿ ೩೩ ಕುಟುಂಬಗಳು ನೆಲೆ ನಿಂತಿದ್ದು ಇದರ ಮೂರು ಕುಟುಂಬಗಳಿಗೆ ಮಾತ್ರ ಕೃಷಿಯ ಭೂ ಒಡೆತನ ಹೊಂದಿದ್ದು ಇವರು ಸಹ ಅಲ್ಪಸ್ವಲ್ಪ ಭೂ ಒಡೆತನದಾರರಾಗಿದ್ದಾರೆ. ಮಾದವ ಗುರ್ಜೇನಹಳ್ಳಿಯಲ್ಲಿ ಒಂದು ಕುಟುಂಬ ಹಾಗೂ ಜಂಗಮಕೋಟೆ, ಸುಗಟೂರುನಲ್ಲಿ ಎರಡು ಕುಟುಂಬಗಳು ಮಾತ್ರ ಅಲ್ಪ ಸ್ವಲ್ಪ ಭೂ ಒಡೆತನ ಹೊಂದಿ ಮಳೆಗಾಲದಲ್ಲಿ ಮಾತ್ರ ಬೆಳೆಯನ್ನು ಬೆಳೆಯುತ್ತಾರೆ. ಅದರಲ್ಲಿ ರಾಗಿ, ಅವರೆ, ಜೋಳಗಳನ್ನು ಬೆಳೆಸುತ್ತಾರೆ. ಮಳೆ ಇಲ್ಲದ ಪಕ್ಷದಲ್ಲಿ ಆ ಭೂಮಿ ಬರಡಾಗಿರುತ್ತದೆ. ಆ ವೇಳೆಯಲ್ಲೇ ಕೂಲಿಯನ್ನು ಆಶ್ರಯಿಸುತ್ತಾರೆ.

ದಕ್ಕಲರು ಕೃಷಿಕರಾಗಿ ತಮ್ಮ ಕೃಷಿ ಕೂಲಿಯಿಂದ ಮಾತ್ರ ಕಂಡುಬರುತ್ತಾರೆ ಆದರೆ ಸ್ವಂತ ಭೂಮಿಯ ಕೃಷಿ ಚಟುವಟಿಕೆಗಳು ಕಾಣದ ದಕ್ಕಲರು ಸರ್ಕಾರಿ ಭೂಮಿಯಲ್ಲಿ ಕೃಷಿ ಮಾಡುವುದಕ್ಕೆ ಅವಕಾಶವಿದ್ದರೂ ಅದಕ್ಕೆ ಇವರಿಗೆ ಸಾಮಾಜಿಕ ಬೆಂಬಲವಾಗಲೀ ಇಲ್ಲ. ನಂತರ ಬೌದ್ಧಿಕ ಬುದ್ಧಿಯಾಗಲೀ ಹಾಗೂ ಈ ಸಮುದಾಯಗಳ ಸಂಖ್ಯಾಬಲವಾಗಲೀ ಇಲ್ಲದ ಕಾರಣ ಈ ಸಮುದಾಯಗಳು ಅನಾಥವಾಗಿವೆ. ಮತ್ತೊಬ್ಬರ ಒಡೆತನದಲ್ಲಿ ಬದುಕಬೇಕಾದ ಪರಿಸ್ಥಿತಿ ಎದುರಾಗಿದೆ. ಭಾರತೀಯ ಸಮಾಜದಲ್ಲಿ ಸರ್ಕಾರಿ ನಿರ್ಗತಿಕರಿಗೆ ವಸತಿ ಗೃಹಗಳ ಸೌಕರ್ಯ ಕಲ್ಪಿಸಿದ್ದರೂ ಅದು ಕೆಲವು ಸಮುದಾಯಗಳಿಗೆ ಮಾತ್ರ ಸಿಕ್ಕಿದೆ ಇನ್ನು ಉಳಿದ ಸಮುದಾಯಗಳು ವಂಚಿತರಾಗಿದ್ದಾರೆ. ಕಾರಣ ಅನಕ್ಷರತೆ, ಅಜ್ಞಾನ ತಿಳುವಳಿಕೆ ಇಲ್ಲದೆ ಅದನ್ನು ದಕ್ಕಿಸಿಕೊಳ್ಳುವುದರಲ್ಲಿ ವಿಫಲರಾಗಿದ್ದಾರೆ. ಹೀಗಾಗಿ ಕೂಲಿ ಕೆಲಸಗಳನ್ನು ಮಾಡುತ್ತಾ ಹೊಟ್ಟೆ ತುಂಬಿಸಿಕೊಂಡು ಗುಡಿಸಲುಗಳಲ್ಲಿ ವಾಸಿಸುತ್ತಾರೆ. ಅಷ್ಟೇ ಅಲ್ಲದೆ ಈ ಸಮುದಾಯಗಳು ಬೆಳೆದಂತೆ ವಸತಿ ವ್ಯವಸ್ಥೆಯ ಕೊರತೆಯನ್ನು ಅನುಭವಿಸುತ್ತಿದ್ದಾರೆ.

**ಕುಶಲ ಕರ್ಮಿಗಳು**

ದಕ್ಕಲರಲ್ಲಿ ಕೆಲವು ಸಣ್ಣ ಸಣ್ಣ ಕುಶಲ ಕರ್ಮಿಗಳು ಇರುವುದು ಕಂಡುಬರುತ್ತದೆ. ಬುಟ್ಟಿ ಎಣೆಯುವುದು ಈಚಲು ಚಾಪೆ, ಪೊರಕೆ, ಆಟಿಕೆಗಳು, ಬೊಂಬೆಗಳು ಮುಂತಾದವು ಕೂಲಿ ಕೆಲಸದ ಜೊತೆಗೆ ಆರ್ಥಿಕವಾಗಿ ಈ ಕಸುಬುಗಳನ್ನು ಮಾಡುತ್ತಿದ್ದಾರೆ. ಕಾಡುಗಳಿಗೆ ಹೋಗಿ ಈಚಲ ಗಿಡದ ಗರಿಗಳನ್ನು ತಂದು ಚಾಪೆ ಪೊರಕೆಗಳನ್ನು ಹೆಣೆದು ಅದನ್ನು ಮಾರಿ ಬಂದ ಹಣದಲ್ಲಿ ಜೀವನಕ್ಕಾಗಿ ಬಳಸಿಕೊಳ್ಳುತ್ತಿದ್ದಾರೆ. ಬಿದುರು ಕೋಲುಗಳ ದಬ್ಬೆಗಳಿಂದ ಬುಟ್ಟಿಯನ್ನು

ಹೆಣೆದು ಮಾರಾಟ ಮಾಡಿಕೊಂಡು ಅದು ಒಂದು ಉಪಕಸುಬಾಗಿಸಿಕೊಂಡಿದ್ದಾರೆ. ಈ ಕಸುಬುಗಳು ಹಿಂದಿನಿಂದಲೂ ನಡೆದುಕೊಂಡು ಬಂದಿದೆ. ಆದರೆ ಸ್ವಾತಂತ್ರ್ಯ ಭಾರತದ ಸಮಾಜದಲ್ಲಿ ಬದಲಾವಣೆಗಳಿಂದ ಈ ಕಸುಬುಗಳಿಗೆ ದಕ್ಕೆ ತಂದಿದೆ. ಪ್ಲಾಸ್ಟಿಕ್ ವಸ್ತುಗಳ ಬಳಕೆ ಹೆಚ್ಚಾದಂತೆ ಈ ವಸ್ತುಗಳ ಬೇಡಿಕೆ ಕಡಿಮೆಯಾಗಿ ಈ ಕಸುಬುಗಳನ್ನು ಕೈ ಬಿಡುವಂತಾಗಿದೆ. ಹಾಗಾಗಿ ಈ ಸಮುದಾಯಗಳ ಆರ್ಥಿಕ ಪರಿಸ್ಥಿತಿ ಮತ್ತಷ್ಟು ಕಷ್ಟಗಳನ್ನು ಎದುರಿಸುವಂತಾಗಿದೆ.

ಅಷ್ಟೇ ಅಲ್ಲದೆ ಕಾಡು ಮೇಡುಗಳಿಗೆ ಹೋಗಿ ಗರಿಗಳನ್ನು ತಂದು ಬುಟ್ಟಿ, ಚಾಪೆ ಹೆಣೆದು ಮಾರಾಟ ಮಾಡಿದರೆ ಅದರಿಂದ ಬರುವ ಲಾಭವು ಅಷ್ಟಕ್ಕೆ ಅಷ್ಟೇ. ಆದರೆ ಕೂಲಿಗೆ ಹೋದರೆ ಇದಕ್ಕಿಂತ ಹೆಚ್ಚು ಹಣ ಸಂಪಾದಿಸಬಹುದು ಎಂಬ ಆಲೋಚನೆ ಈ ಸಮುದಾಯಳದ್ದಾಗಿದೆ. ನಂತರ ಯುವ ಜನರು ಸ್ವಲ್ಪ ಮಟ್ಟಿನ ವಿದ್ಯಾಭ್ಯಾಸದಿಂದ ಫ್ಯಾಕ್ಟರಿಗಳಿಗೆ ಹೋದರೆ ತಿಂಗಳಿಗೆ ೫ ರಿಂದ ೧೦ ಸಾವಿರ ದುಡಿಯಬಹುದು. ಈ ಕೆಲಸಗಳಿಂದ ನಮಗೆ ಏನೂ ಪ್ರಯೋಜನವಿಲ್ಲ ಎಂಬ ಅಂಶವು ಇವರಲ್ಲಿ ಮನದಟ್ಟಾಗಿದೆ. ಹಾಗಾಗಿ ಹಿಂದಿನಿಂದ ಬಂದ ಪಾರಂಪರಿಕ ಕುಲ ಕಸುಬುಗಳಿಗೆ ಕಡಿವಾಣ ಆಗಿದೆ. ಈ ಕುಲಕಸುಬುಗಳು ಮುಂದಿನ ಪೀಳಿಗೆಗೆ ಕನಸಿನ ಮಾತಾಗಿದೆ.

**ಬೇಟೆ**

ದಕ್ಕಲ ಸಮುದಾಯಗಳಲ್ಲಿ ಬೇಟೆಯಾಡುವುದುಂಟು, ಆದರೆ ಇದು ಅವರ ಮೂಲ ಕಸುಬು ಆಗಿರುವುದಿಲ್ಲ ಇದನ್ನು ಬಿಡುವಿನ ವೇಳೆಯಲ್ಲಿ ತಮ್ಮ ಮಸ್ತಿ ಮೋಜಿಗಾಗಿ ಬೇಟೆಯಾಡುತ್ತಾರೆ. ಈ ಸಮುದಾಯಗಳು ಬೇಟೆಯಾಡುವುದರಲ್ಲಿ ಬಲವುಳ್ಳ ಪಂಟರಾಗಿದ್ದಾರೆ. ಇವರು ಬೇಟೆಯಾಡುವ ಪ್ರಾಣಿಗಳು ಕೌಜುಗ ಪಕ್ಷಿಗಳು, ಚಿಗರಿ, ಉಡಾ, ಅಳಿಲು, ಮೊಲ, ಮುಂಗಸಿ ಮುಂತಾದವುಗಳು.

ಇವರು ಬೇಟೆಯಾಡುವುದಕ್ಕೆ ಬಳಸುವ ಸಲಕರಣೆಗಳು, ಪಾಜಿ, ಬಲೆ, ಬೆತ್ತಗಳು ಪ್ರಾಣಿಗಳಲ್ಲಿ ನಾಯಿಯನ್ನು ಬಳಸುತ್ತಾರೆ. ಸಾಮಾನ್ಯವಾಗಿ ಈ ಸಮುದಾಯಗಳು ರಾತ್ರಿ ವೇಳೆಯಲ್ಲಿ ಬೇಟೆಯಾಡುವುದು ಹೆಚ್ಚು. ಇತ್ತೀಚಿನ ರಾತ್ರಿ ವೇಳೆಯಲ್ಲಿ ಬೇಟೆಯಾಡುವುದಕ್ಕಿಂತ ಹಗಲಿನಲ್ಲಿಯೂ ಸಹ ಬೇಟೆಯಾಡುತ್ತಾರೆ.ಇವರು ಕೌಜುಗ ಪಕ್ಷಿಗಳನ್ನು ಬೇಟೆಯಾಡುವುದು "ಪಾಜಿ"ಯನ್ನು ಇಟ್ಟು ಬಂದಿರುತ್ತಾರೆ. ಬೆಳಗ್ಗೆ ೫ ಗಂಟೆಗೆ ಹೋಗಿ ನೋಡಿದಾಗ ಪಾಜಿಯಲ್ಲಿ ಕೌಜುಗ ಪಕ್ಷಿಗಳು ಸಿಕ್ಕಿ ಹಾಕಿಕೊಂಡಿರುತ್ತವೆ. ಅವುಗಳನ್ನು ಪೋಷಿಸಿ ಆಹಾರವಾಗಿ ಸೇವಿಸುತ್ತಾರೆ. ನಂತರ ಅದರ ಮಾಂಸವನಲು ಮಾರಾಟ ಮಾಡಿಯೂ ಹಣ ಸಂಪಾದಿಸುತ್ತಾರೆ. ಮೊಲಗಳನ್ನು ಬೇಟೆಯಾಡುವುದಕ್ಕೆ ನಾಯಿ ಮತ್ತು ಬಲೆಯನ್ನು ತೆಗೆದುಕೊಂಡು ಹೋಗುತ್ತಾರೆ. ಬಲೆಯನ್ನು ಒಂದು ಮುಳ್ಳು ಪೊದೆಯಿಂದ ಮತ್ತೊಂದು ಮುಳ್ಳು ಪೊದೆಗೆ ಕಟ್ಟಿರುತ್ತಾರೆ. ಆಗ ನಾಯಿಗಳನ್ನು ಬಿಟ್ಟು ಅವುಗಳನ್ನು ಹಿಡಿಯಲು ಪ್ರಯತ್ನಿಸಿದಾಗ ಅವು ಓಡುವ ಸಂದರ್ಭದಲ್ಲಿ ಬಲೆಯಲ್ಲಿ ಸಿಕ್ಕಿ ಹಾಕಿಕೊಳ್ಳುತ್ತವೆ. ಒಂದು ವೇಳೆ ನಾಯಿಗಳು ಸಹ ಮೊಲಗಳನ್ನು ಬೇಟೆಯಾಡಿ ಹಿಡಿದು ತಮ್ಮ ಯಜಮಾನನಿಗೆ ಕೊಡುತ್ತವೆ. ಇನ್ನು ಕಾಡು ಹಂದಿಗಳನ್ನು ಬೇಟೆಯಾಡುವುದು ನೆಲದಲ್ಲಿ

ಗುಂಡಿಯನ್ನು ತೋಡಿ ಅದರ ಮೇಲೆ ಕೋಲುಗಳನ್ನು ಇಟ್ಟು ಸೊಪ್ಪು ಹಾಕಿ ಮುಚ್ಚಿರುತ್ತಾರೆ. ನಂತರ ಹಂದಿಗಳನ್ನು ಓಡಿಸಿಕೊಂಡು ಬಂದಾಗ ಹಂದಿಗಳು ಗುಂಡಿಯಲ್ಲಿ ಬೀಳುತ್ತವೆ. ಆಗ ಅವುಗಳನ್ನು ಹಿಡಿದು ತರುತ್ತಾರೆ. ಹೀಗೆ ಅಳಿಲು, ಮುಂಗಸಿ ಪ್ರಾಣಿಗಳನ್ನು ಹಿಡಿದು ಆಹಾರಕ್ಕಾಗಿ ಉಪಯೋಗಿಸಿಕೊಳ್ಳುತ್ತಾರೆ.

ಈ ಸಮುದಾಯಗಳು ಮಾಂಸಕ್ಕಾಗಿ ಪ್ರಾಣಿಗಳನ್ನು ಬೇಟೆಯಾಡಿ ತಿನ್ನುವ ಇವರು ಸರ್ಕಾರದ ಕಾನೂನುಗಳಿಂದ ಭಯಭೀತರಾಗಿ ಇತ್ತೀಚಿಗೆ ಬೇಟೆಯಾಡುವುದು ಕಡಿಮೆ ಮಾಡಿರುವುದು ಕಂಡುಬರುತ್ತದೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಶ್ರೀನಿವಾಸಪುರದ ದಕ್ಕಲ ಸಮುದಾಯಗಳನ್ನು ಕುರಿತು ಬೇಟೆಯ ಸಲಕರಣೆಗಳನ್ನು ತೋರಿಸಿ ಎಂದಾಗ ಅವರಲ್ಲಿ ಭಯ ಆವರಿಸಿದ್ದುಂಟು. ಸ್ವಲ್ಪ ಸಮಯ ಗಲಿಬಿಲಿಯಾದರು ನಂತರ ನಾವು ಧೈರ್ಯ ತುಂಬಿ ನಮ್ಮ ಅಧ್ಯಯನಕ್ಕೆ ಅಷ್ಟೇ ಕೇಳುತ್ತಿದ್ದೇವೆ ಇದರಲ್ಲಿ ಯಾವುದೇ ಕಾನೂನು ಇಲ್ಲ ಎಂದಾಗ ಸ್ವಲ್ಪ ಸಮಾಧಾನದಿಂದ ಸಲಕರಣೆಗಳನ್ನು ತೆಗೆದು ತೋರಿಸಿದರು. ಎಲ್ಲಿ ತಮ್ಮ ಮೇಲೆ ಕಾನೂನು ಕ್ರಮ ತೆಗೆದುಕೊಳ್ಳುತ್ತಾರೆ ಎಂದು ಈ ಸಮುದಾಯಗಳಲ್ಲಿ ಸ್ವಲ್ಪಮಟ್ಟಿನ ಭಯ ಇದೆ. ಆದರೂ ಕದ್ದು ಮುಚ್ಚಿ ಬೇಟೆಯಾಡುತ್ತೇವೆ ಎಂದು ಹೇಳುತ್ತಾರೆ. ನಂತರ ಇದರ ಬಗ್ಗೆ ಸರ್ಕಾರಕ್ಕೆ ಎಲ್ಲಿ ತಿಳಿಸುತ್ತೀರೋ ಎಂದು ಕಳವಳವುಂಟಾಗಿ ನಿಮಗೆ ಬೇಟೆ ಸಲಕರಣೆಗಳನ್ನು ತೋರಿಸಲಿಲ್ಲ ಎಂದು ಹೇಳಿದರು.

**ಕಸುಬುದಾರರ ಸ್ಥಿತಿಗತಿಗಳು**

ದಕ್ಕಲ ಸಮುದಾಯಗಳಲ್ಲಿ ಪಾರಂಪರಿಕ ಕಸುಬುಗಳನ್ನು ಮುಂದುವರಿಸಲು ಸಾಮಾಜಿಕವಾಗಿ ಅಸಮರ್ಥರಾಗಿದ್ದಾರೆ. ಬದಲಾಗುವ ಸ್ಥಿತಿಗತಿಗಳಿಗೆ ತಾವು ಬದಲಾವಣೆಗಳನ್ನು ಕಂಡುಕೊಳ್ಳಲು ಸಾಂಪ್ರದಾಯಿಕ ಕಸುಬುಗಳನ್ನು ಕೈ ಬಿಡಬೇಕಾಗಿದೆ. ಹಾಗೂ ಮೂಲ ಕಸುಬನ್ನು ಮುಂದುವರಿಸಲು ಆರ್ಥಿಕ ದುರ್ಬಲತೆ ಮೂಲ ಕಾರಣವಾಗಿದೆ. ಹಂದಿ ಸಾಕಾಣಿಕೆಯಿಂದ ಊರಿನಲ್ಲಿ ಅವುಗಳನ್ನು ಹೊಡೆದು ಸಾಯಿಸುವುದರಿಂದ ಅದು ಸಹ ಕೈ ಬಿಟ್ಟು ಕುಳಿತಿರುವ ಸನ್ನಿವೇಶ ನಮ್ಮದಾಗಿದೆ. ಸಾಮಾಜಿಕ ಭದ್ರತೆಯಲ್ಲಿ ವಿಫಲರಾಗಿರುವುದು ದೊಡ್ಡ ತೊಡಕಾಗಿದೆ. ಹಾಗೂ ಆರ್ಥಿಕ ಸಬಲತೆಯು ಇಲ್ಲವಾಗಿದೆ ದಕ್ಕಲರು ಪೌರಾಣಿಕವಾಗಿ ಬಹಳ ಪ್ರಖ್ಯಾತಿಯಾದರೂ ಸಮಾಜದಲ್ಲಿ ತಮ್ಮನ್ನು ತಮ್ಮ ಕುಲಬಳ್ಳಿಗಳಂತೆ ಸೀಮಿತವಾದ ಮಹಾಕಾವ್ಯಗಳಂತೆ ಗೋಚರಿಸುವ ದುರಂತಕ್ಕೆ ಈಡಾಗಿದೆ ಹಾಗೂ ಇಂತಹ ಮಹತ್ವವುಳ್ಳ ಪರಂಪರೆ ಹೊತ್ತ ದಕ್ಕಲ ಹಿತದೃಷ್ಟಿಗೆ ಕಾಲಾಂತರದಲ್ಲಿ ತಮ್ಮ ಬದುಕಿಗೆ ಕೊಳ್ಳಿ ಇಟ್ಟ ಕೆಂಡವಾಗುತ್ತೆ ಎಂಬ ಕಂಗಾಲಿನಲ್ಲಿ ಇರುವುದು ಸಮಾಜದ ದೊಡ್ಡ ದುರಂತವಾಗಿದೆ.

ಸಮಾಜದಲ್ಲಿ ಅಲೆಮಾರಿಗಳು ನಿಶ್ಚಿತ ನೆಲೆಗಳನ್ನು ಆಶ್ರಯಿಸಿದರೂ ಅಲ್ಲಿ ಭೌಗೋಳಿಕ ಪರಿಸ್ಥಿತಿಗೆ ಹೊಂದಿಕೊಳ್ಳುವುದಕ್ಕೆ ಹೆಣಗಾಡುವಂತಹ ಸ್ಥಿತಿ ಉಂಟಾಗಿದೆ ಹಾಗೂ ಬಹುಪಾಲು ದಕ್ಕಲ ಸಮುದಾಯಗಳು ಪಾರಂಪರಿಕ ಸ್ಥಿತಿಗತಿಗಳನ್ನು ಯಥಾವತ್ತಾಗಿ ಮುಂದುವರಿಸಲು

ಸಾಧ್ಯವಾಗುತ್ತಿಲ್ಲ. ಏಕೆಂದರೆ ವಾಸ್ತವ ಸಮಾಜದಲ್ಲಿ ಹಲವಾರು ಸಮುದಾಯಗಳ ನಡುವೆ ತಮ್ಮ ನೆಲೆಯನ್ನು ಕಂಡುಕೊಳ್ಳಲು ಕುಲ ಕಸುಬುಗಳನ್ನು ತೊರೆಯಬೇಕಾಗಿರುವುದು ಅನಿವಾರ್ಯ ಹಾಗೂ ಅಗತ್ಯವೂ ಹೌದು. ಹೀಗಾಗಿ ತಮ್ಮ ಮೂಲ ನೆಲೆಯನ್ನು ಬಿಟ್ಟು ವಾಸ್ತವ ಸಮಾಜಕ್ಕೆ ಬರುವುದರಲ್ಲಿ ಈ ಸಮುದಾಯಗಳು ಮಗ್ನರಾಗಿದ್ದಾರೆ. ದೈಹಿಕ ಸಾಮರ್ಥ್ಯವಿದ್ದೂ ಇಲ್ಲದಂತಾಗಿ ತಬ್ಬಲಿಗಳಾಗಿದ್ದಾರೆ. ಜಾತಿಯ ಹಿನ್ನೆಲೆಯಲ್ಲಿ ದಿನನಿತ್ಯದ ಜೀವನಕ್ಕೆ ಪರದಾಡುವಂತಹ ಪರಿಸ್ಥಿತಿ ಇವರಲ್ಲಿದೆ. ಹಾಗೂ ಭೂ ಒಡೆತನದ ಅಧಿಕಾರವಿಲ್ಲದೆ, ಬಂಡವಾಳವಿಲ್ಲದೆ ಮಾನಸಿಕ ಹಾಗೂ ಬೌದ್ಧಿಕ ಸಾಮರ್ಥ್ಯ ಇಲ್ಲದೇ ಇದ್ದರೂ ಶಕ್ತಿ ಸಾಮರ್ಥ್ಯದಿಂದ ಶ್ರಮಿಸಿ ಜೀವನ ಸಾಗಿಸುತ್ತಿದ್ದಾರೆ.

ಅಂದಿನ ಭೂ ಸೃಷ್ಟಿಗೆ ಮೂಲ ಕಾರಣಕರ್ತರಾದ ದಕ್ಕಲ ಮಕ್ಕಳು ಇಂದು ಭೂ ಒಡೆತನವಿಲ್ಲದೆ ಕೃಷಿ, ಕೂಲಿ, ಗಾರೆ ಕೆಲಸಗಳಿಗೆ ಒಕ್ಕಲುತನ ಎತ್ತುವಳಿ ಪ್ಲಾಸ್ಟಿಕ್ ವಸ್ತುಗಳ ಮಾರಾಟ ಚಿಂದಿ ಆಯುವುದು ಈಚಲ ಚಾಪೆ ಹೆಣೆಯುವುದು, ಪೊರಕೆ ತಯಾರಿಸುವುದು ಹೀಗೆ ಹಲವಾರು ವೃತ್ತಿಗಳನ್ನು ಕೈಗೊಂಡು ಬಂದ ಹಣದಲ್ಲಿ ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದಾರೆ. ಇನ್ನು ಸರ್ಕಾರಿ ಕೆಲಸಗಳಂತು ಇವರ ಹಣೆಯಲ್ಲಿ ಬರೆಯದ ಮಾತಾಗಿದೆ. ಈ ಕುಟುಂಬಗಳಲ್ಲಿ ಓದಿರುವುದು ಎಸ್.ಎಸ್.ಎಲ್.ಸಿ, ಪಿ.ಯು.ಸಿ ಅಷ್ಟೇ, ಅದರಲ್ಲಿ ಪಿ.ಯು.ಸಿ. ಅನುತ್ತೀರ್ಣ ವಾಗಿರುವುದೇ ಹೆಚ್ಚು. ಪದವಿಗೆ ಹೋಗುತ್ತಿರುವವರು ಒಬ್ಬರು ಅಥವಾ ಇಬ್ಬರು. ಅವರು ಸಹ ಈಗ ಪ್ರಥಮ ಪದವಿಯಲ್ಲಿ ಓದುತ್ತಿದ್ದಾರೆ. ಈ ಕುಟುಂಬಗಳಲ್ಲಿ ಇದುವರೆಗೂ ಒಬ್ಬರು ಸಹ ಸರ್ಕಾರಿ ಕೆಲಸಗಳನ್ನು ಪಡೆಯದೆ ಇರುವುದು ಈ ಕುಟುಂಬಗಳ ದುಸ್ಥಿತಿಗೆ ಕಾರಣವಾಗಿದೆ. ಅಷ್ಟೇ ಅಲ್ಲದೆ ಈ ಪ್ರದೇಶಗಳಲ್ಲಿ ದಕ್ಕಲರಿಗೆ ನೀಡಿರುವ ಜಾತಿ ಪ್ರಮಾಣ ಪತ್ರವು ಪರಿಶಿಷ್ಟ ಜಾತಿಯಾಗಿ ಮಾದಿಗ ಜಾತಿ ಎಂದೇ ನಮೂದಿಸಿದರಿಂದ ಹಲವು ಸೌಲಭ್ಯಗಳಿಂದ ವಂಚಿತರಾಗಿ ಇವರ ಜೀವನಕ್ಕೆ ದಕ್ಕೆಯಾಗಿದೆ.

ಈ ಸಮುದಾಯಗಳು ಊರ ಹೊರಗೆ ಸರ್ಕಾರಿ ಭೂ ಪ್ರದೇಶಗಳಲ್ಲಿ ಗುಡಿಸಲು ಹಾಕಿಕೊಂಡಿದ್ದು ಈ ಗುಡಿಸಲುಗಳಿಗೆ ಮೂಲ ಸೌಕರ್ಯಗಳಾದ ದೀಪಗಳು, ಬೀದಿ ದೀಪಗಳು ಇಲ್ಲದೆ ಕದ್ದು ಮುಚ್ಚಿ ಭಾಗ್ಯ ಜ್ಯೋತಿ ದೀಪಗಳನ್ನು ಹಾಕಿಕೊಂಡಿದ್ದಾರೆ. ಇದು ಸರ್ಕಾರದ ದೃಷ್ಟಿಯಲ್ಲಿ ಅಪರಾಧವಾದರೂ ಇದನ್ನು ಬಿಟ್ಟರೆ ಬೇರೆ ದಾರಿಯಿಲ್ಲ. ಒಂದು ವೇಳೆ ಸರ್ಕಾರದ ಕಡೆಯಿಂದ ದೀಪಗಳನ್ನು ಹಾಕಿಸಿಕೊಂಡರೆ ತಿಂಗಳಿಗೆ ಬಿಲ್ ಪಾವತಿಸುವ ಸಾಮರ್ಥ್ಯ ನಮ್ಮಲ್ಲಿ ಇಲ್ಲ. ಅದರಲ್ಲಿ ಕೆಲವರು ಭಾಗ್ಯಜ್ಯೋತಿ ವ್ಯವಸ್ಥೆಯು ಇಲ್ಲದೆ ಅಡಿಗೆ ಎಣ್ಣೆ ಅಥವಾ ಹೊಂಗೆ ಎಣ್ಣೆಯಿಂದ ದೀಪವನ್ನು ಹಚ್ಚಿ ಊಟವಾದ ಬಳಿಕ ಅದನ್ನು ಆರಿಸಿ ಬೀದಿಯಲ್ಲಿ ಬಂದು ಕುಳಿತಿರುತ್ತಾರೆ. ನಂತರ ಈ ಸಮುದಾಯಗಳ ವಟಾರಗಳಿಗೆ ನೀರಿನ ವ್ಯವಸ್ಥೆಯೂ ಇಲ್ಲದೆ ಕೃಷಿ ಒಡೆತನದ ತೋಟಗಳಲ್ಲಿ ಮೂರು ಕಿ.ಮೀ.ನಿಂದ ನೀರು ತರುತ್ತಾರೆ. ನೀರಿಗಾಗಿ ಪುರಸಭೆಗೆ ಎಷ್ಟೇ ಬಾರಿ ಮನವಿ ಮಾಡಿದರೂ ಇದುವರೆಗೂ ಯಾವುದೇ ವ್ಯವಸ್ಥೆ ಮಾಡಿಲ್ಲ ಎಂದು

ತಮ್ಮ ಸ್ಥಿತಿಗತಿಯನ್ನು ಹೇಳುತ್ತಾರೆ. ನಂತರ ಶ್ರೀನಿವಾಸಪುರ ಪ್ರದೇಶದಲ್ಲಿ ವಾಸಿಸುತ್ತಿರುವ ದಕ್ಕಲ ಸಮುದಾಯಗಳ ಗುಡಿಸಲುಗಳನ್ನು ತೆಗೆದು ಆ ಸ್ಥಳದಲ್ಲಿ ಅಪಾರ್ಟ್‌ಮೆಂಟ್ ಕಟ್ಟಬೇಕು ನಿಮಗೆ ಬೇಕಾದರೆ ಕಾಡು ಪ್ರದೇಶದಲ್ಲಿ ಜಾಗವನ್ನು ಮಾಡಿಕೊಡುತ್ತೇವೆ ಎಂದು ಕೆಲವು ರಾಜಕಾರಣಿಗಳು ದೌರ್ಜನ್ಯ ಮಾಡಿರುವುದು ಇವರ ನೊಂದ ಧ್ವನಿಯಲ್ಲಿ ತಿಳಿಯಬಹುದು. ಇನ್ನು ಇವರ ಸ್ನಾನದ ಬಚ್ಚಲುಗಳು ಗುಡಿಸಲಿನ ಹೊರಗಡೆ ನಾಲ್ಕು ಕೋಲುಗಳನ್ನು ನಾಟಿ ಅದರ ಸುತ್ತಾ ಸೀರೆಯಿಂದ ಸುತ್ತಿ ತಯಾರಿಸಿಕೊಂಡಿದ್ದಾರೆ ಇಲ್ಲವಾದರೆ ತೆಂಗಿನ ಗರಿಗಳನ್ನು ಹೆಣೆದು ಅದರಿಂದ ಬಚ್ಚಲು ತಯಾರಿಸಿಕೊಂಡಿದ್ದಾರೆ. ಈ ಬಚ್ಚಲು ಕೋಣೆಗಳು ಸುಂಟರಗಾಳಿ ಬಂದರೆ ಹಾರಿ ಹೋಗುತ್ತವೆ. ಇಂತಹ ಸಂದರ್ಭದಲ್ಲಿ ಗಿಡಗಳ ಮರೆ ಹೋಗಿ ಸ್ನಾನ ಮಾಡುತ್ತಾರೆ. ಹಲವು ಕುಟುಂಬಗಳಿಗೆ ಸರ್ಕಾರದ ನಿವೇಶನಗಳು ದೊರೆತರು ಅವುಗಳಿಗೆ ಮೂಲ ಸೌಕರ್ಯಗಳು ಒದಗಿಸದೆ ಇವರು ತಮ್ಮ ಕೈಯಿಂದ ಹಣವನ್ನು ಹಾಕಿಕೊಂಡು ಸ್ವಲ್ಪಮಟ್ಟಿನ ವ್ಯವಸ್ಥೆಯನ್ನು ಮಾಡಿಕೊಂಡಿರುತ್ತಾರೆ.

ದಕ್ಕಲ ಸಮುದಾಯಗಳು ಇತ್ತೀಚಿಗೆ ಪ್ಲಾಸ್ಟಿಕ್ ಮತ್ತು ಪೈಬರ್ ಸಾಮಗ್ರಿಗಳನ್ನು ಮಾರಾಟ ಮಾಡಿರುವುದು ಈ ಪ್ರದೇಶಗಳಲ್ಲಿ ಕಂಡುಬಂದಿಲ್ಲ. ಮೊದಲು ಮಾರಾಟ ಮಾಡುತ್ತಿದ್ದೆವು ಈಗ ಅದನ್ನು ಬಿಟ್ಟು ಕೂಲಿ ಕೆಲಸಗಳಲ್ಲಿ ತೊಡಗಿಕೊಂಡು ಇದ್ದೇವೆ ಎಂದು ಈ ಸಮುದಾಯಗಳು ತಿಳಿಸುತ್ತಾರೆ. ಪ್ಲಾಸ್ಟಿಕ್ ವಸ್ತುಗಳನ್ನು ಖರೀದಿಸುವುದಕ್ಕೆ ನಮ್ಮಲ್ಲಿ ಹಣವಿಲ್ಲ ಒಂದು ವೇಳೆ ತೆಗೆದುಕೊಂಡು ಮಾರಾಟ ಮಾಡಿದರೂ ಅದರಿಂದ ಬರುವ ಹಣ ಯಾವುದೇ ಲಾಭವಿಲ್ಲದೆ ಅಸಲಿಗೆ ಕೊಡಬೇಕಾಗುತ್ತದೆ. ಹಾಗಾಗಿ ಇತ್ತೀಚಿಗೆ ಆ ವೃತ್ತಿಯನ್ನು ಕೈಬಿಟ್ಟಿದ್ದೇವೆ ಎಂದು ಹೇಳುತ್ತಾರೆ. ಈ ರೀತಿಯಾಗಿ ಈ ಸಮುದಾಯಗಳ ಕುಲಕಸುಬುಗಳ ವಸ್ತು ಸ್ಥಿತಿಯು ಯಥಾವತ್ತಾಗಿ ವಿಸರ್ಜನೆಗೊಂಡು ಆರ್ಥಿಕ ಬದುಕು ದುರ್ಬಲವಾಗಿರುವುದು ಕಂಡು ಬರುತ್ತದೆ.

ಮೇಲಿನ ಶೇಕಡವಾರು ಕಸುಬುಗಳನ್ನು ಕಂಡಾಗ ಭೂ ಮಾಲೀಕರ ಅಧಿಪತ್ಯದಲ್ಲಿ ತಳವರ್ಗಗಳ ಭೂ ಸುಧಾರಣೆ ಪ್ರಯೋಗಿಕವಾಗದೆ ಆದರ್ಶ ವಿಷಯವಾಗಿ ಊಳಿಗಮಾನ್ಯ ಸ್ಥಿತಿಗೆ ಉಳಿದಿರುವುದು ಬಿಟ್ಟರೆ ಭೂ ಒಡೆತನ ಎಂಬುದು ದಕ್ಕದ ವಿಚಾರವಾಗಿದೆ. ೩೩ ಕುಟುಂಬಗಳ ಪೈಕಿ ೨ ಕುಟುಂಬಗಳಿಗೆ ಮಾತ್ರ ಅಲ್ಪಸ್ವಲ್ಪ ಜಮೀನು ಬಿಟ್ಟರೆ ಉಳಿದ ಕುಟುಂಬಗಳಿಗೆ ಸರ್ಕಾರಿ ಭೂಮಿಯೇ ಆಶ್ರಯವಾಗಿದೆ. ಭೂ ಮಾಲೀಕರ ಒಡೆತನದಲ್ಲಿ ತಳ ಸಮುದಾಯಗಳ ಅಲ್ಪಸ್ವಲ್ಪ ಭೂಮಿಯನ್ನು ಉಳಿಸಿಕೊಳ್ಳಲು ಸಾಧ್ಯವಾಗದೆ ಪೆಚ್ಚು ಮುಖ ಹಾಕಿದ್ದಾರೆ. ಭೂ ಮಾಲೀಕರ ಒಡೆತನದಲ್ಲಿ ತಳ ವರ್ಗಗಳು ಭೂ ಒಡೆತನ ತಪ್ಪಿ ಹೋಗಿ ಕೂಲಿ ಕಾರ್ಮಿಕರಾಗಿದ್ದಾರೆ. ಆದರೂ ವರ್ತಮಾನದ ವಿಚಾರದಲ್ಲಿ ಕೂಲಿಗೂ ಕಂಗಲಾಗಿರುವುದು ಕಂಡು ಬರುತ್ತದೆ. ಹೊಸ ಹೊಸ ಯಂತ್ರೋಪಕರಣಗಳಿಂದ ತಾವು ಮಾಡುವ ಕೆಲಸಗಳನ್ನು ಯಂತ್ರಗಳು ಮಾಡುವುದರಿಂದ ಮುಂದಿನ ದಿನಗಳಲ್ಲಿ ಕೂಲಿಗೂ ಪರದಾಡುವ ಪರಿಸ್ಥಿತಿ

ಎದುರಾಗಿದೆ. ಇಂತಹ ಸನ್ನಿವೇಶದಲ್ಲಿ ಅಲೆಮಾರಿಗಳ ಆರ್ಥಿಕ ಸ್ಥಿತಿಗತಿಗಳು ಉನ್ನತೀಕರಿಸಿಕೊಳ್ಳಲಾಗದೆ ಮತ್ತಷ್ಟು ಸಂಕಷ್ಟವನ್ನು ಅನುಭವಿಸುವಂತಾಗಿದೆ. ಸರ್ಕಾರದ ಸವಲತ್ತುಗಳು ಇದ್ದರೂ ಬೌದ್ಧಿಕ ಸಾಮರ್ಥ್ಯ ಆರ್ಥಿಕ ಅಸಮಾನತೆಯಿಂದ ಬಂದ ಅವಕಾಶಗಳು ಕೈ ಬಿಡುವ ಪರಿಸ್ಥಿತಿ ಹೊಂದಿದೆ. ನಂತರ ಸಾಮಾಜಿಕ ಬಡತನದೊಂದಿಗೆ ಸಮಾಜದ ಹೊಸ ಕಾನೂನು ಆರ್ಥಿಕ ನೀತಿಗಳು ಬಹಳ ಬೇಗ ಮೂಲೋತ್ಪಾದನಗೊಳಿಸಿ ಸಮಾನತೆ ಮತ್ತು ಅಭಿವೃದ್ಧಿಯನ್ನು ನಿಚ್ಚಳಗೊಳಿಸುತ್ತದೆ ಎಂಬ ನಂಬಿಕೆ ಹುಸಿಯಾಗಿದೆ.

ಹೀಗಾಗಿ ದಕ್ಕಲಿಗರು ಕೃಷಿಯನ್ನು ಆಶ್ರಯಿಸಿದರೂ ಎಲ್ಲಾ ಭಾಗಗಳಲ್ಲಿ ಒಂದೆಯಾಗಿರುವುದಿಲ್ಲ. ತಮ್ಮ ಶಕ್ತಿ ಸಾಮರ್ಥ್ಯದ ನಡುವೆ ತಮ್ಮ ಸಾಮರ್ಥ್ಯಕ್ಕೆ ಮೀರಿದ ಕೆಲಸಗಳನ್ನು ಮಾಡುತ್ತಿದ್ದಾರೆ. ಸ್ತ್ರೀಯರು ಹೊಲಗಳಲ್ಲಿ ಕಳೆ ಕೀಳುವುದು, ಪೈರು ನಾಟಿ ಮಾಡುವುದು, ಭತ್ತದ ಕೊಯಲ್ಲು, ರಸ್ತೆ ಡಾಂಬರು ಹಾಕುವುದು ಮುಂತಾದ ಕೆಲಸಗಳು ಮಾಡುತ್ತಿದ್ದಾರೆ. ಪುರುಷರು ಕಲ್ಲು ಒಡೆಯುವುದು ಮರ ಕೊಯ್ಯುವ ಕೆಲಸ, ರಸ್ತೆ ಕಾಮಗಾರಿ ಕೆಲಸಗಳು, ಗಾರೆ ಕೆಲಸ ಮುಂತಾದ ಕಸುಬುಗಳಲ್ಲಿ ತೊಡಗಿಕೊಂಡಿದ್ದು ಭೂ ಮಾಲೀಕರಿಗೆ ವ್ಯವಹರಿಸುವುದು ಕಷ್ಟವಾಗಿರುತ್ತದೆ. ಈ ಕಾರಣದಿಂದ ಮಧ್ಯವರ್ತಿಗಳ ಸಹಕಾರದಿಂದ ಸಾಗುತ್ತಿರುವ ಭೂ ಮಾಲೀಕರಿಗೆ ದೊಡ್ಡ ವರದಾನವಾಗಿದೆ. ಹಾಗಾಗಿ ತಳ ವರ್ಗಗಳ ಕೌಶಲ್ಯದಾರಿತ ಕೆಲಸ ಕಾರ್ಯಗಳ ಮೇಲಿನ ತಿಳುವಳಿಕೆ ಇಲ್ಲದೆ ಭೂ ಮಾಲೀಕರು ಕೊಡುವ ಕಡಿಮೆ ಸಂಬಳಕ್ಕೆ ತಮ್ಮ ಶ್ರಮ ವಹಿಸಿ ಆರ್ಥಿಕತೆಯನ್ನು ಹೆಚ್ಚಿಸಿಕೊಳ್ಳಲು ಸಾಧ್ಯವಾಗದೆ ಪೌಷ್ಠಿಕ ಆಹಾರ ಉತ್ತಮ ವ್ಯವಸ್ಥೆಯನ್ನು ಒದಗಿಸಿಕೊಳ್ಳಲು ಸಾಧ್ಯವಾಗದ ಮಾತಾಗಿದೆ. ಕನಿಷ್ಠ ಮೂಲ ಸೌಕರ್ಯಗಳನ್ನು ಮಾಡಲಾಗದ ಸ್ಥಿತಿ ನಮ್ಮದಾಗಿದೆ ಎಂದು ಈ ಸಮುದಾಯಗಳ ಅಳಲಾಗಿದೆ. ಇಂತಹ ಸ್ಥಿತಿಯಲ್ಲಿ ಈ ಸಮುದಾಯಗಳು ಸುಸ್ಥಿತಿಯಿಂದ ಬದುಕುವಂತಹ ದಿನಗಳು ಇನ್ನಷ್ಟು ದೂರವಿರಬಹುದು ಎಂಬ ಪ್ರಶ್ನೆಯಾಗಿದೆ. ಮುಂದಿನ ಭವಿಷ್ಯದಲ್ಲಿ ಅವರು ಕನಿಷ್ಠ ಮಟ್ಟದ ಜೀವನ ನಡೆಸಲು ಅರ್ಹರಾಗಲಿ ಎಂಬುವುದು ಈ ಅಧ್ಯಯನದ ನಿರೀಕ್ಷೆಯಾಗಿದೆ.

ಒಟ್ಟಿನಲ್ಲಿ ಈ ಸಮುದಾಯಗಳ ಕಸುಬುಗಳನ್ನು ಗಮನಿಸಿದಾಗ ತಳ ಸಮುದಾಯಗಳ ಹುಟ್ಟು ಕುಲ ಕಸುಬುಗಳು ಇವರ ಪುರಾಣ ಹಿನ್ನೆಲೆಗಳ ಮುಖಾಂತರ ತಿಳಿಯಬಹುದು. ಇವರು ಹಾಡುವ ಗಂಗಭಾರತ ಈ ಸಮುದಾಯಗಳ ಹುಟ್ಟಿಗೆ ಕಾರಣವಾಗಿದೆ. ನಂತರ ತಮ್ಮ ಮೂಲ ಕಸುಬುಗಳಲ್ಲಿ ಇದು ಸಹ ಒಂದಾಗಿ ಪರಿಗಣಿಸಿ ತಮ್ಮ ಕುಲ ಬಂಧುಗಳಾದ ಮಾದಿಗರ ಕೇರಿಯಲ್ಲಿ ಇಡೀ ರಾತ್ರಿ ಹಾಡಿ ಭಿಕ್ಷೆಯನ್ನು ಬೇಡಿ ಬದುಕನ್ನು ದೂಡುತ್ತಿದ್ದಾರೆ. ಇದು ಇವರಿಗೆ ಮೂಲ ಆಧಾರವಾಗಿದೆ. ಇದರಿಂದ ಈ ಸಮುದಾಯಗಳು ತಮ್ಮನ್ನು ಪರಿಚಯಿಸುವುದಕ್ಕೂ ಹಾಗೂ ಕುಲ ವೃತ್ತಿಯನ್ನು ಕುಲ ಬಂಧುಗಳಿಂದ ಮಾದಿಗರಿಗೆ ತಿಳಿಸುವುದಕ್ಕೆ ಉಪಯುಕ್ತವಾಗಿದೆ. ನಂತರ ಈ ಸಮುದಾಯಗಳು ಗಂಗಭಾರತದ ಪುರಾಣವನ್ನು ಕರ್ನಾಟಕ

ಮೂಲಕ ಪ್ರದರ್ಶಿಸಿ ಕಥೆಯ ಹಿನ್ನೆಲೆಯನ್ನು ಹೇಳಿ ತಮ್ಮ ಸಮುದಾಯಗಳು ಮಾದಿಗರ ಉಪಕುಲಗಳು ಎಂದು ತಿಳಿಸಿ ಅವರಿಂದ ಭಿಕ್ಷೆಯನ್ನು ಸ್ವೀಕರಿಸುವ ಪದ್ಧತಿ ದಕ್ಕಲ ಕುಟುಂಬಗಳದ್ದಾಗಿದೆ. ಹೀಗಾಗಿ ಜಾಂಬವ ಪುರಾಣ ಇವರ ಮೂಲ ಆಧಾರವಾಗಿದೆ. ಇತ್ತೀಚಿಗೆ ಸ್ವಲ್ಪ ಬದಲಾವಣೆಗಳಿಂದ ಗಂಗಭಾರತವನ್ನು ಹಾಡುವವರು ಕಡಿಮೆಯಾಗಿದ್ದು ಯುವ ಜನತೆಯಲ್ಲಿ ಆಸಕ್ತಿ ಇಲ್ಲದಿರುವುದು ಕಂಡುಬರುತ್ತದೆ. ಈ ಸಮುದಾಯಗಳ ಪುರಾಣಗಳು ಮಾತ್ರ ಹಿರಿಯರಿಗೆ ಸೀಮಿತವಾಗಿದೆ ಎಂಬ ಅಂಶ ಕ್ಷೇತ್ರಕಾರ್ಯದಲ್ಲಿ ತಿಳಿದು ಬಂದಿದೆ. ಯುವ ಜನರು ಹಲವು ಕಸುಬುಗಳಲ್ಲಿ ತೊಡಗಿಕೊಂಡು ತಮ್ಮ ಮೂಲ ಪುರಾಣಗಳ ಬಗ್ಗೆ ಕಿಂಚಿತ್ತು ಆಸಕ್ತಿ ಹೊಂದಿಲ್ಲ. ತಮ್ಮ ಹಿರಿಯರು ಜಾಂಬವ ಪುರಾಣವನ್ನು ನಂಬಿ ಅದನ್ನು ಕುಲ ಕಸುಬಾಗಿ ಸ್ವೀಕರಿಸಿ ಅವರ ಹಿರಿಯ ಪೀಳಿಗೆಯವರು ಬಳುವಳಿಯಾಗಿ ನೀಡಿದರು. ಅದನ್ನು ಕಾಪಾಡಿಕೊಂಡು ಅದರ ಮುಖಾಂತರ ಈ ಸಮುದಾಯವನ್ನು ಪೋಷಿಸುತ್ತಿದ್ದರು. ಆದರೆ ಸಮಾಜ ಪರಿವರ್ತನೆಯಿಂದ ಅದರಿಂದ ಹೊಟ್ಟೆ ತುಂಬಿಸಿಕೊಳ್ಳಲು ಸಾಧ್ಯವಿಲ್ಲ. ಹಾಗಾಗಿ ಇತರೆ ಕಸುಬುಗಳಲ್ಲಿ ತೊಡಗಿರುವುದರಿಂದ ಅದರ ಬಗ್ಗೆ ಗಮನ ಹರಿಸಿಲ್ಲ ಎಂದು ಈ ಸಮುದಾಯಗಳು ಹೇಳುತ್ತವೆ.

### ೨.೩. ಆಹಾರ ಪದ್ಧತಿ

ಆದಿಮಾನವ ಭೂಮಿಯ ಮೇಲೆ ಜನ್ಮ ತಾಳಿದಾಗಿನಿಂದ ತನ್ನ ಹೊಟ್ಟೆ ಪಾಡಿಗಾಗಿ ಕಾಡು ಮೇಡುಗಳನ್ನು ಅಲೆಯುತ್ತಾ ತನಗೆ ಸಿಕ್ಕ ಸಿಕ್ಕ ಗಡ್ಡೆ, ಗೆಣಸು ಹಾಗೂ ಪ್ರಾಣಿಗಳನ್ನು ಬೇಟೆಯಾಡಿ ತನ್ನ ಹೊಟ್ಟೆಯನ್ನು ತುಂಬಿಸಿಕೊಳ್ಳುತ್ತಿದ್ದ. ಇಂತಹ ಸಂದರ್ಭದಲ್ಲಿ ಜಾತಿ, ಜನಾಂಗ ಎಂದು ಪರಿಗಣಿಸದೇ ಎಲ್ಲ ನಮ್ಮ ಪರಿವಾರ ಎಂದು ಭಾವಿಸಿ ಆಹಾರವನ್ನು ಸಂಗ್ರಹಿಸಿ ಎಲ್ಲರೂ ಹಂಚಿಕೊಂಡು ಜೀವನ ಸಾಗಿಸುತ್ತಿದ್ದರು. ಸಮಾಜ ಬದಲಾದಂತೆ ಮಾನವನು ಬುದ್ಧಿ ಭ್ರಮಣೆಯಾಗಿ ಹಲವು ಗುಂಪುಗಳಾಗಿ ವಿಂಗಡಣೆಯಾಗಿ ಹಲವು ಜಾತಿ ಜನಾಂಗಗಳು ಗುಂಪುಗಳಾಗಿ ಹೊರ ಹೊಮ್ಮಿದ್ದಾರೆ. ಹೀಗೆ ವ್ಯಕ್ತಿಗತ ಜಾತಿ ಜನಾಂಗಗಳಿಗೆ ತಕ್ಕಂತೆ, ಘನತೆ ಗೌರವಗಳಿಗೆ ತಕ್ಕಂತೆ ಹಾಗೂ ಒಂದು ಜನಾಂಗದ ಜೀವನಶೈಲಿ ಆ ಜನಾಂಗದ ಸಂಸ್ಕೃತಿ ಮತ್ತು ಪರಂಪರೆಯಲ್ಲಿನ ಮೌಲ್ಯಗಳನ್ನು ಆಧರಿಸಿ ರೂಪುಗೊಂಡಿರುತ್ತದೆ. ಜನಾಂಗದ ಸಂಸ್ಕೃತಿಯಲ್ಲಿನ ಆಂತರಿಕ ಮತ್ತು ಬಾಹ್ಯ ಒತ್ತಡಗಳಿಂದಾಗಿ ಬದಲಾಗುವ ಸನ್ನಿವೇಶಗಳಿಗೆ ಆಯಾ ಸಂದರ್ಭಕ್ಕೆ ತಕ್ಕಂತೆ ಜಾತಿ ಜನಾಂಗಗಳ ಜೀವನ ವಿಧಾನವು ಮಾರ್ಪಡಾಗುತ್ತದೆ. ಹಾಗೆ ಎಲ್ಲಾ ಜಾತಿ ಜನಾಂಗಗಳ ಕಟ್ಟ ಕಡೆಯ ಜಾತಿ ದಕ್ಕಲರು ಇವರ ಜೀವನ ವಿಧಾನ ಮತ್ತು ಸಂಗ್ರಹಿಸುವ ಆಹಾರ ವಿಧಾನವು ಪ್ರತ್ಯೇಕವಾಗಿದೆ. ಏಕೆಂದರೆ ದಕ್ಕಲರು ಮೂಲತಃ ಯಾವುದೇ ಭೂಮಿ ಹಾಗೂ ಆಸ್ತಿಯನ್ನು ಹೊಂದಿರದೆ ತಮ್ಮ ಪಾರಂಪರಿಕ ಮೂಲ ಕಸುಬು ಭಿಕ್ಷೆಯನ್ನು ಬೇಡಿ ತಮ್ಮ ಜೀವನ ಸಾಗಿಸುವ ಸಾಂಸ್ಕೃತಿಕ ವಿಶಿಷ್ಟ ಸಮುದಾಯವಾಗಿದೆ.

ದಕ್ಕಲ ಸಮುದಾಯಗಳು ಮೂಲತಃ ಸಸ್ಯಾಹಾರಿಗಳು ಹೌದು, ಮಾಂಸಾಹಾರಿಗಳು ಹೌದು. ಎರಡನ್ನು ಸಮಾನವಾಗಿ ಸೇವಿಸುತ್ತಾರೆ. ಇವರ ಕುಲ ಕಸುಬು ಭಿಕ್ಷೆ ಬೇಡಿ ತಿನ್ನುವುದು. ಇದು ಪೌರಾಣಿಕ ಹಿನ್ನೆಲೆ ಪಾರಂಪರಿಕವಾದ ಜಾಂಬವಂತ ನೀಡಿದ ವರವಾಗಿದೆ ಎಂದು ಈ ಸಮುದಾಯಗಳು ಹೇಳುತ್ತಾರೆ. ಹಾಗಾಗಿ ಭಿಕ್ಷೆ ಬೇಡುವುದೇ ಪ್ರಧಾನ. ಆಹಾರ ಪೋಷಣಾ ಮಾಧ್ಯಮವೂ ಆಗಿದೆ. ದಕ್ಕಲರು ಮಾದಿಗರಲ್ಲಿನ ಒಂದು ಉಪಪಂಗಡ. ಮಾದಿಗರ ದಕ್ಕೆಯಿಂದ ಹುಟ್ಟಿದ್ದು, ಇವರ ಪ್ರಧಾನ ಕುಲ ಬಂಧುಗಳು ಮಾದಿಗರು. ಜಾಂಬವಂತನ ವರ ಪ್ರಧಾನವಾದರಿಂದ ಅದನ್ನು ಹಕ್ಕನ್ನಾಗಿಸಿ ಹಾಗೂ ಸಂಪನ್ಮೂಲಗಳ ಸಾಧನವಾಗಿಸಿದ್ದಾರೆ. ಹೀಗೆ ಈ ಸಮುದಾಯಗಳು ಕೇವಲ ಮಾದಿಗರ ಕೇರಿಗಳಲ್ಲಿ ಭಿಕ್ಷೆಯನ್ನು ಬೇಡುವ ಕಟ್ಟು ನಿಟ್ಟಿನ ಸಾಂಸ್ಕೃತಿಕ ಪದ್ಧತಿಯಾಗಿದೆ. ಹಾಗಾಗಿ ಮಾದಿಗರ ಕೇರಿಗಳಲ್ಲಿ ಭಿಕ್ಷೆ ಬೇಡಿ ತಮ್ಮ ಕುಟುಂಬಗಳನ್ನು ಪೋಷಿಸುತ್ತಿದ್ದಾರೆ.

ಈ ಸಮುದಾಯಗಳು ಒಂದು ಕಡೆ ನೆಲೆ ನಿಲ್ಲದೆ ಸ್ವಲ್ಪ ದಿನಗಳ ಮಟ್ಟಿಗೆ ಗುಡಾರಗಳನ್ನು ಹಾಕಿಕೊಂಡು ತಮ್ಮ ಕುಲ ವೃತ್ತಿಯನ್ನು ಪ್ರಾರಂಭಿಸುತ್ತಾರೆ. ಒಂದು ವೇಳೆ ಮಾದಿಗರ ಕೇರಿಗಳಲ್ಲಿ ಆಹಾರ ಸಂಗ್ರಹಿಸಬೇಕಾದರೆ ತಮ್ಮ ಮೂಲವನ್ನು ಆ ಸಮುದಾಯಗಳಿಗೆ ಹೇಳ ಬೇಕಾಗುತ್ತದೆ. ಇಲ್ಲವಾದರೆ ಮಾದಿಗರು ನಿಮ್ಮ ನಡುವೆ ನಮ್ಮಗೆ ಯಾವುದೇ ಸಂಬಂಧವಿಲ್ಲ ಎಂದು ಭಿಕ್ಷೆಯನ್ನು ನೀಡುವುದಿಲ್ಲ. ಹಾಗಾಗಿ ದಕ್ಕಲ ಸಮುದಾಯಗಳಲ್ಲಿ ಸ್ವಲ್ಪಮಟ್ಟಿಗೆ ಎಲ್ಲರೂ ಜಾಂಬವ ಪುರಾಣವನ್ನು ತಿಳಿದುಕೊಂಡಿರುತ್ತಾರೆ. ಜಾಂಬವಪುರಾಣವು ಮಾದಿಗರಿಗಿಂತ ದಕ್ಕಲಿಗರಿಗೆ ಹೆಚ್ಚಾಗಿ ತಿಳಿದಿದೆ ಇದು ಮೂಲ ವ್ಯಕ್ತಿಯಾಗಿರುವುದರಿಂದ ಇವರು ಅಗತ್ಯವಾಗಿ ತಿಳಿದುಕೊಳ್ಳಲೇ ಬೇಕಾಗುತ್ತದೆ. ಹೀಗೆ ಪೌರಾಣಿಕ ಹಿನ್ನೆಲೆಯನ್ನು ಹೇಳಿ ನಾವು ನಿಮ್ಮ ಮಕ್ಕಳು ನಿಮ್ಮ ದಕ್ಕೆಯ ಮಕ್ಕಳು ನಮಗೆ ಭಿಕ್ಷೆಯನ್ನು ನೀಡಿ ಎಂದು ಎಲ್ಲರಿಗೂ ಕೇಳುವ ಹಾಗೆ ಕೂಗುತ್ತಾರೆ. ಆಗ ಮಾದಿಗರು ನಮ್ಮ ಕುಲ ಮಕ್ಕಳು ಬಂದಿದ್ದಾರೆ ಎಂದು ಅನ್ನ, ಮುದ್ದೆ, ಸಾರು ನೀರು ಕಾಣಿಕೆಯನ್ನು ತಂದು ತಮ್ಮ ಘನತೆಗೆ ತಕ್ಕಂತೆ ಭಿಕ್ಷೆಯನ್ನು ನೀಡುತ್ತಾರೆ. ಕೆಲವು ಸಂದರ್ಭಗಳಲ್ಲಿ ಕುರಿ ಕೋಳಿಗಳನ್ನು ದವಸ ಧಾನ್ಯಗಳನ್ನು ನೀಡುತ್ತಾರೆ. ಆಹಾರವನ್ನು ಸಂಗ್ರಹಿಸಿ ತಮ್ಮ ಗುಡಾರಗಳಿಗೆ ಹೋಗುತ್ತಾರೆ. ಈ ಸಮುದಾಯಗಳು ಮಾದಿಗರ ಕೇರೆಗಳಲ್ಲಿ ಭಿಕ್ಷೆ ಬೇಡುವುದಕ್ಕೆ ಕೆಲವು ನಿಯಮಗಳಿವೆ. ಒಂದು ನಿರ್ದಿಷ್ಟ ಪ್ರದೇಶವನ್ನು ಒಳಗೊಂಡಿದ್ದು ಆ ಪ್ರದೇಶದಲ್ಲಿ ಅಷ್ಟೇ ಆ ಸಮುದಾಯ ಭಿಕ್ಷೆ ಬೇಡಬೇಕು ಆ ಪ್ರದೇಶ ಬಿಟ್ಟು ಬೇರೆ ಕಡೆ ಹೋಗಿ ಬೇಡುವ ಹಾಗಿಲ್ಲ. ಹೀಗೆ ಒಕ್ಕಲುತನ ಮಾಡುವ ಮಾದಿಗರ ಮನೆಗಳು ದಕ್ಕಲರ ಕಷ್ಟ ಸುಖಗಳಿಗೆ ಹೆಚ್ಚಾಗಿ ಸ್ಪಂದಿಸುತ್ತಾರೆ. ನಂತರ ಎತ್ತುವಳಿ ಪದ್ದತಿಯು ದಕ್ಕಲರ ಆಹಾರ ಸಂಗ್ರಹಣೆಯ ಪ್ರಮುಖ ಕಸುಬು ಆಗಿದೆ.

ದಕ್ಕಲರು ಆಹಾರ ಸಂಗ್ರಹಣೆಗಾಗಿ ಮಾದಿಗರ ಕೇರಿಗಳು ಬಿಟ್ಟು ಬೇರೆ ಜಾತಿ, ಜನಾಂಗಗಳಲ್ಲಿ ಕೈ ಚಾಚುವುದಿಲ್ಲ. ಒಂದು ವೇಳೆ ಮಾದಿಗರು ಆಹಾರವನ್ನು ನೀಡದೇ ಇದ್ದರೆ ಅವರ

ಹೆಸರನ್ನು ಹೇಳಿಕೊಂಡು ಸಾಯುತ್ತಾರೆ ಹೊರತು ಬೇರೆ ಜನಾಂಗದಲ್ಲಿ ಭಿಕ್ಷೆ ಬೇಡುವುದಿಲ್ಲ. ಹೀಗಾಗಿ ದಕ್ಕಲರು ಮಾದಿಗರ ಮನೆಯಲ್ಲಿ ಭಿಕ್ಷೆ ಕೇಳಿದಾಗ ಅವರು ಭಿಕ್ಷೆ ನೀಡದೇ ಇದ್ದರೆ ಮಾದಿಗರ ಮೇಲೆ ತಮ್ಮ ಹಕ್ಕನ್ನು ಚಲಾಯಿಸುತ್ತಾರೆ. ಅವರಿಗೆ ಶಾಪವನ್ನು ಕೊಟ್ಟು ಅವರು ಹೋಗುವ ದಾರಿಗೆ ಕಪ್ಪು ಹಗ್ಗವನ್ನು ಹಾಕುತ್ತಾರೆ. ಆ ಹಗ್ಗವನ್ನು ದಾಟಿ ಮಾದಿಗರು ಮುಂದೆ ಹೋಗುವ ಹಾಗಿಲ್ಲ. ಅವರು ಮುಂದೆ ಹೋಗಬೇಕಾದರೆ ಈ ಸಮುದಾಯಗಳಿಗೆ ಭಿಕ್ಷೆಯನ್ನು ನೀಡಿ ಅವರಿಂದ ಒಳ್ಳೆಯವರು ಎಂದು ಅನಿಸಿಕೊಂಡ ಮೇಲೆ ದಾರಿಗೆ ಅಡ್ಡ ಹಾಕಿದ ಹಗ್ಗವನ್ನು ತೆಗೆಯುತ್ತಾರೆ ನಂತರ ಮಾದಿಗರು ಮುಂದೆ ಹೋಗಬೇಕಾಗುತ್ತದೆ. ಅಷ್ಟೇ ಅಲ್ಲದೆ ತಮ್ಮ ಕುಲಗಳ ಹಿರಿಯ ವ್ಯಕ್ತಿಗಳನ್ನು ಕರೆಸಿ ಪಂಚಾಯಿತಿಯನ್ನು ಇಡುತ್ತಾರೆ. ಯಾರು ಭಿಕ್ಷೆ ನೀಡಿಲ್ಲವೋ ಆ ಮನೆಯವರಿಗೆ ದಂಡವನ್ನು ವಿಧಿಸಿ ನಂತರ ಭಿಕ್ಷೆಯ ಜೊತೆಗೆ ದಂಡವನ್ನು ನೀಡಬೇಕು ಎಂದು ತೀರ್ಮಾನವಾಗುತ್ತದೆ. ಹೀಗೆ ದಕ್ಕಲರ ಸಾಂಸ್ಕೃತಿಕ ಆಹಾರ ಸಂಗ್ರಹಣೆಯ ವಿಧಾನವು ವ್ಯಕ್ತಿಗತ ಹಕ್ಕಾಗಿ ಚಲಾಯಿಸುತ್ತಾರೆ. ಹೀಗಾಗಿ ಮಾದಿಗರು ತಮ್ಮ ದಕ್ಕಲ ಮಕ್ಕಳು ಬಂದರೆ ತಮ್ಮಲ್ಲಿ ಭಿಕ್ಷೆ ಕೊಡುವುದಕ್ಕೆ ಏನು ಇಲ್ಲವೆಂದರೂ ಅವರನ್ನು ಬರೀ ಕೈಯಲ್ಲಿ ವಾಪಸ್ಸು ಕಳಿಸದೇ ಒಂದು ಲೋಟ ನೀರನ್ನಾದರೂ ಕೊಟ್ಟು ಕಳಿಸುತ್ತಾರೆ ಹೊರತು ಬರಿಗೈಯಿಂದ ಕಳುಹಿಸುವುದಿಲ್ಲ. ಹೀಗೆ ದಕ್ಕಲರು ಮಾದಿಗರ ಮನೆಗಳಲ್ಲಿ ಭಿಕ್ಷೆಯನ್ನು ಬೇಡಿ ಆಹಾರವನ್ನು ಸಂಗ್ರಹಿಸುತ್ತಾರೆ.

ಸಮಕಾಲಿನ ಸಮಾಜದಲ್ಲಿ ದಕ್ಕಲರಲ್ಲಿ ಸ್ವಲ್ಪಮಟ್ಟಿಗೆ ಮಾರ್ಪಡುಗಳನ್ನು ಮಾಡಿಕೊಂಡು ತಮ್ಮ ಮೂಲ ಕುಲ ಕಸುಬನ್ನು ಬಿಟ್ಟು ಇತರೆ ಕಸುಬುಗಳಲ್ಲಿ ತೊಡಗಿಕೊಂಡು ಜೀವನ ಸಾಗಿಸುತ್ತಿದ್ದಾರೆ. ಕೇವಲ ಮಾದಿಗರನ್ನೇ ನಂಬಿ ಭಿಕ್ಷಾಟನೆಯಿಂದ ಹೊಟ್ಟೆ ತುಂಬಿಸಿಕೊಳ್ಳಲು ಸಾಧ್ಯವಾಗದೆ ಕೂಲಿ ಕೆಲಸಗಳಲ್ಲಿ ತೊಡಗಿಕೊಂಡು ಭೂ ಎತ್ತುವಳಿ ಮಾಡಿ ಜನ ಸಾಮಾನ್ಯರಂತೆ ಬದುಕುವುದಕ್ಕೆ ಮುಂದಾಗಿದ್ದಾರೆ. ಎಲ್ಲಾ ಜಾತಿ ಜನಾಂಗಗಳ ಹಾಗೆ ಯಾವ ಆಹಾರ ಪದ್ದತಿಯನ್ನು ಒಳಗೊಂಡಿದೆಯೋ, ಅದೇ ಆಹಾರವನ್ನು ತಮ್ಮ ಮನೆಗಳಲ್ಲಿ ಬೇಯಿಸಿಕೊಂಡು ತಿನ್ನುತ್ತಿದ್ದೇವೆ ಎಂದು ಹೇಳುತ್ತಾರೆ. ನಾಗರಿಕತೆಗೆ ಹೊಂದಿಕೊಂಡು ನಾವು ಬದುಕಬೇಕು ಎಂದು ಭಿಕ್ಷಾಟನೆಯನ್ನು ಬಿಟ್ಟಿದ್ದೇವೆ. ಆದರೂ ಕೆಲವರು ತಮ್ಮ ಕುಲ ವೃತ್ತಿಯನ್ನು ಬಿಡದೆ ಕೂಲಿಯ ಜೊತೆಗೆ ಭಿಕ್ಷೆಯನ್ನು ಬೇಡುತ್ತಿದ್ದಾರೆ. ಭಿಕ್ಷೆಯನ್ನು ಬೇಡುವವರ ಸಂಖ್ಯೆ ಶೇ. ೨ರಷ್ಟು ಇರಬೇಕು ಎಂದು ಹೇಳುತ್ತಾರೆ. ಇವರ ವಿಶೇಷವಾದ ಆಹಾರ ಪದ್ಧತಿ ಏನೂ ಇಲ್ಲ. ಎಲ್ಲರೂ ಏನು ಅಡುಗೆ ಮಾಡುತ್ತಾರೋ ಆ ಆಹಾರವನ್ನೇ ಮಾಡುತ್ತೇವೆ. ಆದರೆ ಹೆಚ್ಚಾಗಿ ಮುದ್ದೆಯನ್ನು ಮಾಡುತ್ತೇವೆ ನಮ್ಮಲ್ಲಿ ಅಕ್ಕಿಯನ್ನು ಕೊಂಡುಕೊಳ್ಳುವಷ್ಟು ಸಾಮರ್ಥ್ಯ ಇಲ್ಲವಾದರಿಂದ ಸರ್ಕಾರದಿಂದ ಕೊಡುವ ಅಕ್ಕಿಯನ್ನು ಮುದ್ದೆಗೆ ಬಳಸಿಕೊಳ್ಳುತ್ತೇವೆ. ರಾಗಿಯನ್ನು ಕೂಲಿ ಕೆಲಸಕ್ಕೆ ಹೋಗಿ ಅವರು ಕೊಟ್ಟ ರಾಗಿಯನ್ನು ನಂತರ ನಾವು ಬೇರೆಯವರ ಜಮೀನುಗಳನ್ನು ವಾರಕ್ಕೆ ಮಾಡಿಕೊಂಡು ರಾಗಿಯನ್ನು ಬೆಳೆಯುತ್ತೇವೆ. ಹಾಗಾಗಿ ನಮ್ಮ ಮನೆಗಳಲ್ಲಿ ರಾಗಿ ಮುದ್ದೆ, ರಾಗಿ ರೊಟ್ಟಿಯನ್ನು

ಹೆಚ್ಚಾಗಿ ಮಾಡುತ್ತೇವೆ. ಹಬ್ಬ ಹರಿದಿನಗಳಲ್ಲಿ ಮಾತ್ರ ಸ್ವಲ್ಪಮಟ್ಟಿಗೆ ವಿಶೇಷವಾದ ಅಡುಗೆ. ಹೋಳಿಗೆ, ಕಜ್ಜಾಯ, ಪಾಯಸ ಹೀಗೆ ಎಲ್ಲಾ ಸಮುದಾಯಗಳ ಹಾಗೆ ನಮ್ಮ ಮನೆಗಳಲ್ಲಿ ಮಾಡುತ್ತೇವೆ ಎಂದು ಈ ಭಾಗದ ಸ್ತ್ರೀಯರು ಹೇಳುತ್ತಾರೆ. ಹೀಗಾಗಿ ಎಲ್ಲರ ಹಾಗೆ ಸಮಾನರಾಗಿ ಬದುಕುವುದು ಈ ಸಮುದಾಯಗಳ ಕನಸಾಗಿದೆ.

**ದಕ್ಕಲರ ಮಾಂಸದ ಊಟ**

ಅಸ್ಪೃಶ್ಯ ಜಾತಿ ವರ್ಗಗಳಲ್ಲಿ ಅತ್ಯಂತ ಕೆಳಸ್ತರ ಹಾಗೂ ಮಾದಿಗರ ಉಪ ಪಂಗಡಗಳಲ್ಲಿ ಒಂದಾದ ದಕ್ಕಲರು ಸಹಜವಾಗಿಯೇ ಮಾಂಸಾಹಾರಿಗಳು, ಮಾಂಸಾಹಾರ ಎಂಬುವುದು ದಕ್ಕಲರ ಪುರಾಣದ ಹಿನ್ನೆಲೆ ಹಾಗೂ ಆಚರಣೆಗಳಲ್ಲಿ ಕೂಡ ತುಂಬಾ ಪ್ರಧಾನ ಅಂಶವಾಗಿಯೇ ಕಂಡುಬರುತ್ತದೆ. ಇವರ ಆಹಾರದ ಅಭಿರುಚಿ ಅವರ ಪುರಾಣದ ಹಿನ್ನೆಲೆಯೇ ಇರಬಹುದು. ಹೀಗೆ ಪುರಾಣದ ಕಲ್ಪನೆಗಳು ಆಹಾರ ಅಭಿರುಚಿಯನ್ನು ಹೆಚ್ಚು ಸಮರ್ಥಿಸುತ್ತಿರುವಂತಿದೆ. ಅಷ್ಟೇ ಅಲ್ಲದೆ ದಕ್ಕಲರು ಮಾಂಸ ಪ್ರಿಯರು ಎಂದು ಇವರ ಚಾರಿತ್ರಿಕತೆ ತಿಳಿಸುತ್ತದೆ. ನಂತರ ಮಾಂಸದ ಜೊತೆಗೆ ಮದ್ಯವು ಸಹ ಇವರ ಪ್ರಿಯವಾದ ಆಹಾರವಾಗಿ ಸೇವಿಸುತ್ತಾರೆ.

ಈ ಸಮುದಾಯಗಳು ಮಾಂಸಕ್ಕಾಗಿ ಕುರಿ, ಕೋಳಿ, ಹಂದಿ, ಮೊಲ, ಅಳಿಲು ಬಹುತೇಕ ಎಲ್ಲಾ ರೀತಿಯ ಮಾಂಸದ ಜೊತೆಗೆ ಗೋಮಾಂಸವು ಹೆಚ್ಚು ಬಳಸುತ್ತಿದ್ದರು. ದಕ್ಕಲರಲ್ಲಿ ಗೋಮಾಂಸಕ್ಕೆ ಇವರ ಪುರಾಣದ ಕಥೆಯೇ ಸಾಕ್ಷಿಯಾಗಿದೆ. ಶಿವ-ಪಾರ್ವತಿಯ ಕಥೆಯಲ್ಲಿ ಬರುವ ಪಾರ್ವತಿಯ ಮುಟ್ಟು ಬಟ್ಟೆಯಲ್ಲಿ ಹುಟ್ಟಿದ ಹೊಲೆಯ ಚನ್ನಯ್ಯ ಕಾಮಧೇನುವಿನ ಹಾಲಿನ ಕೆನೆಯ ರುಚಿ ಸವಿದು ಈ ಕೆನೆಯೇ ಇಷ್ಟು ರುಚಿಯಿರಬೇಕಾದರೆ ಇನ್ನು ಕಾಮಧೇನುವಿನ ಮಾಂಸಖಂಡದ ರುಚಿ ಹೇಗಿರಬೇಡ ಎಂದು ಯೋಚಿಸಿ ಕಾಮಧೇನುವನ್ನು ಮುಟ್ಟಿದ ಕೂಡಲೇ ಅದು ಸಾಯುತ್ತದೆ. ಆಗ ಜಾಂಬವಂತ ಬಂದು ಅದನ್ನು ಎಬ್ಬಿಸಲು ಪ್ರಯತ್ನಿಸಿದರೂ ಅದು ಏಳುವುದಿಲ್ಲ. ನಂತರ ಇಬ್ಬರು ಕಾಮಧೇನುವನ್ನು ಕೊಯ್ದು ಮಾಂಸವನ್ನು ಬೇಯಿಸುತ್ತಾರೆ. ಇದು ಒಂದು ವಿಧದ ಕಥೆಯಾದರೆ, ಮತ್ತೊಂದು ನಂಬಿಕೆಯ ಪ್ರಕಾರ ಮೂಲ ಚನ್ನಯ್ಯ ಕಾಮಧೇನುವಿನ ಹಾಲು, ಮೊಸರು, ತುಪ್ಪವನ್ನು ಅನುಭವಿಸುವಾಗ ಕಾಮಧೇನು ಐದನೇ ಬೆಳೆಯಾಗಿ ನನ್ನ ಮಾಂಸವನ್ನು ತಿಂದುಹಾಕು ಎಂದಾಗ ಮಾಲ ಚನ್ನಯ್ಯ ಇವೇ ಇಷ್ಟು ಚನ್ನಾಗಿ ಇರಬೇಕಾದರೆ ಕಾಮಧೇನುವಿನ ಮಾಂಸ ಇನ್ನೆಷ್ಟು ರುಚಿ ಇರುತ್ತದೆ ಎಂದು ಕಾಮಧೇನುವನ್ನು ತುಂಡು ತುಂಡಾಗಿ ಕತ್ತರಿಸುವಾಗ ಜಾಂಬವಂತನನ್ನು ಕರೆದು ಇಬ್ಬರು ಮಾಂಸವನ್ನು ಪಾತ್ರೆಯಲ್ಲಿ ಹಾಕಿ ಬೇಯಿಸುತ್ತಾರೆ. ಆಗ ಅಲ್ಲಿಗೆ ದೇವತೆಗಳು ಬರುತ್ತಾರೆ ಮಾಂಸ ಬೇಯಿಸುವಾಗ ಪಾತ್ರೆಯಿಂದ ಮೂರು ತುಣುಕುಗಳು ಕೆಳಗೆ ಬಿದ್ದಾಗ ತೊಳೆದು ಪಾತ್ರೆಯಲ್ಲಿ ಹಾಕುತ್ತಾರೆ. ಆಗ ದೇವತೆಗಳು ಮಾಂಸವನ್ನು ತಿನ್ನದೆ ಹೋರಟು ಹೋಗುತ್ತಾರೆ. ನಂತರ ಮಾಲ ಚನ್ನಯ್ಯ ಮತ್ತು ಜಾಂಬವಂತನು ಕಾಮಧೇನುವಿನ ಮಾಂಸವನ್ನು ತಿನ್ನುತ್ತಾರೆ. ಹೀಗೆ ಈ ಪುರಾಣದ ಹಿನ್ನೆಲೆಯಲ್ಲಿ ಇವರು ಮಾಂಸ ಪ್ರಿಯರು ಎಂದು ತಿಳಿಯುತ್ತದೆ.

ನಂತರ ಅರುಂಧತಿಯನ್ನು ವಿವಾಹವಾಗಲು ವಸಿಷ್ಠ ಮಹರ್ಷಿ ಮಾದಿಗರ ಕೇರಿಗೆ ಬಂದು ಅರುಂಧತಿಯ ರೂಪವನ್ನು ಕಂಡು ಹಾಗೂ ಇವನು ಇಟ್ಟು ಪರೀಕ್ಷೆಯಲ್ಲಿ ಅರುಂಧತಿ ಗೆಲ್ಲುತ್ತಾಳೆ. ಆಗ ವಶಿಷ್ಠ ಅರುಂಧತಿಯನ್ನು ಮದುವೆ ಮಾಡಿಕೊಳ್ಳಬೇಕು ಎಂದು ಹಟ ಹಿಡಿದು ಕೂರುತ್ತಾನೆ. ಅರುಂಧತಿ ಗಾಬರಿಯಾಗಿ ಬ್ರಹ್ಮನನ್ನು ಪ್ರಾರ್ಥಿಸಿ ಮನೆ ತುಂಬಾ ದನದ ಮಾಂಸ ಕರುಣಿಸುವಂತೆ ಕೇಳಿಕೊಳ್ಳುತ್ತಾಳೆ. ಮನೆ ತುಂಬಾ ದನದ ಮಾಂಸ ಉದ್ಭವವಾಗುತ್ತದೆ. ಆಗ ಅರುಂಧತಿ ತೋರಿಸಿ ಪಡಸಾಲೆಯ ಗಲಬಾನೆ ಹಟ್ಟಿಯ ಎಮಿಕೆಗಳ ರಾಶಿ ನಡುಮನೆಯ ಮಾಂಸದ ಗುಡ್ಡೆ ಕರುಳುಗಳ ಪೆಂಡೆ ಈರಿದೊಮ್ಮಗಳ ಗುತ್ತಿಗೆಯನ್ನೇ ತೋರಿಸುತ್ತಾಳೆ. ಹೀಗೆ ತೋರಿಸಿ ನಾವು ಮಾದಿಗ ಕುಲದವರು. ದನದ ಮಾಂಸವನ್ನು ತಿನ್ನುತ್ತೇವೆ ಎಂದು ಹೇಳಿ ವಸಿಷ್ಠನನ್ನು ಮನೆಯಿಂದ ಕಳಿಸಲು ಪ್ರಯತ್ನಿಸುತ್ತಾಳೆ. ಇದರ ಹಿನ್ನೆಲೆಯನ್ನು ಕಂಡಾಗ ಈ ಕುಲಗಳು ಮಾಂಸಕ್ಕೆ ಎಷ್ಟು ಬೆಲೆ ಕೊಡುತ್ತಾರೆ ಎಂದು ತಿಳಿಯುತ್ತದೆ.

ಹೀಗೆ ಈ ಸಮುದಾಯಗಳು ಮಾಂಸಕ್ಕಾಗಿ ತಾವೆ ಸಾಕಿದ ಕುರಿ, ಕೋಳಿ, ಹಂದಿಗಳನ್ನು ಬಳಸಿಕೊಂಡು ಇವುಗಳನ್ನು ತಮ್ಮ ಆಹಾರವಾಗಿ ಸೇವಿಸುವುದು ಕುಟುಂಬಗಳಲ್ಲಿ ಕಂಡುಬರುತ್ತದೆ. ನಂತರ ಹಬ್ಬ ಹರಿದಿನಗಳಲ್ಲಿ ಹೆಚ್ಚಾಗಿ ಮಾಂಸವನ್ನು ಮಾಡುತ್ತಾರೆ.ಇವರು ವಾರದ ಎರಡು ದಿನಗಳಲ್ಲಿ ಮಾಂಸವನ್ನು ಮುಟ್ಟುವುದಿಲ್ಲ. ಅದು ಸೋಮವಾರ ಮತ್ತು ಶನಿವಾರ ಮಾಂಸವನ್ನು ತಿನ್ನುವುದಿಲ್ಲ. ನಂತರ ಶ್ರಾವಣ ಶನಿವಾರ, ದೀಪಾವಳಿ, ಶಿವರಾತ್ರಿ ಹಬ್ಬಗಳಲ್ಲಿ ಮಾಂಸದ ಅಡುಗೆ ನಿಷೇಧವಿರುತ್ತದೆ. ಈ ಹಬ್ಬಗಳಲ್ಲಿ ಸಿಹಿ ಹಾಗೂ ಸಸ್ಯಾಹಾರ ಅಡುಗೆಯನ್ನು ಮಾಡುತ್ತಾರೆ. ನಂತರ ಇತ್ತೀಚೆಗೆ ಈ ಪ್ರದೇಶಗಳಲ್ಲಿ ಮದುವೆ ಸಂದರ್ಭದಲ್ಲಿ ಮಾಂಸವನ್ನು ಮುಟ್ಟುವುದಿಲ್ಲ. ಮದುವೆಯ ನಂತರ ಬೀಗರೂಟಕ್ಕೆ ಮಾಂಸದ ಅಡುಗೆ ಮತ್ತು ಮದ್ಯಪಾನ ಸೇವಿಸಿ ಸಂಭ್ರಮಿಸುತ್ತಾರೆ.

ಇನ್ನು ಊರು ಜಾತ್ರೆ ಹಾಗೂ ಕುಲ ಆಚರಣೆಗಳಲ್ಲಿ ಹೆಚ್ಚಾಗಿ ಪೂಜಿಸುವುದು ಹಾಗೂ ಬಲಿಕೊಡುವುದು ಮುನ್ನೇಶ್ವರ, ಚೌಡಮ್ಮ, ಗಂಗಮ್ಮ, ದುರ್ಗಮ್ಮ ದೇವತೆಗಳಿಗೆ ಹೆಚ್ಚಾಗಿ ಬಲಿಯನ್ನು ಕೊಡುತ್ತಾರೆ. ಮಕ್ಕಳ ತಲೆ ಕೂದಲು ತೆಗೆಯುವಾಗ ಮುನೇಶ್ವರನ ಸಮ್ಮುಖಯಲ್ಲಿ ಕೂದಲು ತೆಗೆಯುತ್ತಾರೆ. ಕುರಿ-ಕೋಳಿಯನ್ನು ಬಲಿ ಕೊಡುತ್ತಾರೆ. ಜಾತ್ರೆಗಳಲ್ಲಿ ಚೌಡಮ್ಮ ಮತ್ತು ಹುಲಿಗಮ್ಮ ಅವರಿಗೆ ಕೋಣವನ್ನು ಬಲಿ ಕೊಟ್ಟು ಅದನ್ನು ಆಹಾರವಾಗಿ ಸೇವಿಸುತ್ತಾರೆ. ಕೋಣದ ಮಾಂಸದ ಅಡುಗೆ ತಯಾರಿಸಿ ನೆಂಟರಿಗೆಲ್ಲಾ ಸಾಮೂಹಿಕವಾಗಿ ಊಟ ಇಡುವ ಪದ್ಧತಿ ಈ ಸಮುದಾಯಗಳಲ್ಲಿ ಇದೆ. ಈ ಸಮುದಾಯಗಳಲ್ಲಿ ಯಾರಾದರೂ ಸತ್ತರೆ ತಿಥಿ ಮುಗಿದ ಮೇಲೆ ತಿಂಗಳ ತಿಥಿಯಲ್ಲಿ ಮಾಂಸದ ಊಟವನ್ನೇ ಮಾಡಿ ಪೂಜೆ ಕುಲ ಶಾಸ್ತ್ರಗಳು ಮುಗಿದ ಮೇಲೆ ಮಾಂಸದ ಊಟವನ್ನು ಬಡಿಸಿ ಆ ಕುಟುಂಬದವರೇ ಮದ್ಯವನ್ನು ತರಿಸಿ ಎಲ್ಲರಿಗೂ ಹಂಚುತ್ತಾರೆ. ಒಂದು ವೇಳೆ ಮಾಂಸದ ಅಡುಗೆ ಮತ್ತು ಮಧ್ಯಪಾನ ಇಲ್ಲದೆ ಇದ್ದರೆ ಕೋಪಿಸಿಕೊಳ್ಳುವುದುಂಟು. ಕೋಪಿಸಿಕೊಂಡು ಗತಿಕೇಡಿ ನಾವು ಊಟಕ್ಕೆ ಬಂದಿಲ್ಲ ಮಾಂಸ

ಇಲ್ಲದ ಊಟ ಯಾರಿಗೆ ಬೇಕು ಎಂದು ಕೋಪಿಸಿಕೊಂಡು ಹೋಗುತ್ತಾರೆ. ಹಾಗಾಗಿ ಮಾಂಸದ ಊಟ ಬೇಯಿಸಲೇ ಬೇಕಾಗುತ್ತದೆ. ನಂತರ ಹೆಂಡ ಸಾರಾಯಿಯನ್ನು ಕುಡಿದು ಸತ್ತ ವ್ಯಕ್ತಿಯ ಹೆಸರನ್ನು ಕೂಗಿ ಸಂಭ್ರಮಿಸುವುದು ಈ ಸಮುದಾಯಗಳ ಪದ್ಧತಿಯಾಗಿದೆ.

ಯಾವುದೇ ನ್ಯಾಯ ಪಂಚಾಯಿತಿಗಳು ನಡೆದರೂ ಕೊನೆಯಲ್ಲಿ ಮಾಂಸದ ಅಡುಗೆ ಮತ್ತು ಮಧ್ಯಪಾನ ಕೊಡುವುದು ಕಡ್ಡಾಯವಾಗಿದೆ. ಈ ಕುಟುಂಬಗಳಲ್ಲಿ ಜಗಳವಾದರೆ ಈ ಸಮುದಾಯಗಳ ಮುಖ್ಯಸ್ಥರನ್ನು ಕರೆಯಿಸಿ ನ್ಯಾಯ ಕಟ್ಟೆಯಲ್ಲಿ ಮುಖ್ಯಸ್ಥರ ಮುಂದೆ ನಿಲ್ಲಿಸುತ್ತಾರೆ. ಯಾರು ಜಗಳವಾಡಿರುತ್ತಾರೋ ಅವರು ಇಬ್ಬರನ್ನು ತರಾಟೆಗೆ ತೆಗೆದುಕೊಂಡು ಇಬ್ಬರಿಗೂ ಸರಿಯಾದ ತೀರ್ಮಾನವನ್ನು ನೀಡಿ ಇಬ್ಬರಿಗೂ ದಂಡವನ್ನು ವಿಧಿಸುತ್ತಾರೆ. ನಂತರ ಈ ಎರಡು ಕುಟುಂಬಗಳು ಮಾಂಸದ ಅಡುಗೆಯನ್ನು ಮಾಡಿ ಅದರ ಜೊತೆಗೆ ಮದ್ಯವನ್ನು ಕೊಡಬೇಕಾಗುತ್ತದೆ. ಒಂದು ವೇಳೆ ಪ್ರೀತಿಸಿ ಮದುವೆಯಾಗಿದ್ದರೆ ಆಗಲೂ ನ್ಯಾಯಕ್ಕೆ ಕರೆಯುತ್ತಾರೆ. ಯಾವ ಕುಟುಂಬದ ವ್ಯಕ್ತಿ ಪ್ರೀತಿಸಿ ಮದುವೆಯಾಗಿರುತ್ತಾನೆ, ಆ ಕುಟುಂಬಕ್ಕೆ ದಂಡವಿಧಿಸಿ ಅವರ ಆರ್ಥಿಕತೆಗೆ ತಕ್ಕಂತೆ ದಂಡ ಕಟ್ಟಬೇಕು ನಂತರ ನ್ಯಾಯ ಮುಗಿದ ಮೇಲೆ ಮಾಂಸದ ಊಟ ಮತ್ತು ಮದ್ಯವನ್ನು ಕೊಟ್ಟು ಪ್ರೀತಿಸಿದ ಹುಡುಗಿಯನ್ನು ತಮ್ಮ ಕುಲಕ್ಕೆ ಸೇರಿಸಿಕೊಳ್ಳುತ್ತಾರೆ. ಒಂದು ವೇಳೆ ಮಾಂಸದ ಊಟ, ಮದ್ಯಪಾನ ಕೊಡದೇ ಇದ್ದರೆ ದಂಡವನ್ನು ತೆತ್ತಬೇಕಾಗುತ್ತದೆ. ನಂತರ ನ್ಯಾಯಸ್ತರು ಹಾಗೂ ಬಂಧುಗಳ ಖರ್ಚು ವೆಚ್ಚಗಳನ್ನು ಕೊಡಬೇಕಾಗುತ್ತದೆ. ಸಣ್ಣ ಪುಟ್ಟ ನ್ಯಾಯ ತೀರ್ಮಾನಗಳಿಗೂ ಮಾಂಸದ ಅಡುಗೆ ನೀಡಬೇಕಾಗುತ್ತದೆ. ಇದು ಹಿಂದಿನ ಕಾಲದಿಂದಲೂ ನಡೆದುಕೊಂಡು ಬರುತ್ತಿರುವ ಪದ್ಧತಿಯಾಗಿದೆ. ನಂತರ ದಕ್ಕೆಯಿಂದ ಹುಟ್ಟಿದ ಈ ಸಮುದಾಯಗಳು ಮತ್ತು ಮಾಂಸದಿಂದ ಹುಟ್ಟಿದ ಮಾಸ್ತಿಕರು ಹೆಚ್ಚಾಗಿ ಮಾಂಸಪ್ರಿಯರು ಎಂಬುದು ಈ ಕುಲ ಪದ್ಧತಿಗಳಿಂದ ತಿಳಿಯುತ್ತದೆ.

ಮಾಂಸ ಪ್ರಿಯವಾದ ಆಹಾರವಾದರಿಂದ ದಕ್ಕಲರಲ್ಲಿ ಆರ್ಥಿಕ ಸ್ಥಿತಿಗತಿಯು ಸಹ ಕ್ಲಿಷ್ಟಕರವಾದರಿಂದ ಮಾಂಸಕ್ಕಾಗಿ ಬೇಟೆಯಾಡುವುದುಂಟು. ತಮ್ಮ ಬಿಡುವಿನ ವೇಳೆಯಲ್ಲಿ ಪ್ರಾಣಿ ಪಕ್ಷಿಗಳನ್ನು ಬೇಟೆಯಾಡುತ್ತಾರೆ. ಕಾನೂನಿನ ವಿರೋಧದ ನಡುವೆಯೂ ಕದ್ದು ಮುಚ್ಚಿ ಬೇಟೆಯಾಡುತ್ತಾರೆ. ಬೇಟೆಗಾಗಿ ಬೇಟೆ ನಾಯಿಗಳನ್ನು ಬಳಸಿಕೊಂಡು ಊರಿನ ಸುತ್ತ ಮುತ್ತ ಬಯಲು ಪ್ರದೇಶ ಮತ್ತು ಕುರುಚಲು ಕಾಡುಗಳಲ್ಲಿ ಬೇಟೆಯಾಡುತ್ತಾರೆ. ಇವರು ಬೇಟೆಯಾಡುವ ಪ್ರಾಣಿಗಳು ಮೊಲ, ಕೌಜುಗ ಪಕ್ಷಿಗಳು, ಕಾಡು ಹಂದಿಗಳು, ಅಳಿಲು, ಉಡ, ಮುಂಗಸಿ, ಇವುಗಳನ್ನು ಬೇಟೆಯಾಡಿ ತಮ್ಮ ಆಹಾರವಾಗಿ ಸೇವಿಸುತ್ತಾರೆ. ನಂತರ ಆರ್ಥಿಕ ಸ್ಥಿರತೆಗೆ ಕೆಲವೊಮ್ಮೆ ಮಾರುವುದು ಕಂಡುಬರುತ್ತದೆ. ನದಿ ಕೆರೆಗಳಲ್ಲಿ ಬಲೆಯನ್ನು ಬೀಸಿ ಮೀನುಗಳನ್ನು ಹಿಡಿದು ಆಹಾರಕ್ಕೆ ಬಳಸುತ್ತಾರೆ. ಪ್ರಾಣಿ ಬೇಟೆಯಾಡಿ ಮಾಂಸ ಹೆಚ್ಚಾದರೆ ಅದನ್ನು ತಂದು ಕತ್ತರಿಸಿ ಬಿಸಿಲಿಗೆ ಒಣಗಿಸಿ ಒಂದು ಮಡಿಕೆಯಲ್ಲಿ ಹಾಕಿ ಇಟ್ಟುಕೊಳ್ಳುತ್ತಾರೆ. ತಮಗೆ ಬೇಕಾದಾಗ ಊಟದ ಜೊತೆ ಒಣ ಮಾಂಸವನ್ನು ಎಣ್ಣೆಯಲ್ಲಿ ಬೇಯಿಸಿ ಊಟದ ಜೊತೆ ತಟ್ಟೆಯಲ್ಲಿ

ಹಾಕಿಕೊಂಡು ನಂಜಿಕೊಳ್ಳುತ್ತಾರೆ. ಹೀಗೆ ಕಾನೂನು ವಿರೋಧವಿದ್ದರೂ ಈ ಸಮುದಾಯಗಳು ತಮ್ಮ ಹೊಟ್ಟೆಪಾಡಿಗಾಗಿ ಬೇಟೆಯಾಡುತ್ತಾರೆ. ಕೆಲವು ಸಂದರ್ಭಗಳಲ್ಲಿ ಪರಿಸರಕ್ಕೆ ಹಾನಿಯಾಗದ ರೀತಿಯಲ್ಲಿ ಬೇಟೆಯಾಡುತ್ತಾರೆ. ಅರಣ್ಯ ಕಾಯ್ದೆಗಳು ತೊಡಕಾಗಿ ಬೇಟೆ ಪರಂಪರೆಯನ್ನು ಮುಂದುವರಿಸಲು ತೊಂದರೆಯಾಗುತ್ತಿದೆ. ಎಷ್ಟೇ ತೊಡಕುಗಳಿದ್ದರೂ ತಮ್ಮ ಹೊಟ್ಟೆ ಪಾಡಿಗಾಗಿ ಬೇಟೆಯಾಡಬೇಕಾದ ಅನಿವಾರ್ಯತೆ ಈ ಸಮುದಾಯಗಳದ್ದಾಗಿದೆ. ನಂತರ ಬೇಟೆಯ ಮಾಂಸ ಮಾರಾಟ ಮಾಡಿ ಹಣ ಸಂಪಾದನೆಯ ಮಾರ್ಗೋಪಾಯವಾಗಿದೆ. ಜೊತೆಗೆ ತಮ್ಮ ಪಾರಂಪರಿಕ ಕಸುಬನ್ನು ಮುಂದುವರಿಸಿದಂತಾಗುತ್ತದೆ ಎಂದು ಈ ಸಮುದಾಯಗಳ ನಂಬಿಕೆಯಾಗಿದೆ.

ಈ ಸಮುದಾಯಗಳು ಆಹಾರವನ್ನು ಬೇಯಿಸಿಕೊಳ್ಳುವುದಕ್ಕೆ ಬಳಸುತ್ತಿದ್ದ ಪಾತ್ರೆಗಳು ಹೆಚ್ಚಾಗಿ ಕಂಡುಬಂದಿಲ್ಲ. ತಕ್ಕಮಟ್ಟಿಗೆ ಉಳಿಸಿಕೊಂಡಿದ್ದಾರೆ. ಯಾಕೆಂದರೆ ಇವರು ಮೂಲತಃ ವಲಸಿಗರಾಗಿದ್ದು, ಊರಿಂದ ಊರಿಗೆ ವಲಸೆ ಹೋಗುವ ಸಂದರ್ಭದಲ್ಲಿ ಸಾಗಿಸುವುದಕ್ಕೆ ಕಷ್ಟಕರವಾಗಿರುತ್ತದೆ. ಹಾಗಾಗಿ ಮಣ್ಣಿನ ಮಡಿಕೆಗಳು ಒಂದೋ ಎರಡೋ ಅಲ್ಯೂಮಿನಿಯಂ ಪಾತ್ರೆಗಳು ಊಟಕ್ಕಾಗಿ ಅಲ್ಯೂಮೀನಿಯಂ ತಟ್ಟೆಗಳನ್ನು ಬಳಸುತ್ತಾರೆ. ಕೆಲವು ಸಂದರ್ಭಗಳಲ್ಲಿ ಬಿದುರಿನ ಬುರ್ರೆಯನ್ನು ಭಿಕ್ಷೆ ಬೇಡುವಾಗ ಸಾರನ್ನು ಬಿದಿರಿನ ಬುರ್ರೆಯಲ್ಲಿ ಹಾಕಿಸಿಕೊಳ್ಳುತ್ತಾರೆ. ನಂತರ ಮಣ್ಣಿನ ತಟ್ಟೆ ಮರದ ಸೌಟುಗಳನ್ನು ಬಳಸುತ್ತಿದ್ದರು. ಮಡಿಕೆಗಳಲ್ಲಿ ತಂದ ಆಹಾರವನ್ನು ಹುಟ್ಟಿಯಲ್ಲಿ ಇಡುತ್ತಿದ್ದರು. ಈ ಹುಟ್ಟಿಯು ದೈವ ಕಲ್ಪನೆಯಾಗಿದೆ. ನಂತರ ಭಿಕ್ಷೆ ಬೇಡುವುದಕ್ಕೆ ಜೋಳಿಗೆಯನ್ನು ಕಂಕುಳಲ್ಲಿ ಹಾಕಿಕೊಂಡು ಕಿನ್ನರಿಯನ್ನು ಕೈಯಲ್ಲಿ ಹಿಡಿದು ಕಿನ್ನರಿಯನ್ನು ಬಾರಿಸಿಕೊಂಡು ಮಾದಿಗರ ಕೇರಿಗಳಲ್ಲಿ ಭಿಕ್ಷೆ ಬೇಡುತ್ತಿದ್ದರು. ಆಹಾರ ಸಂಗ್ರಹಣೆಗಾಗಿ ಜೋಳಿಗೆಯನ್ನು ಬಳಸುತ್ತಿದ್ದರು. ಇತ್ತೀಚೆಗೆ ನಾಗರಿಕತೆ ಬೆಳೆದಂತೆ ಈ ಸಮುದಾಯಗಳಲ್ಲಿ ಸ್ವಲ್ಪಮಟ್ಟಿನ ಬದಲಾವಣೆ ಕಂಡುಕೊಂಡು ಮಡಿಕೆಗಳು ಬಳಸುವುದು ಕಡಿಮೆಯಾಗಿದೆ. ಈ ಸಮುದಾಯಗಳಲ್ಲಿ ಒಂದು ಅಥವಾ ಎರಡು ಮಡಿಕೆಗಳನ್ನು ಇಟ್ಟುಕೊಂಡಿದ್ದಾರೆ. ಈಗ ಒಂದು ಕಡೆ ನೆಲೆನಿಂತಿರುವುದರಿಂದ ಜೀವನಕ್ಕೆ ಬೇಕಾದ ಸಾಮಗ್ರಿಗಳಾದ ಸ್ಟೀಲ್ ಪಾತ್ರೆಗಳು, ಪ್ಲಾಸ್ಟಿಕ್, ಅಲ್ಯೂಮಿನಿಯಂ, ಕಂಚಿನ ಪಾತ್ರೆಗಳನ್ನು ಬಳಸುತ್ತಾರೆ.

ಈ ಸಮುದಾಯಗಳ ಪಾರಂಪರಿಕ ಕಸುಬುಗಳ ಮೇಲೆ ಕಪ್ಪು ಮಸಿಯನ್ನು ಬಳಿಯುವುದಕ್ಕೆ ಸಾಮಾಜಿಕ ಪಲ್ಲಟಗಳು ಕಾರಣವಾಗಿದೆ. ಸಾಮಾಜಿಕ ಬದಲಾವಣೆಗಳು, ರಾಜಕೀಯ, ಆರ್ಥಿಕ ಪಲ್ಲಟಗಳು ತಮ್ಮ ಪಾರಂಪರಿಕವಾದ ಕಸುಬುದಾರಿಕೆಗೆ ಅವಕಾಶವಾಗದಂತೆ ಮಾಡಿದೆ. ಆದ್ದರಿಂದ ದಕ್ಕಲರು ಸ್ಥಿತ್ಯಂತರದ ಕಾಲಘಟ್ಟಗಳಲ್ಲಿ ಅನ್ಯ ಕೆಲಸ ಕಾರ್ಯಗಳು ಮಾಡುತ್ತಾ ಆಹಾರವನ್ನು ಸಂಗ್ರಹಿಸಿಕೊಂಡು ಜೀವನ ಸಾಗಿಸುತ್ತಿದ್ದಾರೆ.

ಈ ಸಮುದಾಯಗಳು ಆಹಾರ ಪದ್ಧತಿಯನ್ನು ತಮ್ಮ ಮೂಲ ಭಿಕ್ಷಾಟನೆಯ ಮೂಲಕ ಸಂಗ್ರಹಿಸಿ ಜೀವಿಸುತ್ತಿರುವುದು ಒಂದು ಚಾರಿತ್ರಿಕ ಹಿನ್ನೆಲೆಯಾಗಿದೆ. ಗಂಗಭಾರತವನ್ನು ಹಾಡುವ ಸಂದರ್ಭದಲ್ಲಿ ಜಾಂಬವಂತನು ನೀಡಿದ ವರದಿಂದ ಈ ಸಮುದಾಯಗಳು ಇಂದಿಗೂ ಮಾದಿಗರ ಕೇರಿಗಳಲ್ಲಿ ಭಿಕ್ಷಾಟನೆ ಮಾಡಿ ಆಹಾರವನ್ನು ಸಂಗ್ರಹಿಸುತ್ತಿದ್ದಾರೆ. ನಂತರ ಜಾಂಬವಂತ ನೀಡಿದ ಶಾಪವು ತಮ್ಮ ಸಮುದಾಯಗಳ ಮೇಲೆ ಬೀಳಬಾರದು ಎಂಬ ಕಾರಣಕ್ಕಾಗಿ ದಕ್ಕಲರು ಇತರೆ ಸಮುದಾಯಗಳಲ್ಲಿ ಭಿಕ್ಷೆಯನ್ನು ಬೇಡುವುದಿಲ್ಲ. ಕೇವಲ ತಮ್ಮ ಕುಲ ಬಂಧುಗಳಾದ ಮಾದಿಗರ ಮನೆಯಲ್ಲಿ ಭಿಕ್ಷೆ ಬೇಡುತ್ತಾರೆ. ಒಂದು ವೇಳೆ ಅವರು ಭಿಕ್ಷೆ ನೀಡದಿದ್ದರೂ ಅವರ ಹೆಸರನ್ನು ಮನಸ್ಸಿನಲ್ಲಿ ನೆನೆಸಿಕೊಂಡು ಸಾಯುತ್ತಾರೆ ಹೊರತು ಬೇರೆಯವರ ಮನೆಗಳಲ್ಲಿ ಭಿಕ್ಷೆ ಕೇಳುವುದಿಲ್ಲ. ಇಂತಹ ಕಟ್ಟುವಾದ ಪದ್ಧತಿ ಈ ಪುರಾಣದಲ್ಲಿದೆ. ಹೀಗಾಗಿ ಇವರು ಮೂಲ ಪುರಾಣವನ್ನು ನಂಬಿ ಗೌರವಿಸುತ್ತಾರೆ. ಇತರೆ ಪುರಾಣಗಳಿಗಿಂತ ನಮ್ಮ ಗಂಗಭಾರತವೇ ಪವಿತ್ರವಾದದು. ಇಡಿ ಭೂಮಿಯ ಎಲ್ಲರಿಗಿಂತ ನಾವೇ ಮೊದಲಿಗರು ಎಂಬ ಭಾವನೆ ಈ ಸಮುದಾಯಗಳಲ್ಲಿ ನೆಲೆಯೂರಿದೆ. ಇವರ ಮೂಲ ಪುರಾಣವು ಈ ಸಮುದಾಯಗಳ ಹೊಟ್ಟೆ ತುಂಬಿಸಿಕೊಳ್ಳುವ ಅಕ್ಷಯ ಪಾತ್ರ ಎಂದು ಈ ದಕ್ಕಲ ನಂಬಿಕೆಯಾಗಿದೆ. ಮಾಂಸವನ್ನು ಮುಖ್ಯ ಆಹಾರ ಪದ್ಧತಿ ಎಂದು ಹೇಳುವುದಕ್ಕೆ ಕಾಮಧೇನುವಿನ ಕಥೆ ತಿಳಿಸುತ್ತದೆ. ಈ ಕಾಮಧೇನು ಕತೆಯನ್ನು ತಿಳಿಸಿದಾಗ ಈ ಸಮುದಾಯಗಳು ಎಷ್ಟು ಮಾಂಸಪ್ರಿಯರು ಎಂದು ತಿಳಿಯುತ್ತದೆ. ಈ ಸಮುದಾಯಗಳ ಸಮಾರಂಭಗಳಲ್ಲಿ ಕೋಣವನ್ನು ಕಡಿದು ಮಾಂಸವಾಗಿ ಸೇವಿಸಿ ಮದ್ಯವನ್ನು ಕುಡಿದು ಆನಂದಿಸುವರು. ಹೀಗಾಗಿ ಈ ಸಮುದಾಯಗಳ ಆಹಾರ ಪದ್ಧತಿಯೂ ಪುರಾಣದ ನಡುವಿನ ಸಂಬಂಧವನ್ನು ಹೊಂದಿದೆ.

### ೨.೪. ವಸತಿ ವ್ಯವಸ್ಥೆ

೨೦ರ ದಶಕದ ಹಿಂದಿನ ಕಾಲಘಟ್ಟದಲ್ಲಿ ದಕ್ಕಲ ಸಮುದಾಯಗಳಿಗೆ ಮೂಲ ನೆಲೆ ಹಾಗೂ ಸ್ವಂತ ವಸತಿ ಎಂಬುವುದು ಇರಲಿಲ್ಲ. ಇವರು ಮೂಲತಃ ಅರೆ ಅಲೆ ಮಾರಿಗಳಾಗಿದ್ದು ಊರಿಂದ ಊರಿಗೆ ವಲಸೆ ಹೋಗಿ ಜೀವಿಸುವ ಈ ಸಮುದಾಯಗಳಿಗೆ ಮೂಲ ನೆಲೆ ಎಲ್ಲಿಂದ ಬರಬೇಕಾಗುತ್ತದೆ. ಹಾಗೆ ಚಾರಿತ್ರಿಕ ಹಿನ್ನೆಲೆಯಲ್ಲಿ ಜಾಂಬವಂತ ಮತ್ತು ವಿಶ್ವಕರ್ಮರು ಇಟ್ಟ ವರ ಮತ್ತು ಶಾಪಗಳ ಫಲಿತವೋ ಏನೋ ಈ ಸಮುದಾಯ ಮೂಲ ವಸತಿ ಇಲ್ಲದೆ ಸ್ವಲ್ಪ ದಿನಗಳ ಕಾಲ ಇದ್ದು ನಂತರ ಬೇರೆಡೆ ಹೋಗುವುದಕ್ಕೆ ಗುಡಾರಗಳನ್ನು ಹಾಕಿಕೊಳ್ಳುತ್ತಾರೆ. ಜಾಂಬವ ಕೊಟ್ಟ ಛತ್ರಿ, ಶಿವ ಕೊಟ್ಟ ಈಚಲು ಚಾಪೆ, ಬ್ರಹ್ಮ ಕೊಟ್ಟ ಬಿದುರು ಕೋಲನ್ನು ಕೊಟ್ಟು ದೇಶಾಂತರ ಹೋಗಿ ಭಿಕ್ಷಾಟನೆಯನ್ನು ಮಾಡಿ ಜೀವಿಸಬೇಕು ಎಂಬ ವರ ಮತ್ತು ಮಾದಿಗರ ಮನೆಗಳಲ್ಲಿ ಬಿಟ್ಟು ಬೇರೆ ಮನೆಗಳಲ್ಲಿ ಬೇಡಿ ತಿಂದರೆ ನಿನ್ನ ತಲೆ ೧೬ ಚೂರುಗಳಾಗುತ್ತವೆ ಎಂಬ ಶಾಪದ ಭಯವೋ ಈ ಸಮುದಾಯಗಳು ಈಗಲೂ ವಲಸಿಗರಾಗಿಯೇ ಊರಿಂದ

ಊರಿಗೆ ಸುತ್ತುತ್ತ ಜೀವನ ಸಾಗಿಸುತ್ತಿದ್ದಾರೆ. ಇವರು ವಲಸೆ ಹೋಗುವ ಹಳ್ಳಿಯಲ್ಲಿ ಗುಡಿಸಲು ಗುಡಾರಗಳನ್ನು ಹಾಕಿಕೊಳ್ಳುತ್ತಾರೆ. ಇವರು ವಸತಿಗಾಗಿ ಆಯ್ಕೆ ಮಾಡಿಕೊಳ್ಳುವುದು ಎತ್ತರವಾದ ಬಯಲು ಪ್ರದೇಶ. ಏಕೆಂದರೆ ಮಳೆ ಬಂದಾಗ ಮಳೆಯಿಂದ ರಕ್ಷಿಸಿಕೊಳ್ಳಲು ಹಾಗೂ ಸುರಕ್ಷಿತವಾಗಿರುತ್ತದೆ ಎಂದು ಈ ಸಮುದಾಯಗಳ ತಿಳುವಳಿಕೆಯಾಗಿದೆ.

**ಬಯಲು ಪ್ರದೇಶ**

ದಕ್ಕಲ ಸಮುದಾಯಗಳು ಸಾಮಾನ್ಯವಾಗಿ ವಲಸೆ ಹೋದಾಗ ವಸತಿ ವ್ಯವಸ್ಥೆಗಾಗಿ ಆಯ್ಕೆ ಮಾಡಿಕೊಳ್ಳುವ ಪ್ರದೇಶ ಪರಿಸರಕ್ಕೆ ಅನುಗುಣವಾಗಿ ಇತರರಿಗೆ ದೂರವಾಗಿ ಸ್ವಲ್ಪ ಮಟ್ಟಿನ ಎತ್ತರವಾದ ಬಯಲು ಪ್ರದೇಶವನ್ನು ನೋಡಿ ಮತ್ತು ಮರ ಗಿಡಗಳು ಇರುವ ಬಯಲು ಸೀಮೆ ಪ್ರದೇಶದಲ್ಲಿ ಹಾಕಿಕೊಳ್ಳುತ್ತಿದ್ದರು. ಏಕೆಂದರೆ ಈ ಕುಟುಂಬಗಳು ಪರಿಸರದಿಂದ ಬರುವ ತೊಂದರೆಗಳಿಂದ ಸುರಕ್ಷಿತವಾಗಿ ಕಾಪಾಡಿಕೊಳ್ಳಲು ಈ ಪ್ರದೇಶವನ್ನು ಆಯ್ಕೆ ಮಾಡಿಕೊಳ್ಳುತ್ತಾರೆ. ಮಳೆಗಾಲದಲ್ಲಿ ಮಳೆಯಿಂದ ರಕ್ಷಿಸಿಕೊಳ್ಳಲು ಎತ್ತರ ಪ್ರದೇಶದಲ್ಲಿ ಗುಡಾರದ ಒಳಗೆ ನೀರು ಬರದ ಹಾಗೆ ರಕ್ಷಿಸುವ ಉದ್ದೇಶ ಇವರದಾಗಿದೆ ಹಾಗೂ ಕೆಲವು ಸಂದರ್ಭಗಳಲ್ಲಿ ಗುಡಿಸಲು ಹೊರಗೆ ಅಡುಗೆ ಮಾಡುವ ಕಾರಣಕ್ಕೆ ಬಯಲುಸೀಮೆ ಅವಶ್ಯಕವಾಗಿದೆ. ನಂತರ ಕೈ ಕಸುಬುಗಳಾದ ಈಚಲುಚಾಪೆ, ಪೊರಕೆ, ಬುಟ್ಟಿಗಳನ್ನು ಹೆಣೆಯುವುದಕ್ಕೆ ಅನುಕೂಲಕರವಾದ ಬಯಲು ಪ್ರದೇಶವಾಗಿರುತ್ತದೆ. ಹಾಗಾಗಿ ಬುಡಕಟ್ಟು ಸಮುದಾಯಗಳು ಹೆಚ್ಚಾಗಿ ಬಯಲು ಸೀಮೆ ಪ್ರದೇಶಗಳನ್ನು ಆಯ್ಕೆ ಮಾಡಿಕೊಳ್ಳುತ್ತಾರೆ.

ಈ ಸಮುದಾಯಗಳು ಹೆಚ್ಚಾಗಿ ಕತ್ತೆ ಮತ್ತು ಹಂದಿಗಳನ್ನು ಸಾಕುವುದರಿಂದ ಇವುಗಳ ಆಹಾರಕ್ಕೆ ಮತ್ತು ಇವುಗಳ ವಸತಿಗಾಗಿ ಹಾಗೂ ನಾಗರಿಕ ಸಮಾಜದಲ್ಲಿ ಹಂದಿ ಕತ್ತೆಗಳನ್ನು ಊರಿನ ಒಳಗೆ ಸೇರಿಸುವುದಿಲ್ಲ. ಹಾಗಾಗಿ ಬಯಲು ಪ್ರದೇಶಗಳೇ ಹೆಚ್ಚು ಅನುಕೂಲವಾಗಿರುತ್ತದೆ. ಸಮುದಾಯಗಳಲ್ಲಿ ಶೌಚಾಲಯಗಳು ಇಲ್ಲದೆ ಇರುವುದರಿಂದ ಇವರು ಬಯಲು ಪ್ರದೇಶಗಳನ್ನೇ ಹೆಚ್ಚಾಗಿ ಬಳಸಿಕೊಳ್ಳುತ್ತಾರೆ. ಈ ಬಯಲು ಪ್ರದೇಶವನ್ನು ಆಯ್ಕೆ ಮಾಡಿಕೊಂಡು ತಮಗೆ ಅನುಕೂಲಕರವಾಗಿ ಈ ಕುಟುಂಬಗಳು ಜೀವಿಸುತ್ತಿದ್ದಾರೆ.

**ಗುಡಾರ**

ದಕ್ಕಲ ಸಮುದಾಯಗಳು ಅಲೆಮಾರಿಗಳಾಗಿ ವಲಸೆ ಹೋಗುತ್ತಿದ್ದ ಹಳ್ಳಿಗಳಿಗೆ ಕೆಲವು ದಿನಗಳ ಮಟ್ಟಿಗಷ್ಟೇ ಆ ಪ್ರದೇಶದಲ್ಲಿ ವಾಸಿಸುತ್ತಿದ್ದರು. ಇದಕ್ಕಾಗಿ ವಸತಿ ವ್ಯವಸ್ಥೆಗಾಗಿ ಗುಡಾರಗಳ ಮೊರೆ ಹೋಗುತ್ತಿದ್ದರು. ಗುಡಾರಗಳನ್ನು ನಿರ್ಮಿಸುವುದು ಮಾರ್ಬಲ್ ಟಾರ್‌ಪಲ್, ಪ್ಲಾಸ್ಟಿಕ್ ಟಾರ್‌ಪಲ್, ಈಚಲು ಚಾಪೆ, ಸೀರೆಗಳನ್ನು ಬಳಸಿ ಗುಡಾರಗಳನ್ನು ನಿರ್ಮಿಸುತ್ತಿದ್ದರು. ಎತ್ತರವಾದ ಬಯಲಲ್ಲಿ ಸಮತಟ್ಟಾದ ಜಾಗದಲ್ಲಿ ಮಣ್ಣನ್ನು ಸರಿಸಿ ಸುತ್ತಲೂ ಕಟ್ಟೆ ಕಟ್ಟಿ ಬಿದುರು ಕೋಲುಗಳನ್ನು ಬಳಸಿ ಅವುಗಳನ್ನು ಉಂಗುರವಾಗಿ ಬಗ್ಗಿಸಿ ಅದರ ಮೇಲೆ ಮಾರ್ಬಲ್ ಟಾರ್‌ಪಲ್ ಅಥವಾ

ಪ್ಲಾಸ್ಟಿಕ್ ಟಾರ್‌ಪಲ್‌ಅನ್ನು ಹಾಕಿ ಅದನ್ನು ಹಗ್ಗದಿಂದ ಕಟ್ಟಿ ಒಳ ಹೋಗಲು ಬಾಗಿಲನ್ನು ಮಾಡಿ ಗುಡಾರವನ್ನು ನಿರ್ಮಿಸುತ್ತಿದ್ದರು. ಕೆಲವು ಸಂದರ್ಭದಲ್ಲಿ ಸೀರೆಗಳನ್ನು ಬಿದಿರು ದಬ್ಬೆಗಳ ಮೇಲೆ ಹಾಕಿ ಗಟ್ಟಿಯಾಗಿ ಕಟ್ಟುತ್ತಿದ್ದರು. ಈ ಗುಡಾರಗಳನ್ನು ನಿರ್ಮಿಸುವುದರಿಂದ ಇವರಿಗೆ ವಲಸೆ ಹೋಗಬೇಕಾದರೆ ಗುಡಾರಗಳನ್ನು ಸುಲಭವಾಗಿ ಕಿತ್ತು ಅವುಗಳನ್ನು ತಮ್ಮ ಜೊತೆ ತೆಗೆದುಕೊಂಡು ಹೋಗುತ್ತಿದ್ದರು. ಹೀಗಾಗಿ ಇವರಿಗೆ ಸುಲಭವಾಗಿತ್ತು. ನಂತರ ಅಡುಗೆಯನ್ನು ಗುಡಾರದ ಹೊರಗೆ ಬಯಲು ಪ್ರದೇಶದಲ್ಲಿ ಮಾಡಿಕೊಳ್ಳುತ್ತಿದ್ದರು. ಈ ಗುಡಾರವು ೫ ರಿಂದ ೬ ಅಡಿಗಳು ಎತ್ತರವಿದ್ದು ಇದರ ಒಳಗೆ ಓಡಾಡುವುದಕ್ಕೆ, ನಿಲ್ಲುವುದಕ್ಕೆ ಇಕ್ಕಟ್ಟಾಗಿರುತ್ತದೆ. ಬೇಸಿಗೆ ಸಂದರ್ಭದಲ್ಲಿ ಗುಡಾರಗಳನ್ನು ಬಿಟ್ಟು ಬಯಲು ಪ್ರದೇಶದಲ್ಲಿ ಮಲುಗುತ್ತಿದ್ದರು. ನಂತರ ಇವರ ಅಡುಗೆ ವಸ್ತುಗಳು ತಕ್ಕಮಟ್ಟಿಗೆ ಬಳಸುತ್ತಿದ್ದರು ಇವರು ಗುಡಾರಕ್ಕಿಂತ ಹೆಚ್ಚು ಬಯಲು ಪ್ರದೇಶವೇ ವಾಸಸ್ಥಾನವಾಗಿತ್ತು.

**ಗುಡಿಸಲು**

ದಕ್ಕಲ ಸಮುದಾಯಗಳು ಗುಡಾರಗಳನ್ನು ಬಿಟ್ಟರೆ ಅದಕ್ಕೆ ಸ್ವಲ್ಪ ಉತ್ತಮ ವಸತಿ ವ್ಯವಸ್ಥೆ ಎಂದರೆ ಗುಡಿಸಲು ಮತ್ತು ಸೂರು. ಈ ಸಮುದಾಯಗಳು ಸ್ವಲ್ಪ ಮಟ್ಟಿಗೆ ಗುಡಾರಗಳಿಗಿಂತ ಹೆಚ್ಚಿನ ಸುರಕ್ಷಿತವನ್ನು ಹೊಂದಿರುತ್ತಾರೆ. ಏಕೆಂದರೆ ಗುಡಾರಗಳಷ್ಟು ಇಕ್ಕಟ್ಟಾಗಿ, ಚಿಕ್ಕದಾಗಿ ತಯಾರಿಸುವುದಿಲ್ಲ. ಸ್ವಲ್ಪ ಸುರಕ್ಷಿತವಾಗಿಯೇ ನಿರ್ಮಿಸಿಕೊಂಡಿರುತ್ತಾರೆ. ಇವುಗಳ ಎರಡು ವಿಧದ ಗುಡಿಸಲುಗಳನ್ನು ಹಾಕಿಕೊಂಡಿರುತ್ತಾರೆ. ೧. ಇಡಿ ಗುಡಿಸಲು: ಬಿದುರು ಮರ ಬಿದುರು ದಬ್ಬೆಗಳಿಂದ ಹಾಗೂ ತೆಂಗಿನ ಗರಿಗಳಿಂದ ಮಾತ್ರ ಉಪಯೋಗಿಸಿ ತಯಾರಿಸಿದ ಗುಡಿಸಲು. ೨. ಮಣ್ಣು ಕಲ್ಲುಗಳನ್ನು ಉಪಯೋಗಿಸಿ ಅರ್ದ ಗೋಡೆಯನ್ನು ಕಟ್ಟಿ ಅದರ ಮೇಲೆ ತೆಂಗಿನ ಗರಿ ಅಥವಾ ಹುಲ್ಲಿನ ಸೂರು ಹಾಕಿ ಕಟ್ಟಿರುತ್ತಾರೆ. ಇದನ್ನು ಸೂರು ಮನೆ ಎಂದು ಕರೆಯುತ್ತಾರೆ.

ಗುಡಿಸಲುಗಳನ್ನು ಗುಡಾರಗಳ ಹಾಗೆ ಸಮತಟ್ಟಾದ ಪ್ರದೇಶದಲ್ಲಿ ನೆಲವನ್ನು ಸಮತಟ್ಟಾಗಿ ಮಾಡಿ ಅದನ್ನು ಗಟ್ಟಿ ಮಾಡಿ ಸುತ್ತಲೂ ಮಣ್ಣನ್ನು ಕಟ್ಟೆಯಾಗಿ ಕಟ್ಟಿ ಅದರ ಮೇಲೆ ಬಿದುರಿನ ಮರಗಳನ್ನು ನೆಟ್ಟಿ ತ್ರಿಭುಜಾಕಾರವಾಗಿ ಬಗ್ಗಿಸಿ ಅದರ ಸುತ್ತಲು ದಬ್ಬೆಗಳನ್ನು ಕಟ್ಟಿ ಅದರ ಮೇಲೆ ತೆಂಗಿನ ಗರಿಗಳನ್ನು ಹೆಣೆಯುತ್ತಾರೆ. ನಂತರ ಅದರ ಮೇಲೆ ಟಾರ್‌ಪಲ್ ಹಾಕಿ ಮತ್ತೆ ತೆಂಗಿನ ಮತ್ತು ಈಚಲ ಗರಿಗಳನ್ನು ಹಾಕಿ ಗುಡಿಸಲು ಭದ್ರವಾಗಿರಿಸುತ್ತಾರೆ. ಇದರ ಒಳಗೆ ಅಡುಗೆ ಕೋಣೆಗೆ ಮಾತ್ರ ಅರ್ಧ ಗೋಡೆ ಕಟ್ಟಿ ಉಳಿದ ಎಲ್ಲಾ ಹಜಾರವಾಗಿ ಬಿಟ್ಟಿರುತ್ತಾರೆ. ಗುಡಿಸಲಿನ ಒಳಗೆ ಎರಡು ಗಟ್ಟಿಯಾದ ದಪ್ಪವಾದ ಮರಗಳನ್ನು ನೆಟ್ಟಿರುತ್ತಾರೆ. ಇದರ ಮೇಲೆ ದೊಡ್ಡ ಮರ ಇಟ್ಟು ಅದಕ್ಕೆ ಗುಡಿಸಲಿನ ಸುತ್ತಲೂ ಮರಗಳನ್ನು ಅದರ ಮೇಲೆ ಇಟ್ಟು ಕಟ್ಟಿರುತ್ತಾರೆ. ಈ ಮರಗಳು ಗುಡಿಸಲು ಬೀಳದಂತೆ ಗಟ್ಟಿಯಾಗಿ ಹಿಡಿದಿಟ್ಟುಕೊಂಡಿರುತ್ತದೆ. ನಂತರ ಟಾರ್‌ಪಲ್‌ನಿಂದ ಮುಚ್ಚುವುದು ಮಳೆಯಿಂದ ಸುರಕ್ಷಿತವಾಗಿರುವುದಕ್ಕೆ, ಮಳೆಯ ನೀರು ಗುಡಿಸಲು ಒಳಗೆ ಸೋರದಂತೆ

ರಕ್ಷಿಸುತ್ತದೆ. ನಂತರ ಟಾರ್‌ಪಲ್ ಹಾಳಾಗದಂತೆ ತೆಂಗಿನ ಗರಿಗಳನ್ನು ಹಾಕಿ ಬಿಗಿಯಾಗಿ ಕಟ್ಟಿರುತ್ತಾರೆ. ಹಾಗಾಗಿ ಗುಡಿಸಲು ಸುರಕ್ಷಿತವಾಗಿರುತ್ತದೆ. ನಂತರ ಮಳೆಯ ನೀರು ಗುಡಿಸಲು ಒಳಗೆ ನುಗ್ಗದಂತೆ ಗುಡಿಸಲು ಸುತ್ತ ಮಣ್ಣು ಹಾಕಿ ಕಟ್ಟೆ ಕಟ್ಟಿ ಸುರಕ್ಷಿತವಾಗಿ ಇಟ್ಟಿರುತ್ತಾರೆ.

ಗುಡಿಸಲಿಗೆ ಒಂದೇ ಪ್ರವೇಶದ್ವಾರ ಇರುತ್ತದೆ. ಆ ಪ್ರವೇಶ ದ್ವಾರಕ್ಕೆ ಬಾಗಿಲು ತೆಂಗಿನ ಗರಿಗಳಿಂದ ಕಟ್ಟಿ ತಡಿಕೆಯನ್ನು ತಯಾರಿಸುತ್ತಾರೆ. ಇದನ್ನು ಕೆಲವರು "ತಡಿ" ಎಂದು ಕರೆಯುತ್ತಾರೆ. ತೆಲುಗಿನಲ್ಲಿ "ತಡಿಕಾ" ಎಂದು ಕರೆಯುತ್ತಾರೆ. ದ್ವಾರಬಾಗಿಲಿಗೆ ಒಂದು ಕಂಬವನ್ನು ನೆಟ್ಟಿ ತಡಿಕೆಯನ್ನು ಕಟ್ಟಿರುತ್ತಾರೆ. ಇದು ಸಮುದಾಯಗಳ ಕೂಲಿ ಕೆಲಸಗಳಿಗೆ ಹೋದಾಗ ಗುಡಿಸಲಿನ ಒಳಗೆ ಯಾರೂ ಪ್ರವೇಶಿಸದಂತೆ ಸುರಕ್ಷಿತವಾಗಿ ಇರಿಸುತ್ತದೆ. ಅದಕ್ಕೆ ದಾರವನ್ನು ಕಟ್ಟಿ ಹೊರ ಹೋಗುತ್ತಾರೆ. ಇನ್ನು ಗುಡಿಸಲು ಒಳಗೆ ಎರಡು ಕೋಣೆಗಳು ಮಾತ್ರ ಕಾಣುತ್ತವೆ ಒಂದು ಅಡುಗೆ ಕೋಣೆ ಮತ್ತು ನಡುಮನೆ ಎರಡು ಭಾಗಗಳಾಗಿ ಮಾಡಿರುತ್ತಾರೆ. ನೆಲವನ್ನು ಸಗಣಿಯಿಂದ ಸಾರಿಸಿ ಸುಭ್ರವಾಗಿ ಇಟ್ಟಿರುತ್ತಾರೆ. ಗುಡಿಸಲು ಮುಂದೆ ಸ್ನಾನಕ್ಕಾಗಿ ಬಯಲು ಪ್ರದೇಶವನ್ನು ಅಶ್ರಯಿಸುತ್ತಾರೆ.

ಇನ್ನು ಮಣ್ಣಿನಿಂದ ಅರ್ಧ ಗೋಡೆಯನ್ನು ಕಟ್ಟಿ ಗುಡಿಸಲನ್ನು ಹಾಕಿಕೊಂಡಿರುತ್ತಾರೆ. ಇದಕ್ಕೆ ಕಲ್ಲು ಸೂರಿ ಮನೆ ಎಂದು ತೆಲುಗಿನಲ್ಲಿ "ಪೂರಿಲ್ಲು" ಎಂದು ಕರೆಯುತ್ತಾರೆ. ಇದಕ್ಕೆ ಕಲ್ಲು ಮತ್ತು ಮಣ್ಣನ್ನು ಸೇರಿಸಿ ಕಲ್ಲಿನ ಕಟ್ಟಡವಾಗಿ ಕಟ್ಟಿ ಅದರಲ್ಲಿ ಮಣ್ಣನ್ನು ಹಾಕಿ ಕಟ್ಟಿರುತ್ತಾರೆ. ಮಣ್ಣಿನಿಂದ ಸುತ್ತ ಪ್ಲಾಸ್ಟಿಂಗ್ ಮಾಡಿರುತ್ತಾರೆ. ಗೋಡೆಯ ಮೇಲೆ ಮರಗಳನ್ನು ಇಟ್ಟು ತ್ರಿಭುಜಾಕಾರವಾಗಿ ಮರಗಳನ್ನು ಕಟ್ಟಿರುತ್ತಾರೆ. ಅದರ ಮೇಲೆ ತೆಂಗಿನ ಗರಿಗಳನ್ನು ಹಾಕಿ ಮೇಲೆ ಚೇಣಿ ಹೊದಕೆಯ ಹುಲ್ಲು ಅಥವಾ ಪ್ಲಾಸ್ಟಿಕ್ ಟಾರ್‌ಪಲ್ ಹಾಕುತ್ತಾರೆ. ಇನ್ನು ಗುಡಿಸಲು ಬೀಳದಂತೆ ಕೋಳಕಂಬ ತಡೆಯುತ್ತದೆ. ಈ ಗುಡಿಸಲಿಗೆ ಮರದ ಹಲಗೆಯ ಬಾಗಿಲು ಅಥವಾ ತೆಂಗಿನ ಗರಿಯ ತಡಿಕೆಯನ್ನು ತಯಾರಿಸಿ ಪ್ರವೇಶ ದ್ವಾರಕ್ಕೆ ಸುರಕ್ಷಿತವಾಗಿ ಇಟ್ಟಿರುತ್ತಾರೆ. ಮನೆಯ ಒಳಗೆ ಮೂರು ಕೋಣೆಗಳನ್ನು ತಯಾರಿಸುತ್ತಾರೆ. ಆ ಕೋಣೆಗಳಿಗೆ ಗೋಡೆಗಳನ್ನು ಮಣ್ಣಿನಿಂದ ಅರ್ಧಕ್ಕೆ ಕಟ್ಟಿರುತ್ತಾರೆ. ನಂತರ ಗುಡಿಸಲು ಮುಂದೆ ವರಾಂಡವನ್ನು ತಯಾರಿಸಿರುತ್ತಾರೆ. ಈ ಗುಡಿಸಲುಗಳಲ್ಲಿ ಕಿಟಕಿಗಳು ಇರುವುದಿಲ್ಲ. ಗುಡಿಸಲು ಒಳಗೆ ಬೆಳಕು ಇಲ್ಲದೆ ಕತ್ತಲು ಆವರಿಸಿರುತ್ತದೆ. ನಂತರ ಮನೆಯ ಒಳಗೆ ಮತ್ತು ವರಂಡಾದಲ್ಲಿ ಸಗಣಿಯಿಂದ ಸಾರಿಸಿ ಶುಭ್ರಪಡಿಸಿರುತ್ತಾರೆ. ಮಣ್ಣಿನ ಗೋಡೆಗೆ ಬಿಳಿ ಸುಣ್ಣವನ್ನು ಬಳಿದಿರುತ್ತಾರೆ. ಕೆಳಗೆ ಕೆಮ್ಮಣ್ಣಿನಿಂದ ಬಳಿದು ಸುಂದರಗೊಳಿಸಿರುತ್ತಾರೆ.

ಗೋಡೆಯಲ್ಲಿ ರಂಗೋಲಿಯ ಚಿತ್ತಾರಗಳನ್ನು ಬಿಡಿಸುತ್ತಿದ್ದರು. ಆದರೆ ಇಂತಹ ಚಿತ್ತಾರಗಳು ಈಗ ಯಾರೂ ಸೂರಿನ ಗೋಡೆಗಳ ಮೇಲೆ ಬಿಡಿಸಿರಲಿಲ್ಲ. ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಈ ಸಮುದಾಯಗಳು ಮೌಖಿಕವಾಗಿ ಹೇಳುವುದನ್ನು ಬಿಟ್ಟು ಸಮುದಾಯಗಳ ಗೋಡೆಗಳ

ಮೇಲೆ ಕಂಡು ಬರಲಿಲ್ಲ. ಇವರು ವಸತಿ ವ್ಯವಸ್ಥೆಗಾಗಿ ನಿರ್ಮಿಸಿಕೊಂಡಿರುವ ಗುಡಿಸಲುಗಳ ಒಳಗೆ ಸ್ವಲ್ಪಮಟ್ಟಿನ ಇಕ್ಕಟ್ಟಾದರೂ ಗುಡಾರದಷ್ಟು ಇಕ್ಕಟ್ಟು ಇರುವುದಿಲ್ಲ. ನಂತರ ಮೂರು ಕೋಣೆಗಳು ಇರುವ ಈ ಸೂರಿನಲ್ಲಿ ಒಂದು ಅಡುಗೆ ಕೋಣೆ ಅದು ಚಿಕ್ಕದಾಗಿದ್ದು ಅದರಲ್ಲಿ ಅಡುಗೆ ಪಾತ್ರೆಗಳು ಇಡುವುದಕ್ಕೆ ಗೋಡೆಗೆ ಮೂರು ಮೊಳೆಗಳನ್ನು ಹೊಡೆದು ಅದರ ಮೇಲೆ ಮರದ ಹಲಗೆಯನ್ನು ಇಟ್ಟು ಅದರ ಮೇಲೆ ಪಾತ್ರೆಗಳನ್ನು ಇಟ್ಟಿರುತ್ತಾರೆ. ನಂತರ ಚಿಕ್ಕ ಚಿಕ್ಕ ಗೂಡುಗಳನ್ನು ಮಾಡಿ ಅದರಲ್ಲಿ ಬೇಳೆ, ಎಣ್ಣೆ, ಉಪ್ಪಿನ ಡಬ್ಬಗಳನ್ನು ಇಟ್ಟಿರುತ್ತಾರೆ. ಇನ್ನು ಚಿಕ್ಕ ಕೋಣೆಯಲ್ಲಿ ಭಿಕ್ಷೆ ಬೇಡಿ ತಂದ ಅಕ್ಕಿ, ರಾಗಿ, ಬೇಳೆ ಗಂಟುಗಳು, ಬಟ್ಟೆಗಳನ್ನು ಇಟ್ಟಿರುತ್ತಾರೆ. ಈ ಬಟ್ಟೆಗಳನ್ನು ಹಗ್ಗ ಕಟ್ಟಿ ಅದರ ಮೇಲೆ ನೇತು ಹಾಕಿರುತ್ತಾರೆ. ಹಾಗೂ ತಮಟೆ, ಕಿನ್ನರಿ ಕೋಣೆಯ ಮೂಲೆಯಲ್ಲಿ ಇಟ್ಟಿರುತ್ತಾರೆ. ಇನ್ನು ಉಳಿದ ಕೋಣೆ ನಡು ಮನೆ ಇಲ್ಲಿ ಎಲ್ಲರೂ ಕೂತು ಊಟ ಮಾಡುವುದು, ನೆಂಟರು ಬಂದರೆ ಕುಳಿತುಕೊಳ್ಳುವುದಕ್ಕಾಗಿ ಈ ಮೂರು ಕೋಣೆಗಳಿಗೂ ಒಂದೇ ಸೀಮೆ ಎಣ್ಣೆ ಬುಡ್ಡಿ(ಚಿಮಣಿ) ಎಂದು ಕರೆಯುತ್ತಾರೆ. ರಾತ್ರಿ ವೇಳೆಯಲ್ಲಿ ಈ ಸೀಮೆ ಎಣ್ಣೆಯ ಬುಡ್ಡಿಯ ಬೆಳಕಲ್ಲೇ ಅಡುಗೆ, ಊಟ ಎಲ್ಲಾ ಮುಗಿಸಬೇಕಾಗುತ್ತದೆ. ಇನ್ನು ಉಳಿದ ಸೂರಿನ ಮುಂದಿನ ವರಾಂಡದಲ್ಲಿ ಬೇಸಿಗೆ ಕಾಲದಲ್ಲಿ ಮಲಗುವುದಕ್ಕೆ, ಮೇಕೆ, ಕುರಿ ಕಟ್ಟಿ ಹಾಕಿಕೊಳ್ಳುವುದಕ್ಕೆ ಬಳಸುತ್ತಾರೆ. ಕೋಳಿಗಳನ್ನು ವರಾಂಡಾದಲ್ಲಿ ಬಿದಿರುನ ಬುಟ್ಟಿಯ ಕೆಳಗೆ ಮುಚ್ಚಿ ಅದರ ಮೇಲೆ ಭಾರವಾದ ಕಲ್ಲು ಇಟ್ಟಿರುತ್ತಾರೆ. ಏಕೆಂದರೆ ಇವರು ವಾಸಿಸುವ ಬಯಲು ಪ್ರದೇಶದಲ್ಲಿ ಕಾಡು ಬೆಕ್ಕು, ಉಡ (ತೆಲುಗಿನಲ್ಲಿ ಯಂಟವಾ ಎಂದು ಕರೆಯುತ್ತಾರೆ) ಮುಂತಾದ ಪ್ರಾಣಿಗಳು ರಾತ್ರಿ ವೇಳೆಯಲ್ಲಿ ಕೋಳಿಗಳನ್ನು ಬೇಟೆಯಾಡುತ್ತವೆ. ಹಾಗಾಗಿ ಕೋಳಿಗಳನ್ನು ರಕ್ಷಿಸಲು ಬುಟ್ಟಿಯ ಮೇಲೆ ಕಲ್ಲುಗಳನ್ನು ಇಡುತ್ತಾರೆ. ಮಧ್ಯಾಹ್ನದ ವೇಳೆಯಲ್ಲಿ ಬಿಸಿಲು ಹೆಚ್ಚಾದಾಗ ಬುಟ್ಟಿ, ಚಾಪೆ, ಪೊರಕೆಗಳನ್ನು ವರಂಡಾದಲ್ಲೇ ಹೆಣೆಯುತ್ತಾರೆ. ವರಾಂಡವು ತೆಂಗಿನ ಗರಿಗಳಿಂದ ಹೆಣೆದು ಅವುಗಳನ್ನು ಕೋಲುಗಳಿಗೆ ಕಟ್ಟಿ ವರಂಡಾವನ್ನು ನಿರ್ಮಿಸಿರುತ್ತಾರೆ. ಇದರಿಂದ ಈ ಸಮುದಾಯಗಳಿಗೆ ತುಂಬ ಅನುಕೂಲವಾದ ಸ್ಥಳವಾಗಿರುತ್ತದೆ. ವಿಶಾಲವಾಗಿ ಇರುವುದರಿಂದ ಬೇಸಿಗೆಯಲ್ಲಿ ಮಲಗುವುದಕ್ಕೆ ಅನುಕೂಲವಾಗಿರುತ್ತದೆ. 

ಇನ್ನು ಈ ಸಮುದಾಯಗಳಲ್ಲಿ ಮಲಗುವಾಗ ಈಚಲು ಚಾಪೆಯನ್ನು ಬಳಸುತ್ತಾರೆ. ಈಗಲೂ ಈಚಲು ಚಾಪೆಯನ್ನು ಬಳಸುತ್ತಿರುವುದು ಈ ಪ್ರದೇಶಗಳಲ್ಲಿ ಕಂಡುಬರುತ್ತದೆ. ನೆಂಟರು ಬಂದರೂ ಕೆಳಗೆ ಈಚಲು ಚಾಪೆಯನ್ನು ಹಾಸುತ್ತಾರೆ. ಬಿದಿರು ದಬ್ಬೆಗಳಿಂದ ಹೆಣೆದ ಬುಟ್ಟಿಗಳಲ್ಲಿ ಬೇಳೆ ಕಾಳುಗಳನ್ನು ಹಾಕಿ ಸುರಕ್ಷಿತವಾಗಿ ಇಟ್ಟಿರುತ್ತಾರೆ. ಆಹಾರವನ್ನು ರಕ್ಷಿಸುವ ಹುಟ್ಟಿಯನ್ನು ನಡುಮನೆಯ ಮೂಲೆಯಲ್ಲಿ ಕಟ್ಟಿರುತ್ತಾರೆ. ನಂತರ ಬೇಟೆಯಾಡುವ ವಸ್ತುಗಳು ಬಲೆ, ಪಾಜಿ, ಬೆತ್ತಗಳು ವರಾಂಡದ ಮೂಲೆಯಲ್ಲಿ ಗುಡಿಸಲಿನ ಮರಗಳಿಗೆ ಕಟ್ಟಿರುತ್ತಾರೆ. ಹೀಗೆ ಗುಡಿಸಲು ಚಿಕ್ಕದಾಗಿದ್ದರೂ ಎಲ್ಲಾ ವಸ್ತುಗಳು ಇದರಲ್ಲಿ ಅಡಗಿಸಿಟ್ಟಿರುತ್ತಾರೆ.

ದಕ್ಕಲ ಕುಟುಂಬಗಳ ಸ್ನಾನದ ಕೊಳ ಗುಡಿಸಲು ಮುಂದೆ ತೆಂಗಿನ ಗರಿಗಳಿಂದ ತಡಿಕೆಯಾಗಿ ಕಟ್ಟಿ ಸುತ್ತಲೂ ಕೋಲುಗಳನ್ನು ನಾಟಿ ಅದಕ್ಕೆ ತೆಂಗಿನ ಗರಿಯ ತಡಿಕೆಯನ್ನು ಕಟ್ಟಿರುತ್ತಾರೆ. ನೀರು ಕಾಯಿಸಲು ಹೊರಗೆ ಒಲೆಯನ್ನು ಇಟ್ಟು ದೊಡ್ಡ ಮಣ್ಣಿನ ಬಾನೆಯನ್ನು ಇಟ್ಟು ನೀರನ್ನು ಕಾಯಿಸುತ್ತಾರೆ. ಪುರುಷರು ಬಯಲು ಪ್ರದೇಶದಲ್ಲೇ ಸ್ನಾನವನ್ನು ಮಾಡುತ್ತಾರೆ. ಸ್ತ್ರೀಯರು ಗುಡಿಸಲಿನ ಹೊರಗೆ ತಯಾರಿಸಿದ ತೆಂಗಿನ ಗರಿಗಳ ತಡಿಕೆಯನ್ನು ಆಶ್ರಯಿಸಿ ಸ್ನಾನವನ್ನು ಮಾಡುತ್ತಾರೆ. ಇನ್ನು ಕೆಲವರು ಸೀರೆಯನ್ನು ಕಟ್ಟಿ ಸ್ನಾನದ ಮನೆಯಾಗಿ ನಿರ್ಮಿಸಿರುತ್ತಾರೆ. ಈ ಸ್ನಾನದ ಮನೆಗಳು ಕೆಲವೊಮ್ಮೆ ಗಾಳಿಗೆ ತೂರಿಕೊಂಡು ಹೋಗುತ್ತವೆ. ಹೀಗೆ ಆರ್ಥಿಕ ಸುಧಾರಣೆ ಇಲ್ಲದೆ ದಕ್ಕಲ ಸಮುದಾಯಗಳು ಇನ್ನು ಗುಡಿಸಲುಗಳಲ್ಲಿ ವಾಸಿಸುವ ಸನ್ನಿವೇಶ ಈ ಪ್ರದೇಶಗಳಲ್ಲಿ ಕಂಡುಬರುತ್ತಿದೆ. ಸಮಾಜ ಎಷ್ಟೇ ಮುಂದುವರೆದರೂ ಈ ಸಮುದಾಯಗಳನ್ನೇ ಒಂದು ಹತೋಟಿಗೆ ತರುವುದಕ್ಕೆ ಸರ್ಕಾರದಿಂದ ನೀಡುವ ಸೌಲಭ್ಯಗಳು ಈ ಸಮುದಾಯಗಳವರೆಗೂ ತಲುಪುತ್ತಿಲ್ಲ. ಅನಕ್ಷರಸ್ಥರಾದ ಈ ಜನರಲ್ಲಿ ಮೂಲ ಸೌಕರ್ಯಗಳನ್ನು ಕಲ್ಪಿಸಿಕೊಳ್ಳುವುದರಲ್ಲಿ ವಿಫಲರಾಗಿದ್ದಾರೆ.

ಇತ್ತೀಚೆಗೆ ಸ್ವಲ್ಪಮಟ್ಟಿನ ಸುಧಾರಣೆ ಕಂಡುಕೊಂಡು ಹೆಂಚಿನ ಮನೆಗಳು ನಂತರ ಕೆಲವು ಸರ್ಕಾರಿಂದ ಮಂಜೂರಾದ ಮನೆಗಳನ್ನು ಪಡೆದುಕೊಂಡು ತಮ್ಮ ಆರ್ಥಿಕ ಹಣಕಾಸಿನ ಸ್ಥಿತಿಗತಿಗೆ ತಕ್ಕಂತೆ ಸ್ವಲ್ಪ ಹಣವನ್ನು ಹಾಕಿಕೊಂಡು ಮೂಲ ಸೌಲಭ್ಯಗಳನ್ನು ಕಲ್ಪಿಸಿಕೊಂಡಿದ್ದಾರೆ. ಇವರು ನಿರ್ಮಿಸಿಕೊಂಡಿರುವ ಮನೆಗಳಿಗೆ ಯಾವುದೇ ಪೂರ್ವಯೋಜಿತ ಯೋಜನೆಗಳ ಬಗ್ಗೆ ಯೋಚಿಸದೆ ತಮ್ಮ ಅಳತೆಗೆ ತಕ್ಕಂತೆ ಮನೆಗಳನ್ನು ನಿರ್ಮಾಣ ಮಾಡಿಕೊಂಡಿದ್ದಾರೆ. ಈ ಸಮುದಾಯಗಳ ಕೆರೆಗಳಲ್ಲಿ ನೀರಿನ ಅನುಕೂಲವಾಗಲೀ ಹಾಗೂ ಬೀದಿ ದೀಪಗಳಾಗಲೀ ಕಂಡು ಬಂದಿಲ್ಲ. ರಾತ್ರಿ ವೇಳೆಯಲ್ಲಿ ಕಣ್ಣು ಕಾಣದೆ ಇದ್ದರೂ ತೊಂದರೆಯಿಲ್ಲ, ಕಿವಿ ಕೇಳುತ್ತಿದ್ದರೆ ಸಾಕು ಎಲ್ಲಾ ಕೆಲಸಗಳು ತಾನಾಗೇ ನಡೆಯುತ್ತವೆ. ಏಕೆಂದರೆ ಈ ಕೇರಿಗಳಿಗೆ ಯಾವುದೇ ವಿದ್ಯುತ್ ದೀಪಗಳಿಲ್ಲದ ಕತ್ತಲೆಯ ಪ್ರದೇಶವಾದುದರಿಂದ ರಾತ್ರಿಯಲ್ಲಿ ಕಣ್ಣಿಗೆ ಹೆಚ್ಚು ಕೆಲಸವಿರುವುದಿಲ್ಲ. ಇನ್ನು ಕೆಲವು ಪ್ರದೇಶದಲ್ಲಿ ಕದ್ದು ಮುಚ್ಚಿ ಭಾಗ್ಯಜ್ಯೋತಿಯನ್ನು ಹಾಕಿಕೊಂಡಿದ್ದಾರೆ. ಇದು ಕಾನೂನಿನ ಪ್ರಕಾರ ತಪ್ಪಾದರೂ ತಿಂಗಳಿಗೆ ಹಣ ಪಾವತಿಸಲು ಈ ಸಮುದಾಯಗಳ ಆರ್ಥಿಕ ಸ್ಥಿತಿ ತುಂಬ ದುರ್ಬಲವಾಗಿದೆ. ಹಾಗಾಗಿ ರಾತ್ರಿ ಬೆಳಕಿಗಾಗಿ ಇವರು ಭಾಗ್ಯಜ್ಯೋತಿಯನ್ನು ಹಾಕಿಕೊಂಡಿದ್ದಾರೆ. ಹೀಗೆ ಸ್ವಲ್ಪಮಟ್ಟಿನ ನಾಗರಿಕ ಸಮಾಜದಲ್ಲಿ ಬದುಕು ಸಾಗಿಸಲು ಈ ಸಮುದಾಯಗಳು ಸ್ವಲ್ಪ ಮಟ್ಟಿನ ವಸತಿ ವ್ಯವಸ್ಥೆಯನ್ನು ಮಾಡಿಕೊಂಡಿದ್ದಾರೆ.

### ೨.೫. ಉಡುಗೆ-ತೊಡುಗೆ

ಮನುಷ್ಯನಿಗೆ ವಸತಿ ಎಷ್ಟು ಮುಖ್ಯವೋ ಅದಕ್ಕಿಂತ ಎರಡುಪಟ್ಟು ಉಡುಗೆ ತೊಡುಗೆಯು ಅಷ್ಟೇ ಮುಖ್ಯವಾಗಿರುತ್ತದೆ. ತನ್ನ ಮಾನ ರಕ್ಷಣೆಯನ್ನು ಕಾಪಾಡಿಕೊಳ್ಳಲು ವಸ್ತ್ರ ಬೇಕಾಗುತ್ತದೆ.

ಆದಿ ಮಾನವ ತನ್ನ ದೇಹವನ್ನು ಬೆಚ್ಚಗಿಡಲು ಎಲೆಗಳ ಮುಖಾಂತರ ಪ್ರಾರಂಭಿಸಿದ. ಮಾನವ ನಾಗರಿಕತೆಗೆ ತಕ್ಕಂತೆ ತನ್ನ ವಸ್ತ್ರಗಳನ್ನು ಬದಲಾಯಿಸಿಕೊಂಡು ಮಾನ ರಕ್ಷಣೆ ಮಾಡಿಕೊಂಡು ಬರುತ್ತಾ ಇಂದು ತನ್ನ ಅಲಂಕಾರಕ್ಕಾಗಿ ವಸ್ತ್ರಗಳನ್ನು ಧರಿಸುವಷ್ಟು ಮಟ್ಟಕ್ಕೆ ಬೆಳೆದಿದ್ದಾನೆ. ಹೀಗೆ ಸಮಾಜದಲ್ಲಿ ಆಯಾ ಜಾತಿ, ಧರ್ಮ, ಕುಲಕ್ಕೆ ತಕ್ಕಂತೆ ಉಡುಗೆ-ತೊಡುಗೆಗಳು ಧರಿಸುತ್ತಾರೆ. ಈ ಸಂಪ್ರದಾಯಗಳು ಆಯಾ ಕುಟುಂಬಗಳ ಪರಂಪರೆಗೆ ಅನುಗುಣವಾಗಿ ಬಂದಿರುವ ಸಾಂಸ್ಕೃತಿಕತೆಯಾಗಿದೆ. ಇಂತಹ ಸಾಂಸ್ಕೃತಿಕ ವಸ್ತ್ರಗಳು ಸಾಮಾಜಿಕಬದ್ಧತೆಗೆ ಅನುಗುಣವಾಗಿ ಹಲವಾರು ಸಮುದಾಯಗಳು ಇಂದಿಗೂ ಕಾಪಾಡಿಕೊಂಡು ಬಂದಿದ್ದಾರೆ. ಆರ್ಥಿಕತೆಗೆ ತಕ್ಕಂತೆ ಆಯಾ ಸಮುದಾಯಗಳು ತಮ್ಮ ಉಡುಗೆ ತೊಡಿಗೆಗಳನ್ನು ಹಾಕಿಕೊಳ್ಳುತ್ತಾರೆ. ಇಂತಹ ತಳ ಸಮುದಾಯಗಳಲ್ಲಿ ದಕ್ಕಲರು ಸಹ ಒಂದು ಸಮುದಾಯವಾಗಿದೆ. ಇವರ ಉಡುಗೆ ತೊಡುಗೆಗಳು ತುಂಬ ಸರಳವಾಗಿರುತ್ತದೆ. ಇವರಲ್ಲಿ ಆಡಂಬರದ ಉಡುಗೆ ತೊಡುಗೆಗಳು ಕಂಡುಬರುವುದಿಲ್ಲ. ಏಕೆಂದರೆ ಈ ಸಮುದಾಯಗಳ ಆರ್ಥಿಕ ಸ್ಥಿತಿಗತಿ ತೀರಾ ಕೆಳಸ್ತರದಲ್ಲಿ ಇರುವುದರಿಂದ ಸರಳವಾದ ಉಡಿಗೆ ತೊಡಿಗೆಯನ್ನು ಬಳಸುತ್ತಾರೆ. ಕೆಲವು ಸಂದರ್ಭದಲ್ಲಿ ಮಾದಿಗರ ಮನೆಗಳಲ್ಲಿ ವಸ್ತ್ರಗಳನ್ನು ಭಿಕ್ಷೆ ಬೇಡಿ ಅವುಗಳನ್ನು ಧರಿಸುವುದುಂಟು.

ಈ ಸಮುದಾಯಗಳಲ್ಲಿ ಸ್ತ್ರೀಯರು ಸೀರೆ ರವಿಕೆಯನ್ನು ಉಡುತ್ತಾರೆ. ಸೀರೆಯನ್ನು ಉಟ್ಟಾಗ ಎಡಗಡೆ ಸೆರಗನ್ನು ಹಾಕಿಕೊಳ್ಳುತ್ತಾರೆ. ಇದಕ್ಕೆ ತೆಲುಗಿನಲ್ಲಿ ಎಡಂ ಪೈಟು ಎಂದು ಕರೆಯುತ್ತಾರೆ. ಇನ್ನು ಕೆಲವು ಪ್ರದೇಶಗಳಲ್ಲಿ ಬಲಗಡೆ ಸೆರಗನ್ನು ಹಾಕಿಕೊಳ್ಳುತ್ತಾರೆ ಇದನ್ನು ಕುಡಿ ಪೈಟು ಎಂದು ಕರೆಯುತ್ತಾರೆ. ಇಂತಹ ಪದ್ಧತಿ ಇನ್ನು ಹಲವಾರು ಜಾತಿಗಳಲ್ಲಿ ಇರುವುದು ಕಂಡು ಬರುತ್ತದೆ. ಇವರಿಗೆ ಹಿಂದಿನ ತಲೆಮಾರುಗಳ ವೇಷ ಭೂಷಣಗಳ ಬಗ್ಗೆ ಅಷ್ಟು ಜ್ಞಾನವಿಲ್ಲದೆ ಇದ್ದರೂ ಹಳ್ಳಿಯ ಜನರ ಹಾಗೆ ಅತ್ಯಂತ ಸರಳ ಉಡುಗೆ ತೊಡುಗೆಗಳನ್ನು ಧರಿಸುತ್ತಾರೆ. ಗಂಡಸರಲ್ಲಿನ ವೇಷ ಭೂಷಣಗಳು ಯಾವದೇ ಸಂಪ್ರದಾಯದ ಶೈಲಿಯನ್ನು ಪ್ರತಿನಿಧಿಸದಿದ್ದರೂ, ಹೆಂಗಸರಲ್ಲಿ ಮಾತ್ರ ಅನಾದಿಕಾಲದಿಂದಲೂ ಒಂದು ವಿಶಿಷ್ಟ ಸಂಪ್ರದಾಯವನ್ನು ಹೊಂದಿದ ಎಡಪೈಟು ಮತ್ತು ಕುಡಿಪೈಟು ಎಂಬ ಪದ್ಧತಿ ಇದೆ. ಗಂಡಸರು ಬನಿನು, ಪ್ಯಾಂಟು, ಲುಂಗಿ ಟವಲು, ಚಡ್ಡಿ ಶರ್ಟು ಹಾಕಿಕೊಳ್ಳುತ್ತಾರೆ. ಸ್ತ್ರೀಯರು ಲಂಗ, ರವಿಕೆ, ಸೀರೆಯನ್ನು ಉಟ್ಟು ಮದುವೆಯಾದ ಮುತ್ತೈದೆಯರು ಹಣೆಯಲ್ಲಿ ಕುಂಕುಮವನ್ನು ಇಟ್ಟು ಮುಖದ ತುಂಬ ಹರಿಶಿಣ ಹಚ್ಚಿ ಕೈಯಲ್ಲಿ ಕರಿಬಳೆಯನ್ನು ತೊಟ್ಟು ಕಾಲಲ್ಲಿ ಕಾಲುಂಗುರ ಹಾಕಿ ತಮ್ಮ ಸಂಸ್ಕೃತಿಗೆ ತಕ್ಕಂತೆ ಅಲಂಕಾರ ಮಾಡಿಕೊಂಡಿರುತ್ತಾರೆ.

ಈ ಸಮುದಾಯಗಳ ಗಂಡು ಮಕ್ಕಳು ಅಂಗಿ ಮತ್ತು ಚಡ್ಡಿಯನ್ನು ಹಾಕಿಕೊಂಡಿರುತ್ತಾರೆ. ವಯಸ್ಸಿಗೆ ಬಂದ ಮಕ್ಕಳು ಲುಂಗಿ ಮತ್ತು ಶರ್ಟ್ ಹಾಕಿಕೊಂಡಿರುತ್ತಾರೆ. ಪೇಟೆಗೆ ಹೋದರೆ ಪ್ಯಾಂಟನ್ನೇ ಧರಿಸಿ ಹೋಗುತ್ತಾರೆ. ಹೆಣ್ಣು ಮಕ್ಕಳು ಲಂಗ ಮತ್ತು ರವಿಕೆಯನ್ನು ಧರಿಸುತ್ತಾರೆ.

ಇತ್ತೀಚೆಗೆ ಆಧುನಿಕತೆಯಿಂದ ಹೆಣ್ಣು ಮಕ್ಕಳು ಕಾಲಕ್ಕೆ ತಕ್ಕಂತೆ ಚೂಡಿದಾರ, ದಾವಣಿಯನ್ನು ಧರಿಸುತ್ತಾರೆ. ಸ್ನೋ ಪೌಡರು ಕಾಡಿಗೆ ಬಳಸುತ್ತಿದ್ದಾರೆ. ಸ್ವಲ್ಪ ಮಟ್ಟಿನ ಬದಲಾವಣೆ ಇಂದಿನ ಹೆಣ್ಣು ಮಕ್ಕಳಲ್ಲಿ ಕಂಡುಬರುತ್ತದೆ. ಚಿಕ್ಕ ಮಕ್ಕಳಿಗೆ ಅಂಗಿ ಕುಲಾವಿಯನ್ನು ಹಾಕಿ ಬೆಚ್ಚಗೆ ಇಟ್ಟಿರುತ್ತಾರೆ. ಕಾಲಿಗೆ ದೃಷ್ಟಿ ಆಗದಿರಲಿ ಎಂದು ಕರಿಮಣಿಯನ್ನು ಹೋಲಿದು ಅದನ್ನು ಕೈಗೆ ಕಟ್ಟಿರುತ್ತಾರೆ. ಹಣೆಗೆ ಮತ್ತು ಕೆನ್ನೆಯ ಮೇಲೆ ಕಾಡಿಗೆಯನ್ನು ಇಟ್ಟಿರುತ್ತಾರೆ. ಗಂಡು ಮಗುವಿಗೆ ಬಲಗಾಲಿಗೆ ಕರಿಯ ದಾರವನ್ನು, ಹೆಣ್ಣು ಮಗುವಿಗೆ ಎಡಗಾಲಿಗೆ ಕರಿಕಂಬಳಿಯ ದಾರವನ್ನು ದೃಷ್ಟಿಯಾಗದೆ ಇರಲಿ ಎಂದು ಕಟ್ಟುತ್ತಾರೆ. ಹೀಗೆ ಮಗುವಿನ ಮುಂಜಾಗ್ರತೆಯನ್ನು ಮಾಡಿ ಮಲಗಿಸುತ್ತಾರೆ. ಮಲಗಿರುವ ಮಗುವಿನ ಹತ್ತಿರ ಮುದ್ದೆ ತೋಳಿಸುವ ಕೋಲು ಹಾಗೂ ಕಬ್ಬಿಣ ಕುಡುಗೋಲು ಇಡುತ್ತಾರೆ. ಏಕೆಂದರೆ ತಾವು ತಮ್ಮ ಕೆಲಸಗಳಿಗೆ ಮಗ್ನರಾಗಿರುತ್ತೇವೆ ಆ ಸಂದರ್ಭದಲ್ಲಿ ಮಗುವಿನ ಕಾವಲುಗಾರನಾಗಿ ಈ ವಸ್ತುಗಳು ಕಾಪಾಡುತ್ತವೆ ಎಂದು, ದೆವ್ವ ಪಿಶಾಚಿಗಳು ಮಗುವಿನ ಬಳಿ ಸುಳಿಯಬಾರದು, ಕೆಟ್ಟ ದೃಷ್ಟಿ ಮಗುವಿನ ಮೇಲೆ ಬೀಳಬಾರದು ಎಂದು ಕಾವಲುಗಾರನಾಗಿ ಇಡುತ್ತಾರೆ.

**೨.೬. ಶಾಸ್ತ್ರ – ಸಂಪ್ರದಾಯಗಳು**

ಹುಟ್ಟಿದ ಮಗುವಿನ ಮೂರು ತಿಂಗಳು ತುಂಬಿದಾಗ ತಲೆ ಕೂದಲು ತೆಗೆಯುತ್ತಾರೆ. ಈ ಸಂದರ್ಭದಲ್ಲಿ ತವರು ಮನೆಯ ಕಡೆಯವರು ಸಂಪ್ರದಾಯ ಬದ್ಧವಾಗಿ ಶಾಸ್ತ್ರಕ್ಕೆ ಬೇಕಾದ ವಸ್ತುಗಳು ಮಗುವಿಗೆ ಹೊಸ ಬಟ್ಟೆ, ಬೆಳ್ಳಿ ಕಡಗಳು, ಚೈನು, ಸೊಂಟಕ್ಕೆ ಬೆಳ್ಳಿ ಉಡುದಾರ ತೆಗೆದುಕೊಂಡು ಬರಬೇಕಾಗುತ್ತದೆ. ಆದರೆ ಈ ಸಮುದಾಯಗಳ ಆರ್ಥಿಕ ಸ್ಥಿತಿಗತಿಯಿಂದ ಸಂಪ್ರದಾಯಬದ್ಧವಾಗಿ ಎಲ್ಲಾ ವಸ್ತುಗಳನ್ನು ತರದೆ ಇದ್ದರೂ ಅವರ ಸ್ಥಿತಿಗತಿಗೆ ತಕ್ಕಂತೆ ಕಡಿಮೆ ಬೆಲೆಯಲ್ಲಿ ಸ್ವಲ್ಪ ಮಟ್ಟಿನ ವಸ್ತುಗಳನ್ನು ತಂದು ಮಗುವಿನ ತಲೆ ಕೂದಲನ್ನು ತೆಗೆಸುವ ಶಾಸ್ತ್ರ ನೆರವೇರಿಸುತ್ತಾರೆ. ಇದಕ್ಕಾಗಿ ಭಿಕ್ಷೆ ಬೇಡಿಯೂ ಅಥವಾ ಕೂಲಿ ಕೆಲಸ ಮಾಡಿ ಹಣವನ್ನು ಕೂಡಿಸಿ ಮಗಳಿಗೆ ನೋವು ಆಗದಂತೆ ಈ ಸಂಪ್ರದಾಯವನ್ನು ಮಾಡುತ್ತಾರೆ. ಇಂತಹ ಸಂದರ್ಭದಲ್ಲಿ ಮಗುವಿಗೆ ಚಿನ್ನದ ಉಂಗುರ ಕೊಡಿಸುವುದಕ್ಕೆ ಆರ್ಥಿಕ ದುರ್ಬಲರಾದಾಗ ಎಲ್ಲಿಂದ ಕೊಡಿಸುವುದಕ್ಕೆ ಸಾಧ್ಯವಾಗುತ್ತದೆ. ಹಾಗಾಗಿ ಬೆಳ್ಳಿ ಕಡಗ ಅಥವಾ ಕಾಲಿಗೆ ಚೈನು ಕೊಡಿಸುತ್ತಾರೆ. ಇನ್ನು ಹೆಣ್ಣು ಮಕ್ಕಳಿಗೆ ಚಿಕ್ಕ ವಯಸ್ಸಿನಲ್ಲಿ ಮೂಗು ಮತ್ತು ಕಿವಿಗಳನ್ನು ಚುಚ್ಚಿ ಹಿತ್ತಾಳೆ ಓಲೆ ಮೂಗು ನತ್ತು ಇಡುತ್ತಾರೆ.

ಸಾಮಾನ್ಯವಾಗಿ ಈ ಸಮುದಾಯಗಳಲ್ಲಿ ಚಪ್ಪಲಿಗಳನ್ನು ಮುಟ್ಟುತ್ತಿರಲಿಲ್ಲ ಎಲ್ಲಿಗಾದರು ಹೋಗಬೇಕಾದರೆ ಬರಿಗಾಲಲ್ಲಿ ನಡೆದುಕೊಂಡು ಹೋಗುತ್ತಿದ್ದರು. ಆದರೆ ಸ್ವಲ್ಪಮಟ್ಟಿನ ಬದಲಾವಣೆಯಿಂದ ಈಗ ಚಪ್ಪಲಿಗಳನ್ನು ಮೆಟ್ಟುತ್ತಾರೆ. ಅದು ಫುಟ್‌ಪಾತ್‌ನಲ್ಲಿ ದೊರಕುವ ಕಡಿಮೆ ಬೆಲೆಯ ಚಪ್ಪಲಿಗಳಾಗಿವೆ. ನಂತರ ವಾಚು ಉಂಗುರ ಚಿನ್ನದ ಸರಗಳಂತೂ ಹಾಕಿಕೊಳ್ಳುವ

ಅದೃಷ್ಟ ಈ ಸಮುದಾಯಗಳಿಗೆ ಇಲ್ಲ. ಹೆಣ್ಣು ಮಕ್ಕಳು ಕಿವಿಗಳಲ್ಲಿ ಹಿತ್ತಾಳೆ ಓಲೆ, ಇದು ಸಹ ಕೈಯಿಂದ ತಯಾರಿಸಿದ್ದಾಗಿರುತ್ತದೆ ಹಾಗೂ ಹತ್ತು ರೂಪಾಯಿ ಕೊಟ್ಟು ತೆಗೆದುಕೊಂಡು ಹಾಕಿಕೊಳ್ಳುತ್ತಾರೆ. ಮದುವೆಯಾದ ಮಹಿಳೆಯರು ಕತ್ತಲ್ಲಿ ತಾಳಿಯು ಚಿನ್ನದಾಗಿರುತ್ತದೆ. ಅದಕ್ಕೆ ಕರಿ ಮಣಿಗಳಿಂದ ಪೋಣಿಸಿ ಹಾಕಿಕೊಂಡಿರುತ್ತಾರೆ. ಕೆಲವರು ಅರಿಸಿನ ದಾರವನ್ನು ಉಪಯೋಗಿಸಿ ಅದಕ್ಕೆ ತಾಳಿಯನ್ನು ಹಾಕಿಕೊಂಡಿರುತ್ತಾರೆ. ಕೈ ತುಂಬ ಬಳೆಗಳು ತೊಡಗಿಸಿಕೊಂಡು ಮುಖದ ತುಂಬ ಅರಿಸಿನವನ್ನು ಇಟ್ಟು ಹಣೆಯಲ್ಲಿ ಕುಂಕುಮ ಇಟ್ಟು ಕಿವಿ ಮತ್ತು ಮೂಗಿಗೆ ಸ್ವಲ್ಪ ಮಟ್ಟಿನ ಆಭರಣಗಳು ಹಾಕಿಕೊಳ್ಳುತ್ತಾರೆ. ಮುದಕಿಯರು ರವಿಕೆಯನ್ನು ಧರಿಸಿರುವುದಿಲ್ಲ ಇವರು ಸೆರಗನ್ನು ಹೊದ್ದುಕೊಳ್ಳುತ್ತಾರೆ. ಹೀಗೆ ಈ ಸಮುದಾಯಗಳ ಉಡುಗೆ ತೊಡುಗೆ ಸಾಮಾನ್ಯವಾಗಿರುತ್ತದೆ.

ಮದುವೆಯ ಸಂದರ್ಭದಲ್ಲಿ ಆರ್ಥಿಕ ಸ್ಥಿರತೆಗೆ ತಕ್ಕಂತೆ ಬಟ್ಟೆಗಳನ್ನು ಖರೀದಿಸುತ್ತಾರೆ. ಮದುವೆ ಹೆಣ್ಣಿಗೆ ಮಾತ್ರ ಸ್ವಲ್ಪಮಟ್ಟಿನ ಬೆಲೆಬಾಳುವ ಸಿಲ್ಕ್‌ಸೀರೆಗಳು ನಂತರ ಮುಹೂರ್ತಕ್ಕೆ ರೇಷ್ಮೆ ಸೀರೆಯನ್ನು ಹಾಗೂ ಗಂಡಿಗೆ ಮುಹೂರ್ದ ಬಟ್ಟೆಗಳು ತಕ್ಕಮಟ್ಟಿಗೆ ಬೆಲೆ ಇರುತ್ತದೆ. ಇದು ಸಹ ಹೆಣ್ಣಿನ ಕಡೆಯವರೇ ಕೊಡಿಸಬೇಕಾಗುತ್ತದೆ. ಗಂಡು ಮತ್ತು ಮದುವೆ ಹೆಣ್ಣಿಗೆ ಬಂಗಾರದ ಆಭರಣಗಳು ಆರ್ಥಿಕ ಸ್ಥಿತಿಗೆ ಅನುಗುಣವಾಗಿ ನೆಕ್ಲೆಸ್ ಅಥವಾ ಒಂದು ಸರ, ಹಣ ಇಲ್ಲದೆ ಇದ್ದರೆ ವಡವೆಗಳು, ಇಲ್ಲದೆ ಹಾಗೆ ಮದುವೆ ಮಾಡುತ್ತಾರೆ. ಮದುವೆ ಬಟ್ಟೆಗಳು ಮಾತ್ರ ಸಂಪ್ರದಾಯಬದ್ಧವಾಗಿ ಭಿಕ್ಷೆ ಬೇಡಿ ಅಥವಾ ಕೂಲಿ ಮಾಡಿಯಾದರೂ ಕೊಡಿಸಲೇ ಬೇಕಾಗುತ್ತದೆ. ಆದರೆ ಇತ್ತೀಚೆಗೆ ಸಮಾಜ ಬದಲಾವಣೆಯಾದಂತೆ ಇವರಲ್ಲಿ ಸ್ವಲ್ಪ ಮಟ್ಟಿನ ಬದಲಾವಣೆ ಕಂಡುಕೊಂಡು ಮದುವೆ ಗಂಡಿಗೆ ವಾಚು, ಉಂಗುರ, ಕೊಡಿಸುತ್ತಾರೆ. ಹೆಣ್ಣಿಗೆ ಚಿನ್ನದ ಸರ, ಚಿನ್ನದ ತಾಳಿಯನ್ನು ಮಾಡಿಸಿಕೊಡುತ್ತಾರೆ. ವರದಕ್ಷಿಣೆಯಂತು ಈ ಸಮುದಾಯಗಳಲ್ಲಿ ಎಲ್ಲಿಯೂ ಕಂಡುಬಂದಿಲ್ಲ. ವರದಕ್ಷಿಣೆ ಕೊಡುವುದಿಲ್ಲ. ಮದುವೆಯನ್ನು ಮನೆಯ ಮುಂದೆ ನೆರವೇರಿಸುತ್ತಾರೆ. ಮದುವೆಯಾದ ಒಂದು ತಿಂಗಳ ನಂತರ ಕರಿಮಣಿಗಳಿಂದ ಪೋಣಿಸಿ ಹಾಕಿಕೊಳ್ಳಬೇಕು ಅಲ್ಲಿಯ ತನಕ ಅರಿಶಿಣದ ದಾರದಿಂದ ಕಟ್ಟಿದ ತಾಳಿಯಲ್ಲೇ ಇರಬೇಕು.

ಇನ್ನು ದಕ್ಕಲದಲ್ಲಿ ಗಂಡಸರ ಉಡುಗೆಯು ಸರಳವಾದದ್ದು. ಹಿರಿಯರಲ್ಲಿ ಮನೆಯ ಯಜಮಾನ ಹಾಗೂ ದಕ್ಕಲರ ಸಂಪ್ರದಾಯವನ್ನು ನಿರ್ವಹಿಸುತ್ತಿರುವ ವ್ಯಕ್ತಿ ತಲೆಗೆ ಪೇಟವನ್ನು ಧರಿಸಿ ಕೋಟನ್ನು ಹಾಕಿಕೊಂಡು ನ್ಯಾಯ ಪಂಚಾಯಿತಿಗಳಲ್ಲಿ ಮದುವೆ ಸಂಪ್ರದಾಯಗಳಲ್ಲಿ ಮಿಂಚುತ್ತಾನೆ. ಇದು ಸಾಂಸ್ಕೃತಿಕ ಪದ್ಧತಿಯು ಹೌದು. ಅವರ ಕುಲ ಆಚರಣೆಯೂ ಹೌದು ಉಳಿದ ಸಂದರ್ಭಗಳಲ್ಲಿ ಪಂಚೆ ಮತ್ತು ಅಂಗಿಯನ್ನು ಧರಿಸುತ್ತಾನೆ. ವಯಸ್ಸಾದ ಮುದುಕರು ಪಂಚೆಯನ್ನು(ಕಚ್ಚೆಪಂಚೆ) ಕಟ್ಟುತ್ತಾರೆ. ಗಂಡಸರು ಹೆಗಲ ಮೇಲೆ ಟವಲು(ತೆಳು ವಸ್ತ್ರ) ಇಲ್ಲದೆ ತಲೆಗೆ ರುಮಾಲು ಕಟ್ಟಿರುತ್ತಾರೆ. ಹೀಗೆ ಸಮುದಾಯಗಳ ಗಂಡಸರ ಉಡುಗೆಯಾದರೆ ಇನ್ನು ಉಳಿದವರು ನಿಕ್ಕರು, ಬನಿನು ಧರಿಸುತ್ತಾರೆ.

ಎಲ್ಲಾ ಸಮುದಾಯಗಳ ಹಾಗೆ ಪ್ರತಿ ಹಬ್ಬ ಹರಿದಿನಗಳಿಗೆ ಹೊಸ ಬಟ್ಟೆಗಳನ್ನು ಖರೀದಿ ಮಾಡುವಷ್ಟು ಆರ್ಥಿಕತೆ ಇವರಲ್ಲಿ ಇಲ್ಲದ ಕಾರಣ ಹಳೆ ಬಟ್ಟೆಗಳನ್ನು ತೊಳೆದು ಅವುಗಳನ್ನು ಧರಿಸುತ್ತಾರೆ. ಸಮಾಜ ಎಷ್ಟೇ ಮುಂದುವರಿದರೂ ತಳಸಮುದಾಯಗಳ ಆರ್ಥಿಕ ಸ್ಥಿತಿ ಮಾತ್ರ ಪಾತಾಳಕ್ಕೆ ಇಳಿದಿರುವುದು ಶೋಚನೀಯವಾಗಿದೆ. ಇವರ ಮದುವೆ ಸಂದರ್ಭಗಳಲ್ಲಿ ಇವರು ಹಾಡುವ ಹಾಡುಗಳನ್ನು ಕೇಳಿದಾಗ ಈ ಸಮುದಾಯಗಳ ಆಭರಣಗಳು ಎಲ್ಲಾ ಸಮುದಾಯಗಳನ್ನು ಮೀರಿಸುವಂತೆ ಇರುತ್ತವೆ. ಹೊರತು ಇವರಲ್ಲಿ ಪ್ರತ್ಯೇಕ್ಷವಾಗಿ ನೋಡಿದಾಗ ಮಾತ್ರ ಯಾವುದೇ ಚಿನ್ನಾಭರಣಗಳು ಕಂಡುಬರುವುದಿಲ್ಲ. ಇವರ ಹಾಡುಗಳಲ್ಲಿ ಮಾವ ತಂದ ಕಾಸಿನ ಸರ ತಂದೆ ತಂದ ಕಾಲಿನ ಗೋಡಸುಗಳು ಗಂಡ ತಂದ ಬಂಗಾರದ ಬಳೆ ನಡುಪಟ್ಟಿ, ಕಡಿಯಾಲು (ಕಡಗ) ಓಲೆ ಮುಕ್ಕುಂ (ಮುಗುನೆತ್ತು) ಮಿಂಚು ಕುಪ್ಪಸ, ಇಳಕಲ್ ಸೀರೆ ಹೀಗೆ ಕುಟುಂಬದ ಎಲ್ಲಾ ಹೆಸರುಗಳು ಹಾಗೂ ಅವರು ತಂದ ಉಡುಗೊರೆಗಳ ಹೆಸರುಗಳನ್ನು ಸೇರಿಸಿಕೊಂಡು ಹಾಡುತ್ತಾರೆ. ಇದು ಕೇಳುವುದಕ್ಕೆ ಅಷ್ಟೆ ಇಂಪಾಗಿ ಇರುತ್ತದೆ ಹೊರತು ನೋಡುವುದಕ್ಕೆ ಇಲ್ಲ ಎಂಬ ಸತ್ಯ ಇಲ್ಲಿ ತಿಳಿಯಬಹುದು. ಹಾಗಾಗಿ ಈ ಸಮುದಾಯಗಳಲ್ಲಿ ಬಂಗಾರ, ಬೆಳ್ಳಿ, ಲೋಹದ ತೊಡುಗೆಗಳನ್ನು ತೊಡುತ್ತಿದ್ದರು ಎಂದು ಹಾಡುಗಳಲ್ಲಿ ಹೆಂಗಸರು ಹೇಳುತ್ತಿದ್ದರೇ ವಿನಃ ಯಾವುದೇ ಬೆಲೆ ಬಾಳುವ ಆಭರಣಗಳನ್ನು ಧರಿಸಿರುವುದು ಕ್ಷೇತ್ರಕಾರ್ಯದ ಅಧ್ಯಯನದಲ್ಲಿ ತಿಳಿದು ಬಂದಿಲ್ಲ. ಇದಕ್ಕೆ ಆರ್ಥಿಕತೆ ಒಂದು ಕಡೆ ಆದರೆ ಮತ್ತೊಂದು ಸಾಮಾಜಿಕ ಕಾರಣಗಳು ಇದ್ದಿರಬಹುದು. ಎಲ್ಲ ಬುಡಕಟ್ಟಿನವರಂತೆ ವಿಶಿಷ್ಟ ಹಾಗೂ ಸರಳ ವೇಷ ಭೂಷಣಗಳು ಇವರಲ್ಲಿಲ್ಲ. ಎಲ್ಲಾರ ಹಾಗೆ ಇವರ ಉಡುಗೆ ತೊಡುಗೆಗಳು ಒಂದೇ ಆದರೆ ಸ್ವಲ್ಪ ಮಟ್ಟಿನ ವ್ಯತ್ಯಾಸಗಳು ಇವರಲ್ಲಿ ಕಂಡುಬರುತ್ತವೆ.

ಈ ಸಮುದಾಯಗಳ ವಸತಿ ವ್ಯವಸ್ಥೆಯು ಆದಿ ಜಾಂಬವನ ಒಂದು ವರವಾಗಿದೆ ಏಕೆಂದರೆ ಗಂಗಭಾರತದ ಚಾರಿತ್ರಿಕ ಹಿನ್ನೆಲೆಯನ್ನು ಗಮನಿಸಿದಾಗ ಆದಿ ಜಾಂಬವನು ದಕ್ಕೆಯಿಂದ ಹುಟ್ಟಿದ ದಕ್ಕದ ಮಗುವನ್ನು ಎತ್ತಿಕೊಳ್ಳಲು ಹೋದಾಗ ಜಾಂಬವ ಮುನಿಗೆ ಬೆಂಕಿ ತಾಕಿ ಬಟ್ಟೆಗಳು ಸುಟ್ಟು ಹೋಗುತ್ತವೆ. ಆಗ ಜಾಂಬಮುನಿ ಈ ಮಗು ಯಾರಿಗೂ ದಕ್ಕದವನು ಇನ್ನು ಮುಂದೆ ಈ ದಕ್ಕಲ ಮಕ್ಕಳು ಮಾದಿಗರ ಕೇರಿಗಳ ಪಕ್ಕದಲ್ಲಿ ಗುಡಿಸಲು ಹಾಕಿಕೊಂಡು ಅವರ ಮನೆಗಳಲ್ಲಿ ಭಿಕ್ಷೆ ಬೇಡಿ ತಿನ್ನಬೇಕು ಎಂದು ಹೇಳಿ ಇವನು ಯಾರಿಗೂ ದಕ್ಕದವನು ಇವರು ಊರಿಂದ ಊರಿಗೆ ಅಲೆದು ಮಾದಿಗರ ಮನೆಗಳಲ್ಲಿ ಭಿಕ್ಷೆಯನ್ನು ಬೇಡಿ ತನ್ನ ಜೀವನವನ್ನು ಸಾಗಿಸಬೇಕು ಎಂದು ವರವಾಗಿ ನೀಡುತ್ತಾನೆ. ಹೀಗಾಗಿ ಊರಿಂದ ಊರಿಗೆ ಅಲೆಯುವ ದಕ್ಕಲ ಸಮುದಾಯಗಳಿಗೆ ವಸತಿ ವ್ಯವಸ್ಥೆ ಎಲ್ಲಿಂದ ಬರುವುದಕ್ಕೆ ಸಾಧ್ಯವಾಗುತ್ತದೆ. ನಂತರ ಇಡೀ ಭೂ ಮಂಡಲ ಸೃಷ್ಟಿಗೆ ಕಾರಣರಾದ ದಕ್ಕಲ ಸಮುದಾಯಗಳು ನೆಲೆಸುವುದಕ್ಕೆ ಭೂಮಿ ಇಲ್ಲದೆ ಇರುವುದಕ್ಕೆ ಇವರ ಮೂಲ ಪುರಾಣವೇ ಕಾರಣವಾಗಿದೆ. ಆದರೂ ತಮ್ಮ ಪುರಾಣವೇ ಪವಿತ್ರ

ಎಂದು ನಂಬಿ ಇಂದಿಗೂ ಮಾದಿಗರ ಕೇರಿಯ ಪಕ್ಕದಲ್ಲಿ ಗುಡಿಸಲುಗಳನ್ನು ಹಾಕಿಕೊಂಡು ಜೀವಿಸುತ್ತಿದ್ದಾರೆ. ಉಡುಗೆ-ತೊಡುಗೆ ತಮ್ಮ ಪೂರ್ವಿಕರು ಕಟ್ಟುನಿಟ್ಟುಗಳು ಇಲ್ಲದೆ ಇದ್ದರೆ ಉಡುಗೆ-ತೊಡುಗೆಗಳಿಗೆ ಪುರಾಣ ಹಿನ್ನೆಲೆ ಇಲ್ಲದೆ ಇದ್ದರೂ ತಮ್ಮದೇ ಆದ ನೀತಿ ನಿಯಮ ಹಾಗೆ ವಸ್ತ್ರಗಳನ್ನು ತೊಡಗುತ್ತಾರೆ. ಎಲ್ಲರ ಹಾಗೆ ಒಡವೆ ವಸ್ತ್ರಗಳನ್ನು ತೊಡುತ್ತಾರೆ. ಹೀಗಾಗಿ ಇವರ ಮೂಲ ಪುರಾಣವು ಈ ಸಮುದಾಯಗಳಿಗೆ ಶಾಪವಾಗಿ ಪರಿಗಣಿಸಿದೆಯೋ ಅಥವಾ ವರವಾಗಿ ಪರಿಗಣಿಸಿದೆಯೋ ತಿಳಿಯದ ವಿಷಯವಾಗಿದೆ. ಆದರೆ ಈ ಸಮುದಾಯಗಳು ಮಾತ್ರ ಅದನ್ನೇ ನಂಬಿ ಜೀವಿಸುತ್ತಿದ್ದಾರೆ.

**೨.೭. ಒಳಾಡಳಿತ ವ್ಯವಸ್ಥೆ**

ದಕ್ಕಲ ಸಮುದಾಯಗಳು ಮಾದಿಗರ ಉಪಜಾತಿಯಾದರೂ ಅದೆ ಅಲೆಮಾರಿ ಜನಾಂಗಕ್ಕೆ ಸೇರಿದವರು ಎಂದೇ ಗುರುತಿಸಿಕೊಂಡರು. ಈ ಸಮುದಾಯಗಳಿಗಿಂತ ಸ್ವಲ್ಪ ಭಿನ್ನತೆಯನ್ನು ಒಳಗೊಂಡಿದ್ದಾರೆ. ಈ ಸಮುದಾಯಗಳ ಮೂಲ ನೆಲೆ ಆಂಧ್ರ ಪ್ರದೇಶ. ಒಂದು ಕಡೆ ನೆಲೆ ನಿಂತು ಜೀವಿಸಲು ಸಾಧ್ಯವಾಗದೇ ದಕ್ಷಿಣ ಭಾರತದ, ಕರ್ನಾಟಕ, ಮಹಾರಾಷ್ಟ್ರ, ತಮಿಳುನಾಡು ಪ್ರದೇಶಗಳಿಗೆ ವಲಸೆ ಬಂದು ನೆಲೆ ನಿಂತಿದ್ದಾರೆ. ಹೀಗೆ ಈ ಸಮುದಾಯಗಳು ಒಂದು ಕಡೆ ನೆಲೆ ನಿಂತು ಜೀವಿಸಲು ಸಾಧ್ಯವಾಗದೆ ಛಿದ್ರಗೊಂಡಿದ್ದರೂ ಇತ್ತೀಚಿನ ಬದಲಾವಣೆಗಳಿಂದಾಗಿ ಒಳಾಡಳಿತ ವ್ಯವಸ್ಥೆ ಕ್ಷೀಣಿಸುತ್ತಾ ಬಂದಿದ್ದರೂ ಇದರ ಪ್ರಭಾವ ಸಂಪೂರ್ಣವಾಗಿ ನಶಿಸಿಹೋಗಿಲ್ಲವೆಂದು ಇವರು ಹೇಳುವ ಮಾಹಿತಿಯಲ್ಲಿ ತಿಳಿಯುತ್ತದೆ. ಯಾವುದೇ ಸಂಪ್ರದಾಯ, ನ್ಯಾಯ ಪಂಚಾಯಿತಿಗಳು ಇದ್ದರೂ ತಮ್ಮ ಕುಲಗಳು ಒಂದು ಕಡೆ ಸೇರುತ್ತವೆ. ಕನಿಷ್ಠ ಮಟ್ಟದ ಜನಸಂಖ್ಯೆ ಇದ್ದರೂ ಇವರಲ್ಲಿ ಹೊಂದಾಣಿಕೆ ಎಂಬುದು ಇಂದಿಗೂ ಹಾಗೆ ಉಳಿದಿದೆ. ಈ ಸಮುದಾಯಗಳ ಆಚಾರ ವಿಚಾರ, ಹಬ್ಬ-ಹರಿದಿನ, ಮದುವೆ, ಸಾವು, ಮನಸ್ತಾಪ, ಜಗಳ, ಹಲವು ಆಗುಹೋಗುಗಳು ಈ ಒಳಾಡಳಿತ ವ್ಯವಸ್ಥೆಯಲ್ಲಿ ಗಮನಿಸಬಹುದು.

ಒಳಾಡಳಿತ ವ್ಯವಸ್ಥೆಯಲ್ಲಿ ದಕ್ಕಲ ಸಮುದಾಯಗಳ ರಕ್ತ ಸಂಬಂಧಗಳಲ್ಲಿ ೧೨ ಬೆಡಗುಗಳನ್ನು ಕಾಣಬಹುದು. ಆ ಬೆಡಗುಗಳು ಪದ್ದರೆಡ್ಡೇಳು, ಚಿನ್ನ ರೆಡ್ಡೇಳು ರೇಣುಕುಂಟಳು, ಕರ್ನೇಳು, ಪಟ್ಟಿಟೋಳು, ನಲ್ಲ ಪೋಗುಲೋಳು, ಕಾಮಾಂಚೋಳು, ಪಿಶಿನೊಳ್ಳು, ಅಲ್ಲಮಳೋ ಹಿರಿಗಿನೋಳು, ಅಂತನೋಳು, ಶಾರಕುಂಟ ಜಗನ್ನಾಥೋಳು ಈ ಬೆಡುಗುಗಳ ರಕ್ತ ಸಂಬಂಧಗಳ ವಿವರವು ಮುಂದೆ ತಿಳಿಸಲಾಗಿದೆ. ಇದರಲ್ಲಿ ಪೆದ್ದ ರೆಡ್ಡೇಳೂ ಮತ್ತು ಚಿನ್ನ ರೆಡ್ಡೇಳು ಇವರು ರಕ್ತ ಸಂಬಂಧಗಳಾದರೆ ಉಳಿದ ೯ ಬೆಡುಗುಗಳು ರಕ್ತ ಸಂಬಂಧಗಳನ್ನು ಹಂಚಿಕೊಳ್ಳುವ ಸಂಬಂಧಗಳಾಗಿವೆ. ಆದರೆ ಶಾರಕುಂಟ ಜಗನ್ನಾಥೋಳು ಇವರು ಮಾತ್ರ ಅಣ್ಣ ತಮ್ಮಂದಿರ ಸಂಬಂಧವಾಗಲೀ ರಕ್ತ ಸಂಬಂಧವಾಗಲೀ ಬಂಧುತ್ವವನ್ನು ಬೆರೆಸಿಕೊಳ್ಳುವುದಾಗಲೀ ಇರುವುದಿಲ್ಲ. ಇವರು ದಕ್ಕಲಿಗರಾದರು ಇವರದೇ ಪ್ರತ್ಯೇಕ ಬೆಡಗಾಗಿದೆ. ರಕ್ತ ಸಂಬಂಧಗಳು ಬೆಳೆಸುವುದಕ್ಕೆ

ಬಿಡುವುದಿಲ್ಲ ಆದರೆ ಕೆಲವು ಸಂಪ್ರದಾಯಗಳಲ್ಲಿ ಮಾತ್ರ ಎಲ್ಲಾರೂ ಒಟ್ಟಿಗೆ ಮಾಡುತ್ತಾರೆ. ಈ ಸಂಬಂಧಗಳು ಮಾತ್ರ ಒಬ್ಬರನ್ನು ಒಬ್ಬರು ಬಿಟ್ಟು ಕೊಡುವುದಿಲ್ಲ. ಇವರಲ್ಲಿ ಹೊಂದಾಣಿಕೆ ಮಾತ್ರ ಗಟ್ಟಿಯಾಗಿರುವುದು ತಿಳಿದುಬರುತ್ತದೆ.

**ಪಂಚಾಯಿತಿ ಕಟ್ಟೆ**

ಪಂಚಾಯಿತಿ ಕಟ್ಟೆ ಎಂಬುವುದು ಮಧ್ಯಸ್ಥಿಕೆ ವ್ಯವಸ್ಥೆ ಎಂದು ಕರೆಯಲಾಗಿದೆ. ಇದು ಸಂಸ್ಕೃತಿಯ ಒಂದು ಅವಿಭಾಜ್ಯ ಅಂಗ ಎಂದು ಹೇಳಬಹುದು. ಹಿಂದಿನ ಪದ್ದತಿಗಳನ್ನು ಮೆಲುಕು ಹಾಕಿದಾಗ ಆಯಾ ಸಮುದಾಯಗಳಲ್ಲಿ ಪಂಚಾಯಿತಿ ಕಟ್ಟೆಗಳು ಇದ್ದು ಏನೇ ಸಮಸ್ಯೆಗಳು ಇದ್ದರೂ ಪಂಚಾಯಿತಿ ಕಟ್ಟೆಯ ಯಜಮಾನನ ಮುಂದೆ ಇಡುತ್ತಿದ್ದರು. ಅಲ್ಲಿ ಯಜಮಾನ ಮಧ್ಯಸ್ಥಿಕೆ ವಹಿಸಿ ಇಬ್ಬರಿಗೂ ಸಮಾನವಾಗಿ ನ್ಯಾಯ ಪರಿಹಾರ ಮಾಡುತ್ತಿದ್ದರು. ಒಂದು ವೇಳೆ ಯಾರು ತಪ್ಪಿತಸ್ತರಾಗಿರುತ್ತಾರೋ ಅವರಿಗೆ ದಂಡವಿಧಿಸುತ್ತಿದ್ದರು. ಆ ದಂಡವನ್ನು ಕಟ್ಟಿ ತಮ್ಮ ಸಮಸ್ಯೆಯನ್ನು ಬಗೆಹರಿಸಿಕೊಳ್ಳುತ್ತಿದ್ದರು. ಈ ಪಂಚಾಯಿತಿ ಕಟ್ಟೆಗಳು ಗ್ರಾಮೀಣ ಪ್ರದೇಶಗಳ ಭಾಗದಲ್ಲಿ ಕಾಣಬಹುದು. ಇಂತಹ ಪಂಚಾಯಿತಿ ಕಟ್ಟೆಗಳು ತನ್ನದೇ ಆದ ಗೌರವ ಮಹತ್ವವನ್ನು ಪಡಿದುಕೊಂಡಿದೆ. ಎಂತಹ ವ್ಯಕ್ತಿಯಾದರೂ ಪಂಚಾಯಿತಿ ಕಟ್ಟೆಯ ಯಜಮಾನನಿಗೆ ತಲೆ ಬಾಗುತ್ತಿದ್ದರು. ಇಂತಹ ಪದ್ಧತಿ ಈಗಲೂ ಕೆಲವು ಸಮುದಾಯಗಳಲ್ಲಿ ಉಳಿದುಕೊಂಡಿದೆ. ಆಧುನಿಕತೆಯ ವ್ಯವಸ್ಥೆಗಳು ಬದಲಾವಣೆಯಿಂದ ಕ್ಷೀಣಿಸುತ್ತಿದ್ದರೂ ಇದರ ಪ್ರಭಾವವನ್ನು ಸಂಪೂರ್ಣವಾಗಿ ನಶಿಸಿ ಹೋಗಿಲ್ಲವೆಂದು ದಕ್ಕಲ ಸಮುದಾಯಗಳಲ್ಲಿ ಇರುವ ಒಳಾಡಳಿತದಲ್ಲಿ ತಿಳಿಯುತ್ತದೆ. ಪಂಚಾಯಿತಿ ಕಟ್ಟೆಗಳು ವ್ಯವಸ್ಥೆ ನ್ಯಾಯಯುತದ ಬಗ್ಗೆ ಈ ಸಮುದಾಯಗಳು ಹೇಳುವ ಮಾಹಿತಿಯಲ್ಲಿ ತಿಳಿಯುತ್ತದೆ.

ದಕ್ಕಲರು ನ್ಯಾಯ ವ್ಯವಸ್ಥೆಗಾಗಿ ಪೊಲೀಸ್ ಸ್ಟೇಷನ್, ಕೋರ್ಟುಗಳಿಗೆ ಹೋಗದಂತೆ ಅವರು ನಂಬಿರುವ ಪಂಚಾಯಿತಿ ಕಟ್ಟೆಯಲ್ಲಿ ಮಾತ್ರವೇ ಪೊಲೀಸ್ ಸ್ಟೇಷನ್, ಕೋರ್ಟುಗಳಿಗೆ ಹೋಗಿ ಬಗೆಹರಿಸಿಕೊಳ್ಳುವುದಕ್ಕೆ ಈ ಸಮುದಾಯಗಳ ಆರ್ಥಿಕ ದುರ್ಬಲತೆ ಹೆಚ್ಚಾಗಿದ್ದು ಅಷ್ಟೇ ಅಲ್ಲದೆ ಕೋರ್ಟು, ಕಛೇರಿ ಹೋಗುವುದಕ್ಕೆ ಈ ಸಮುದಾಯಗಳು ಬಿಡುವುದಿಲ್ಲ. ಹಾಗಾಗಿ ಏನೇ ಸಮಸ್ಯೆಯಿದ್ದರೂ ಈ ಪಂಚಾಯಿತಿ ಕಟ್ಟೆಯ ಮುಖಾಂತರ ಬಗೆಹರಿಸಿಕೊಳ್ಳುತ್ತಾರೆ. ಇದುವರಿಗೂ ಈ ಸಮುದಾಯಗಳು ಕೋರ್ಟಿಗೆ ಹೋಗಿ ಸಮಸ್ಯೆಯನ್ನು ಬಗೆಹರಿಸಿಕೊಂಡಿರುವ ಉದಾಹರಣೆಗಳು ಈ ಪ್ರದೇಶಗಳಲ್ಲಿ ಕಂಡುಬರುವುದಿಲ್ಲ. ಹೀಗಾಗಿ ವರ್ತಮಾನ ಬದಲಾವಣೆಗಳು ಈ ಸಮುದಾಯಗಳಲ್ಲಿ ನ್ಯಾಯ ವ್ಯವಸ್ಥೆಯ ಮೇಲೆ ಯಾವುದೇ ಪ್ರಭಾವ ಬೀರಿಲ್ಲವೆಂದು ಹೇಳಬಹುದು. ಇವರ ನ್ಯಾಯ ತೀರ್ಮಾನಗಳು ಈ ಸಮುದಾಯಗಳು ವಾಸಿಸುವ ಸ್ಥಳದಲ್ಲಿ ಅಥವಾ ಅವರ ಕೇರಿಯಲ್ಲೇ ಸ್ಥಾಪಿಸಿಕೊಂಡು ದೇವಸ್ಥಾನದ ಮುಂಭಾಗದಲ್ಲಿ ನ್ಯಾಯ ಪಂಚಾಯಿತಿಗಳು ನಡೆಯುತ್ತವೆ.

ಈ ನ್ಯಾಯ ಪಂಚಾಯಿತಿಗಳು ಸಿಂಧ ಮಾದಿಗರು, ಮಾಷ್ಟೀಕರಲ್ಲಿ, ದಕ್ಕಲ ಸಮುದಾಯಗಳಲ್ಲಿ ಕಂಡುಬರುತ್ತದೆ. ಮಾದಿಗರ ಉಪಕುಲಗಳ ನ್ಯಾಯ ಪಂಚಾಯಿತಿ ಕಟ್ಟೆಯ ತೀರ್ಮಾನಗಳು ಒಂದೇ ಆಗಿರುತ್ತದೆ. ಈ ನ್ಯಾಯ ತೀರ್ಮಾನದ ಯಜಮಾನನ್ನು ನೇಮಿಸಿರುತ್ತಾರೆ. ಆ ಯಜಮಾನನೇ ಯಾವುದೇ ಸಮಸ್ಯೆ, ಹಬ್ಬ-ಹರಿದಿನಗಳು ಮಾಡಬೇಕಾದರೂ ಎಲ್ಲಾ ತೀರ್ಮಾನಗಳಿಗೂ ಮುಖ್ಯಸ್ಥನಾಗಿರುತ್ತಾನೆ. ಹೀಗೆ ಆಯ್ಕೆಯಾದ ಕುಲದ ಯಜಮಾನನ ಜೊತೆ ಉಳಿದ ಹಿರಿಯರು ಸಭೆ ಸೇರಿ ಮುಂದಿನ ಕಾರ್ಯ ಚಟುವಟಿಕೆಗಳ ಬಗ್ಗೆ ಚರ್ಚಿಸುತ್ತಾರೆ. ಈ ಸಮುದಾಯಗಳಲ್ಲಿ ತೀರ್ಮಾನದ ನಿಯಮಗಳನ್ನು ಉಲ್ಲಂಘಿಸಿದರೆ ಅದರ ವಿರುದ್ಧವಾಗಿ ನಡೆದರೆ ಕುಲದ ದೊಡ್ಡವರು ಮತ್ತೆ ಪಂಚಾಯಿತಿ ಇಡುತ್ತಾರೆ. ನಿಯಮಗಳನ್ನು ಉಲ್ಲಂಘಿಸಿದ ಕುಲದ ಎಲ್ಲರನ್ನೂ ಪಂಚಾಯಿತಿ ಕಟ್ಟೆಯ ಮುಂದೆ ನಿಲ್ಲಿಸುತ್ತಾರೆ. ಆಗ ತಪ್ಪು ಒಪ್ಪುಗಳನ್ನು ಚರ್ಚಿಸಿ ತಪ್ಪಿತಸ್ತರಿಗೆ ದಂಡ ವಿಧಿಸಿ ಮುಂದೆ ತಪ್ಪು ಮಾಡದಂತೆ ಪ್ರಮಾಣ ಮಾಡಿಸುತ್ತಾರೆ. ದಂಡದ ಹಣವು ನ್ಯಾಯಕ್ಕೆ ಸೇರಿದ ಎಲ್ಲಾರಿಗೂ ಹಾಗೂ ಕುಲಗಳ ಎಲ್ಲರಿಗೂ ಮಾಂಸದ ಊಟವನ್ನು ಹಾಗೂ ಸಾರಾಯಿಯನ್ನು ಕೊಡಿಸಿ ತಿಂದು ತೇಗಿ ಕುಪ್ಪಳಿಸುತ್ತಾರೆ.

**ನ್ಯಾಯ ತೀರ್ಮಾನ**

ಪಂಚಾಯತಿ ಕಟ್ಟೆಯು ಒಂದು ನ್ಯಾಯ ದೇವತೆಯಾಗಿದ್ದು ಇಲ್ಲಿ ಬರುವ ಹೆಣ್ಣಾಗಲೀ ಗಂಡಾಗಲೀ ಮಕ್ಕಳಾಗಲೀ ಯಾರೆ ಆದರೂ ನೀತಿ ನಿಯಮಗಳನ್ನು ಪಾಲಿಸಬೇಕಾಗುತ್ತದೆ. ಹಾಗೂ ತಪ್ಪುಗಳನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಇನ್ನು ನ್ಯಾಯ ತೀರ್ಮಾನ ಮಾಡುವ ಮುಖ್ಯಸ್ಥರು ಮತ್ತು ಗಣಾಚಾರಿ ಸಮುದಾಯದ ಯಜಮಾನನಿಗೆ ದೂರುಗಳನ್ನು ಸಲ್ಲಿಸಲಾಗುವುದು. ಮುಖಂಡನು ಕುಲಸ್ಥರ ನಡುವೆ ಚರ್ಚಿಸಿ ನಿರ್ದಿಷ್ಟವಾದ ಕಾಲದಲ್ಲಿ ಎಲ್ಲರಿಗೂ ಅನುಕೂಲವಾದ ದಿನವನ್ನು ನಿಗದಿಗೊಳಿಸಿ ಕೇರಿಯ ದೇವಸ್ಥಾನದ ಬಳಿ ಎಲ್ಲರೂ ಸೇರಿ ಪಂಚಾಯಿತಿ ನಡೆಸುವರು. ಮೊದಲಿಗೆ ಆ ದೇವಸ್ಥಾನದ ದೇವರ ಮುಂದೆ ಪ್ರಮಾಣೀಕರಿಸಿ ನ್ಯಾಯವನ್ನು ಪ್ರಾರಂಭಿಸುವರು. ಇದು ಈ ಸಮುದಾಯಗಳ ಮುಖ್ಯ ಸುಪ್ರೀಂಕೋರ್ಟ್ ಆಗಿರುತ್ತದೆ. ದೂರು ದಾಖಲಿಸಿರುವ ಕುಲಗಳ ಮಾಹಿತಿಯನ್ನು ಆಧರಿಸಿ ನ್ಯಾಯ ತೀರ್ಮಾನ ಮಾಡುತ್ತಾರೆ. ಇಲ್ಲಿಯೂ ಪರ ವಿರೋಧಗಳ ವಾದ-ವಿವಾದಗಳು ನಡೆಯುತ್ತವೆ. ನೀಡಿದ ಮಾಹಿತಿಯ ಆಧಾರದ ಮೇಲೆ ತಪ್ಪಿತಸ್ಥರನ್ನು ಮುಂದೆ ನಿಲ್ಲಿಸಿ ಸರಿಯಾದ ರೀತಿಯಲ್ಲಿ ತೀರ್ಮಾನವನ್ನು ತೆಗೆದುಕೊಳ್ಳುತ್ತಾರೆ. ನಂತರ ನ್ಯಾಯ ತೀರ್ಮಾನ ಮಾಡಿದ ಮೇಲೆ ತಪ್ಪಿತಸ್ಥರಿಗೆ ದಂಡವನ್ನು ವಿಧಿಸಿ ಇದಕ್ಕಾಗಿರುವ ವೆಚ್ಚವನ್ನು ದೂರುದಾರರು ಮತ್ತು ತಪ್ಪಿತಸ್ಥರಿಂದ ಭರಿಸಲಾಗುತ್ತದೆ. ಪಂಚಾಯಿತಿ ವ್ಯವಸ್ಥೆಗೆ ಬರುವ ದೂರುಗಳು ಮದುವೆ, ಗಲಾಟೆಗಳು, ಪ್ರೀತಿಸಿ ಮದುವೆಯಾಗಿರುವುದು, ಅಕ್ರಮ ಸಂಬಂಧಗಳು, ಕುಲದ ರೀತಿ ನೀತಿಗಳ ವಿರುದ್ದವಾಗಿ ನಡೆದುಕೊಂಡರೆ, ಹಣ ಹಂಚಿಕೆಯ ಸಮಸ್ಯೆ ಗಂಡ ಹೆಂಡತಿಯರು ಜಗಳಗಳು ಮುಂತಾದ ಪಂಚಾಯಿತಿ ಕಟ್ಟೆಗೆ ದೂರುಗಳು ಬರುತ್ತವೆ.

ಒಂದು ವೇಳೆ ಅನೈತಿಕ ಸಂಬಂಧಗಳಿಗೆ ಸಂಬಂಧಿಸಿದಂತೆ ಅಥವಾ ಇತರ ಕುಲಗಳೊಂದಿಗೆ ಪ್ರೀತಿಸಿ ಮದುವೆಯಾಗಿದ್ದರೆ ಇದರಲ್ಲಿ ತೊಡಕು ಉಂಟಾದಾಗ ಈ ದೂರುಗಳು ಕುಲಸ್ಥರ ಯಜಮಾನನ ಗಮನಕ್ಕೆ ತರದೆ ಪೊಲೀಸ್ ಠಾಣೆಯಲ್ಲಿ ದೂರು ದಾಖಲಿಸಿ ಕೋರ್ಟು ಮೆಟ್ಟಿಲು ಏರಿದರೆ ವಿವಾಹದ ಸಂಬಂಧಗಳು ಯಾರಾದರೂ ಯಜಮಾನನ ಗಮನಕ್ಕೆ ತಂದು ತಕ್ಷಣವೇ ಪಂಚಾಯಿತಿ ಇಡುತ್ತಾರೆ. ದೂರು ದಾಖಲಿಸಿದ ವ್ಯಕ್ತಿಯು ತಪ್ಪಿತಸ್ಥನ ಸ್ಥಾನದಲ್ಲಿ ಇರುತ್ತಾನೆ. ಈ ಕುಟುಂಬವನ್ನು ತಮ್ಮ ಕುಲಗಳಿಂದ ಬಹಿಷ್ಕರಿಸುವರು. ಯಾವುದೇ ಶುಭ ಕಾರ್ಯಗಳಲ್ಲಿ ಭಾಗವಹಿಸುವ ಹಾಗಿಲ್ಲ. ಕಟ್ಟೆ ಮನೆಯ ಪಂಚಾಯಿತಿದಾರರು ನೀಡುವ ಶಿಕ್ಷೆಗೆ ಅರ್ಹರಾಗುವರು. ಅವರಿಂದ ದಂಡವನ್ನು ವಸೂಲಿ ಮಾಡಿ ಪ್ರಧಾನವಾದ ಎರಡು ಬೆಡಗುದಾರರಿಗೂ ಹಂಚಲಾಗುತ್ತದೆ. ಹಾಗಾಗಿ ಈ ಸಮುದಾಯಗಳಲ್ಲಿ ಯಾರು ಪೊಲೀಸ್ ಠಾಣೆ, ಕೋರ್ಟು ಕಛೇರಿಗಳಿಗೆ ಹೋಗುವುದಿಲ್ಲ. ಏನೇ ಸಮಸ್ಯೆಗಳಿದ್ದರೂ ತಮ್ಮ ಯಜಮಾನನ ಬಳಿಯೇ ಬಗೆಹರಿಸಿಕೊಳ್ಳುತ್ತಾರೆ.

ಈ ಸಮುದಾಯಗಳಲ್ಲಿ ತಪ್ಪಿತಸ್ಥರು ದಂಡವನ್ನು ಕಾಣಿಕೆಯಾಗಿ ನೀಡಿ ನಂತರ ಕ್ಷಮೆ ಕೋರಬೇಕಾಗುತ್ತದೆ. ನ್ಯಾಯ ತೀರ್ಮಾನದ ಕೊನೆಯಲ್ಲಿ ಕುಲಸ್ಥರಿಗೆಲ್ಲಾ ತಾಂಬೂಲ, ಮಾಂಸ, ಹೆಂಡ ಸಾರಾಯಿ ನೀಡಿ ಅವರು ಬಂದು ಹೋಗುವ ಖರ್ಚು ವೆಚ್ಚಗಳನ್ನು ಭರಿಸಬೇಕು. ಒಂದು ವೇಳೆ ನೀಡದೇ ಇದ್ದರೆ ಅದಕ್ಕೂ ದಂಡ ವಿಧಿಸುತ್ತಾರೆ. ಹೀಗಾಗಿ ಯಜಮಾನನ ತೀರ್ಮಾನಕ್ಕೆ ಒಪ್ಪಿ ಎಲ್ಲರಿಗೂ ಮರ್ಯಾದೆಯನ್ನು ಮಾಡಿ ಕಳುಹಿಸಿಕೊಡುವರು.

**ದಕ್ಕಲರ ಕುಲಶಾಸ್ತ್ರ**

ಪ್ರತಿ ಸಮುದಾಯಗಳ ಒಳಾಡಳಿತ ವ್ಯವಸ್ಥೆಯಲ್ಲಿ ತಮ್ಮದೇ ಆದಂತಹ ಕುಲ ಶಾಸ್ತ್ರಗಳನ್ನು ಒಳಗೊಂಡಿದ್ದು ಕುಲಶಾಸ್ತ್ರಗಳು ಸಾಂಸ್ಕೃತಿಕ ಪ್ರತೀಕವಾಗಿದ್ದು ಆಯಾ ಸಮುದಾಯಗಳಿಗೆ ತಕ್ಕಂತೆ ಆಚರಿಸುವ ಶಾಸ್ತ್ರಗಳು ಪರಿವರ್ತನೆಯ ಪಲ್ಲಟಗಳಿಗೆ ತಲೆದೂಗದೆ ಸಾರ್ವತ್ರಿಕ ಸಂಸ್ಕೃತಿ ಇಂದಿಗೂ ಅದೇ ಅಲೆಮಾರಿಗಳಲ್ಲಿ ಸಾಂಸ್ಕೃತಿಕ ಆಚರಣೆಗಳು ಯಥಾವತ್ತಾಗಿ ಮುಂದುವರಿಸಿಕೊಂಡು ಬರುತ್ತಿರುವುದು ಕ್ಷೇತ್ರಕಾರ್ಯದಲ್ಲಿ ತಿಳಿದು ಬಂದಿದೆ. ಬುಡಕಟ್ಟು ಸಮುದಾಯಗಳು, ಬೇಡರ ಕುಲಗಳು, ಮಾಸ್ತೀಕರು, ಸಿಂಧ್ ಮಾದಿಗರು, ದಕ್ಕಲರಲ್ಲಿ ಇಂದಿಗೂ ಸಾಂಸ್ಕೃತಿಕ ಕುಲಶಾಸ್ತ್ರಗಳು ನಂಬಿಕೊಂಡು ಅವುಗಳನ್ನು ಜೀವನದಲ್ಲಿ ಮುಂದುವರಿಸಿಕೊಂಡು ಹೋಗುತ್ತಿದ್ದಾರೆ. ಸ್ವಲ್ಪಮಟ್ಟಿನ ಬದಲಾವಣೆಯಿದ್ದರೂ ಪೂರ್ತಿಯಾಗಿ ಮರೆಮಾಚಿಲ್ಲವೆಂದು ಹೇಳಬಹುದು. ದಕ್ಕಲರು ಸಹ ಅಲೆಮಾರಿ ಅವಸ್ಥೆಯಲ್ಲಿಯೇ ಜೀವಿಸುತ್ತಿದ್ದು ಸಾಂಸ್ಕೃತಿಕ ದಕ್ಕಲರು ಸಹ ಅಂಟಿಕೊಂಡೆ ಜೀವಿಸುತ್ತಿರುವುದು ಈ ಪ್ರದೇಶಗಳಲ್ಲಿ ದಕ್ಕಲ ಸಮುದಾಯಗಳಲ್ಲಿ ಗಮನಿಸಬಹುದು.

ದಕ್ಕಲರ ಕುಲಶಾಸ್ತ್ರವು ಆದಿಜಾಂಬವ ನೀಡಿರುವ ವರ ಪ್ರಧಾನ ಒಂದು ವ್ಯವಸ್ಥೆಯಾಗಿದೆ. ದಕ್ಕೆಯಿಂದ ಹುಟ್ಟಿದ ದಕ್ಕದ ಮುನಿಯನ್ನು ಆದಿ ಜಾಂಬವನು ತುಂಬ ಪ್ರೀತಿಯಿಂದ ನೋಡುತ್ತಾನೆ. ದಕ್ಕದ ಕುಮಾರನು ಹುಟ್ಟಿದಾಗ ಅವನನ್ನು ಎತ್ತಿಕೊಳ್ಳಲು ಹೋದಾಗ ಜಾಂಬವನ ಬಟ್ಟೆಗಳು

ಸುಡುತ್ತವೆ. ಆಗ ಜಾಂಬವ ಮುನಿ ಇವರು ಯಾರಿಗೂ ದಕ್ಕದವನು ಎಂದು ಹೇಳಿ ಇವನಿಗೆ ವರವನ್ನು ಪ್ರಧಾನ ಮಾಡುತ್ತಾನೆ. ಮಾದಿಗರ ಮನೆಗಳು ಇವರಿಗೆ ಆಶ್ರಯವಾಗಿರುತ್ತವೆ ಎಂತಹ ಸಂದರ್ಭದಲ್ಲಿ ದಕ್ಕಲ ಮಕ್ಕಳನ್ನು ಉಪವಾಸ ಇಡದೇ ಭಿಕ್ಷೆಗೆ ಬಂದಾಗ ಅವರನ್ನು ವಾಪಸ್ಸು ಕಳುಹಿಸುವ ಹಾಗಿಲ್ಲ ಎಂದು ಮಾದಿಗರಿಗೆ ಇವರನ್ನು ಪೋಷಿಸುವ ಜವಾಬ್ದಾರಿಯನ್ನು ನೀಡುತ್ತಾನೆ. ನಂತರ ಜಾಂಬವ ಕೊಟ್ಟ ಛತ್ರಿ, ಶಿವ ಕೊಟ್ಟ ಈಚಲು ಚಾಪೆ, ಬ್ರಹ್ಮ ಕೊಟ್ಟ ಬಿದುರು ಕೋಲು ಇವರ ಆಶ್ರಯವಾಗಿ ಇವರು ಮಾದಿಗರಲ್ಲಿ ಭಿಕ್ಷೆ ಬೇಡಿ ತಿನ್ನುತ್ತಾರೆ. ನಂತರ ಈ ಸಮುದಾಯಗಳು ಮಾದಿಗರ ಮನೆಗಳು ಬಿಟ್ಟು ಬೇರೆ ಸಮುದಾಯಗಳಲ್ಲಿ ಭಿಕ್ಷೆ ಬೇಡುವ ಹಾಗಿಲ್ಲ ಎಂದು ಶಾಪವನ್ನು ನೀಡುತ್ತಾನೆ. ಆಗ ಕೊಟ್ಟ ವರ ಪ್ರಧಾನವಾಗಿದೆ. ಪಾರಂಪರಿಕವಾಗಿ ಕುಲಶಾಸ್ತ್ರವನ್ನು ಮುಂದುವರಿಸಿಕೊಂಡು ಬರುತ್ತಿದ್ದಾರೆ. ಹೀಗಾಗಿ ಕುಲ ಪದ್ಧತಿಯ ಪ್ರಕಾರ ಮಾದಿಗರ ಕೇರಿಗಳ ಪಕ್ಕದಲ್ಲಿ ಗುಡಿಸಲುಗಳನ್ನು ಹಾಕಿಕೊಂಡು ಮಾದಿಗರ ಮನೆಯಲ್ಲಿ ಭಿಕ್ಷೆ ಬೇಡಿ ತಿನ್ನುತ್ತಿದ್ದಾರೆ. ಮಾದಿಗರನ್ನು ಇಂದಿಗೂ ದೈವ ಭಾವವಾಗಿ ನಂಬಿ ಅವರ ನೆರಳಲ್ಲಿ ಬದುಕುತ್ತಿದ್ದಾರೆ. ಇದರಿಂದಾಗಿ ಒಳಪಂಗಡವಾಗಿ ತಮ್ಮ ಕುಲ ಮೂಲಗಳನ್ನು ತೊರೆಯದೆ ಅಳವಡಿಸಿಕೊಂಡಿದ್ದಾರೆ. ಸಾಂಸ್ಕೃತಿಕ ವೈದಿಕತೆ ಮೀರಿದ ಈ ಸಮುದಾಯಗಳು ಯುಗಗಳನ್ನು ನಿರ್ಮಿಸಿ ಲೋಕಸೃಷ್ಟಿ ಆದಿಜಾಂಬವನ ಪರಂಪರೆಗೆ ದಕ್ಕಲರ ಸಾಂಸ್ಕೃತಿಕ ಪರಂಪರೆ ಬೆರತುಕೊಂಡಿದೆ. ಹಾಗಾಗಿ ಇಂದಿಗೂ ಜಾಂಬವನನ್ನು ಕುಲದೈವ ಎಂದು ಪೂಜಿಸುತ್ತಾರೆ.

ಇನ್ನು ಈ ಸಮುದಾಯಗಳಲ್ಲಿ ಯಾವುದೇ ಮದುವೆ ಕಾರ್ಯಗಳಿಗೆ ಹಾಗೂ ಸಾವು ತಿಥಿ ಕಾರ್ಯಗಳ ಸಂದರ್ಭದಲ್ಲಿ ದಕ್ಕಲರ ಸಮುದಾಯಗಳಲ್ಲಿ ಬ್ರಾಹ್ಮಣರ ಪುರೋಹಿತ್ವಕ್ಕೆ ಅವಕಾಶವಿಲ್ಲ. ದಕ್ಕಲರ ದೊಡ್ಡ ವ್ಯಕ್ತಿ ಗುರುವಾಗಿರುತ್ತಾನೆ. ಅವರದೇ ಎಲ್ಲಾ ಕಾರ್ಯ ವಿಧಾನಗಳು ಪಾರುಪತ್ಯ. ಹುಟ್ಟಿನ ಸಂಸ್ಕಾರದಿಂದ ಎಲ್ಲಾ ಆಚರಣೆಗಳು ಮುಖ್ಯಸ್ಥರೇ ಮುಂದೆ ನಿಂತು ಮಾಡುತ್ತಾರೆ. ಈ ಸಂಪ್ರದಾಯ ಕೋಲಾರ ಪ್ರದೇಶಗಳಾದ ಶ್ರೀನಿವಾಸಪುರ, ಮಾದವಗುರ್ಜೀನಹಳ್ಳಿ, ಸುಗಟೂರು, ಹೆಚ್. ಕ್ರಾಸ್, ಚಿಂತಾಮಣಿ ಈ ಪ್ರದೇಶಗಳಲ್ಲಿ ವಾಸಿಸುವ ಸಮುದಾಯಗಳಲ್ಲಿ ಏನೇ ಆಚರಣೆಗಳಿದ್ದರೂ ಕುಲದ ಗುರುಗಳು ಮುಂದಿರುತ್ತಾರೆ. ನಂತರ ಮದುವೆಯ ಮಾತುಕತೆಯ ಮುಂದಿನ ಮನುಷ್ಯನ ಕುಲ ಯಜಮಾನ ಯಾರ ಹೆಣ್ಣನ್ನು ನೋಡಲು ಬಂದಾಗ ನಂತರ ಮದುವೆಯಲ್ಲಿ ಗಂಡು ಹೆಣ್ಣಿಗೆ ತಾಳಿ ಕಟ್ಟುವಾಗ ಕುಲದ ಮುಖ್ಯಸ್ಥರೇ ಪುರೋಹಿತರಾಗಿರುತ್ತಾರೆ.

ಈ ಸಮುದಾಯಗಳಲ್ಲಿ ಯಾರಾದರೂ ಸತ್ತಾಗ ಕುಲದ ಯಜಮಾನ ಮುಂದೆ ಇದ್ದು ತಮ್ಮ ಕುಲಸ್ಥರಿಗೆ ಎಲ್ಲಾ ತಿಳಿಸಿ ಸತ್ತ ವ್ಯಕ್ತಿಯ ಕಾರ್ಯಗಳನ್ನು ಮಾಡಲು ಇವರೇ ಮುಂದೆ ನಿಂತು ಶಾಸ್ತ್ರಗಳನ್ನು ಹೇಳಿಕೊಡುತ್ತಾನೆ. ಶವವನ್ನು ಹೂಳುವಾಗ ಶಾಸ್ತ್ರ ವಿಧಾನಗಳು ಮಾಡಿಸುತ್ತಾನೆ. ನಂತರ ಮೂರು ದಿನನದ ಕೂಳು ಶಾಸ್ತ್ರಗಳು ಇವರೇ ನೆರವೇರಿಸುತ್ತಾರೆ. ನಂತರ ೧೧ ದಿನದ ತಿಥಿ ಹಾಗೂ ತಿಂಗಳ ತಿಥಿಯಲ್ಲಿ ಬ್ರಾಹ್ಮಣರನ್ನು ಕರೆಯುವುದಿಲ್ಲ. ಯಾವ ಕಾರ್ಯಕ್ಕೂ ಬ್ರಾಹ್ಮಣರಿಗೆ ಆಹ್ವಾನವಿಲ್ಲ. ತಿಥಿಯ ದಿನ ಪುನೋಜನ ಮಾಡುವುದು, ಕುಲದ ಯಜಮಾನನ

ಪುರೋಹಿತನಾಗುತ್ತಾನೆ. ಈ ಪ್ರದೇಶದಲ್ಲಿ ಸುಗಟೂರು ನಾರಾಯಣಪ್ಪ ಈ ಕಾರ್ಯಗಳನ್ನು ಮಾಡುತ್ತಾನೆ. ನಂತರ ಪುನೋಜನದ ನೀರನ್ನು ಎಲ್ಲಾ ಮನೆಗಳಲ್ಲಿ ಚೆಲ್ಲಿ ಅಡುಗೆ ಒಲೆಗೆ ಪೂಜೆ ಮಾಡಿ ಅಡುಗೆ ಮಾಡುವುದಕ್ಕೆ ಪ್ರಾರಂಭಿಸುವುದಕ್ಕೆ ಹೇಳುತ್ತಾನೆ. ಹೀಗೆ ಈ ಸಮುದಾಯಗಳ ಒಳಾಡಳಿತ ವ್ಯವಸ್ಥೆ ಕುಲಶಾಸ್ತ್ರಗಳು ತುಂಬ ಕಟ್ಟುನಿಟ್ಟಾಗಿ ಇಂದಿಗೂ ಸಾಂಸ್ಕೃತಿಕ ಕುಲಶಾಸ್ತ್ರವನ್ನು ಅನುಸರಿಸುತ್ತಿರುವುದು ಈ ಸಮುದಾಯಗಳ ಗೌರವಕ್ಕೆ ತಂದ ಪ್ರತೀಕವಾಗಿದೆ ಎಂದು ಭಾವಿಸುತ್ತಾರೆ.

ಇನ್ನು ಈ ಕುಟುಂಬಗಳಲ್ಲಿ ಹಿರಿಯರಿಗೆ ಹಾಗೂ ತಂದೆ ಮತ್ತು ತಾಯಿಗೆ ಹೆಚ್ಚಿನ ಗೌರವ ಕೊಡುತ್ತಾರೆ. ತಂದೆಯು ಮನೆಯ ಜವಾಬ್ದಾರಿಯನ್ನು ವಹಿಸಿರುತ್ತಾನೆ. ತಾಯಿಯು ಮನೆಯ ಜವಾಬ್ದಾರಿಯ ಪಾಲುದಾರಳಾಗಿರುತ್ತಾಳೆ. ಈ ಸಮುದಾಯಗಳಲ್ಲಿ ಗಂಡು ಹೆಣ್ಣು ಮಕ್ಕಳನ್ನು ಸಮಾನರಾಗಿ ಕಾಣುತ್ತಾರೆ. ಆಸ್ತಿಯಲ್ಲಿ ಇಬ್ಬರಿಗೂ ಪಾಲಿರುತ್ತದೆ. ಹೆಣ್ಣು ಮಗಳನ್ನು ಮದುವೆ ಮಾಡಿದ ನಂತರವೂ ತಂದೆಯ ಆಸ್ತಿಯಲ್ಲಿ ಪಾಲು ನೀಡಬೇಕಾಗುತ್ತದೆ. ಉದಾಹರಣೆಗೆ ಶಿಡ್ಲಘಟ್ಟ ತಾಲ್ಲೂಕಿನ ಸುಗಟೂರು ಗ್ರಾಮದಲ್ಲಿ ವಾಸಿಸುವ ದಕ್ಕಲ ಸಮುದಾಯದ ಅಂಜನಪ್ಪ ಮಕ್ಕಳು ನಾರಾಯಣಸ್ವಾಮಿ ಅಕ್ಕ ಮುನಿಯಮ್ಮ ತನ್ನ ಆಸ್ತಿಯಲ್ಲಿ ಹೆಣ್ಣು ಮಗಳಿಗೆ ಹೆಚ್ಚು ಪಾಲುನ್ನು ನೀಡಿರುವುದು ತಿಳಿಯುತ್ತದೆ. ಮೂರು ಎಕರೆ ಜಮೀನಿನಲ್ಲಿ ಎರಡು ಎಕರೆ ಹೆಣ್ಣು ಮಗಳಿಗೆ ಕೊಟ್ಟು ಒಂದು ಎಕರೆ ಮಗನಿಗೆ ನೀಡಿರುವುದು ಕಂಡು ಬರುತ್ತದೆ. ಎಲ್ಲಾ ಸಮುದಾಯಗಳ ಹಾಗೆ ಈ ಸಮುದಾಯಗಳಲ್ಲಿ ಅಜ್ಜ-ಅಜ್ಜಿ, ಅಕ್ಕ-ತಂಗಿ, ಅಣ್ಣ-ತಮ್ಮ, ಚಿಕ್ಕಪ್ಪ-ದೊಡ್ಡಪ್ಪ, ಅತ್ತೆ-ಮವ, ಸೋದರಮಾವ, ಭಾವ ಹೀಗೆ ಸಂಬಂಧಗಳು ಇದ್ದು ಮಾವನ ಮಕ್ಕಳನ್ನು ಮತ್ತು ಭಾವ ಅಕ್ಕನ ಮಕ್ಕಳನ್ನು ತಮ್ಮ ಅಣ್ಣನು ಮದುವೆಯಾಗುತ್ತಾರೆ. ಸೋದರತ್ತೆಯ ಮಕ್ಕಳನ್ನು ಮದುವೆಯಾಗುತ್ತಾರೆ. ಅಣ್ಣನ ಹೆಂಡತಿಯನ್ನು ಗೌರವದಿಂದ ಕಾಣುವುದು ತಾಯಿಯಾಗಿ ಭಾವಿಸುವುದು ಈ ಕುಲಗಳಲ್ಲಿ ಕಾಣಬಹುದು.

ಹೀಗೆ ಈ ಸಮುದಾಯಗಳ ಒಳಾಡಳಿತ ವ್ಯವಸ್ಥೆಯಲ್ಲಿ ಎಲ್ಲಾ ಸಮುದಾಯಗಳಿಗಿಂತ ತೀರಾ ಭಿನ್ನವಾಗಿರುವುದು ಮತ್ತು ಕಟ್ಟುನಿಟ್ಟಿನ ಕಟ್ಟುಪಾಡುಗಳು ಇರುವುದು ನಂತರ ಆಚಾರ ವಿಚಾರಗಳು ಭಿನ್ನವಾಗಿರುವುದು ತಿಳಿದು ಬರುತ್ತದೆ. ಕಾನೂನಿನ ಕಟ್ಟುಬದ್ಧತೆಗಳಿದ್ದರೂ ದಕ್ಕಲರು ಮಾತ್ರ ಯಾವುದೇ ಕಾನೂನಿಗೆ ತಲೆ ಬಾಗದೆ ತಮ್ಮ ಕಾನೂನಿನ ಮೇಲೆ ನಂಬಿಕೆ ಇಟ್ಟಿರುವುದು ಹಾಗೂ ಅದನ್ನು ಈಗಲೂ ಮುಂದುವರಿಸಿಕೊಂಡು ಬರುತ್ತಿರುವುದು ತಿಳಿಯುತ್ತದೆ. ಕಾನೂನಿಗೂ ಇವರ ಜೀವನ ವಿಧಾನಕ್ಕೂ ಯಾವುದೇ ಸಂಬಂಧಗಳಿರುವುದಿಲ್ಲ. ತಮ್ಮ ಸಮಸ್ಯೆಗಳನ್ನು ತಾವೇ ಬಗೆಹರಿಸಿಕೊಳ್ಳುತ್ತಾರೆ. ತಮಗೆ ಯಾವುದೇ ತೊಂದರೆಯಾಗದಂತೆ ರಕ್ಷಿಸಿಕೊಳ್ಳುವಷ್ಟು ನಿರ್ಬಂಧಗಳು ಈ ಸಮುದಾಯಗಳಲ್ಲಿ ಇದೆ. ಕೆಲವು ಮೂಲಭೂತ ಹಕ್ಕುಗಳನ್ನು ಕಾಪಾಡುವ ಕಾನೂನುಗಳು ಮಾತ್ರ ಇವರ ಬದುಕಿಗೆ ಆಶ್ರಯವಾಗಿದೆ. ಈ ಸಮುದಾಯಗಳ ಕಾನೂನುಗಳ ತೀರ್ಮಾನ ಸುಲಭ ಸರಳವಾಗಿದೆ. ಈ ಸಮುದಾಯಗಳೊಂದಿಗಿನ ಸಂಬಂಧಗಳು ಹೊಂದಾಣಿಕೆಯು ತುಂಬ ಭಿನ್ನವಾಗಿದೆ. ದಕ್ಕಲ ಸಮುದಾಯಗಳು ಇತರೆ ಸಮುದಾಯಗಳೊಂದಿಗೆ ಬೆರೆಯದೇ

ತಮ್ಮ ಕುಲಗಳಲ್ಲೇ ಬೆರೆತು ಆಚರಿಸುತ್ತಾರೆ. ತಮ್ಮ ಶುಭ ಸಮಾರಂಭಗಳಿಗೆ ಬ್ರಾಹ್ಮಣರನ್ನು ಆಹ್ವಾನಿಸದೇ ತಾವೇ ಪುರೋಹಿತ್ಯವನ್ನು ವಹಿಸುತ್ತಾರೆ. ಕಾಲಕ್ಕೆ ತಕ್ಕಂತೆ ಕುಲ ಪದ್ಧತಿಗಳನ್ನು ಕೈ ಬಿಡದೆ ಸಾಂಸ್ಕೃತಿಕತೆಗೆ ತಕ್ಕಂತೆ ನಂತರ ಅದಕ್ಕೆ ದಕ್ಕೆಯಾಗದಂತೆ ಇಂದಿಗೂ ಉಳಿಸಿಕೊಂಡು ಬೆಳೆಸಿಕೊಂಡು ಬರುತ್ತಿದ್ದಾರೆ.

### ೨.೮. ಐತಿಹಾಸಿಕ ಹಿನ್ನೆಲೆ

ಭಾರತೀಯ ಸಮಾಜದಲ್ಲಿ ಸಾಂಸ್ಕೃತಿಕ ಸಮುದಾಯಗಳ ನೆಲೆಯಾಗಿದ್ದ ಸಮಾಜದಲ್ಲಿ ಮೂಲ ಸಂಸ್ಕೃತಿಯನ್ನು ಅಧ್ಯಯನ ಮಾಡುವ ಸಂದರ್ಭದಲ್ಲಿ ದಕ್ಕಲ ಸಮುದಾಯಗಳ ಸಾಂಸ್ಕೃತಿಕತೆಯ ಐತಿಹಾಸಿಕ ಹಿನ್ನೆಲೆಯಲ್ಲಿ ಈ ಸಮುದಾಯಗಳ ಪಾತ್ರ ಮೆಚ್ಚುವಂತಹುದು. ನಂತರ ದಕ್ಕಲ ಸಂಸ್ಕೃತಿಯನ್ನು ಅವರ ಕುಲ ಬಂಧುಗಳಾದ ಮಾದಿಗರು ಹಾಗೂ ಉಪಕುಲಗಳಾದ ಮಾಸ್ತೀಕರು, ಸಿಂಧು ಮಾದಿಗರ ಸಂಸ್ಕೃತಿಯೊಂದಿಗೆ ಶೋಧಿಸಬೇಕಾಗುತ್ತದೆ. ದಕ್ಕಲರು ಮತ್ತು ಮಾಸ್ತೀಕರ ನಡುವಿನ ಸಂಬಂಧ ಒಂದೇ ಆದರೂ ಇವು ಬೇರೆ ಬೇರೆ ಉಪಕುಲಗಳಾಗಿವೆ. ಇಬ್ಬರ ನಡುವಿನ ಸಂಬಂಧವು ಪುರಾಣ ಮೂಲ ಸಂಬಂಧವಾಗಿದೆ. ಅಂದಿನ ಮೂಲ ನೆಲೆಯಲ್ಲಿ ಮಾಸ್ತೀಕರಿಗಿಂತ ಕೆಳ ಸಮುದಾಯವಾಗಿ ದಕ್ಕಲರು ಬದುಕುತ್ತಿದ್ದಾರೆ. ಇಬ್ಬರ ಐತಿಹಾಸಿಕ ಹಿನ್ನೆಲೆಂಯೂ ಪ್ರಸಿದ್ಧ ಪಡೆಯದೇ ಇದ್ದರೂ ಈ ಸಮುದಾಯಗಳ ಒಂದು ಚಿಕ್ಕ ಪಾತ್ರವಾಗಿ ಪರಿಣಮಿಸುತ್ತದೆ. ದಕ್ಕಲ ಸಮುದಾಯಗಳ ಸಾಂಸ್ಕೃತಿಕ ನೆಲೆಗಳಾದ ಮದುವೆ, ಹುಟ್ಟು, ಸಾವು, ಹಬ್ಬ ಆಚರಣೆಗಳು ದಕ್ಕಲ ಸಮುದಾಯಗಳ ವಿಶಿಷ್ಟ ಅಂಶವನ್ನು ಹೊರತುಪಡಿಸಿದರೆ ದಕ್ಕಲರ ಕುಲದ ಚಾರಿತ್ರಿಕತೆ, ಐತಿಹಾಸಿಕ ಹಿನ್ನೆಲೆ, ಸಾಮಾಜಿಕ ಹಿನ್ನೆಲೆಗಳನ್ನು ಹಂಚಿಕೊಂಡಿದ್ದಾರೆ. ನಂತರ ವಿಶ್ಲೇಷಣೆ ಪುರಾಣ ಮೂಲ ಸಾಮಗ್ರಿಯನ್ನು ಒದಗಿಸುತ್ತಾರೆ. ಈ ಸಮುದಾಯಗಳ ಐತಿಹಾಸಿಕ ಹಿನ್ನೆಲೆಯನ್ನು ಚರ್ಚಿಸಿದಾಗ ಹಲವು ಮಾಹಿತಿಗಳು ತಿಳಿಯುತ್ತದೆ. ಕೆಲವೊಂದು ಮಾಹಿತಿಗೆ ಲಿಖಿತ ಆಧಾರಗಳು ಇಲ್ಲದೇ ಇದ್ದರೂ ಈ ಸಮುದಾಯಗಳು ಹೇಳುವ ಮಾಹಿತಿಯನ್ನು ಹಲವು ಕೃತಿಗಳನ್ನು ಗಮನಿಸಿದಾಗ ದಕ್ಕಲ ಸಮುದಾಯಗಳ ಐತಿಹಾಸಿಕ ಹಿನ್ನೆಲೆ ಒಂದು ವಿಶಿಷ್ಟವಾಗಿದೆ.

ಮಾಸ್ತೀಕ ಸಂಸ್ಕೃತಿಯನ್ನು ತಿಳಿಸಿರುವ ಬಿಸೇಗೌಡನ ದಂತ ಕಥೆಯನ್ನು ಗಮನಿಸಿದಾಗ ಈ ಪಾಳೇಗಾರನ ಆಳ್ವಿಕೆಯಲ್ಲಿ ದಕ್ಕಲ ಸಮುದಾಯಗಳ ಪಾತ್ರ ಇರುವುದು ತಿಳಿದು ಬರುತ್ತದೆ. ಕೋಲಾರ ಜಿಲ್ಲೆಯ ಮುಳಬಾಗಿಲು ತಾಲ್ಲೂಕಿನ ಹರಪ್ಪನಾಯಕನ ಹಳ್ಳಿಯ ಒಬ್ಬ ಪಾಳೇಗಾರ ಬಿಸೇಗೌಡ. ಮೈಸೂರು ಅರಸರ ಆಳ್ವಿಕೆ ಸಂದರ್ಭದಲ್ಲಿ ಹಾಗೂ ಹೈದರಾಲಿಯ ಆಳ್ವಿಕೆಯ ಸಂದರ್ಭದಲ್ಲಿ ಬಿಸೇಗೌಡ ಈ ಹಳ್ಳಿಗಳ ಪಾಳೇಗಾರನಾಗಿ ಆಳ್ವಿಕೆ ಮಾಡುತ್ತಿದ್ದ. ಇವನು ಮುಟ್ಟ ಪಾಳೇಯ ಪಟ್ಟು ಕಟ್ಟಿಕೊಂಡಿದ್ದ. ಈ ಪ್ರದೇಶಗಳಲ್ಲಿ ಬಿಸೇಗೌಡನ ಹೆಸರು ಹೇಳಿದರೆ ಚಂದ್ರಗಿರಿಯ ಜೊತೆಗೆ ಮುತ್ತಿಗೆ ಹಾಕಿ ಕೊಳ್ಳೆ ಹೊಡೆದ ರೋಚಕ ಕಥೆ ತಿಳಿಯುತ್ತದೆ. ಕ್ರಿಸ. ೧೭೭೯ ರಲ್ಲಿ ಚಂದ್ರಗಿರಿಯನ್ನು ಮುತ್ತಿಗೆ ಹಾಕುವ ತಯಾರಿಯಲ್ಲಿದ್ದ ಬಿಸೇಗೌಡ ಮೈಸೂರು ಅರಸರ ಆದೇಶದ

ಮೇರೆಗೆ ಚಂದ್ರಗಿರಿಯ ಮೇಲೆ ಮುತ್ತಿಗೆ ಹಾಕುತ್ತಾನೆ. ಈ ಸಂದರ್ಭದಲ್ಲಿ ಬಿಸೇಗೌಡ ಸತ್ತು ಶವದಂತೆ ಬೆಟ್ಟದ ಮೇಲೆ ಮಲಗಿ ಬೆಟ್ಟವನ್ನು ಎತ್ತಿದಾಗ ಹುಟ್ಟಿ ಹೊರಲು ಬಿಸೇಗೌಡನ ಬಂಟರು ಯಾರೂ ಮುಂದೆ ಬರಲಿಲ್ಲ. ಆಗ ಮಾಸ್ತಿಕನೊಬ್ಬ ಮುಂದೆ ಬಂದ. ಹೀಗಾಗಿ ಇವರ ನಡುವೆ ರಕ್ತಸಂಬಂಧವಿಲ್ಲದೇ ಇದ್ದರೂ ಜಾತಿಭೇದ ಬೇರೆಯಾದರೂ ಈಗಲೂ ಬಿಸೇಗೌಡನ ವಂಶಸ್ಥರು ಯಾರೆ ಸತ್ತರೂ ಮಾಸ್ತಿಕರು ಹನ್ನೊಂದು ದಿನ ಸೂತಕ ಆಚರಿಸುತ್ತಾರೆ. ಹೀಗೆ ಬಿಸೇಗೌಡನ ಮುತ್ತಿಗೆಯಲ್ಲಿ ಭಾಗವಹಿಸಿದ ಸ್ಥಳೀಯರೆಂದರೆ ಮಾಸ್ತೀಕರು, ಡಕ್ಕೊಳ ಮುನಿಗಾಡು, ದಳವಾಯಿ ಪಾಪನ್ನ, ಹನುಮಂತಗೌಡ ಮುಂತಾದವರು. ಹೀಗೆ ದಕ್ಕಲ ಸಮುದಾಯದ ಡಕ್ಕೊಳ ಮುನಿಗಾಡು ಸಹಾಯ ಮಾಡಿದ ವಿಷಯದ ಬಗ್ಗೆ ತಿಳಿಸುತ್ತಾರೆ.

ಕ್ರಿ.ಶ. ೧೩೩೬ರ ವಿಜಯನಗರ ಆಳ್ವಿಕೆಯ ಸಂದರ್ಭದಲ್ಲಿ ದಕ್ಕಲ ಸಮುದಾಯಗಳು ನೆಲೆಸಿದ್ದರೂ ಕೃಷ್ಣದೇವರಾಯನ ಆಳ್ವಿಕೆಯ ಸಂದರ್ಭದಲ್ಲಿ ಈ ಸಮುದಾಯಗಳು ಆಂಧ್ರ ಪ್ರದೇಶದಿಂದ ವಲಸೆ ಬಂದು ನೆಲೆಸಿದ್ದರೂ ಈ ಸಮುದಾಯಗಳ ಕಟ್ಟೆಮನೆ ಸ್ಥಾನ ವಿಶಿಷ್ಟವಾದದ್ದು ಹಾಗೂ ಆ ಸಂದರ್ಭದಲ್ಲಿ ಈ ಸಮುದಾಯಗಳ ಕಟ್ಟು ಪಾಡುಗಳು ಪಂಚಾಯಿತಿ ಕಟ್ಟೆಗೆ ಬಲವಾಗಿದ್ದವು. ಮತ್ತು ನೀತಿ ನಿಯಮಗಳು ಇಂದಿಗೂ ಉಳಿಸಿಕೊಂಡು ಬರುತ್ತಿದ್ದೇವೆ. ಹಿಂದಿನ ಪಾರಂಪರಿಕತೆಯನ್ನು ಇಲ್ಲಿಯು ಮುಂದುವರಿದಿತ್ತು ಈಗಲೂ ಮುಂದುವರಿಸುತ್ತಿದ್ದೇವೆ. ಹೀಗೆ ವಲಸೆ ಬಂದ ದಕ್ಕಲರು ಹಲವು ಪ್ರದೇಶಗಳ ವಲಸೆ ಹೋಗಿ ಈ ಸಮುದಾಯಗಳು ಛಿದ್ರಗೊಂಡು ಕರ್ನಾಟಕದ ನಾನಾ ಕಡೆ ವಾಸಿಸುತ್ತಿದ್ದಾರೆ.

ಹೀಗೆ ದಕ್ಕಲರ ಸಾಂಸ್ಕೃತಿಕ ಅಂಶಗಳನ್ನು ಪರಿಶೀಲಿಸಿದರೆ ಶೈವಪರಂಪರೆಯ ಹಿನ್ನೆಲೆಯಲ್ಲಿ ೧೨ನೇ ಶತಮಾನದಲ್ಲಿ ಬಸವಣ್ಣನವರು ದಕ್ಕಲಿಗರನ್ನು ಡಕ್ಕಲಿಗ ಎಂಬ ಪದ ಬಳಸಿರುವುದು ಹಾಗೂ ಶಿವಶರಣರು ಈ ಸಮುದಾಯಗಳನ್ನು ದಕ್ಕಲಿಗರು ಎಂದು ಕರೆಯುತ್ತಿದ್ದರು. ಮಾದಿಗರು ಮತ್ತು ದಕ್ಕಲಿಗರು ಜಂಗಮ ಶರಣರ ಸಂಬಂಧವನ್ನು ಪಡೆದಿದ್ದರು ಎಂಬುವುದು ತಿಳಿಯಬಹುದು. ಏಕೆಂದರೆ ಮಾದಾರ ಚನ್ನಯ್ಯ ಅಂದರೆ ಮಾದಾರ ಕುಲಗಳ ಉಪಜಾತಿಗಳಲ್ಲಿ ಬರುವ ದಕ್ಕಲರು ಇವರ ಅಂತರದವರು ಎಂದು ಖಚಿತವಾಗಿ ಹೇಳಲಾಗದಿದ್ದರೂ ಅವರ ಅನುಯಾಯಿಗಳೇ ಆಗಿರುತ್ತಾರೆ. ಹರಳಯ್ಯನು ಡಕ್ಕಲ ಸಂಬಂಧಿಕರೆ ಎಂದು ಹೇಳುತ್ತಾರೆ. ಏಕೆಂದರೆ ಬಸವಣ್ಣ ಮೆರವಣಿಗೆ ಬಂದಾಗ ಎಲ್ಲರೂ ಬಸವಣ್ಣನಿಗೆ ನಮಸ್ಕಾರ ಮಾಡಿಕೊಂಡು ಬರುತ್ತಿರುತ್ತಾರೆ. ಆಗ ಹರಳಯ್ಯ ಸಹ ಶರಣು ಎಂದು ಹೇಳುತ್ತಾನೆ. ಇದಕ್ಕೆ ಪ್ರತಿಯಾಗಿ ಬಸವಣ್ಣನು ನೋಡಿ ನನಗಿಂತ ಕೆಳಜಾತಿಯವನು ಆದರೂ ನನಗಿಂತ ಮೇಧಾವಿ, ನನಗೆ ಶರಣು ಎಂದು ಹೇಳಿದ್ದಾನೆ ಎಂದು ಹರಳಯ್ಯನಿಗೆ ಶರಣು, ಶರಣು ಎಂದು ಹೇಳುತ್ತಾನೆ. ಆಗ ಹರಳಯ್ಯ ಏಕೆ ನಾನು ಶರಣು ಎಂದು ಹೇಳಿದ್ದು, ಬಸವಣ್ಣ ಶರಣು ಶರಣು ಎಂದು ಹೇಳಿದನಲ್ಲ. ನನ್ನ ಒಂದು ಶರಣಿಗೆ ಅವರ ಒಂದು ಶರಣು ಸರಿ ಹೋಯಿತು. ಮತ್ತೊಂದು ಶರಣು ನನ್ನ ತಲೆಯ ಮೇಲೆ ಭಾರವಾಯಿತಲ್ಲ. ಅದನ್ನು ಹೇಗೆ ತೀರಿಸುವುದು ಎಂದು ಮನೆಗೆ ಬಂದು ಚಿಂತಾಕ್ರಾಂತನಾಗಿ

ಪೂಜೆ ಪುನಸ್ಕಾರವನ್ನು ಹಾಗೂ ಊಟವನ್ನು ಬಿಟ್ಟು ಕುಳಿತಿರುತ್ತಾನೆ. ಹರಳಯ್ಯನ ಹೆಂಡತಿ ಕಲ್ಯಾಣಮ್ಮ ಬಂದು ಕೇಳುತ್ತಾಳೆ. ಹರಳಯ್ಯ ಮತ್ತು ಬಸವಣ್ಣನ ನಡುವೆ ನಡೆದ ಘಟನೆಯನ್ನು ಹೇಳಿ ಮತ್ತೊಂದು ಶರಣೆಗೆ ಮುಯ್ಯಿ ತೀರಿಸುವುದು ಹೇಗೆ ಎಂದು ಕೇಳುತ್ತಾನೆ. ಆಗ ಕಲ್ಯಾಣಮ್ಮ ಬಸವಣ್ಣನಿಗೆ ತನ್ನ ಎಡಗಾಲಿನ ತೊಡೆಯ ಚರ್ಮ ಹಾಗೂ ನಿನ್ನ ಬಲಗಾಲಿನ(ಈ ಕಾರಣಕ್ಕೆ ಎಡ ಮತ್ತು ಬಲಗಾಲಿನ ಪಾದರಕ್ಷೆಗಳು ಇಂದಿಗೂ ಸರಿ ಹೊಂದುವುದಿಲ್ಲ ಎಂಬ ನಂಬಿಕೆ ಈ ಸಮುದಾಯಗಳಲ್ಲಿ ಇದೆ.) ಚರ್ಮವನ್ನು ತೆಗೆದು ಬಸವಣ್ಣನಿಗೆ ಪಾದರಕ್ಷೆಯನ್ನು ಮಾಡಿ ಕೊಡು ಎಂದು ಹೇಳುತ್ತಾಳೆ. ಆಗ ಹರಳಯ್ಯ ಎಡ ಮತ್ತು ಬಲಗಾಲಿನ ಚರ್ಮವನ್ನು ತೆಗೆದು ಪಾದರಕ್ಷೆಯನ್ನು ತಯಾರಿಸಿ ಅದನ್ನು ಬಟ್ಟೆಯಲ್ಲಿ ಸುತ್ತಿ ತೆಗೆದುಕೊಂಡು ಹೋಗಬೇಕಾದರೆ ಬಸವಣ್ಣನ ಸೇವಕ ನೋಡಿ ಅದನ್ನು ತೋರಿಸಿ ಎಂದು ಕೇಳುತ್ತಾನೆ. ತೋರಿಸಿದ ನಂತರ ಆ ಪಾದರಕ್ಷೆಗಳನ್ನು ಸೇವಕ ಹಾಕಿಕೊಳ್ಳುತ್ತಾನೆ. ಇದರ ಪರಿಣಾಮ ಅವನ ಕಾಲಿಗೆ ಬೊಬ್ಬೆಗಳು ಬಂದು ಉರಿಯಲು ಪ್ರಾರಂಭವಾಗುತ್ತದೆ. ತಕ್ಷಣವೇ ಪಾದರಕ್ಷೆಯನ್ನು ತೆಗೆದು ಹರಳಯ್ಯನಿಗೆ ಕೊಟ್ಟು ಕಳುಹಿಸುತ್ತಾನೆ. ಹರಳಯ್ಯ ಪಾದರಕ್ಷೆಗಳನ್ನು ಒರೆಸಿ ಬಸವಣ್ಣನಿಗೆ ಕೊಡುತ್ತಾನೆ ಆಗ ಬಸವಣ್ಣ ಪಾದರಕ್ಷೆಗಳನ್ನು ತೆಗೆದುಕೊಂಡು ಸಿಂಹಾಸನದ ಮೇಲೆ ಇಟ್ಟು ಪೂಜಿಸುತ್ತಾನೆ. ಇಲ್ಲಿ ಸೇವಕನಿಗೆ ಬೊಬ್ಬೆಗಳು ಹೆಚ್ಚಾಗಿ ಕಿವು, ರಕ್ತ ಸೋರುತ್ತಿರುತ್ತದೆ. ಇದಕ್ಕೆ ಪರಿಹಾರವಾಗಿ ಊರಿನಲ್ಲಿ ಒಂದೊಂದು ದಿನ ಒಂದೊಂದು ಮನೆಯವರು ನೀರು ಹಾಕಬೇಕು ಆಗ ಕಡಿಮೆ ಆಗುತ್ತದೆ ಎಂದು ಹೇಳಿದಾಗ, ಊರಿನ ಎಲ್ಲರೂ ನೀರು ಹಾಕಲು ಪ್ರಾರಂಭಿಸುತ್ತಾರೆ. ಕೊನೆಯ ಸರದಿ ಮಾದಿಗರ ಮನೆಗಳ ಸರದಿ ಬಂದಾಗ ಮಾದಿಗರ ಮನೆಯಲ್ಲಿ ನೀರು ಇಲ್ಲದೇ ಇದ್ದಾಗ ಹೆಣ್ಣು ಮಗಳು ನೀರು ಹಾಕಿಲ್ಲವೆಂದರೆ ತನ್ನ ತಂದೆ ತಾಯಿಯನ್ನು ಶಿಕ್ಷಿಸುತ್ತಾರೆ ಎಂದು ಮಾದಿಗರು ಚರ್ಮಕ್ಕೆ ಕರೆ ಹಾಕುವ ಗಲ್ಲಿಬಾನು ನೀರನ್ನು ತೆಗೆದುಕೊಂಡು ಬಂದು ಹಾಕುತ್ತಾಳೆ. ಈ ನೀರು ಸೋಕಿದ ತಕ್ಷಣ ಸೇವಕನ ಕಾಲಿ ಬೊಬ್ಬೆಗಳು ವಾಸಿಯಾಗುತ್ತದೆ. ಇದರಿಂದ ಮಾದಿಗರ ಕುಲದವರು ಭಯಭೀತರಾಗುತ್ತಾರೆ. ಆದರೆ ಈ ನೀರನ್ನು ಯಾರು ಹಾಕಿದ್ದೆಂದು ಬಸವಣ್ಣ ಪ್ರಶ್ನಿಸುತ್ತಾನೆ. ಈ ನೀರು ಹಾಕಿದ್ದು ಮಾದಿಗರ ಹೆಣ್ಣು ಮಗಳು ಎಂದು ತಿಳಿದಾಗ ಬಸವಣ್ಣನಿಗೆ ಮಾದಿಗರ ಮೇಲೆ ಅಭಿಮಾನ ಹೆಚ್ಚಾಗುತ್ತದೆ. ಹೀಗಾಗಿ ಬಸವಣ್ಣನವರು ಜಾಂಬವ ಕುಲದ ಬಗ್ಗೆ ಹೀಗೆ ಹೇಳುತ್ತಾನೆ. ಬಸವಣ್ಣನು ಜಾಂಬವಂತ ಮಾತುಗಳು ಅವರ ಕಟ್ಟುಪಾಡುಗಳಿಗೆ ಹೆಚ್ಚು ಬೆಲೆ ಕೊಡುತ್ತಾನೆ. ಇವರ ಪಂಚಾಯಿತಿ ಕಟ್ಟೆಗಳ ಮೇಲೆ ಹೆಚ್ಚು ನಂಬಿಕೆ ಇಟ್ಟಿದ್ದ ಎಂಬುವುದು ತಿಳಿಯುತ್ತದೆ. ನಂತರ ದಕ್ಕಲರು ಜಾಂಬವಂತನ ಕುಲದವರು ಇವರು ಮೂಲತ ವಲಸಿಗರು ಕಟ್ಟೆಮನೆಗಳಲ್ಲಿ ಭಿಕ್ಷೆ ಬೇಡುವ ದಕ್ಕಲಿಗರಿಗೆ ಅನ್ನ ನೀರು ದವಸ–ಧಾನ್ಯಗಳು ಹಾಗೂ ಕಾಣಿಕೆಯನ್ನು ಕೊಟ್ಟು ಕಳಿಸಬೇಕು ನೀವು ಈ ಸಮುದಾಯಗಳಲ್ಲಿ ಮುರಿದ ರೊಟ್ಟಿ ಕೊಡಬಾರದು, ದಕ್ಕಲಿಗನು ಸಂತೋಷದಿಂದ ಇದ್ದರೆ ಜಾಂಬವ ಕುಲಕ್ಕೆ ಮತ್ತು ವಂಶದವರಿಗೆ ಆನಂದ ಆಗುತ್ತದೆ. ಮಾತಂಗಿಯ ಮಕ್ಕಳಾದ ಮಾದಿಗರು ಕೋಣದ ಶಿರವನ್ನು ಬಾಗಿಸಬೇಕು.

ಎಲೆಕಳಸಿದಮ್ಮನಿಗೆ ಒಪ್ಪಿಸಬೇಕು ಹಾಗೂ ಪೂರ್ವದಲ್ಲಿ ಜಾಂಬವಂತ ಭೂಮಿಯನ್ನು ಸೃಷ್ಟಿ ಮಾಡಿದ ಅಲ್ಲದೆ ಮಕ್ಕಳನ್ನು ದೇವರಿಗೆ ಕ್ರಿಯಾಳಾಗಿ ಕಟ್ಟಿದರಿಂದ ಬಸವಣ್ಣ ಸತ್ತರೆ ಜಾಂಬವಂತರು ಒಯ್ಯಬೇಕು ಜಾಂಬವಂತರು ಸತ್ತರೆ ಜಂಗಮರು ಒಯ್ಯಬೇಕು, ಇದಕ್ಕೆ ತಪ್ಪಿದರೆ ದೇವರು ಇಚ್ಛೆ ದಕ್ಕಲಿಗನಿಗೆ ಜಂಗಮರು ಸಹಾಯ ಮಾಡದಿದ್ದರೆ ನಿಮ್ಮ ಮಠಕ್ಕೆ ಶಾಪವಾಗುತ್ತದೆ. ಇದು ಅಲ್ಲದೆ ದಕ್ಕಲನನ್ನು ನಿಮ್ಮ ಜೊತೆ ಸೇರಿಸದೇ ಇದ್ದರೆ ಕಛೇರಿಗೆ ಹೋಗಿ ನ್ಯಾಯ ಮಾಡಬೇಕಾಗುತ್ತದೆ. ನ್ಯಾಯ ದಕ್ಕಲರ ನ್ಯಾಯ ಮುಗಿಯುವ ತನಕ ಕೋರ್ಟು ಕಛೇರಿ ಬಾಗಿಲು ಮುಚ್ಚಬೇಕಾಗುತ್ತದೆ. ನ್ಯಾಯ ಮುಗಿದ ಮೇಲೆ ಕೋರ್ಟು ಕಛೇರಿ ನಡೆಯಬೇಕು ಎಂದು ಹೇಳಿ ಜಾಂಬವಂತನ ಮಾತು ಭೂಮಿತಾಯಿಯ ಮಾತು ಪರಮೇಶ್ವರನ ಮಾತಾಗಿರುತ್ತದೆ. ಜಾಂಬವಂತನು ಬಿಸಾಡಿದ ಡೊಕ್ಕೆ ಇದರಿಂದ ಹುಟ್ಟಿದ ಮಗುವನ್ನು ಸಲಹಬೇಕು ಅವನು ಕೇಳಿದನ್ನು ಇಲ್ಲ ಎನ್ನದೆ ಕೊಡಬೇಕು. ಅವನಿಗೆ ಕೊಡದೇ ಇದ್ದರೆ ಅವನು ದುಃಖ ಪಡುವನು ಆಗ ನಮಗೆ ಒಳ್ಳೆಯದಾಗುವುದಿಲ್ಲ. ಎಂದು ಹೇಳುತ್ತಾನೆ. ೧೨ನೇ ಶತಮಾನದ ಬಸವಣ್ಣನ ಡಕ್ಕಲ ಸಮುದಾಯಗಳ ಬಗ್ಗೆ ಇವು ಗೌರವ ಅವರನ್ನು ತಮ್ಮವರೆಂದು ಭಾವಿಸಿದ್ದು ಇವರಿಗೆ ಜನಿವಾರವನ್ನು ಕೊಟ್ಟು ಸಲಹಿದನು ಎಂದು ಈ ಸಮುದಾಯಗಳು ಹೇಳುತ್ತಾರೆ.

ಹೀಗೆ ಶೈವಪರಂಪರೆಯ ಮಾದರ ನಡುವಿನ ಸಂಬಂಧ ಮಾದಿಗರು ಹಾಗೂ ಡಕ್ಕಲರ ನಡುವೆ ಬಹುಶ ಹತ್ತಿರದ ಸಂಬಂಧವಾಗಿದೆ ಎಂದು ತಾರ್ಕಿಕವಾಗಿ ಹೇಳಬಹುದು.

### ೨.೯. ಸಾಮಾಜಿಕ ಹಿನ್ನೆಲೆ

ಮಾದಿಗರ ಸಮುದಾಯಗಳ ಉಪ ಪಂಗಡಗಳಲ್ಲಿ ದಕ್ಕಲ ಸಮುದಾಯವು ಒಂದು ಉಪಪಂಗಡವಾಗಿ ನೆಲೆನಿಂತಿರುವ ಈ ಸಮುದಾಯ ಸವಾಜದ ಹಲವು ಜಾತಿ ಸಮುದಾಯಗಳಿಗಿಂತ ಅತ್ಯಂತ ಕಟ್ಟಕಡೆಯ ಜಾತಿ ದಕ್ಕಲರು. ಈ ಸಮುದಾಯಗಳು ಆಂಧ್ರಪ್ರದೇಶದಿಂದ ವಲಸೆ ಬಂದು ಕರ್ನಾಟಕದಲ್ಲಿ ನೆಲೆನಿಂತು ತಮ್ಮ ಜೀವನವನ್ನು ಪ್ರಾರಂಭಿಸಿದರು. ಅದರೆ ಈ ಸಮುದಾಯಗಳಿಗೆ ಯಾವುದೇ ಸ್ವಾತಂತ್ರ್ಯವಿಲ್ಲದೆ ಅಲೆಮಾರಿಗಳಾಗಿ ತಮ್ಮ ಕುಲ ಬಂಧುಗಳಲ್ಲಿ ಭಿಕ್ಷೆ ಬೇಡಿ ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದಾರೆ. ಸಮಾಜ ಎಷ್ಟೇ ಮುಂದುವರಿದರೂ ಈ ಸಮುದಾಯಗಳ ಸ್ಥಿತಿ ಶೋಚನೀಯವಾಗಿದೆ. ಇಂತಹ ಭಾರತೀಯ ವರ್ಣ ವ್ಯವಸ್ಥೆಯಲ್ಲಿ ದಕ್ಕಲರು ಶೂದ್ರರಾಗಿ ಎಡಗೈ ಪಣದವರಾಗಿ ಮೇಲ್ಜಾತಿಯ ಕೇರಿಗಳಿಗೂ ಹೋಗುವ ಹಾಗಿಲ್ಲ. ಅಷ್ಟೇ ಅಲ್ಲದೆ ಈಗಲೂ ಊರಿನಿಂದ ಹೊರಗೆ ಗುಡಿಸಲು ಹಾಕಿಕೊಂಡು ಜೀವಿಸುವಂತಾಗಿದೆ. ಹೀಗೆ ಅಸ್ಪೃಶ್ಯರಲ್ಲಿ ಅಸ್ಪೃಶ್ಯರಾಗಿ ಬದುಕುತ್ತಿರುವ ಈ ಸಮುದಾಯಗಳು ನೆಮ್ಮದಿಯ ಜೀವನವನ್ನು ಕಂಡುಕೊಳ್ಳುವುದು ಅಸಾಧ್ಯವಾದ ಸಂಗತಿಯಾಗಿದೆ. ಇಂತಹ ಶೋಚನೀಯ ಸ್ಥಿತಿಯಲ್ಲಿ ಈ ಸಮುದಾಯಗಳು ಸಾಂಸ್ಕೃತಿಕ ಗಂಗಭಾರತಕ್ಕೆ ಸಂಬಂಧಿಸಿದ ಪುರಾಣಗಳನ್ನು ಪ್ರದರ್ಶಿಸಿ ಮಾದಿಗರನ್ನು ಮೆಚ್ಚಿಸಿ ಅವರಿಂದ ಭಿಕ್ಷೆ ಬೇಡಿ ತಮ್ಮ ಶ್ರಮದಾಯಕ ಜೀವನದ ಜೊತೆಗೆ ನಂಬಿಕೆ ಆಚರಣೆಗಳನ್ನು ಸಂಪ್ರದಾಯ ಬದ್ಧವಾಗಿ ಮುಂದುವರಿಸುತ್ತಿದ್ದಾರೆ.

ಈ ಕಟ್ಟ ಕಡೆಯ ಸಮುದಾಯ ಇಡೀ ಭೂ ಸೃಷ್ಟಿಗೆ ಕಾರಣವಾದರೂ ಈ ಭೂಮಿಯ ಮೇಲಿನ ಮೂಲ ಪುರುಷ ಆದಿಜಾಂಬವ ಮುನಿ ನಂತರ ಆದಿಗ ಮಾದಿಗ ದಕ್ಕಲರು ಸೃಷ್ಟಿಗೊಂಡು ತದನಂತರ ಇತರ ಜಾತಿಗಳು ಹುಟ್ಟಿದವು. ಹಾಗಾಗಿ ಭೂಮಿಯ ಮೇಲೆ ನಾವೇ ಮೊದಲು ನೆಲೆಗೊಂಡವರೆಂದು ಆಕಾಶ ಭೂಮಿ, ನೀರು ಎಲ್ಲವೂ ನಮ್ಮ ಮೂಲಕವೇ ಸೃಷ್ಟಿಗೊಂಡವು ಎಂದು ಈ ಸಮುದಾಯಗಳ ಮಾತು. ಹೀಗೆ ಸೃಷ್ಟಿಸಿದ ಜಾಂಬವಂತ ಮಕ್ಕಳನ್ನು ಕಳೆದುಕೊಂಡು ಅವನು ಜೀವಿಸುವುದು ತುಂಬಾ ಕಷ್ಟಕರವಾಗಿ ದುಃಖಿತನಾದಾಗ ಶಿವ-ಪಾರ್ವತಿಯರು ಬಂದು ದಕ್ಕದ ಮುನಿಯನ್ನು ಸೃಷ್ಟಿಸಿ ಜಾಂಬವಂತನಿಗೆ ನೀಡುತ್ತಾನೆ. ಹೀಗೆ ಹುಟ್ಟಿದ ದಕ್ಕದ ಮುನಿಯ ವಂಶಸ್ಥರೇ ಈಗಿನ ದಕ್ಕಲ ಸಮುದಾಯಗಳು ನಂತರ ಅದು ಜಾಂಬವಂತ ನೀಡಿದ ವರದಿಂದ ಇಂದಿಗೂ ದಕ್ಕಲ ಕುಟುಂಬಗಳು ಮಾದಿಗರ ಮನೆಗಳನ್ನು ಆಶ್ರಯಿಸಿ ಬದುಕುತ್ತಿದ್ದಾರೆ. ಹಾಗೂ ಇಂದಿಗೂ ಸಮಾಜದಿಂದ ದೂರವಾಗಿ ಈ ಸಮುದಾಯಗಳು ಏಕಾಂತವಾಗಿ ಜೀವಿಸುತ್ತಿರುವುದಕ್ಕೆ ಕಾರಣವಾಗಿದೆ. ಆದರೆ ಈ ಸಮುದಾಯಗಳು ಮಾದಿಗರನ್ನು ಹೊರತುಪಡಿಸಿ ಬೇರೆ ಜಾತಿಗಳಲ್ಲಿ ಭಿಕ್ಷೆ ಬೇಡಿ ತಿನ್ನುವ ಹಾಗಿಲ್ಲ ನಂತರ ದಕ್ಕಲರು ಮಾದಿಗ ಮನೆಗಳಲ್ಲಿ ಎತ್ತುವಳಿ ಮಾಡುವಾಗ ತಮ್ಮ ಕುಲಗಳ ಹಿರಿಮೆಯ ಬಗ್ಗೆ ಹಾಗೂ ಮಾದಿಗರ ನಡುವಿನ ನೆಂಟಸ್ತಿಕೆಯ ಬಗ್ಗೆ ತಿಳಿಸಬೇಕು ಜಾಂಬವ ಪುರಾಣದ ಕಥೆಯನ್ನು ನಾಟಕದ ಮೂಲಕ ಪ್ರದರ್ಶಿಸಿ ಜಾಂಬವಂತನ ಹಿರಿಮೆಯನ್ನು ಕುರಿತು ಕಥೆಯನ್ನು ಹೇಳಬೇಕಾಗುತ್ತದೆ. ನಂತರ ಮಾತಂಗಿಯ ಬಗೆಗಿನ ಹಾಡುಗಳನ್ನು ಹಾಡಿ ತಮ್ಮ ಸಂಬಂಧಗಳನ್ನು ಬೆರೆಸಿ ನಮ್ಮ ಕುಟುಂಬಗಳಿಗೆ ಮಾದಿಗರೇ ಆಶ್ರಿತರು ಎಂದು ತಿಳಿಸಿಕೊಡಬೇಕು. ಕಥೆಯ ಕೊನೆಯಲ್ಲಿ ಮಾದಿಗರು ಊದುಕಡ್ಡಿ ಹಚ್ಚಿ ಪೂಜೆ ಮಾಡಿ ಶಾಂತಿ ಮಾಡುವರು ಆ ನಂತರ ತಮ್ಮ ದಕ್ಕಲ ಮಕ್ಕಳು ಉಪವಾಸ ಇರಬಾರದು ಎಂದು ಭಿಕ್ಷೆಯನ್ನು ನೀಡಿ ಕಾಣಿಕೆಯನ್ನು ಕೊಟ್ಟು ಅವರಿಂದ ಒಳ್ಳೆಯವರು ಎಂದು ಅನಿಸಿಕೊಂಡು ದಕ್ಕಲ ಮಕ್ಕಳನ್ನು ಕಳಿಸಿಕೊಡುತ್ತಾರೆ.[೪]

ಹೀಗೆ ಭಾರತೀಯ ವರ್ಣವ್ಯವಸ್ಥೆಯಲ್ಲಿ ದಕ್ಕಲರು ಇಡೀ ಭೂಮಿಯನ್ನು ಸೃಷ್ಟಿಸಿದರು. ಆದರೆ ಇಂದು ಈ ಸಮುದಾಯಗಳು ನೆಲೆ ನಿಲ್ಲುವುದಕ್ಕೆ ಸ್ಥಳವಿಲ್ಲದೆ ವಲಸಿಗರಾಗಿ ಬದುಕುತ್ತಿದ್ದಾರೆ. ಸಮಾಜ ವರ್ಣವ್ಯವಸ್ಥೆಯ ಮೇಲೆ ಜಾತಿ ಪಂಥಕ್ಕೆ ಸೇರಿದ ಬ್ರಾಹ್ಮಣರು ಮಾದಿಗರ ನಡುವಿನ ಸಂಬಂಧ ರಕ್ತ ಸಂಬಂಧವಾಗಿದೆ. ಏಕೆಂದರೆ ವಶಿಷ್ಠನು ಬ್ರಾಹ್ಮಣನಾಗಿದ್ದು ಇವನು ಮಾದಿಗರ ಹೆಣ್ಣು ಮಗಳಾದ ಅರುಂಧತಿಯನ್ನು ಮದುವೆಯಾಗುತ್ತಾನೆ. ಹಾಗಾಗಿ ಈ ಸಮುದಾಯಗಳ ಹತ್ತಿರ ಸಂಬಂಧವಿದ್ದರೂ ಇಂದು ಈ ಸಮುದಾಯಗಳು ಬಹಳ ದೂರವಾಗಿ ಬದುಕುತ್ತಿವೆ. ಮಾದಿಗರ ನಡುವೆ ನಮಗೆ ಯಾವುದೇ ಸಂಬಂಧವಿಲ್ಲ ಎಂಬ ಭಾವನೆ ಬ್ರಾಹ್ಮಣರಲ್ಲಿ ಇದೆ. ಜಾಂಬವಂತನ ಮಗಳು ಅರುಂಧತಿ ಮಾದಿಗರ ಹೆಣ್ಣು ಮಗಳು. ಅವಳು ನಮ್ಮ ಸೊಸೆ ಎಂಬ ವಿಷಯವು ಬ್ರಾಹ್ಮಣರಲ್ಲಿ ಉಳಿದಿಲ್ಲ. ನಂತರ ಶಿವ-ಪಾರ್ವತಿಯ ವಿವಾಹಕ್ಕೆ ವಿಶ್ವಕರ್ಮನು

ಜಾಂಬವಂತನ ಬಳಿ ಬಂದು ಆಭರಣಗಳ ತಯಾರಿಸುವುದಕ್ಕೆ ಬೇಕಾದ ಸಲಕರಣೆಗಳಿಗಾಗಿ ಜಾಂಬವಂತನನ್ನು ಕೇಳಿದಾಗ ತಮ್ಮ ಮಕ್ಕಳ ದೇಹವನ್ನು ಸಲಕರಣೆಗಳಿಗಾಗಿ ಮಾಡುತ್ತಾನೆ. ಹೀಗೆ ವಿಶ್ವಕರ್ಮನು ಜಾಂಬವಂತನ ಬಳಿ ಸಹಾಯ ಯಾಚಿಸಿ ದಕ್ಕೆಯಿಂದ ಹುಟ್ಟಿದ ದಕ್ಕಲ ಮುನಿಗೆ ಜಾಂಬವಂತ ಮತ್ತು ವಿಶ್ವಕರ್ಮ ಇಬ್ಬರು ಒಂದು ನೆಲೆಯನ್ನು ಕೊಟ್ಟು ಕಳುಹಿಸಿರುತ್ತಾರೆ. ಆದರೆ ಈಗ ವಿಶ್ವಕರ್ಮನ ವಂಶಸ್ಥರಾದ ಕೋಮಿಟಿಗರು (ಆಚಾರ್ಯ) ಮಾದಿಗರ ನಡುವೆ ಯಾವುದೇ ಸಂಬಂಧವಿಲ್ಲ ಎಂದು ಜಾರಿಕೊಳ್ಳುತ್ತಾರೆ. ಹೀಗೆ ಈ ಸಮುದಾಯಗಳ ಸಾಂಸ್ಕೃತಿಕ ಆಧ್ಯಾತ್ಮಿಕ ನೆಲೆಯ ಪುರಾಣವು ಇವರಲ್ಲಿ ಗೌಪ್ಯವಾಗಿ ಅಡಗಿ ಅದು ಲಿಖಿತ ದಾಖಲೆಗಳು ಇಲ್ಲದೆ ಇರುವುದರಿಂದ ಅದು ಮೌಖಿಕವಾಗಿ ಉಳಿಯಬೇಕಾಗಿದೆ.

ಮೌಖಿಕ ಪುರಾಣಗಳನ್ನು ಒಪ್ಪಿಕೊಳ್ಳುವ ಸ್ಥಿತಿಯಲ್ಲಿ ಇಲ್ಲದೇ ಇದ್ದರೂ ಈ ಸಮುದಾಯಗಳು ಹೇಳುವುದು ನಂಬಲೇಬೇಕಾಗುತ್ತದೆ. ಆದಿಜಾಂಬವನು ವಿಶ್ವಕರ್ಮ ನಡುವಿನ ಸಂಬಂಧ ಗುರು ಶಿಷ್ಯರ ನಡುವಿನ ಸಂಬಂಧವಾಗಿರುವುದು ಒಂದು ಹಂತಕ್ಕೆ ಸೀಮಿತವಾಗಿತ್ತು. ಸಮಾಜದ ಬದಲಾವಣೆಗಳಿಂದ ಈಗಿನ ಕಾಲಘಟ್ಟದಲ್ಲಿ ಈ ಸಂಬಂಧಗಳು ಒಡೆದು ದೂರವಾಗಿರುವುದು ತಿಳಿಯುತ್ತದೆ. ಮಾಸ್ತೀಕರು, ಸಿಂಧ್ ಮಾದಿಗರು, ಮಾದಿಗರು, ಪಂಚಾಲರು ಹಾಗೂ ದಕ್ಕಲರ ಸಂಸ್ಕೃತಿಯ ಸಿಂಧ್ ಮಾದಿಗರ ಸಂಸ್ಕೃತಿಯಲ್ಲಿ ಕೋಟಿಗಾನಹಳ್ಳಿ ರಾಮಯ್ಯ ತಮ್ಮ ಅಧ್ಯಯನದಲ್ಲಿ ತಿಳಿಸಿದ್ದಾರೆ. ಈಗಲೂ ದಕ್ಕಲ ಸಮುದಾಯಗಳು ಬ್ರಾಹ್ಮಣರ ಸೊಸೆ ನಮ್ಮ ಮನೆಯ ಮಗಳು ಎಂದು ಅರುಂಧತಿಯ ಪ್ರತಿಮೆಯನ್ನು ಇಟ್ಟು ಪೂಜಿಸುವುದು ಈ ಪ್ರದೇಶಗಳಲ್ಲಿ ಕಂಡುಬರುತ್ತದೆ. ಅಕ್ಕಸಾಲಿಗರು ನಮ್ಮ ಪೂರ್ವ ಜನ್ಮದ ಬಂಧುಗಳು ಎಂದು ಹೇಳಿಕೊಳ್ಳುತ್ತಾರೆ. ಬ್ರಾಹ್ಮಣರು ತಮ್ಮ ಮನೆಗಳಿಂದ ಬೆಂಕಿಯನ್ನು ತೆಗೆದುಕೊಂಡು ಹೋಗಿ ಒಲೆಯನ್ನು ಹಚ್ಚುತ್ತಿದ್ದರು. ದಕ್ಕಲರು ಬೆಂಕಿ ಹಾಕುವತನಕ ಬ್ರಾಹ್ಮಣರು ತಮ್ಮ ಮನೆಯಲ್ಲಿ ಒಲೆಯನ್ನು ಹಚ್ಚುವಂತಿರಲಿಲ್ಲ ಎಂದು ಹೇಳುತ್ತಾರೆ. ಸಮಾಜ ಬದಲಾದಂತೆ ತಮ್ಮಿಂದ ದೂರವಾಗಿ ಯಾವ ಸಂಬಂಧವಿಲ್ಲದಂತೆ ದೂರವಿರಿಸಿದ್ದಾರೆ ಎಂದು ದಕ್ಕಲರು ಹೇಳುತ್ತಾರೆ.

ದಕ್ಕಲರ ನಡುವಿನ ಸಾಮಾಜಿಕ ಸಂಬಂಧಗಳು ದೂರವಾದಂತೆ ಇವರ ಸಾಮಾಜಿಕ ಬದುಕು ಅನಾಥವಾದಂತೆಲ್ಲಾ ಅವರಲ್ಲಿನ ಸಾಂಸ್ಕೃತಿಕ ಬದುಕು ಅನಾಥವಾಗದೆ ಅವರಲ್ಲಿ ಉಳಿದುಕೊಂಡಿದೆ. ಸಾಮಾಜಿಕವಾಗಿ ದೂರವಾದರೂ ಸಾಂಸ್ಕೃತಿಕವಾಗಿ ತುಂಬ ಪ್ರಸಿದ್ಧಿ ಇದೆ. ಈ ಸಮುದಾಯಗಳ ಪ್ರದರ್ಶನ ಕಲೆಗಳು ಪುರಾಣಗಳು, ಕಿನ್ನರಿ, ಮೇಳ, ಹಾಡುವ ಕೌಶಲ್ಯಗಳು, ಕಾಲ ಕ್ರಮೇಣ ಕಣ್ಮರೆಗೊಳ್ಳುತ್ತಿರುವಂತಾಗಿದೆ. ಸಾಂಸ್ಕೃತಿಕ ಕಲೆಗಳು ಕೇವಲ ತಮ್ಮ ಹಿರಿಯರಿಗೆ ಸೀಮಿತ ಪಟ್ಟಿರುವಷ್ಟರಮಟ್ಟಿಗೆ ಯುವ ಪೀಳಿಗೆಗಳು ಮಾಡುತ್ತಿವೆ. ಅವರ ಕುಲ ಸಂಸ್ಕೃತಿಯ ಬಗ್ಗೆ ಯಾವುದೇ ವ್ಯಾಮೋಹವಿಲ್ಲದೇ ಹಲವು ಕ್ಷೇತ್ರಗಳಲ್ಲಿ ದುಡಿಯುವುದಕ್ಕೆ ಪ್ರಾರಂಭಿಸಿ ಇವರ ಸಾಂಸ್ಕೃತಿಕತೆ ಮರೆಮಾಚುವಂತಾಗಿದೆ. ಮಾದಿಗರ ಮನೆಗಳಲ್ಲಿ ಎತ್ತುವಳಿ ಮಾಡುವ ಸಂದರ್ಭದಲ್ಲಿ

ತಮ್ಮ ಕಲೆಗಳನ್ನು ಪ್ರದರ್ಶಿಸಬೇಕಾಗಿತ್ತು. ಜಾಂಬ ಪುರಾಣದಂತಹ ಗಂಗಭಾರತವನ್ನು ಇಡೀ ರಾತ್ರಿ ಪ್ರದರ್ಶಿಸಿ ಮಾದಿಗರನ್ನು ಮೆಚ್ಚಿಸಬೇಕಾಗುತಿತ್ತು ಕಿನ್ನರಿ, ಮೇಳ, ನವಿಲು ಕುಣಿತಗಳನ್ನು ಪ್ರದರ್ಶಿಸಿ ಪ್ರೇಕ್ಷಕರಿಗೆ ತಮ್ಮ ಸಮುದಾಯದ ಘನತೆಯನ್ನು ಅವರ ಮನಸ್ಸಿನಲ್ಲಿ ಮೂಡಿಸುವಂತೆ ಪರಿಣಾಮಕಾರಿಯಾಗಿದ್ದವು ನಂತರ ಸಾಮಾಜಿಕ ಅಸ್ತಿತ್ವವನ್ನು ಅವರ ಕಲಾಪ್ರಕಾರಗಳ ಮೂಲಕ ಪ್ರತಿಸ್ಥಾಪಿಸಿ ತಮ್ಮ ಸಮುದಾಯಗಳ ಘನತೆ ಸಮಾಜದೊಂದಿಗೆ ಬೆರೆಯುವುದಕ್ಕೆ ಪ್ರಯತ್ನಿಸುತ್ತಿದ್ದರು.

### ೨.೧೦. ಚಾರಿತ್ರಿಕ ಬೆಳವಣಿಗೆ

ಸಮಾಜದಲ್ಲಿ ಹಲವು ಜಾತಿ ಜನಾಂಗಗಳು ನೆಲೆ ನಿಂತಿದ್ದು ಈ ಎಲ್ಲಾ ಜಾತಿ ಜನಾಂಗಗಳು ತಮ್ಮದೇ ಆದಂತಹ ಚರಿತ್ರೆಯನ್ನು ಒಳಗೊಂಡಿದ್ದು ಹಾಗೆ ತಳ ಸಮುದಾಯಗಳು ಚಾರಿತ್ರಿಕ ನೆಲೆಯಲ್ಲಿ ಬದುಕುತ್ತಿರುವುದು ತಿಳಿಯುತ್ತದೆ. ದಕ್ಕಲರ ಪೌರಾಣಿಕತೆಯು ಕರ್ನಾಟಕ ಮೂಲದಿಂದ ಅಧ್ಯಯನ ಮಾಡುವುದಕ್ಕಿಂತ ಗಡಿ ಪ್ರದೇಶಗಳಾದ ಮಹಾರಾಷ್ಟ್ರ, ಆಂಧ್ರಪ್ರದೇಶ, ಗುಜರಾತ್, ರಾಜಸ್ಥಾನ, ಅಸ್ಸಾಂ, ಮಧ್ಯಪ್ರದೇಶ, ಈ ಸಮುದಾಯಗಳನ್ನು ಮಾಂಗ್ ಅಥವಾ ಮಹರ್ಸ್ ಎನ್ನುವ ಮಾದಿಗರ ಉಪಜಾತಿಯೆಂದು ಕರೆಯುತ್ತಾರೆ ಎಂದು ಕೆಲವು ಅಧ್ಯಯನಗಳಲ್ಲಿ ತಿಳಿಸಲಾಗಿದೆ. ಈ ಸಮುದಾಯಗಳ ನಡುವಿನ ಹಿನ್ನೆಲೆ ಮಾನವ ಶಾಸ್ತ್ರಜ್ಞನರಾದ ಎಡ್ಗರ ಥರ್‌ಸ್ಟನ್ ಅವರ ದಕ್ಷಿಣ ಭಾರತದ ಜಾತಿಗಳು ಮತ್ತು ಬುಡಕಟ್ಟುಗಳು( Vol-2 (Castes and tribes southern India)ರಲ್ಲಿ ದಕ್ಕಲರು ಮಾದಿಗರ ಜಾತಿಯಲ್ಲಿ ಒಂದು ಉಪ ಪಂಗಡವೆಂದು ಹೇಳಿ ಆ ಸಂದರ್ಭದಲ್ಲಿಯೂ ದಕ್ಕಲ ಸಮುದಾಯಗಳ ಚಾರಿತ್ರಿಕ ಹಿನ್ನೆಲೆ ಏನು ಎಂಬುವುದು ತಮ್ಮ ಅಧ್ಯಯನದಲ್ಲಿ ತಿಳಿಸಿದ್ದಾರೆ. ಹಾಗೂ ದಕ್ಕಲ ಸಮುದಾಯಗಳು ಮಧ್ಯ ಭಾರತದ ಮೂಲ ನಿವಾಸಿಗಳೇ ಆಗಿರುವ ಸಾಧ್ಯತೆ ಇದೆ ಎಂದು ಹಲವು ಅಧ್ಯಯನಗಳಲ್ಲಿ ನಮೂದಿಸಿದ್ದಾರೆ.

ಈ ಸಮುದಾಯಗಳ ಚಾರಿತ್ರಿಕ ಬೆಳವಣಿಗೆ ಅಖಂಡವಾದುದಲ್ಲದೆ ಇದ್ದರೂ ಪರಿಶಿಷ್ಟರ ಚರಿತ್ರೆಯಲ್ಲಿ ಮಿಳಿತಗೊಂಡಿರುವ ಒಂದು ಕವಲು ಮಾತ್ರ ಎಂದು ಡಾ. ಕೆ. ಕೃಷ್ಣಪ್ಪ ಅವರು ದಕ್ಕಲಿಗ ಸಮುದಾಯದಲ್ಲಿ ಹೇಳಿದ್ದಾರೆ. ಜಾಂಬವ ಪುರಾಣವು ಮೌಖಿಕವಾಗಿ ಬೆಳೆದಿರುತ್ತದೆ. ಹೊರತು ಅದು ಒಂದು ಲಿಖಿತವಾಗಿ ರೂಪುಗೊಂಡಿರದೆ ಇರುವುದು ಒಂದು ಈ ಪುರಾಣಗಳು ಮರೆಯಾಗುವುದಕ್ಕೆ ಕಾರಣವಾಗಿದೆ. ವರ್ತಮಾನ ಸಂದರ್ಭದಲ್ಲಿ ಈ ಸಮುದಾಯಗಳ ಸಾಮಾಜಿಕವಾಗಿ ಹೊರದೂಡಲ್ಪಟ್ಟರೂ ಧಾರ್ಮಿಕವಾಗಿಯೂ ಹಿಂದೂ ಧರ್ಮಕ್ಕೆ ಬಾಹಿರವಾಗಿರುವವ ರಾಗಿದ್ದಾರೆ. ಆದರೆ ಶ್ರೇಣಿಕೃತ ಸಮಾಜದಲ್ಲಿ ಈ ಸಮುದಾಯಗಳು ಸಮಾಜಿಕವಾಗಿ ಕನಿಷ್ಠವಾದ ರೀತಿಯಲ್ಲಿ ಜೀವಿಸುವ ವರ್ಗಗಳ ಜೊತೆ ಸೇರಿಕೊಂಡು ಅವರಿಗಿಂತ ಕೀಳಾಗಿ ಬದುಕುತ್ತಿರುವುದು ತಿಳಿಯುತ್ತಿದೆ. ಈ ಸಮುದಾಯಗಳ ಕುಲ ಪುರಾಣಗಳು ಲೋಕದೃಷ್ಟಿ ಅವೈದಿಕ ಪರಂಪರೆಯ ಪೂರ್ವಜರಾಗಿ ಸಾಂಸ್ಕೃತಿಕ ಹಾಗೂ ಈಗಿನ ಕೆಲವು ದಕ್ಕಲಿಗರು ಮಠಕ್ಕೆ ಸೇರಿಕೊಂಡು

ಅಧ್ಯಾತ್ಮಿಕ ಸಂಕಥನಗಳಿಗೆ ಹೊಂದಿಕೊಂಡು ವರ್ತಮಾನ ಬದುಕಿಗೆ ಚುರುಕುಗೊಳಿಸುವಮಟ್ಟಿಗೆ ತಮ್ಮ ಜ್ಞಾನ ಪರಂಪರೆಯನ್ನು ಹೊಂದಿರುವ ಈ ಸಮುದಾಯಗಳಿಗೆ ಸಾಮಾಜಿಕವಾಗಿ ಮಾನ್ಯತೆಯಿಲ್ಲದೆ ಚಾರಿತ್ರಿಕತೆಯಲ್ಲಿ ತಮ್ಮನ್ನು ಗುರುತಿಸಿಕೊಂಡು ತಮ್ಮ ಅಸ್ತಿತ್ವಗಳನ್ನು ಬೆಳೆಸಿಕೊಳ್ಳುತ್ತಿದ್ದಾರೆ. ಮಾತಂಗ ಮುನಿ ಆದಿ ಜಾಂಬವ ಪುರಾಣ, ದಕ್ಷ ಬ್ರಹ್ಮನ ಕಥೆ, ಜಮದಗ್ನಿಯ ಪುರಾಣ, ಯಲ್ಲಮ್ಮನ ಪುರಾಣಗಳು ಮಾದಿಗರು ಮತ್ತು ಅವರ ಉಪಕುಲಗಳಾದ ಮಾಸ್ತೀಕರು ಸಿಂದ್ ಮಾದಿಗರು, ದಕ್ಕಲಿಗರಲ್ಲಿ ಆಧಾರ ರೂಪವಾಗಿ ಅವರಲ್ಲಿರುವ ಕಂಚಿ ಶಾಸನ ಹಾಗೂ ಕೆಲವು ಕೈಬರಹದ ಕೈಫಿಯತ್ತುಗಳನ್ನು ಗಮನಿಸಬಹುದು.

ತಮ್ಮ ಸಮುದಾಯಗಳ ಸಾಂಸ್ಕೃತಿಕ ಅನನ್ಯತೆಗಳನ್ನು ವೈದಿಕ ಪರಂಪರೆಗಳ ಅನುಕರಣೆಗಳ ಮೂಲಕವೇ ಕಟ್ಟಿಕೊಂಡು ತಮ್ಮ ನಂಬಿಕೆ ಆಚರಣೆಗಳು, ಸಂಪ್ರದಾಯಗಳು, ಪುರಾಣದ ಕಥೆಗಳ ಚಾರಿತ್ರಿಕ ನೆಲೆಯಲ್ಲಿ ಬದುಕುತ್ತ ಮಾದಿಗರು ನಮ್ಮ ಕುಲ ಗುರುಗಳು ಅವರ ಆಶ್ರಯದಲ್ಲಿ ಬದುಕುತ್ತಿದ್ದೇವೆ. ನಮ್ಮ ಕುಲ ಬಂಧುಗಳು ಭಿಕ್ಷೆ ನೀಡದಿದ್ದರೆ ಅವರನ್ನು ನೆನೆದು ಸಾಯುತ್ತೇವೆ ಹೊರತು ಬೇರೆಯವರಲ್ಲಿ ಭಿಕ್ಷೆ ಬೇಡುವುದಿಲ್ಲ ಒಂದು ವೇಳೆ ಭಿಕ್ಷೆ ನೀಡದ ಪಕ್ಷದಲ್ಲಿ ಅವರ ಮೇಲೆ ಹಕ್ಕನ್ನು ಚಲಾಯಿಸಿ ನ್ಯಾಯ ಪಂಚಾಯಿತಿಗಳನ್ನು ಇಡುತ್ತೇವೆ. ನಂತರ ಅವರು ಹೋಗುವ ದಾರಿಗೆ ಕಪ್ಪು ಹಗ್ಗವನ್ನು ಹಾಕುತ್ತೇವೆ. ನೀರು ಬಾವಿಗೂ ಹಗ್ಗವನ್ನು ಹಾಕುವ ಪಾರಂಪರಿಕತೆ ನಮ್ಮ ಕುಲಗಳಲ್ಲಿ ಇದೆ. ನಮಗೆ ಭಿಕ್ಷೆ ನೀಡಿ ನಿಮ್ಮಿಂದ ಒಳ್ಳೆಯವರು ಎಂದು ಅನಿಸಿಕೊಂಡ ಮೇಲೆ ಹಗ್ಗವನ್ನು ತೆಗೆಯುತ್ತೇವೆ. ಆತನಕ ಹಗ್ಗವನ್ನು ದಾಟಿ ಮುಂದೆ ಹೋಗುವ ಹಾಗಿಲ್ಲ ಎಂಬ ಹಕ್ಕುಗಳು ಈ ಸಮುದಾಯಗಳಿಗೆ ಪೂರ್ವಿಕರು ನೀಡಿರುವ ಹಕ್ಕುಗಳಾಗಿವೆ. ಇಂತಹ ಪರಂಪರಿಕತೆ ಈ ಸಮುದಾಯಗಳಲ್ಲಿ ಇಂದಿಗೂ ಉಳಿದುಕೊಂಡಿದೆ.

ಮಾದಿಗ ಸಮುದಾಯಗಳನ್ನು ನಂಬಿ ಜೀವಿಸುತ್ತಿರುವ ದಕ್ಕಲರು ಕುಲ ಬಂಧುಗಳ ಬಗ್ಗೆ ಹೆಚ್ಚು ಹೆಮ್ಮೆ ಪಡುತ್ತಾರೆ. ಮಾತಂಗ ಪರಂಪರೆಯ ಜಾಂಬವ ಕುಲ ಮೂಲದಿಂದ ದಕ್ಕಲ ಮುನಿಯು ಹುಟ್ಟಿದ ಕಾರಣದಿಂದ ದಕ್ಕಲರ ವಂಶ ಬೆಳೆದಿದೆ ಎಂಬ ಅಭಿಮಾನ ಈ ಸಮುದಾಯಗಳದ್ದು. ಏಕೆಂದರೆ ಜಾಂಬಪುರಾಣದ ಮೂಲಕಥೆಯು ಈ ಸಮುದಾಯಗಳ ಜೀವನದ ಮೂಲ ಆಧಾರ ಶಿವ ಪಾರ್ವತಿಯರ ಕಲ್ಯಾಣಕ್ಕಾಗಿ ದೇವತೆಗಳು ಹಾಗೂ ವಿಶ್ವಕರ್ಮನಿಗೆ ಆಭರಣಗಳನ್ನು ತಯಾರಿಸಲು ಹೇಳಿದಾಗ ವಿಶ್ವಕರ್ಮ ತನ್ನ ಶಕ್ತಿಯನ್ನು ಕಳೆದುಕೊಂಡು ಸಲಕರಣೆಗಳಿಗಾಗಿ ಜಾಂಬವ ತಾತನ ಬಳಿ ಹೋದಾಗ ಆದಿ ಜಾಂಬ ಯುಗಮುನಿ ಹೆಪ್ಪುಮುನಿ ಮಕ್ಕಳನ್ನು ಅವರ ದೇಹವನ್ನು ಬಳಸಿಕೊಂಡು ಅವರ ಶರೀರದಿಂದ ಅಂಗಗಳನ್ನು ಸಲಕರಣೆಗಳನ್ನು ಮಾಡಿ ಉಳಿದ ದೇಹವನ್ನು ಬೇಲಿ ಆಚೆ ಬಿಸಾಡುತ್ತಾನೆ.

ಮಕ್ಕಳಿಲ್ಲದೆ ಬೇಸರದಲ್ಲಿ ಇದ್ದಾಗ ಶಿವ-ಪಾರ್ವತಿಯರು ದಕ್ಕಲ ಮುನಿಯನ್ನು ಸೃಷ್ಟಿಸಿ ಜಾಂಬವಂತನಿಗೆ ನೀಡುತ್ತಾರೆ. ಹೀಗೆ ಆದಿ ಜಾಂಬವನ ಮೂಲಕ ನಮ್ಮ ಸಮುದಾಯ ಬೆಳೆದವು ಎಂದು ಹೆಮ್ಮೆಯಿಂದ ಹೇಳಿಕೊಂಡು ಆದಿಜಾಂಬ ಮುನಿ ನಮ್ಮ ತಾತ ನಮ್ಮ ಗುರು ಎಂದು ಹೇಳುತ್ತಾರೆ. ಜಾಂಬವಂತನ ದತ್ತು ಮಗನಾದರು ಜಾಂಬವ ಕುಲದಿಂದ ಬದುಕು ಕಟ್ಟಿಕೊಂಡಿದ್ದಾರೆ. ಇವರ ಕುಲವು ಮೂಲ ವೃತ್ತಿಯ ಮೇಲೆ ಹಾಗೂ ಮಾದಿಗರ ಮೇಲೆ ಹೆಮ್ಮೆ ಪಡುತ್ತಾರೆ. ನಮ್ಮ ಪುರಾಣದ ಮೇಲೆ ಆತ್ಮ ವಿಶ್ವಾಸವನ್ನು ಹೆಚ್ಚಿಸಿ ಮಾದಿಗರಿಗೂ ನಮ್ಮ ಸಮುದಾಯಗಳ ಮೇಲೆ ಹೆಚ್ಚು ಅಭಿಮಾನವಿದೆ.

ದಕ್ಕಲರ ಸಾಂಸ್ಕೃತಿಕ ಚರಿತ್ರೆಯ ಮೌಖಿಕತೆಯಾದರೂ ಈ ಮೌಖಿಕ ಪುರಾಣದಲ್ಲಿ ಸಮುದಾಯಗಳು ಮಾಂಸಪ್ರಿಯರು ಎಂದು ತಿಳಿಯುತ್ತದೆ. ಮಾಲ ಚನ್ನಯ್ಯನನ್ನ ಕಾಮಧೇನುವಿಗೆ ಕಾವಲುಗಾರನಾಗಿ ನೇಮಿಸಿ ಪಾರ್ವತಿಯು ಮಾಲ ಚನ್ನಯ್ಯನಿಗೆ ಕಾಮಧೇನುವನ್ನು ಮುಟ್ಟಬಾರದು ಅದರ ಹಾಲನ್ನು ಕುಡಿಯಬಾರದು ಎಂದು ಹೇಳಿ ಕಾಮಧೇನು ಹಾಲಿನ ಪಾತ್ರೆಯನ್ನು ತೊಳೆದು ಆ ನೀರನ್ನು ಮೂಲ ಚನ್ನಯ್ಯನಿಗೆ ನೀಡುತ್ತಾಳೆ. ಈ ನೀರು ಇಷ್ಟು ರುಚಿಯಾಗಿದ್ದರೆ ಇನ್ನು ಕಾಮಧೇನು ಇನ್ನು ಎಷ್ಟು ಚೆನ್ನಾಗಿರುತ್ತದೆ ಎಂದು ಕಾಮಧೇನುವನ್ನು ಕೊಂದು ಅದನ್ನು ಒಬ್ಬನೇ ಮಾಂಸವನ್ನು ಮಾಡಿ ತಿನ್ನಲು ಸಾಧ್ಯವಾಗದೆ ಜಾಂಬವಂತನನ್ನು ಕರೆಯುತ್ತಾನೆ. ಕೇಳದೆ ಇದ್ದಾ ಮಾದಿಗ ಬಾರಯ್ಯ ಎಂದು ಕರೆದಾಗ ಮಾಹಾದಿ ಎಂಬ ಪದವು ಮಾದಿಗ ಎಂಬ ಶಬ್ದವೇ ಉಳಿಯುತ್ತದೆ. ಹೀಗೆ ಬಲಗೈ ಪಣಗಳು ಎಡಗೈ ಪಣಗಳು ನಿಶ್ಚಯಿಸಲ್ಪಟ್ಟ ವರ್ಗಗಳಾಗಿ ಹಂಚಿಕೆಯಾಗಿ ಮಾದಿಗರು ಮತ್ತು ಹೊಲೆಯರು ಎಂದು ಬಹುಶ ಕರೆಯಲ್ಪಟ್ಟಿದ್ದು ಎಂಬ ಅಂಶ ತಿಳಿಯುತ್ತದೆ. ಈ ಎರಡು ಸಮುದಾಯಗಳು ಕೋಣಗಳನ್ನು ಕಡೆದು ಮಾಂಸವನ್ನು ಆಹಾರವಾಗಿ ಸ್ವೀಕರಿಸುತ್ತಾರೆ. ಆದರೆ ಆಹಾರದ ಕಾರಣಕ್ಕಾಗಿ ಈ ಸಮುದಾಯಗಳು ವರ್ಗಗಳಾಗಿಲ್ಲ. ಅಂದಿನ ಧಾರ್ಮಿಕ ಆಹಾರದ ಪಂಥಗಳ ನೆಲೆಯ ವರ್ಗಾಶ್ರಮಗಳಾಚೆ ಜೀವಿಸುತ್ತಿರುವ ಕೆಳವರ್ಗದ ನಡುವಿನ ಸಂಘರ್ಷಾತ್ಮಕ ರೂಪದಲ್ಲಿ ವಿಂಗಡಿಸಿಕೊಂಡಿವೆ ಎಂದರೆ ತಪ್ಪಾಗಲಾರದು. ಹೀಗೆ ವಿಂಗಡಣೆಗೊಂಡ ಸಮುದಾಯಗಳಲ್ಲಿ ಮಾದಿಗರು ಸಹ ದಕ್ಕಲರನ್ನು ತಮ್ಮ ಉಪ ಕುಲಗಳು ಹಾಗೂ ನಮ್ಮ ದೊಕ್ಕೆಯಿಂದ ಹುಟ್ಟಿದ ಮಕ್ಕಳು ಮನೆ ಮಕ್ಕಳು ಎಂದು ತಮಗಿಂತ ದೂರವಿರಿಸಿ ಅವರಿಗೆ ಆಶ್ರಿತರಾಗಿದ್ದಾರೆ. ಇವರ ನಡುವೆ ಸಂಬಂಧ ಬೆಳೆಯುವುದು ಅಸಾಧ್ಯವಾದ ವಿಚಾರವಾಗಿದೆ. ರಕ್ತ ಸಂಬಂಧಗಳು ನಿಷೇದಿತವಾದರೂ ಮಾದಿಗರು ಯಾರೆ ಸತ್ತರೂ ದಕ್ಕಲರು ಬರಬೇಕಾಗುತ್ತದೆ. ಹೀಗೆ ಇಬ್ಬರ ನಡುವಿನ ಸಂಬಂಧಗಳು ಬೆಸೆಯುವ ಅವಕಾಶವಿಲ್ಲದಿರುವಷ್ಟು ದೂರವಾಗಿದ್ದಾರೆ. ಜಾತಿ ಪದ್ಧತಿಗಳು ಈ ಸಮುದಾಯಗಳಲ್ಲಿ ನೆಲೆಯೂರಿದೆ.

## ಕೊನೆ ಟಿಪ್ಪಣಿಗಳು

೧. ದಕ್ಕಲ ಸಮುದಾಯಗಳ ಮಾಹಿತಿ.

೨. ಪವರ್‌ಹರಿಲಾಲ್, ದಕ್ಕಲಿಗರು, ಪು. ૩, ೪.

૩. ಡಾ. ಕೆ. ಕೃಷ್ಣಪ್ಪ, ದಕ್ಕಲಿಗ ಸಮುದಾಯ, ಪು. ೧೦೨, ೧೦೭, ೧೦೯.

೪. ಕೋಟಿಗಾನಹಳ್ಳಿ ರಾಮಯ್ಯ, ಸಿಂಧ್ ಮಾದಿಗರ ಸಂಸ್ಕೃತಿ, ಪುಟ. ೯೪–೯೫.

◆ ◆ ◆

ಅಧ್ಯಾಯ : ಮೂರು

# ದಕ್ಕಲಿಗರ ಜಾಂಬಪುರಾಣ(ಗಂಗಭಾರತ) ಚಾರಿತ್ರಿಕ ಹಿನ್ನೆಲೆ

೩.೧. ಜಾಂಬವಂತನ ಹುಟ್ಟು

೩.೨. ಜಾಂಬಪುರಾಣದ ಐದು ಕಥೆಗಳ ಪ್ರಸ್ತಾವ

೩.೨.೧. ಆದಿಪುರಾಣ

೩.೨.೨. ಪಾರ್ವತಿ ಕಲ್ಯಾಣ

೩.೨.೩. ಹೊಲಯ ಚನ್ನಯ್ಯ ಪುರಾಣ ಅಥವಾ ಸಮುದ್ರಮಂಥನ ಕಾಮಧೇನು ಪುರಾಣ

೩.೨.೪. ಅರುಂಧತಿ ಪುರಾಣ

೩.೨.೫. ಬಲಭದ್ರ ವಿಜಯ

೩.೩. ಗಂಗಭಾರತ

ಅಧ್ಯಾಯ : ಮೂರು

# ದಕ್ಕಲಿಗರ ಜಾಂಬಪುರಾಣ (ಗಂಗಭಾರತ) ಚಾರಿತ್ರಿಕ ಹಿನ್ನೆಲೆ

**ಪೀಠಿಕೆ**

ಭಾರತೀಯ ಸಮಾಜದಲ್ಲಿ ರಾಮಾಯಣ ಮತ್ತು ಮಹಾಭಾರತಗಳಂತಹ ಪುರಾಣಗಳನ್ನು ಗಮನಿಸಿದ್ದೇವೆ. ಆದರೆ ಈ ಪುರಾಣಗಳಿಂತ ವಿಭಿನ್ನವಾದ 'ದಕ್ಕಲ ಜಾಂಬವ ಪುರಾಣ'. ಇದನ್ನು ಗಂಗಭಾರತ ಎಂದು ದಕ್ಕಲರು ಕರೆಯುವುದು ಇದೆ. ಹೇಳುವ ರೂಪದ ಕಥಾರೂಪವಾಗಿದೆ. ಈ ಸಮುದಾಯವು ಪರಿಶಿಷ್ಟ ಜಾತಿಗೆ ಸೇರಿದ ಮಾದಿಗರಲ್ಲಿನ ಒಂದು ಉಪಜಾತಿಯಾಗಿದೆ. ಇವರನ್ನು ಜಾಂಬವ ಮುನಿಯ ಕುಲದವರು ಎಂದು ಕರೆಯುತ್ತಾರೆ. ಮೂಲ ಸಮಾಜದಿಂದ ದೂರವಾಗಿ ಊರಿನ ಹೊರಗೆ ಗುಡಿಸಲುಗಳನ್ನು ಹಾಕಿಕೊಂಡು ಮಾದಿಗರ ಸಮುದಾಯಗಳಲ್ಲಿ ಭಿಕ್ಷೆಯನ್ನು ಬೇಡಿ ಜೀವಿಸುವ ಒಂದು ಅಸ್ಪೃಶ್ಯ ಜಾತಿಯಾಗಿದೆ. ಇವರು ಈ ದಕ್ಕಲ ಜಾಂಬ ಪುರಾಣವನ್ನು ಮಾದಿಗ ಸಮುದಾಯಕ್ಕೆ ಹೇಳಿ, ಮಾದಿಗ ಜಾತಿಗೆ ತಮ್ಮ ಜಾತಿಯ ಮೂಲವೆಂದು ಹೇಳಿ ಜಾಂಬಪುರಾಣದ ಕಥೆಯನ್ನು ವಿವರಿಸುತ್ತಾರೆ.

ದಕ್ಕಲ ಜಾಂಬಪುರಾಣದ ಮೂಲ ಭಾಷೆ ತೆಲುಗು ಭಾಷೆಯಾಗಿದೆ. ಜಾಂಬಪುರಾಣ ಇದು ವಾಸ್ತವ ಪುರಾಣಕ್ಕೆ ಸಂಬಂಧ ಪಟ್ಟ ಜಾನಪದ ಕಥಾ ರೂಪ. ಯಾವುದಕ್ಕೆ ಎಷ್ಟು ಪ್ರಾಚೀನತೆ ಇದೆ ಎಂಬುವುದ ಮೂಲ ಆಧಾರಗಳಿಂದ ತಿಳಿಯುತ್ತದೆ. ಮಾದಿಗ ಜಾತಿಯ ಉನ್ನತಿಯನ್ನು ವಿವರಿಸುವ ಆದಿ ಪುರಾಣವಾಗಿದೆ. ಇದನ್ನು ದಕ್ಕಲ ಸಮುದಾಯದ ಕಲಾಕಾರರು ಪ್ರದರ್ಶಿಸುತ್ತಾರೆ. ಯಾವುದಕ್ಕೆ ಎಷ್ಟು ವಿಸ್ತೃತತೆ ಇದೆಯೋ ಅಷ್ಟೇ ವೈವಿಧ್ಯತೆ ಇದೆ. ಮಾದಿಗ ಚರಿತ್ರೆ ಸಂಸ್ಕೃತಿಗಳನ್ನು ರಕ್ಷಿಸುವುದಕ್ಕೆ ಯಾವುದಕ್ಕೆ ಸೃಷ್ಟಿಸಿಕೊಂಡಿದೆಯೋ, ಅದೇ ಶಿಷ್ಟ ಪುರಾಣಗಳಿಗೆ ನೇರವಾಗಿ ನಿಂತಿದೆ. ಅಷ್ಟಾದಶ ಪುರಾಣಗಳ ಸಮಾನಾಂತರವಾಗಿ ತನ್ನ ಭಾವ ಜಾಲವನ್ನು ಜನರಿಗೆ ಪ್ರತ್ಯಾಯಮಾನವಾಗಿ ತೋರಿಸುವುದರಲ್ಲಿ ದೇಶಿ ವಿಶಿಷ್ಟತೆಯನ್ನು ಅಡಗಿಸಿಕೊಂಡಿದೆ. ಇದು ಎಲ್ಲ ದಕ್ಕಲ ಕಲಾವಿದರ ಕಲ್ಪನಾ ಚಾತುರ್ಯ ಎನ್ನುವ ಹಾಗೆ ಅವರ ಪ್ರತಿಭೆ ಈ ಕಲೆಯಲ್ಲಿ ಕಾಣಿಸುತ್ತದೆ.

ಜಾಂಬಪುರಾಣದಲ್ಲಿ ಬರುವ ತಂಗಡಿ ಗಿಡದ ದ್ಯಾವರಕೆ ಸಂಬಂಧಿಸಿದಂತಿರುವ ಪುರಾಣ. ಮಾಸ್ತಿಕರು, ದಕ್ಕಲರು ಮತ್ತು ಸಿಂಧ್ ಮಾದಿಗರೆಲ್ಲರ ಮೂಲ ಪುರಾಣವಿದ್ದಂತೆ. ದಕ್ಕಲರು ಈ

ಪುರಾಣವನ್ನು ಗಂಗಭಾರತವೆಂಬ ಗೇಯ ಕಥೆಯನ್ನಾಗಿಸಿ ರಾತ್ರಿಯಿಡಿ ಹಾಡಬಲ್ಲರು. ಈ ಪುರಾಣವನ್ನು ಅಲ್ಪ ಸ್ವಲ್ಪ ಬದಲಾವಣೆಯೊಂದಿಗೆ ಜೌಂಕಿಣಿ(ಚೌಡಿಕೆ) ನುಡಿಸುತ್ತಾ ಆಂಧ್ರ ಮತ್ತು ಶ್ರೀನಿವಾಸಪುರ ತಾಲೂಕಿನ ಜೌಂಕಿಣಿ ಮುನಿಯಪ್ಪ ಜಾಮುಕುಲ ಕಥೆ ಎಂದು ಹಾಡುತ್ತಾರೆ. ಈ ಜಾಯಿ ಪುರಾಣದ ಪ್ರಾಧಾನ್ಯತೆ ಎಷ್ಟು ಎಂದು ಹೇಳುವ ಹಾಗಿಲ್ಲ. ವರಂಗಲ್ ಜಿಲ್ಲೆಯ ನಸಕ್ಕಲ್ ಗ್ರಾಮದ ದಕ್ಕಲ ಗೋಪಾಲಪ್ಪ ಸಹಕಾರದಿಂದ ಈ ವೃತ್ತಿಗೆ ರೂಪ ಕೊಟ್ಟಿರುವರು.

ದಕ್ಕಲ ಜಾಂಬಪುರಾಣದಲ್ಲಿ ವಿಶ್ವ ಸೃಷ್ಟಿಯ ಕಾರ್ಯ ಆದಿ ಜಾಂಬವಂತ, ಆದಿ ಶಕ್ತಿ, ತ್ರಿಮೂರ್ತಿಗಳ ಹುಟ್ಟನ್ನು ಆ ಪ್ರಾಂತ್ಯಗಳಿಗೆ ಸಂಬಂಧ ಪಟ್ಟ ಹಾಗೆ ತಮ್ಮ ಪೂರ್ವಿಕರು ಹೇಳಿದ ಮೌಖಿಕ ಕಥೆಗಳು. ಆ ಕಥೆಗಳನ್ನು ಆಧರಿಸಿ ಅಸ್ಪೃಶ್ಯರಲ್ಲಿ ಅಸ್ಪೃಶ್ಯರಾದ ದಕ್ಕಲ ಸಮುದಾಯಗಳು ಮಾದಿಗರ ಕೇರಿಗಳಲ್ಲಿ ದಕ್ಕಲ ಪುರಾಣವನ್ನು ಹೇಳಿ ನಾಟಕದ ರೂಪದಲ್ಲಿ ಪ್ರದರ್ಶಿಸಿ ಮಾದಿಗರ ಕೇರಿಗಳಲ್ಲಿ ಭಿಕ್ಷೆ ಬೇಡಿ ತಮ್ಮ ಕುಲವೃತ್ತಿಯನ್ನು ಸಾಗಿಸುತ್ತಾರೆ. ಹೀಗೆ ಪ್ರದರ್ಶಿಸಿದ ನಾಟಕವೇ ದಕ್ಕಲ ಜಾಂಬವ ಪುರಾಣ(ಗಂಗಭಾರತ). ಈ ಪುರಾಣದಲ್ಲಿ ಹದಿನೆಂಟು ಯುಗಗಳ ಪ್ರಸ್ತಾಪವಿದೆ. ಆ ಯುಗಗಳಲ್ಲಿ ಶ್ರೀಮನ್ ನಾರಾಯಣ, ಜಾಂಬವಂತ, ಆದಿ ಶಕ್ತಿ ಹುಟ್ಟು ಪ್ರಾರಂಭವಾಗಿ ತದ ನಂತರ ದಕ್ಕಲ ಸಮುದಾಯದ ಹುಟ್ಟಿಗೆ ಜಾಂಬ ಪುರಾಣ ಹೇಗೆ ಪಾತ್ರವಾಗುತ್ತದೆಂಬ ವಿಷಯ ಈ ಜಾಂಬ ಪುರಾಣದಲ್ಲಿ ಈ ಕೆಳಗಿನ ೪ ಕಥೆಗಳಿಂದ ಸಂಗ್ರಹಿಸಲಾಗಿದೆ.

**ಜಾಂಬಪುರಾಣದ ಯುಗಗಳ ಪ್ರಸ್ತಾಪ**

ಜಾನಪದ ಪುರಾಣಗಳು ಯಕ್ಷಗಾನ ಪ್ರಕ್ರಿಯೆಯ ಕಾಕತಿಯರ ಕಾಲದಲ್ಲಿ ಅಭಿವೃದ್ಧಿ ಹೊಂದಿದೆ. ವೃತ್ತಿ ಪುರಾಣವನ್ನು ಆಯಾ ಜಾತಿಗಳ ಅನುಸಾರವಾಗಿ ಹೊಂದಲಾಗಲಿಲ್ಲವೆ ಹೊರತು ಕಥೆ ಅನುಸರಿಸುತ್ತಿರುವುದು ದಕ್ಕಲ ಕುಟುಂಬಗಳು ಮಾತ್ರ. ಶೈವ ಮತಾವಲಂಬಿಯ ಕುಲವು ಶ್ರಮ ಜೀವಿಗಳು ವೃತ್ತಿ ಪುರಾಣದಲ್ಲಿ ಕೆಲವು ದಿನಗಳ ನಂತರ ಜೈನ ಮತದ ನಡುವೆ ಹೋರಾಡಿದ ವೃತ್ತಿಗಳು ಕಾಣಿಸುತ್ತದೆ. ನಮ್ಮ ಕಾಕತೀಯರ ಕಾಲದಲ್ಲಿ ಮುಂದೆ ಬೌದ್ಧ ನಂತರ ಶೈವವು ಪುನರ್ ಜೀವನ ತಾಳಿದ. ಈ ಪುರಾಣದಲ್ಲಿ ಬುದ್ಧನು ನಾರಾಯಣ ಅವತಾರವಾಗಿ ಜನಿಸುತ್ತಾನೆ. ಬುದ್ಧ ನಾರಾಯಣ ರೂಪದಲ್ಲಿ ಇರುವ ಏಕೋ ನಾರಾಯಣ ೧೮ ಯುಗಗಳ ಬಗ್ಗೆ ಪ್ರಸ್ತಾಪಿಸುತ್ತಾನೆ.

ಆ ಯುಗಗಳು ಅನಂತ ಯುಗ (ಆದಿ ಯುಗ), ಅಧ್ಬುತ ಯುಗ, ಅಳಾಂದರ ಯುಗ, ತಾಳಂದರ (ತಾರಜ) ಯುಗ, ತಮಂದ ಯುಗ, ಬಿನ್ನಜಾಯುಗ, ಭಿನ್ನಾಯುಕ್ತ ಯುಗ, ಅವಾಯುಕ್ತ, ಪಂಚಾಯುಕ್ತ, ಮಹಾಯುಕ್ತ, ಮಹಿರ್ನಾ, ಈಶ್ವರ, ವಿಶ್ವಾರಸು, ಅಲಂಕೃತ, ಕೃತ, ತ್ರೇತ, ದ್ವಾಪರ, ಕಲಿಯುಗ, ಹೀಗೆ ಏಕೋ ನಾರಾಯಣನು ಹೇಳುತ್ತಾನೆ ಎಂದು ಹೇಳುತ್ತಾರೆ.

## ೩.೧. ಜಾಂಬವಂತನ ಹುಟ್ಟು (ಅನಂತ ಆದಿಯುಗ ಪ್ರಾರಂಭ)

"ನಾ ಭೂಮಿ ನಾ ಜಲಂ ಚೈವ ಸತೇಜೋ ನಚವಾಯಃ
ನನಭೋ ನಚಂ ಬ್ರಹ್ಮ ..........
ನಚಂ ವಿಷ್ಣು ನಚಂರುದ್ರ ಶ್ಚ್ಯತಾರಕಃಸರ್ವೆ ಶೂನ್ಯ
ನಿರಾಲಂಭೋ.........."

ನಾ ಭೂಮಿ ಎಂದರೆ ಭೂಮಿ ಇಲ್ಲದ ದಿನ (ಭೂ ರಹಿತನು) ನಾ ಜಲಂ ಅಂದರೆ ನೀರು ಇಲ್ಲದ ದಿನ (ನೀರಿಲ್ಲದವನು) ನಾ ವಾಯು ಅಂದರೆ ಗಾಳಿಯಿಲ್ಲದ ದಿನ ನನಭೋ ಅಂದರೆ ಆಕಾಶವಿಲ್ಲದ ದಿನ (ಸೂರ್ಯ, ಚಂದ್ರ, ನಕ್ಷತ್ರ ರಹಿತ) ನಚಂ ಬ್ರಹ್ಮ ಎಂದರೆ ಬ್ರಹ್ಮನು ಇಲ್ಲದ ದಿನ ನಚಂ ವಿಷ್ಣು ಅಂದರೆ ವಿಷ್ಣುವಿಲ್ಲದ ದಿನ ನಚಂ ರುದ್ರ ಎಂದರೆ ಶಂಕರನಿಲ್ಲದ ದಿನ ನಚತಾರಕ ಎಂದರೆ ನಕ್ಷತ್ರಗಳಿಲ್ಲದ ದಿನ.

**ಶ್ರೀಮನ್ ನಾರಾಯಣನು ಅವತಾರ ತಾಳಿದ ದಿನ**

ನಿಲಾ ವರ್ಣನು ಜನಿಸುವ ಮುನ್ನ ನಿದ್ರ ಗೋಪಾಲನು ಹುಟ್ಟುವ ಮುಂಚೆ, ಸತಿ ಹುಟ್ಟುವ ಮೊದಲೆ ಸತಿಗೆ ಆರು ದರ್ಶನಗಳು ಹುಟ್ಟುವ ಮುನ್ನ ಗಂಟೆಯಷ್ಟು ಶಂಖ, ಮುತ್ತಿನಷ್ಟು ನೀರು, ಲವಣ, ಸೂರ್ಯ, ಸರ್ಪ, ದದಿ, ಕ್ಷೀರ, ಇಕ್ಷು, ಜಲ ಸಪ್ತ ಸಾಗರಗಳು ಈ ಹಾಲಿನ ಸಮುದ್ರದಲ್ಲಿ ಅರವತ್ತು ಸಮುದ್ರಗಳ ಆಳದ ಒಂದು ತೀರದಲ್ಲಿ ನಾನು ಮುದ್ದೆಯಾಗಿರುವ ವೃದ್ದನಾಗಿ ಉತ್ಪನ್ನನಾಗಿರುವೆ. ಏಳು ಸೂತ್ರಗಳಿಂದ ಕೈ ಕಾಲುಗಳಿಂದ ಬುದ್ದಾವತಾರವಾಗಿ ಮೋಂಗಿ ಇಲ್ಲದೆ ಜನಿಸಿರುವೆ ಎಂದು ದಕ್ಕಲರು ಪಟವನ್ನು ತೋರಿಸುತ್ತಾ ಈ ವಿಧವಾಗಿ ಶ್ರೀಮನ್ ನಾರಾಯಣ ಅವತಾರವೆತ್ತಿ ಹಾಲಿನ ಸಮುದ್ರದ ಮೇಲೆ ವಾಸಿಸುತ್ತಿರುವನಾಗಿದ್ದಾನೆ.

ಅನಂತ ಯುಗದಲ್ಲಿ ಹುಟ್ಟಿದ ಶ್ರೀಮನ್ ನಾರಾಯಣ ಆಗ ನಾರಾಯಣನು ಜಲಗಳು ನೀರ ಬುಗ್ಗೆಗಳಂತಿವೆ. ಅದಕ್ಕೆ ಆಧಾರವೇನು? ಇಲ್ಲಿ ಮತ್ತೆ ನಾನು ಅವಕ್ಕೆ ಆಧಾರವಾಗಿರುವೆನು. ಮತ್ತೆ ನನಗೆ ಯಾರು ಕಾಣಿಸುತ್ತಿಲ್ಲ. ಕಣ್ಣುಗಳನ್ನು ಮುಚ್ಚಿಕೊಂಡರೆ ಯಾವ ರೀತಿಯಾಗಿ ಕತ್ತಲಾಗಿದೆಯೋ ಅದೇ ರೀತಿಯಾಗಿ ಕಡುಗತ್ತಲೆಯಾಗಿದೆ. ನಾನೊಂದು ಕುಂಬಾರ ಹುಳುವಿನ ವೇಷ ತೊಟ್ಟು ಈ ಏಳು ಸಾಗರಗಳನ್ನ ಓಡಾಡಿ ಬರುತ್ತೇನೆ ಎಂದು ಏಳು ಸಾಗರಗಳನ್ನು ಸಂಚರಿಸಲು ಲವಣ ಇಕ್ಷು ಸುರ ಸರ್ಪದದಿ ಕ್ಷೀರ ಜಲಾವರ್ಣವು ಏಳು ಸಾಗರಗಳಿವೆ ಯಾರು ಇಲ್ಲ ಆಕಾಶವು ಓಕಾರವು ಶ್ರೀಕಾರವು ಈ ಜಲಾವರ್ಣದ ಸಿಹಿ ನೀರಿನ ಸಮುದ್ರವು ಒಂದು ಆದರೆ ಕೈನಾಗಿಸಿ ನಾರಾಯಣನು ತನ್ನ ಎದೆಯಿಂದ ಹಿಡಿ ಮಣ್ಣನ್ನು ತೆಗೆದು ಗೊಂಬೆಯನ್ನಾಗಿ ಮಾಡಿ ತನ್ನ ಮೂಳೆಗಳಲ್ಲಿನ ಒಂದು ಮೂಳೆಯನ್ನು ತೆಗೆದು ಆ ಜಲಾವರ್ಣದ ಸಿಹಿ ನೀರಿನ ಸಮುದ್ರದಲ್ಲಿ ಹಾಕುತ್ತಾನೆ. ನಂತರ ಅದ್ಭುತವಾದ ಆದಿಯುಗ ಬರುತ್ತದೆ.

ಅದರಿಂದ ಒಬ್ಬ ಮುನೀಶ್ವರನು ಜನಿಸುತ್ತಾನೆ ಎಂದು ಹೇಳಿದನು. ಅದರಿಂದ ಹುಟ್ಟಿದ ಮುನೀಶ್ವರನೆ ಆದಿಜಾಂಬವಂತ ಅವನು ಹುಟ್ಟಿದ ಯುಗವೆ ಆದಿಯುಗ.

ಆದಿಜಾಂಬವಂತ ಹುಟ್ಟಿನ ವರ್ಣನೆಯನ್ನು ಕೇಳಲು ಜಾಂಬವಂತ ಕೆಂಪಾದ, ಕಪ್ಪು ವರ್ಣದ ಹೆಚ್ಚನೆಯ ಜಡೆಗಳಿಂದ ಹಾಗೂ ಕೀಲು ಕೀಲಿಗೆ ನನಗೆ ರುದ್ರಾಕ್ಷಿ ಭದ್ರಾಕ್ಷಿ ಕತ್ತಲು ಧರಿಸಿ ಪಟ್ಟ ತಂಬುರಿಯನ್ನು ಕೊಂಗುವಾರು ಕತ್ತಿಯನ್ನು ಧರಿಸಿ ಕೋರು ಮೀಸೆಯನ್ನು ಮಲಚೂರಿ ದ್ವಾರಪಾಲ ಆ ಏಳು ಸಮುದ್ರಗಳು ಒಂದಾಗಿಯೂ ಸಹ ಈ ಏಳು ಸಮುದ್ರಗಳು ಯಾರಿಗೂ ಕಾಣಿಸದಿರುವಲ್ಲ ಅಂದರೆ ಈ ಭೂಮಿ ಎಲ್ಲಿ ಹುಟ್ಟಿತೆಂದರೆ ಯಾರೋ ಆ ಬೆವರು ಅಂತಹುದು ಗಂಟೆಯಷ್ಟು ಶಂಖುವಿನಲ್ಲಿ ಬೀಳಲು ಮುತ್ತಿನಷ್ಟು ನೀಲಾವತಾರನಾಗಿ ದುಂಡು ಕಮಲದಲ್ಲಿ ನೀಲವರೇಶ್ವರನಾಗಿ ನಾನು ಜನಿಸಿದೆ ಎಂದು ಹೇಳಲು.

ಆಗ ನಾರಾಯಣನು ನಾನೆ ಹರಿಯು ನಾನೇ ಪರಮೇಶ್ವರನು ನಾನೆ ನನ್ನದಾದ ನನ್ನ ಎದೆಯಲ್ಲಿರುವ ಮಣ್ಣಿನಿಂದ ಹುಟ್ಟಿದ ನನ್ನ ಮಗನು ನನಗೆ ಪ್ರೀತಿ ತೋರುವವನು ನಾನು ತಪ್ಪದೆ ಅವನೊಂದಿಗೆ ಹೋಗಬೇಕು.

"ನೀಲಾವರ ಜಾಂಬವಂತ ನಿನಗೆ ಜಟಗಳಿಣಿತ
ಕೋಟಿ ಮೀರಿದ ಲಿಂಗಗಳು ಸಮಕ್ಕೆ
ಗಂಗಾಧರ ಗೋತ್ರ ನಿನದ್ದೆ ತಾನೆ"

ನಾಯಾಯಣನು ನಾನೆ ಹರಿಯು ನೀನಾರು ಹರಿಜನನು ಜಾಂಬವನು (ವಿಷ್ಣುವಿನಿಂದ ಹುಟ್ಟಿದ ಜಾಂಬವಂತ) ನೀಲಾವರ! ಜಾಂಬವಂತ! ನಿನಗೆ ಜಡೆಗಳು ಲೆಕ್ಕವಿಲ್ಲ. ಕೋಟಿಗೆ ಮೀರಿದ ಲಿಂಗಗಳು ಸಮಕೆ ಗಂಗಾಧರ ಗೋತ್ರ ನಿನ್ನದು, ನಿನಗೆ ಮುದ್ದಾಗಿ ಹೆಸರುಗಳನ್ನು ಹೊಂದಿಸಿರುವೆ. ನನಗೆ ಮಗನೇ ನಾನು ನಿನಗೆ ಚೊಕ್ಕವಾಗಿಯೇ ಹೆಸರುಗಳನ್ನ ಕೊಡುತ್ತಿರುವೆ. ಆಗ ಜಾಂಬವಂತ ಓ ನಾರಾಯಣ ಆಕಾರವು, ಓಕಾರವು ಶ್ರೀಕಾರವು ಆ ಶ್ರೀಕಾರಗಳಲ್ಲಿಯೂ ನೀನು ಉದಯಿಸಯ್ಯಾ! ಎಂದಾಗ ಆಗ ನಾರಾಯಣನು ಆಕಾರ ಓಕಾರ, ಶ್ರೀಕಾರಗಳ ತಂದೆ ನಾನು ಅನಂತಕೋಟಿ ಯುಗದಲ್ಲಿ ಜನಿಸಿದನು. ನೀನು ಅದ್ಭುತಯುಗದಲ್ಲಿ ನಾನು ಜನಿಸಿದನೆ. ಆಕಾರದಿಂದಾಗಿ ನಾನು ಹರಿಯು ನೀನು ಓಕಾರದಿಂದಾಗಿ ನೀಲಾವರೇಶ್ವರನು. ಆಗ ಜಾಂಬವಂತ ತಂದೆ, ಮತ್ತೆ ಶ್ರೀಕಾರದಲ್ಲಿ ಏನು ಆಗಲಿರುವುದೋ ಎಂದು ಕೇಳಿದಾಗ ನಾರಾಯಣನು ವರ್ತಮಾನ ಹೇಳಂದೆಯೆ ನನ್ನ ಆತ್ಮವೇ ಆಕಾರ ನನ್ನ ಆತ್ಮವೇ ಮಂತ್ರ ಶಕ್ತಿಗಳು ಆತ್ಮವೇ ನಾನು ನಾನು ನಿರಂಹಂಕಾರವಾದವನೆಂದು. ಆದಿ ಏಕೋ ನಾರಾಯಣ ಸ್ವಾಮಿಯಲ್ಲವೇ! ಆ ಸರ್ವವು ನನಗೆ ಏರ್ಪಟ್ಟಿದು ಇನ್ನು ಶ್ರೀಕಾರದಿಂದ ಸ್ತ್ರೀ ಉತ್ಪತ್ತಿಯಾಗುವ ಉಪಾಯ ಉಂಟು ಮಗನೆ ಎಂದಾಗ ಜಾಂಬವಂತ ಸ್ತ್ರೀಯನ್ನು ಉತ್ಪತ್ತಿ ಮಾಡು ಅನ್ನುವಿಯ ಎಂದಾಗ ಜಾಂಬವಂತ ಮಾಡಬೇಕಾದ್ದೆ ಎಂದು ಕೇಳಲು ಆಗ ನಾರಾಯಣ ಸ್ತ್ರೀಯು ಏನಾದರು ಶ್ರೀಕಾರದಲ್ಲಿ

ಜನಿಸಿದರೆ ನಮಗೆ ಅಪರಾಧ ಬರುತ್ತದೆ. ಆ ಸ್ತ್ರೀ ಅಬಲೆ ಎಷ್ಟು ಅಪರಾಧ ಅದನ್ನು ನೀನು ಕಂಡುಕೊಂಡೆಯ ಎಂದರು. ಜಾಂಬವಂತ ಕೇಳದೆ. ಸ್ತ್ರೀಯನ್ನು ಜನಿಸುವಂತೆ ಕೇಳುತ್ತಾನೆ. ಆಗ ನಾರಾಯಣ ತನ್ನ ಎದೆಯ ಹಿಸುಕಿ ಹಿಡಿ ಮಣ್ಣನ್ನು ಗೊಂಬೆ ಮಾಡಿ ಆಕಾರ ಶ್ರೀಕಾರ ಓಕಾರ ಮಂತ್ರಗಳಿಂದ ನಾನು ಅರ್ಥವಾಗಿಸಿಕೊಂಡು ಆ ಗೊಂಬೆಗೆ ಪ್ರಾಣ ಕೊಟ್ಟು ಮೂಳೆಗಳಿಂದ ಒಂದು ಮೂಳೆಯನ್ನು ತೆಗೆದು ಆ ಜಲವರ್ಣದ ಸಿಹಿ ನೀರಿನ ಸಮುದ್ರದಲ್ಲಿ ಹಾಕುತ್ತಾನೆ. ತಮಂದ ಯುಗ ಬರುತ್ತದೆ. ಆ ಯುಗದಲ್ಲಿ ಸ್ತ್ರೀ ಜನನವಾಗುತ್ತದೆ. ಆ ಸ್ತ್ರೀಯೆ ಆದಿ ಶಕ್ತಿಯಾಗಿ ಹುಟ್ಟುತ್ತಾಳೆ. ಅವಳ ಜನಿವಾರ ಎಡದಲ್ಲಿ ಜನಿವಾರವು ಅಂಗಾಲಿನಲ್ಲಿ ತಾವರೆ ಪದ್ಮವು ಬೆನ್ನಿನಲ್ಲಿ ಚಾಮರಗಳು ಹಣೆಯಲ್ಲಿ ಚಿತ್ರ ಕಣ್ಣು ನೋಡಲು ಸುಂದರ ಕನಕ ನವಯುವತಿಯಾಗಿರುವಳು ಮಗನೆ ಅವಳನು ಬರಮಾಡಿಕೊಳ್ಳಬೇಕು ಎಂದು ಹೇಳುತ್ತಾನೆ.

ಆದಿಶಕ್ತಿಯು ತನ್ನ ಪರಿಚಯಮಾಡಿಕೊಳ್ಳುತ್ತಾಳೆ. ಆಗ ಗಾಳಿ, ಬೆಂಕಿ, ವಾಯು, ಮೇಘ, ಭೂ ಮಂಡಲ, ಚಂದ್ರ ಮಂಡಲ, ನಕ್ಷತ್ರ, ಸೂರ್ಯ ಮಂಡಲವಿಲ್ಲ. ಆಕಾಶವಿಲ್ಲದ ಸಮಯದಲ್ಲಿ ಜಲಾವರ್ಣಯ ಎಂದರೆ ಸಿಹಿ ನೀರಿನ ಸಮುದ್ರವಿತ್ತು. ಆ ಹಾಲಿನ ಸಮುದ್ರದಲ್ಲಿ ಹುಟ್ಟಿ ಮಹಾನುಭಾವಳು. ಈ ನನ್ನ ಎಂಟು ಕೈಗಳು ಭಾರವಾಗಿ ನನ್ನ ದೇಹವೆಲ್ಲ ಭಾರವಾಗಿ ನಡೆಯಲು ನನಗೆ ನನ್ನ ಕಾಲುಗಳು ತಡವರುಸುತ್ತಿವೆ ಆದರೂ ನನ್ನ ಮದನ ತಾಪ ತಾಳಲಾರದೆ ಇದ್ದ ದಿನ ಸೂರ್ಯ ಚಂದ್ರಾದಿ ನಕ್ಷತ್ರ ಕಿನ್ನರ ಕಿಂಪುರುಷ ಪಶುಪಕ್ಷಿಗಳು ಇರದ ಕಾಲದಲ್ಲಿ ನಾನು ಪಂಚಾಕ್ಷರಿ ಮಂತ್ರವನ್ನು ಪಠಿಸುವಷ್ಟರಲ್ಲಿ ನನಗೆ ಮೋಹ ತಾಪವಾಗಿ ಪ್ರೇಮದಿಂದ ಬಾಧೆ ಪಡುತಿದ್ದೆನು ನನಗೆ ಮೊದಲು ನಾರಾಯಣನು ಜನಿಸಿದನು. ಅದರಿಂದ ಅವನೇ ನನ್ನ ತಂದೆ, ಆದರೆ ತಂದೆ ಎಂದು ಕರೆಯಲಿಲ್ಲ. ನನಗೆ ಹಿಂದೆ ಹುಟ್ಟಿದ ನೀಲಾರೇಶ್ವರನು ಅಣ್ಣನೆಂದುಕೊಂಡೆ. ಆದರೂ ಅಣ್ಣ ಎಂದು ಕರೆದವಳಲ್ಲ. ಆದರೂ ನನ್ನ ಮೋಹ ತೀರಲಿಲ್ಲ. ತದನಂತರ ನಾರಾಯಣ ನನ್ನ ಗಂಡ ಎಂದು ಭಾವಿಸಿದರೂ ಪ್ರಯೋಜನವಾಗಲಿಲ್ಲ ಎಂದು ಹೇಳಿ, ತದನಂತರ ಬ್ರಹ್ಮನನ್ನು ಕೇಳಿದರು ಪ್ರಯೋಜನವಾಗಲಿಲ್ಲ. ಆಗ ಆದಿ ಶಕ್ತಿಯನ್ನು ಗೆಲ್ಲಲು ಶಿವನಿಗೆ ಉಪಾಯವನ್ನು ಹೇಳಿದ ಜಾಂಬವಂತ ತಾತಾ. ತದನಂತರ ಜಾಂಬವಂತ ಪಾರ್ವತಿ ಪರಮೇಶ್ವರ ಮದುವೆಗೆ ಮೆಟ್ಟಿಲುಗಳು ಮಂಗಳ ಸೂತ್ರ ತಯಾರಿಸುವುದಕ್ಕೆ ವಸ್ತುಗಳು ಇಲ್ಲದೆ ಇದ್ದಾಗ ತನ್ನ ಮಗನಾದ ಬೆಪ್ಪುಮುನಿಯನ್ನು ಬಲಿ ಕೊಟ್ಟು ವಿಶ್ವಕರ್ಮನಿಗೆ ಅವನ ಮೂಳೆಗಳನ್ನು ನೀಡಿ ವಸ್ತುಗಳನ್ನ ತಯಾರಿಸುವುದಕ್ಕೆ ಕೊಟ್ಟು ತ್ಯಾಗ ಮೂರ್ತಿ ಜಾಂಬವಂತ. ತನ್ನ ಮಗನ ಮೃತ ದೇಹದ ಉಳಿದ ಡೊಕ್ಕೆಯಿಂದ ಹುಟ್ಟಿದ ಡೊಕ್ಕಲು ಕುಲ ಈ ದಕ್ಕಲಿ ಕುಲ ಮೂಲ ಪುರುಷನು ಹುಟ್ಟುವುದಕ್ಕೆ ಮೂಲವಾಯ್ತು. ಹೀಗೆ ಚಿಂದು, ಮಾಸ್ತೀ ನುಲಕ ಚಂದಯ್ಯ ಎಂಬ ಉಪಕುಲಗಳೂ ಹುಟ್ಟಿಗೆ ಮೂಲ ಕಾರಣವಾಯಿತು.

**ಈ ಜಾತಿಗಳನ್ನ ಯಾರು ಯಾರು ಕರೆಯುತ್ತಾರೆ?**

ಜಾಂಬ ಪುರಾಣವು ವಿವಿಧ ಜಾನಪದ ಕಲಾ ರೂಪದಲ್ಲಿ ಪ್ರದರ್ಶಿಸುತ್ತಾ ಮಾದಿಗರಿಗೆ ಆಶ್ರಯವಿದ್ದ (೧೦ ಕುಲಗಳು) ಉಪ ಕುಲಗಳು ಸಮಾನಾಂತರ ಜಾನಪದ ಕಲಾ ರೂಪದಲ್ಲಿ ಇದನ್ನು ಪ್ರದರ್ಶಿಸುತ್ತಾ ಬಂದಿದ್ದಾರೆ. ದಕ್ಕಲ ಕಲಾವಿದರು ಜಾಂಬ ಪುರಾಣವನ್ನ ಜಾನಪದ ಕಲಾ ರೂಪವನ್ನ ಚಿತ್ರ ಪಟದ ಆಧಾರವಾಗಿ ಹೇಳುತ್ತಾ, ಬಂದು ಚಿಂದುಗರ ಯಕ್ಷಗಾನದಲ್ಲಿ ಇದನು ಪ್ರದರ್ಶಿಸುತ್ತಾ ಬಂದಿದ್ದಾರೆ. ನೂಲಕ ಚಂದ್ರಯ್ಯ ಇದನ್ನು ಪ್ರವಚನವಾಗಿ ಹೇಳುತ್ತಾರೆ. ಇವರೆಲ್ಲಾ ವೃತ್ತಿಗಾಯಕರು. ಈ ಕಾಲದಲ್ಲಿ ಸ್ವಲ್ಪ ಜನ ಅನಾಗರೀಕ ಕುಲಗಳ ಮೇದಾವಂತರು ಆಧುನಿಕ ನಾಟಕವಾಗಿ ಸರಿಪಡಿಸುತ್ತಾ ನೂತನ ವಿಧಾನವಾಗಿ ಇದನ್ನು ಪ್ರದರ್ಶಿಸುತ್ತಾ ದಲಿತ ಸೌಂದರ್ಯ ಶಾಸ್ತ್ರಗಳನ್ನು ರಂಗಸ್ಥಳ ವಿಶಿಷ್ಟವನ್ನು ದಲಿತ ಜೀವನದ ಪ್ರತ್ಯೇಕ ಶೈಲಿಯನ್ನು ವಿವರಿಸುತ್ತಾ ಬರುತ್ತಿದ್ದಾರೆ. ವೃತ್ತಿ ಪುರಾಣದಲ್ಲಿ ಅನೇಕ ಜಾನಪದ ಕಲಾ ರೂಪದಲ್ಲಿ ಪ್ರದರ್ಶಿಸುವುದೆ ಅಲ್ಲದೆ ಅನೇಕ ಉಪ ಕುಲಗಳು ಜಾಂಬ ಪುರಾಣವನ್ನು ಹೇಳುವುದು ಅದರ ಸಾಂಸ್ಕೃತಿಕ ಉನ್ನತಿಯನ್ನು ತಿಳಿಯಪಡಿಸುತ್ತದೆ.[೧]

**೩.೨. ಜಾಂಬಪುರಾಣದ ಐದು ಕಥೆಗಳ ಪ್ರಸ್ತಾವ**

ಜಾಂಬ ಪುರಾಣ ದಕ್ಕಲ ಕಲಾವಿದರು ಪ್ರದರ್ಶಿಸುವ ಜಾನಪದ ಕಲಾ ರೂಪವನ್ನು ಚಿತ್ರ ಪಟದ ಮೂಲಕ ವಿವರಿಸುತ್ತಾರೆ. ದಕ್ಕಲ ಜಾತಿಯವರು ಸಂಪ್ರದಾಯಿಕವಾಗಿ ಪ್ರದರ್ಶನಕ್ಕೆ ಒಳಪಟ್ಟಿರುವ ದಕ್ಕಲಿ ಜಾಂಬ ಪುರಾಣದಲ್ಲಿ ಐದು ಪುರಾಣ ಕಥೆಗಳು ಒಳಗೊಂಡಿದ್ದು. ಇದರಲ್ಲಿ ಆದಿ ಪುರಾಣವಾಗಿ ಪ್ರಸಿದ್ಧಿಯಾದ ಜಾಂಬ ಪುರಾಣವು ಅವನು ಲೋಕಸೃಷ್ಟಿಗೆ ಲೋಕಕಾರನಾಗಿ ಹೇಗೆ ಆಗುತ್ತಾನೆ ಎಂದು ವಿವರಿಸುವುದಕ್ಕೆ ಪಾರ್ವತಿ ಪರಿಣಯವನ್ನು ಒಂದು ಕಥಾ ವಸ್ತುವಾಗಿ ವಿವರಿಸುತ್ತಾನೆ. ಆ ಐದು ಪುರಾಣಗಳೇ;

೧. ಆದಿ ಪುರಾಣ (ಸೃಷ್ಟಿ ಪುರಾಣ)

೨. ಪಾರ್ವತಿ ಕಲ್ಯಾಣ

೩. ಮಾಲ (ಹೊಲೆಯ) ಚನ್ನಯ್ಯ ಪುರಾಣ

೪. ಅರಂಜ್ಯೋತಿ (ಅರುಂಧತಿ) ಕಲ್ಯಾಣ ಅಥವಾ ಪುರಾಣ

೫. ಬಲ ಭದ್ರ ವಿಜಯ.

**೩.೨.೧. ಆದಿಪುರಾಣ (ಸೃಷ್ಟಿ ಪುರಾಣ)**

ಆದಿಶಕ್ತಿ ಜಗತ್ತಿನ ಸೃಷ್ಟಿಗೆ ಮೂಲ ಕಾರಣಗಳು ಶಿಷ್ಠ ಪುರಾಣದಲ್ಲಿ ಜಾನಪದ ಪುರಾಣದಲ್ಲಿ ಸಹಿತ ಪರಾಶಕ್ತಿಯಾಗಿ ಕಾಣಿಸುತ್ತಾಳೆ. ಮಾತೃ ಸ್ಥಾನಕ್ಕೆ ಪ್ರತೀಕವಾಗಿ ನಿಲ್ಲುತ್ತಾಳೆ. ವೃತ್ತಿ ಪುರಾಣದಲ್ಲಿ ಅಧಿಕವಾಗಿ ಪ್ರಾಧಾನ್ಯತೆಯನ್ನು ನೀಡಲಾಗುತ್ತದೆ. ಆದಿಪುರಾಣಕ್ಕೆ ಆದಿ ಶಕ್ತಿ

ಹುಟ್ಟುವ ಪುನರ್ ಉತ್ಪತ್ತಿಗೆ ಸಂಬಂಧಿಸಿದ ಕಥಾವಸ್ತು ಇದರಲ್ಲಿ ಕಾಣಿಸುತ್ತದೆ. ಜಗತ್ತಿನ ಸೃಷ್ಟಿಗೆ ಮೂಲವಾದ ಶಕ್ತಿ ವೃತ್ತಾಂತವು ಯಾವುದಕ್ಕೆ ಕಥಾ ವಸ್ತುವಾಗಿ ಯಾವುದಕ್ಕೆ ಪ್ರಾಧಾನ್ಯತೆಯಿದೆ, ಯಾವುದಕ್ಕೆ ನೇಪಥ್ಯವಾಗಿದೆ. ಬೌದ್ಧ ಅಧ್ಯಾತ್ಮಿಕ ಚಿಂತನೆ ಮಾಡುತ್ತೇವೆಯೋ ಆ ಕೆಳ ಜಾತಿಗಳ ಸುದ್ದಿ ಹಿಂದೂ ಮತ ಸಂಪ್ರದಾಯದಲ್ಲಿ ಆದಿಶಕ್ತಿ ಕಥಾ ವಸ್ತು ಮುಂದುವರಿಯುತ್ತದೆ. ಶಕ್ತಿ ಸ್ವರೂಪವಾದ ದೈವ ಬಲವನ್ನು ನಿರೂಪಿಸುವುದಕ್ಕಾಗಿ ಹಾಗೂ ಯಾವುದಕ್ಕೆ ಪುರಾಣ ವೃತ್ತಿಗಳನ್ನು ಗಮನಿಸಬೇಕಾದ ಅನಿವಾರ್ಯವಾಗುತ್ತದೆ. ಆ ಆದಿ ಯುಗದಲ್ಲಿ ಅವತರಿಸಿದ ಶಕ್ತಿಯೆ ಆದಿ ಶಕ್ತಿ. ಅಂದರೆ ಆದಿಪುರಾಣದ ಕಥನದಲ್ಲಿ ಭೂಮಿ, ಆಕಾಶ, ಸೂರ್ಯ, ಚಂದ್ರ, ನಕ್ಷತ್ರ ಮಂಡಲ, ಸಾರ ಅಸುರರು, ಮನುಷ್ಯರು, ಗಿಡ ಮರಗಳು ಇತ್ಯಾದಿಗಳು ಕಲ್ಪನೆಯೆ ಇಲ್ಲದ ಕಾಲದಲ್ಲಿ ಏಕೋ ನಾರಾಯಣನು ಸ್ವಯಂಭೂವಾಗಿ ನೀರಿನ ಮೇಲೆ ಗುಳ್ಳೆಯಂತೆ ತೇಲುತ್ತಾ ತನ್ನೊಡನೆ ಆದಿ ಜಾಂಬವಂತ ಮತ್ತು ಆದಿ ಶಕ್ತಿಯನ್ನು ಹುಟ್ಟಿಸುವನು.

ಆದಿಶಕ್ತಿಯ ಇಚ್ಛೆಯಂತೆ ಪರಸ್ಪರ ಶಪಿಸಿಕೊಂಡು ನವಿಲುಗಳಾಗಿ ರೂಪಾಂತರಗೊಂಡು ಮೂರು ಮೊಟ್ಟೆಗಳನ್ನು ಇಡುತ್ತಾರೆ. ಆ ಮೊಟ್ಟೆಗಳೆ ಅಂಡ ಪಿಂಡ ಬ್ರಹ್ಮಾಂಡವಾಗಿ ತ್ರಿಮೂರ್ತಿಗಳು ಜನಿಸುತ್ತಾರೆ. ಆದಿ ಶಕ್ತಿಯೂ ಆ ಮೂರು ಮೊಟ್ಟೆಗಳಿಂದ ಲೋಕ ನಿರ್ಮಾಣ ಮಾಡುತ್ತಾಳೆ. ಮಾನವನ ಸೃಷ್ಟಿಯಾಗಬೇಕು ಎಂದು ಆದಿ ಶಕ್ತಿಯು ತನಗೆ ಮೂವರು ಗಂಡು ಮಕ್ಕಳನ್ನು ಕೊಡಲು ಅನುಮತಿಸುವಂತೆ ಕೋರುತ್ತಾಳೆ. ಇದಕ್ಕೆ ಬ್ರಹ್ಮ, ವಿಷ್ಣು, ಸಂಮತಿಸುವುದಿಲ್ಲ ಆಗ ಅವರು ಅವಳ ಕ್ರೂರ ಕೋಪಕ್ಕೆ ಗುರಿಯಾಗುತ್ತಾರೆ.

ಶಂಕರನು ತನ್ನ ಸೋದರ ಮಾವನಾದ ಜಾಂಬವನ ಸಲಹೆಯಂತೆ ಆದಿ ಶಕ್ತಿಯನ್ನು ಮದುವೆಯಾಗುವುದಾಗಿ ಹೇಳಿ ಅವಳಿಗೆ ಇದ್ದ ಶಕ್ತಿಗಳ ಎಲ್ಲವನ್ನ ಕಸಿದುಕೊಂಡು ಅವಳನ್ನು ಸುಟ್ಟು ಭೂದಿ ಮಾಡುತ್ತಾನೆ. ನಂತರ ತನ್ನ ಅಣ್ಣಂದಿರನ್ನು ಬದುಕಿಸಿಕೊಳ್ಳುತ್ತಾನೆ. ಇಲ್ಲಿ ಪ್ರಧಾನ ಅಂಶವಾಗಿ ತ್ರಿಮೂರ್ತಿಗಳ ಜನನ ಮತ್ತು ಆದಿಶಕ್ತಿಯ ಮರಣ ಕಾಣಿಸುತ್ತದೆ. ನಂತರ ಆದಿ ಶಕ್ತಿಯನ್ನು ಸುಟ್ಟಿದ್ದ ಬೂದಿಯನ್ನು ಮೂರು ಭಾಗಗಳಾಗಿ ಮಾಡಿ ಮಂತ್ರ ಜಲವನ್ನು ಬೂದಿಯ ಮೇಲೆ ಚೆಲ್ಲುತ್ತಾರೆ. ಆಗ ಸರಸ್ವತಿ, ಲಕ್ಷ್ಮಿ, ಪಾರ್ವತಿ ಹುಟ್ಟುತ್ತಾರೆ. ಹೀಗೆ ಸರಸ್ವತಿಯನ್ನು, ಬ್ರಹ್ಮ ವರಿಸಿದರೆ ಲಕ್ಷ್ಮಿಯನ್ನು ನಾರಾಯಣ ವರಿಸುತ್ತಾನೆ. ನಂತರ ಪಾರ್ವತಿಯ ರೂಪದಲ್ಲಿರುವ ಆದಿ ಶಕ್ತಿಯನ್ನು ಶಿವನು ವಿವಾಹವಾಗುತ್ತಾನೆ. ಹೀಗೆ ಸೃಷ್ಟಿಯ ಮೂಲ ಪುರಾಣವೇ ಆದಿ ಶಕ್ತಿ ಪುರಾಣ.

ಈ ಆದಿಶಕ್ತಿಯ ಪುರಾಣ ಕಥೆಯು ದಕ್ಕಲ ಸಮುದಾಯಗಳನ್ನು ಆಧರಿಸಿದಾಗ ಭಿನ್ನ ಕಥೆಗಳಾಗಿ ಪರಿಗಣಿಸಬಹುದು ಏಕೆಂದರೆ, ಭೂಮಂಡಲ ಹುಟ್ಟುವುದಕ್ಕೆ ಪೂರ್ವದಲ್ಲಿ ಸಮಸ್ತ ಲೋಕವು ಪ್ರಳಯವಾಗಿ ಎಲ್ಲಾ ಜಲಮಯವಾಯಿತು. ಅಂತಹ ಅಂಧಕಾರದಲ್ಲಿ ಬ್ರಹ್ಮನು ಆದಿಯುಗದಲ್ಲಿ ಹುಟ್ಟಿದನು. "ನಿರಾಕಾರ ನಿರಾಮಯೆ ನಿರಕಲ್ಪಿತ ನಿರ್ವಿಗ್ನತೆ ಜ್ಯೋತಿರ್ಮಯೆ"

ಸರೋವರವಾಗಿತ್ತು. ಆಗ ತನ್ನ ಆತ್ಮದಲ್ಲಿ ತಾನೇ ಜಲವನ್ನ ಹೆಪ್ಪು ಮಾಡಿ ಜಲಮಯವಾದ ಮಹತ್ತ್ರಳಯವನ್ನ ತಡೆಯಲು ತನ್ನ ಕರ್ಣದಲ್ಲಿ ಬೆರಳಿಟ್ಟು ಆದಿ ಜಾಂಬಮುನಿ ಹುಟ್ಟಲೆಂದು ಯೋಚಿಸಿದಾಗ ಆದಿಜಾಂಬ ಮುನಿಯು ನದಿಯ ಸ್ಥಳದಲ್ಲಿ ಹುಟ್ಟುತ್ತಾನೆ. ಆ ನಂತರ ಜಾಂಬವಂತನಿಗೆ ಪರಬ್ರಹ್ಮನು ಮಹತ್ತ್ರಳಯವಾಗಿರುವ ಜಲವನ್ನು ಹೆಪ್ಪು ಮಾಡಿ ಭೂ ಮಂಡಲವನ್ನ ಮತ್ತೆ ನಿರ್ಮಿಸಿ ಜಾಂಬವಂತ ಹುಟ್ಟಿದ ಸ್ಥಳವನ್ನು ಜಂಬೂದ್ವೀಪವೆಂದು ಹೆಸರು ನೀಡಲು ಅಜ್ಞಾಪಿಸಲು, ಅತ್ತ ಜಾಂಬವಂತನು ತನ್ನ ಪೂರ್ಣ ದೃಷ್ಟಿಯಿಂದ ಅದಿಶಕ್ತಿ ಹುಟ್ಟಬೇಕು ಎಂದು ಉಪದೇಶ ಮಾಡುತ್ತಾನೆ. ಜಾಂಬವಂತನ ಮಂತ್ರೋಪದೇಶದಿಂದ ಅಳಂದರ ಯುಗದಲ್ಲಿ ಆದಿಶಕ್ತಿ ಹುಟ್ಟುತ್ತಾಳೆ. ಆದಿಶಕ್ತಿಯಿಂದ ಜ್ಞಾನಶಕ್ತಿ ಉತ್ಪನ್ನವಾದಳು ಜ್ಞಾನಶಕ್ತಿಯಿಂದ ಕ್ರಿಯಾ ಶಕ್ತಿಯನ್ನು ಮಾಡಿಸಿಕೊಂಡು ಆದಿಶಕ್ತಿಯಾದ ನಾನೆ ಒಂದು ಬೀಜ ರೂಪವಾಗಿರುತ್ತೇನೆ. ಜ್ಞಾನಶಕ್ತಿಯಾದ ನೀನು ಶಿವ ಸಾಮರ್ಥ್ಯದಿಂದ ವಿಷ್ಣು ರೂಪವಾದರೆ ಆ ವಿಷ್ಣು ಶಕ್ತಿಯಿಂದ ಜಗತ್ತು ನೆನಸಿದ ಮಾತ್ರಕ್ಕೆ ಆದಿಶಕ್ತಿಯು ಅಖಂಡ ಮಯವಾದ ಬ್ರಹ್ಮ ಸ್ವರೂಪ ಧರಿಸಿ ಜ್ಞಾನಶಕ್ತಿ ಶಿವರೂಪಧರಿಸಿ ಕ್ರಿಯ ಶಕ್ತಿಯು ವಿಷ್ಣು ರೂಪಧರಿಸಿ ನಿಂತಳು.

ಹೀಗೆ ಆದಿಶಕ್ತಿ ಗರ್ಭಪೂರ್ಣಳಾಗಿ ಪಕ್ಷಿರೂಪ(ನವಿಲು) ತಾಳಿ ತಾಳಂದ ಯುಗದಲ್ಲಿ ಮೊಟ್ಟೆ ಹುಟ್ಟಿತು. ಆ ಮೊಟ್ಟೆಯಿಂದ ಬ್ರಹ್ಮಾಂಡ ಸೃಷ್ಟಿಯಾಗುತ್ತದೆ ಎಂದು ಹೇಳುತ್ತಾರೆ. ಆ ನಂತರ ಆದಿಶಕ್ತಿ ತ್ರಿಮೂರ್ತಿಗಳ ವಿವಾಹಕ್ಕೆ ಅಣಿಯಾಗುತ್ತಾಳೆ. ಆದರೆ ಬ್ರಹ್ಮ ಮತ್ತು ವಿಷ್ಣು ನಿರಾಕರಿಸಿದಾಗ ಈಶ್ವರನು ತನ್ನ ತಾತನಾದ ಜಾಂಬವನ ಸಹಾಯದಿಂದ ಆದಿಶಕ್ತಿಯನ್ನ ಮದುವೆಯಾಗುವುದಾಗಿ ಹೇಳಿ ಅವಳ ಶಕ್ತಿಗಳನ್ನ ಕಸಿದುಕೊಂಡು ಆದಿಶಕ್ತಿಯನ್ನ ಸುಟ್ಟು ಬೂದಿ ಮಾಡುತ್ತಾನೆ. ಹೀಗೆ ಬೂದಿಯನ್ನು ಮೂರು ಭಾಗಗಳಾಗಿ ಮಾಡಿ ತನ್ನ ಮಂತ್ರ ಶಕ್ತಿಯಿಂದ ಬೂದಿಗಳಲ್ಲಿ ಸರಸ್ವತಿ, ಲಕ್ಷ್ಮೀ, ಪಾರ್ವತಿ ಹುಟ್ಟುತ್ತಾರೆ. ಹೀಗೆ ಆದಿಪುರಾಣದಲ್ಲಿ ಆದಿಶಕ್ತಿಯ ಕಥೆ ಪ್ರಾರಂಭದಲ್ಲಿ ಸ್ವಲ್ಪಮಟ್ಟಿಗೆ ಭಿನ್ನವಾಗಿದ್ದರೂ ಕಥೆ ಮುಂದುವರೆಯುತ್ತಾ ಎರಡು ಕಥಾವಸ್ತುಗಳು ಒಂದೆಯಾಗಿರುತ್ತದೆ. ಹೀಗೆ ಆದಿಶಕ್ತಿಯ ಮರಣ ಮತ್ತು ತ್ರಿಮೂರ್ತಿಗಳ ಜನನದ ಪುರಾಣವಾಗಿದೆ.

### ೩.೨.೨. ಪಾರ್ವತಿ ಕಲ್ಯಾಣ

ಶಂಕರನಿಂದ ಭಸ್ಮಗೊಂಡ ಆದಿಶಕ್ತಿಯ ಬೂದಿಯನ್ನ ಮೂರು ಭಾಗಗಳಾಗಿ ಮಾಡಲು ಅದರಿಂದ ಸರಸ್ವತಿ, ಲಕ್ಷ್ಮೀ, ಪಾರ್ವತಿಯರ ಜನನವಾಗುತ್ತದೆ. ಸರಸ್ವತಿಯನ್ನು ಬ್ರಹ್ಮ ವರಿಸಿದರೆ, ಲಕ್ಷ್ಮೀಯನ್ನು ವಿಷ್ಣು ವರಿಸುತ್ತಾನೆ. ತದನಂತರ ಪಾರ್ವತಿ ರೂಪದಲ್ಲಿರುವ ಆದಿಶಕ್ತಿಯನ್ನ ಶಿವನಿಗೆ ಕೊಟ್ಟು ವಿವಾಹ ಮಾಡಲು ಸಜ್ಜಾದ ಜಾಂಬವಂತ ಈ ವಿವಾಹಕ್ಕೆ ಅಗಸ್ತ್ಯ ಮುನಿಯೆ ಬರಲು ಅಣಿಯಾಗುತ್ತಾನೆ. ಈ ವಿಷಯ ಜಾಂಬವಂತನಿಗೆ ತಿಳಿದು ಅಗಸ್ತ್ಯನನ್ನು ತಡೆಯಲು ವಿಶ್ವಕರ್ಮನನ್ನ ಕಾವಲುಗಾರನಾಗಿ ನೇಮಿಸುತ್ತಾನೆ. ಏಕೆಂದರೆ ಅಗಸ್ತ್ಯನು ಆರುತಿಂಗಳಿಂದ

ಏಳೂರುಗಲದ ಆಲದ ಮರದ ಎಲೆಗಳಿಂದ ಊಟದ ಎಲೆಗಳನ್ನು ಹೆಣಿದು ಮದುವೆಗೆ ಮಾಡಿದ ಅಡುಗೆಯನ್ನ ತಾನೊಬ್ಬನೇ ತಿಂದು ಭಂಗ ಮಾಡಲು ನಿರ್ಧರಿಸಿದನು. ಈ ವಿಷಯ ತಿಳಿದ ಜಾಂಬವಂತ ವಿಶ್ವಕರ್ಮನಿಗೆ ಅವನನ್ನ ತಡೆಯಲು ಹೇಳುತ್ತಾನೆ.

ಆಗ ವಿಶ್ವಕರ್ಮ ಅಗಸ್ತ್ಯನನ್ನು ತಡೆಯಲು ಯತ್ನಿಸಿದಾಗ ಇವರ ಕಪಟವನ್ನ ಅಗಸ್ತ್ಯಮುನಿ ತಿಳಿದು ವಿಶ್ವಕರ್ಮನಿಗೆ ಶಾಪವನ್ನ ನೀಡುತ್ತಾನೆ. "ಸೃಷ್ಟಿಸುವ ದೃಷ್ಟಿಯೇ ನಾಶವಾಗಲಿ" ಎಂದು ಶಾಪವಿಡುತ್ತಾನೆ. ವಿಶ್ವಕರ್ಮನು ಸಹ ಅಗಸ್ತ್ಯನಿಗೆ ಮರವಾಗಿ ಹುಟ್ಟುವಂತೆ ಶಾಪ ಕೊಡುತ್ತಾನೆ. ಹೀಗೆ ಅಗಸ್ತ್ಯನ ಶಾಪದಿಂದ ವಿಶ್ವಕರ್ಮ ತನ್ನ ಶಕ್ತಿಯನ್ನ ಕಳೆದುಕೊಂಡು ಶಿವನ ಮದುವೆಗೆ ಆಭರಣಗಳನ್ನು ಮತ್ತು ಮಾಂಗಲ್ಯವನ್ನು ತಯಾರಿಸುವುದಕ್ಕೆ ಸಾಧ್ಯವಾಗುವುದಿಲ್ಲ.

ಆಗ ಆದಿ ಜಾಂಬವಂತನು ಬಳಿ ಬಂದು ತನ್ನ ಕಷ್ಟವನ್ನ ಹೇಳಿ ಆಭರಣಗಳು ತನ್ನ ಮಗನಾದ ಬೆಪ್ಪು ಮುನಿಯನ್ನ ಕೊಂದು ಅವನ ಅಂಗಾಂಗಗಳಿಂದ ವಿಶ್ವಕರ್ಮನಿಗೆ ಬೇಕಾದ ಆಯುಧಗಳನ್ನ ಮಾಡಿಕೊಟ್ಟು ಅವುಗಳಿಂದ ತಯಾರಿಸಿ ಮಾಂಗಲ್ಯದಿಂದ ಅವುಗಳಿಂದ ತಯಾರಿಸಿದ ಆಭರಣಗಳಿಂದ ಶಿವ ಪಾರ್ವತಿಯ ವಿವಾಹವಾಗುತ್ತದೆ. ಇತ್ತ ಮರಣಿಸಿದ ಜಾಂಬವಂತ ಮಗ ಬೆಪ್ಪು ಮುನಿಯ ದೇಹವನ್ನ ಬೇಲಿಯಾಚೆ ಎಸೆಯುತ್ತಾನೆ.

ಶಿವ-ಪಾರ್ವತಿಯ ವಿವಾಹದ ನಂತರ ಜಾಂಬವ ತಾನು ಮಕ್ಕಳನ್ನ ಕಳೆದುಕೊಂಡೆ ಎಂದು ಚಿಂತಿಸುತ್ತಾನೆ. ಆಗ ಶಿವ ಪಾರ್ವತಿಯರು ಬೇಲಿಯಾಚೆ ಎಸೆದಿರುವ ದೇಹಕ್ಕೆ ಜೀವ ತುಂಬಿ ಜಾಂಬವಂತನ ಬಳಿ ಕರೆತಂದು ತಗೋ ನಿನ್ನ ಮಗನನ್ನ ಎಂದು ಹೇಳಿದಾಗ ಜಾಂಬವಂತ ಬೇಲಿಯಾಚೆ ಎಸೆದಿರುವವನು ಅವನು ನನಗೆ ಬೇಡ ಅವನು ನನಗೆ ದಕ್ಕದವನು ಹಾಗೆ ಇವನು ಯಾರಿಗೂ ದಕ್ಕದವನು ಎಂದು ಹೇಳಿ ಇನ್ನು ಮುಂದೆ ಇವನು ನನ್ನ ಸಂತಾನದ ಮಾದಿಗ ಕೇರಿಗಳಲ್ಲಿ ಭಿಕ್ಷೆ ಬೇಡಿ ತಿನ್ನಲಿ ಎಂದು ಹೇಳಿಬಿಟ್ಟ. ಹೀಗೆ ಹುಟ್ಟಿದ ದಕ್ಕಲ ಸಮುದಾಯ ಈಗಲೂ ಮಾದಿಗರ ಮನೆಗಳಲ್ಲಿ ಭಿಕ್ಷೆ ಬೇಡಿ ಈ ಪುರಾಣದ ಕಥೆಯನ್ನ ವಿವರಿಸುತ್ತ ತನ್ನ ಜೀವನವನ್ನ ಸಾಗಿಸುತ್ತಾರೆ. ಹೀಗೆ ಹುಟ್ಟಿದ ದಕ್ಕಲ ಸಮುದಾಯ ಇಂದಿಗೂ ಯಾರಿಗೂ ದಕ್ಕದ ಹಾಗೆ ಊರ ಹೊರಗೆ ಗುಡಿಸಲು ಹಾಕಿ ಜೀವಿಸುತ್ತಾರೆ.

**೩.೨.೩. ಹೊಲಯ ಚನ್ನಯ್ಯ ಪುರಾಣ ಅಥವಾ ಸಮುದ್ರ ಮಂಥನ, ಕಾಮಧೇನು ಪುರಾಣ**

ದಕ್ಕಲ ಪುರಾಣ ಕಥೆಗಳಾಗಿ ಸಾಗುವ ಈ ಹೊಲಯ (ಮಾಲ) ಚನ್ನಯ್ಯ ಪುರಾಣವು ಇತಿಹಾಸ ವಿಷಯಗಳಲ್ಲಿ ಕಾಣಿಸುವುದಿಲ್ಲ. ಬ್ರಾಹ್ಮಣ ಜಾತಿಗೆ ಸಂಬಂಧಿಸಿದ ವ್ಯತಿರಿಕ್ತವಾಗಿ ಸಮಾನಾಂತರ ಭಾವ ಜಾಲವನ್ನ ಬೆಳೆಸುವ ಪ್ರಯತ್ನವು ಇದರಲ್ಲಿ ತಿಳಿಯುತ್ತದೆ. ಶಿಷ್ಟ ಪುರಾಣಗಳಲ್ಲಿ ಪ್ರತ್ಯೇಕವಾಗಿ ಹಾಗೂ ಪೌರಾಣಿಕ ಕಥೆಗಳನ್ನು ಸೃಷ್ಟಿ ಕೆಳಜಾತಿ ಕುಲಗಳ, ಜಾತಿಗಳ ಮೂಲ ಪುರುಷರನ್ನು ದೈವ ಸಂಭೂತವಾಗಿ ಭಾವಿಸಿ ಅಧಿಪತ್ಯ ಜಾತಿಗಳ ಕೈಯಲ್ಲಿ ನಮಸ್ಕರಿಸಿ ದಲಿತ ಪ್ರತಿಭೆಗಳಿಗೆ ಸಾಮಾನ್ಯವಾಗಿದೆ. ಮತ ಸ್ಪರ್ಶದಿಂದ ಪಾವಿತ್ರತೆಯನ್ನು ಕಲೆ

ಸಂಪತ್ತನ್ನ ತೆಲುಗು ಸಂಸ್ಕೃತಿಯನ್ನ ಅಭಿವೃದ್ಧಿ ಹೊಂದುವುದರಲ್ಲಿ ಇದರ ವೈಶಿಷ್ಟ್ಯವನ್ನು ಕಾಣಬಹುದು. ಈ ಪುರಾಣಗಳ ಮೂಲ ಪುರಾಣವಾದ ಜಾಂಬವ ಪುರಾಣ ಶಿವ ಕಥೆಯ ಮೂಲ ಪುರಾಣದ ಕೆಳ ಜಾತಿಯ ಮೂಲವನ್ನು ವಿವರಿಸುತ್ತದೆ. ಈ ಮೂಲ ಚನ್ನಯ ಪುರಾಣವನ್ನು ಸತ್ಯ ಕಾಮಧೇನುವು ಕಥೆಯಾಗಿ ಹೇಳುತ್ತಾರೆ. ಈ ಕಥೆ ವರಂಗಲ್ ಜಿಲ್ಲೆಯ ನಸಕ್ಕಲ್ ದಕ್ಕಲ ಗೋಪಾಲ ಬೃಂದಂ ಆಧಾರವಾಗಿ ರೂಪತಾಳಿದೆ.

**ಮಾಲ ಚನ್ನಯ್ಯ ಯಾರು?**

ಪಾರ್ವತಿ ಗಂಗ ಸ್ನಾನಕ್ಕೆ ಹೋಗುವಾಗ ತನ್ನ ಅಂಟು ಅಂದರೆ ಮುಟ್ಟಾದ ವಸ್ತ್ರವನ್ನ ಚನ್ನಂಗಿ ಗಿಡದ ಪೊಟರೆಯಲ್ಲಿ ಬಚ್ಚಿಡುತ್ತಾಳೆ. ಸ್ನಾನ ಮಾಡಿ ಬರುವ ವೇಳೆ ಶಿವನ ನೆರಳು ಸ್ಪರ್ಶಿಸಿದಾಗ ಆ ಗಿಡದ ಪೊಟರೆಯಲ್ಲಿ ಒಬ್ಬ ಬಾಲಕನು ಜನಿಸುತ್ತಾನೆ. ಚನ್ನಂಗಿ ಗಿಡದ ಪೊಟರೆಯಲ್ಲಿ ಹುಟ್ಟಿದ ಆ ಬಾಲಕನಿಗೆ ಚನ್ನಯ್ಯ ಎಂಬ ಹೆಸರು ಇಟ್ಟಿದರು. ಕಲಿಯುಗದಲ್ಲಿ ಅವನು ಮಾಲಯ್ಯ ಎಂದು ಕರೆಯಲ್ಪಡುತ್ತಾನೆ. ಪಾರ್ವತಿ ಸ್ನಾನಕ್ಕೆ ಪೋಂಗ(ಹೋಗುತ್ತ) ರಾಂಗ (ಬರುತ್ತಾ) ಜನಿಸಿದ ಮಗುವಿಗೆ ಪೋಲಯ್ಯ ಎಂದು ಕರೆಯಲ್ಪಟ್ಟಿತು. ಅವನು ಆದಿ ದಂಪತಿಗಳ ಮಗುವಾಗುತ್ತಾನೆ. ಇವರಿಗೆ ಹುಟ್ಟಿದ ಮಗುವಾದುದರಿಂದ ತ್ರಿಮೂರ್ತಿಗಳ ಮಗುವಾಗುತ್ತಾನೆ. ಜಾಂಬುವಂತನಿಗೆ ಮೊಮ್ಮಗನಾಗುತ್ತಾನೆ. ಅವನ ವೃತ್ತಿ ಕಾಮಧೇನುವನ್ನು ಕಾವಲು ಕಾಯುವುದಾಗುತ್ತದೆ.

**ಪಾಪ ಮತ್ತು ಶಾಪದ ಕಲ್ಪನೆಗಳು**

ಪುರಾಣ ಕಥೆಗಳಲ್ಲಿ ಸೇರಿಕೊಂಡ ಇತರ ಜಾಂಬ ಪುರಾಣದಲ್ಲೆ ಅಲ್ಲದೆ ವಿವಿಧ ಪುರಾಣಗಳಲ್ಲಿ ಕಾಣಿಸುತ್ತದೆ. ಇದರಲ್ಲಿ ಪಾಪವು ಪಾರ್ವತಿಯದು ಆದರೆ ಶಾಪವು ಮೂಲ ಚನ್ನಯ್ಯನಿಗೆ ಉದ್ಯಾನವನದಲ್ಲಿ ಹೂಗಳನ್ನ ಕೀಳುತ್ತಿದ್ದ ಪಾರ್ವತಿಗೆ ಸರಸದಲ್ಲಿ ತೊಡಗಿದ್ದ ಗಂಡುಬೇರುಂಡ ಪಕ್ಷಿಗಳು ಕಾಣಿಸುತ್ತವೆ. ಅವಳು ತನ್ನ ಸೆರಗಿನಿಂದ ಅವುಗಳನ್ನ ಓಡಿಸುತ್ತಾಳೆ. ಸೃಷ್ಟಿ ಕಾರ್ಯಕ್ಕೆ ಭಂಗ ಪಡಿಸಿದಕ್ಕೆ ಆ ಪಕ್ಷಿಗಳು ಪಾರ್ವತಿಗೆ ಗಂಗೆಯಿಂದ ಐದು ಅಡಿಗಳ ದೂರದಲ್ಲಿ ಮುಟ್ಟಾಗುವಂತೆ ಶಾಪ ನೀಡುತ್ತವೆ. ಆ ಶಾಪದಿಂದ ಇದುವರೆಗೂ ಸ್ತ್ರೀಯರು ಆರು ತಿಂಗಳು ಆಗುವುದರೊಳಗೆ ಮುಟ್ಟಾಗದೆ ತಪ್ಪಿಸಲಾಗದು. ಗಂಗ ಸ್ನಾನಕ್ಕೆ ಹೋಗುವಾಗ ಮುಟ್ಟು ವಸ್ತ್ರವನ್ನ ಚನ್ನಂಗಿ ಗಿಡದ ಪೊಟರೆಯಲ್ಲಿ ಹಾಕಿ ಹೋಗುತ್ತಾಳೆ. ಆ ಶಾಪದಿಂದ ಪಾಪಿಷ್ಟನಾಗಿ ಚನ್ನಯ್ಯ ಹುಟ್ಟುತ್ತಾನೆ. ಪಾರ್ವತಿಯ ಪಾಪವನ್ನ ಶಾಪವಾಗಿ ಅನುಭವಿಸುತ್ತಾನೆ. ಚನ್ನಯ್ಯ ಹುಟ್ಟಿದ ಗಿಡಕ್ಕೆ ಒಂದು ಶಾಪವು ಇದೆ ಮತ್ತು ಆ ಮುಟ್ಟು ವಸ್ತ್ರದ ರಕ್ತವು ಚನ್ನಂಗಿ ಗಿಡದ ಮೊಗ್ಗಿನಲ್ಲಿ ಪ್ರವೇಶಿಸುತ್ತದೆ. ಇದುವರೆಗೂ ಚನ್ನಂಗಿ ಮೊಗ್ಗನ್ನು ಕೈಯಿಂದ ಉಜ್ಜಿದರೆ ಆ ಕಾಲದ ಪಾರ್ವತಿಯ ಅಂಟು ಕೆಂಪಗೆ ಕಾಣಿಸುತ್ತದೆ. ಇದು ಪುರಾಣ ಹಾಗೂ ಶಾಸ್ತ್ರೀಯಗಳಿಗೆ ಸಂಬಂಧಿಸಿದಂತೆ ಶಾಪಕ್ಕೆ ಗುರಿಯಾದ ಮೂಲ ಚನ್ನಯ್ಯ

ಗಂಡುಬೇರುಂಡ ಪಕ್ಷಿಗಳ ಶಾಪದಿಂದಲೆ ಮೂಲ ಚನ್ನಯ್ಯ ದರಿದ್ರನಾಗಿ ಹುಟ್ಟುತ್ತಾನೆ. ಅವನು ಜನಿಸಿದರಿಂದ ಇತರರಿಗೂ ಗಂಡವಾಗಿ ಪರಿಣಮಿಸುತ್ತದೆ. ಹುಟ್ಟಿದ ನಂತರವೆ ಅವನು ಮೂರು ವಿಷ ವಾಯುವಿನಿಂದ ಕೂಡಿರುತ್ತಾನೆ. ಮೊಲೆ ಹಾಲು ಕುಡಿದರೆ ತಾಯಿ ಮರಣಿಸುತಾಳೆ, ತುಟಿಯಿಂದ ಮುತ್ತಿಟ್ಟರೆ ತಂದೆ ಸಾಯುತ್ತಾನೆ. ಕಾಮಧೇನು ಹಾಲು ಕೊಟ್ಟರೆ ಹಸು ಸಾಯುತ್ತದೆ. ಇದರ ಮೂಲದಿಂದ ಮಾಲ ಚನ್ನಯ್ಯ ಕುಲ ದ್ರೋಹಿಯಾಗಿ ಹೆಸರು ಹೊಂದುತ್ತಾನೆ. ಅವನಿಗೆ ಕಾಮಧೇನುವನ್ನು ಕಾವಲು ಕಾಯುವ ಕೆಲಸ ನೀಡಿದ ತಾಯಿ ಕಾಮಧೇನುವಿನೊಡನೆ ಮಾತನಾಡಬಾರದು ಎಂದು ಹೇಳುತ್ತಾಳೆ. ಏಕೆಂದರೆ ಈ ಪಾಪದಿಂದ ಕೂಡಿದ ಅವನ ಮಾತು ಸೋಕಿ ಕಾಮಧೇನು ಸಾಯುತ್ತದೆ ಎಂದು ಅವಳಿಗೆ ಭಯವಾಗುತ್ತದೆ. ಕೊನೆಗೆ ನಡೆದಿದ್ದು ಅದೇ ಆಗುತ್ತದೆ. ಅದು ಸಾಯುವಾಗ ಅದರ ಹಾಲು, ಮೊಸರು, ಬೆಣ್ಣೆ, ತುಪ್ಪವನ್ನ ಅನುಭವಿಸುತ್ತಾರೆ. ಆಗ ಕಾಮಧೇನು ಐದನೆ ಬೆಳೆಯನ್ನು ನನ್ನ ಮಾಂಸವನ್ನ ತಿಂದುಹಾಕಿ ಎಂದು ಹೇಳುತ್ತದೆ. ಅದಕ್ಕೆ ದೇವತೆಗಳೆಲ್ಲ ಅದರ ಮಾಂಸವನ್ನು ಬೇಯಿಸುವಾಗ ಪಾತ್ರೆಯಿಂದ ಮೂರು ಮಾಂಸದ ತುಂಡುಗಳು ಕೆಳಗೆ ಬಿದ್ದರೆ ಅಲ್ಲಿದ್ದ ಮಾಲ ಚನ್ನಯ್ಯ ಅದನ್ನು ಕೈಗೆ ತೆಗೆದುಕೊಂಡು ಅದನ್ನ ಬಾಯಿಯಿಂದ ಊದಿ ಮತ್ತೆ ಪಾತ್ರೆಗೆ ಹಾಕುತ್ತಾನೆ. ಅದು ಮೈಲಿಗೆಯಾಗಿದೆ ಎಂಬ ವಿಷಯದಿಂದ ದೇವತೆಗಳು ಅ ಮಾಂಸವನ್ನು ತಿನ್ನದೆ ಹೊರಟು ಹೋಗುತ್ತಾರೆ. ಕಾಮಧೇನುವನ್ನು ಕತ್ತರಿಸುವಾಗ ಜಾಂಬವಂತನ ಕರೆಯುತ್ತಾನೆ. "ಮಾಲ ಚನ್ನಯ್ಯ" ಓ ಮಾಹಾದಿಗ ಇಳಿದು ಬಾರಯ್ಯ! ಎಂದು ಕರೆದು ಓ ಮಾದಿಗ ಇಳಿದು ಬಾರಯ್ಯ! ಎಂದು ಕರೆದುದರಿಂದ ಆ ಜಾತಿಗೆ ಮಾದಿಗ ಎಂಬ ಶಬ್ದವೇ ಉಳಿಯುತ್ತದೆ.

**ಸಮುದ್ರ ಮಂಥನ ಕಥೆ**

ಅಷ್ಟದಕ ಪುರಾಣದಲ್ಲಿ ಸಮುದ್ರ ಮಂಥನ ಕಥೆಯ ಆಧಾರವಾಗಿ ಮಾಲ ಚನ್ನಯ್ಯ ಪುರಾಣವು ಕಲ್ಪಿಸುತ್ತದೆ. ದೇವದಾನವರು ಹುಟ್ಟುತ್ತಾರೆ. ದಾನವರು ಅಂದ ವಿಕಾರವಾಗಿ ಹುಟ್ಟುತ್ತಾರೆ. ಅವರು ಅಂದ ವಿಕಾರವಾಗಿ ಇರುವುದರಿಂದ ಆತ್ಮ ಭಾವನೆಗಳ ದಕ್ಕೆಗೆ ಗುರಿಯಾಗುತ್ತಾರೆ. ಅಂದ ವಿಕಾರವನ್ನ ಹೋಗಲಾಡಿಸಲು ಅಮೃತವನ್ನು ಸೇವಿಸಬೇಕಾಗುತ್ತದೆ. ಅಮೃತಕ್ಕಾಗಿ ಮಂದರ ಪರ್ವತವನ್ನು ಕಡಿಯಲು ಆಧಿಶೇಷನನ್ನು ಹಗ್ಗವಾಗಿ ಮಾಡಿ ಕಡಿಯಲು ಅದರಲ್ಲಿ ಅಮೃತ, ಕಾಮಧೇನು, ಬಿಳಿ ಆನೆ, ಚಂದ್ರ ಈ ರೀತಿಯಾಗಿ ಅನೇಕ ವಸ್ತುಗಳು ಜನಿಸುತ್ತವೆ. ಕಾಮಧೇನುವನ್ನ ಕಾಯಲು ತ್ರಿಮೂರ್ತಿಗಳಲ್ಲಿ ಕೊನೆಯದಾಗಿ ಶಿವನಿಗೆ ಬರುತ್ತದೆ. ಆ ಸಮಯದಲ್ಲಿ ಪಾರ್ವತಿ ಗಂಡ ಬೇರುಂಡ ಪಕ್ಷಿಗಳ ಶಾಪದಿಂದ ಚನ್ನಂಗಿ ಗಿಡದ ಪೊಟರೆಯಿಂದ ಒಬ್ಬ ಬಾಲಕ ಜನಿಸುತ್ತಾನೆ. ಆ ಚನ್ನಂಗಿ ಗಿಡದಲ್ಲಿ ಜನಿಸಿದ ಚನ್ನಯ್ಯನಿಗೆ ಕಾಮಧೇನುವನ್ನು ಕಾವಲು ಕಾಯಲು ಒಪ್ಪಿಸುತ್ತಾನೆ. ಆದರೆ ಪಾರ್ವತಿ ನಿಯಂತ್ರಿಸುತ್ತಾಳೆ. ಆದರೆ ಅವನು ಹೊಟ್ಟೆ ನೋವು ಎಂದು ಕುಡಿಯಲು ಹಾಲು ಕೇಳುತ್ತಾನೆ ಆಗ ಪಾರ್ವತಿ ಹಾಲು ಕುಂಡವನ್ನು ತೊಳೆದು ಅವನಿಗೆ ನೀಡುತ್ತಾಳೆ ಆಗ ಚನ್ನಯ್ಯ ಆ ನೀರು ಕುಡಿದು ತೊಳೆದ ನೀರು ಇಷ್ಟು ಚೆನ್ನಾಗಿದೆ.

ಇನ್ನು ಕಾಮಧೇನು ಹಾಲು ಇನ್ನೆಷ್ಟು ಚೆನ್ನಾಗುತ್ತದೆ ಎಂದು ಹೇಳಿಕೊಳ್ಳುತ್ತಾನೆ. ಅವನು ಕಾಮಧೇನುವನ್ನು ಮುಟ್ಟಿದ ಕೂಡಲೇ ಅದು ಸಾಯುತ್ತದೆ. ಆಗ ಜಾಂಬವಂತ ಬಂದು ಅದನ್ನು ಎಬ್ಬಿಸಲು ಪ್ರಯತ್ನಿಸುತ್ತಾನೆ. ಆದರೆ ಅದು ಏಳುವುದಿಲ್ಲ. ಆ ಕಾಮಧೇನುವನ್ನು ಕೊಯ್ದು ಮಾಂಸವನ್ನು ಬೇಯಿ ತಿನ್ನುತ್ತಾರೆ. ಹೀಗೆ ಪಾರ್ವತಿಯಿಂದ ಹುಟ್ಟಿದರಿಂದ ಅವನನ್ನ ಅಪರೂಪವಾಗಿ ನೋಡಿಕೊಳ್ಳುತ್ತಾಳೆ. ಇಂತಹವರ ಪುತ್ರನು ಕಲಿಯುಗಕ್ಕೆ ಬರುವಾಗ ಮಾಲಯ್ಯನಾಗುತ್ತಾನೆ.

**ಕಥಾವಸ್ತು**

ಮಾಲ ಚನ್ನಯ್ಯ ಪುರಾಣದಲ್ಲಿ ಕಥೆಗೆ ಕೇಂದ್ರಬಿಂದು ಕಾಮಧೇನು. ಇದಕ್ಕೆ ಸ್ವೀಕರಿಸಿದ ಕಥಾವಸ್ತು ಗಂಗೆ, ಹಸು, ಈ ಹಸುವನ್ನು ಮೇಯಿಸುವ ಕಾವಲುಗಾರನ ವೃತ್ತಿಗೆ ಸಂಬಂಧಪಟ್ಟಿದ್ದು ಆ ದೇವರನ್ನು ಕಾಯುವುದರಿಂದ ಚನ್ನಯ್ಯನಿಗೆ ಪ್ರಾಪ್ತಿಸುತ್ತದೆ. ಕುಲ ವೃತ್ತಿ ಬರು ಬರುತ್ತಾ ಮಾದಿಗರ ಜೊತೆ ಸೇರುವವರೆಗೂ ವಿಸ್ತರಿಸುತ್ತದೆ. ಮೂಲ ಪುರುಷನ ಚರಿತ್ರೆ ಸಂಸ್ಕೃತಿಗೆ ವಿವರಿಸುವುದಕ್ಕೆ ಈ ಪುರಾಣ ಕಥೆಯನ್ನ ಕಲ್ಪಿಸಿದರೇನು? ಎಂದು ತಿಳಿಯುತ್ತದೆ. ವೃತ್ತಿ ಸಂಸ್ಕೃತಿಗೆ ಸಂಬಂಧಿಸಿದ ಇತಿ ವೃತ್ತಿಯೆ ಆಗಿರುವಾಗ ಆದಿದಂಪತಿಗಳ ವರ ಪುತ್ರನ ಪ್ರಮೇಯದಿಂದ ಇರುವ ಪೌರಾಣಿಕ ಕಥೆಯಲ್ಲದೆ ಪವಿತ್ರತೆಯನ್ನು ಸಹ ವಿವರಿಸುತ್ತದೆ. ಕೇವಲ ಕಾಮಧೇನುವನ್ನು ಕಾಯುವುದೆ ಈ ಮೂಲ ಪುರಾಣದಲ್ಲಿ ಆ ಜಾತಿಯ ಅಸ್ತಿತ್ವವು ವೃತ್ತಿಯಾಗಿದೆ.

**ಸಾಹಿತ್ಯ ಅಂಶಗಳು**

ದಲಿತ ಜಾನಪದ ಪುರಾಣದಲ್ಲಿ ಅತಿ ಪ್ರಾಚೀನ ಕಾಲದಿಂದ ಪ್ರಚಾರದಲ್ಲಿವೆ. ಇದುವರೆಗೂ ಮೌಖಿಕ ಸಂಪ್ರದಾಯವಾಗಿ ಸಾಗುತ್ತಿದ್ದ ಈ ಜಾನಪದ ಕಲಾ ರೂಪವು ಈಗ ಲಿಖಿತ ರೂಪದಲ್ಲಿ ಓದುವುದಕ್ಕೆ ಪ್ರಾರಂಭವಾಯಿತು. ಸಂಚಾರ ಮಾಡುವ ಕುಲದವಲ್ಲದೆ ಅಕ್ಷರ ಜ್ಞಾನವಿಲ್ಲದ ದಕ್ಕಲ ಜನರು ಪ್ರದರ್ಶನ ಮಾಡುತ್ತ ದೇಶ ದಲಿತ ಕಲಾ ಸೌಂದರ್ಯ ರೂಪವಾಗಿ ಈ ಪುರಾಣದ ಕಥೆ ಎಷ್ಟು ಆಸಕ್ತಿಯಾಗಿ ಮುಂದೆ ಬರುತ್ತದೆ. ಅಂದರೆ ಸಾಹಿತ್ಯವು ಸಹ ಅಷ್ಟೇ ಪ್ರೇಕ್ಷಕರನ್ನು ತನ್ನ ಕಡೆ ಸೆಳೆಯುತ್ತದೆ. ಜಾನಪದ ಕಲಾ ರೂಪವಾದ ಚಿತ್ರಪಟಾ ದೇಸಿಗೆ ಒಂದು ಮಾಧ್ಯಮವಾಗಿ ಉಪಯುಕ್ತವಾಗಿರುವುದರಿಂದ ಮತ್ತಷ್ಟು ಆಸಕ್ತಿಯನ್ನು ತರಿಸುತ್ತದೆ. ಪುರಾಣ ಕಥೆಗಳು ಯಕ್ಷಗಾನ ದರುವಿನಲ್ಲಿ ಸಾಗುವಾಗ ಶ್ರಮಿಕ ಶಬ್ದ ಜಾಲ ರಸಸ್ವಾದವು ಎಷ್ಟೋ ಉಪಯುಕ್ತವಾಗುತ್ತದೆ. ಈ ಕಲಾರೂಪಗಳಿಗೂ ಈ ಅವಕಾಶ ಕಡಿಮೆಯಾದಷ್ಟು ಜನಗಳಲ್ಲಿ ಇಂತಹ ಪುರಾಣಗಳ ಕಥೆಗಳು ಮರೆಯಾಗುತ್ತಿವೆ ಆದರಿಂದ ಇಂತಹ ಪುರಾಣಗಳನ್ನು ಮರೆ ಮಾಚದಂಗೆ ಉಳಿಸಿಕೊಳ್ಳಬೇಕಾಗಿದೆ. ಕಲಾಕಾರರನ್ನು ವರ್ಷಕ್ಕೆ ಒಂದು ಸಾರಿ ಈ ಪುರಾಣಗಳನ್ನು ಪ್ರದರ್ಶಿಸುವ ಪರಿಸ್ಥಿತಿ ಬಂದಿರುವುದರಿಂದ ಅವರಿಗೆ ಜ್ಞಾಪಕ ಇರುವ ವಿಷಯವನ್ನು ಹೇಳುತ್ತಿದ್ದಾರೆ. ಈ ಕಾರಣದಿಂದ ಸಾಹಿತ್ಯವು ಕೆಲವು ದಿನಗಳವರೆಗೆ ಕಾಣಿಸದಾಗಿದೆ ಈ ಪುರಾಣದಲ್ಲಿ ಆಧರಿಸಿ ಪ್ರಧಾನ ಘಟ್ಟದಲ್ಲಿ ಸಾಹಿತ್ಯವನ್ನು ಇಲ್ಲಿ ಪರಿಶೀಲಿಸಲಾಗುತ್ತದೆ.

ಸಂವಾದ ರೂಪದಲ್ಲಿ ಹೇಳುವ ದರುವುಗಳು ಜಾಸ್ತಿಯಾಗಿ ಗುಂಪು ಗುಂಪಾಗಿ ಸೇರಿ ಆಟಪಾಠಗಳು ರಸವತ್ತಾಗಿ ಹೇಳುವ ಈ ರಸವತ್ತಾದ ಘಟ್ಟಕ್ಕೆ ಏರ್ಪಡಿಸಿದ ಸನ್ನಿವೇಶಗಳು ಸಹ ಅದ್ಭುತವಾಗಿರುತ್ತದೆ. ಏಕೆಂದರೆ ಪಾರ್ವತಿ ಮತ್ತು ಶಿವನು ಮದುವೆ ಮಾಡಿಕೊಳ್ಳುವುದಕ್ಕೆ ಒಂದು ಶಾಪ ಮತ್ತು ಪಾಲನೇತ್ರ (ಹಾಲಿನ ನೀರು) ಸ್ವೀಕರಿಸುವಾಗ ಶಿವನಿಗೆ ಮತ್ತೊಂದು ಶಾಪ ಪಡೆಯುತ್ತಾನೆ. ಪಾಪಗಳನ್ನು ಹೋಗಲಾಡಿಸಲು ಕಾಳಿಯ ಸ್ನಾನಕ್ಕೆ ಹೋಗಬೇಕು ಎಂದಾಗ ಆಗ ಪಾರ್ವತಿ ತಡೆಯುತ್ತಾಳೆ. ಏಕೆಂದರೆ ನನ್ನ ಹಿಂದೆ ಬಂದರೆ ನಿನಗೆ ಮೂರನೆ ಶಾಪವಾಗುತ್ತದೆ (ಪಾರ್ವತಿ ಗಂಗ ಸ್ನಾನಕ್ಕೆ ಹೋಗುತ್ತಿರುತ್ತಾಳೆ) ಆಗ ಚನ್ನಂಗಿ ಗಿಡದಲ್ಲಿ ಚನ್ನಯ್ಯ ಹುಟ್ಟಿ ಕೇಕೆ ಹಾಕಿದಾಗ ಪಾರ್ವತಿಗೆ ತುಂಬ ಸಂತೋಷವಾಗಿ ಮಗ ಹುಟ್ಟಿದ ತಕ್ಷಣ ಪಾರ್ವತಿ ಸಂತಾನ ಸೌಭಾಗ್ಯವತಿಯಾಗಿ ಗೌರಮ್ಮ ಹಾಡುವ ಹಾಡು ಇವಳಿಗೆ ಕೇಳಿಸುತ್ತದೆ.

ಶ್ರೀ ಲಕ್ಷ್ಮಿ ಗೌರಮ್ಮ
ಚಿತ್ರವಾಗಿ ನೋಡಮ್ಮ
ಪಾರ್ವತಿ ದೇವಿಯಾಗಿ
ಪರಮೇಶ್ವರಿಯಾಗಿ !
ಹಾಡುತ್ತಾ !
ಲೆಖಕ ಸುತನಾಗಿ........
ದೊರೆ ಲೋಕ ರಕ್ಷ
ನಿನ್ನ ಹೆತ್ತ ತಂದೆ ಶಿವ ಎಲ್ಲಿದ್ದಾನೆ
ತನೆಯ ಜೋಕುಂದ ಗೋಪಾಲನಂದ
ಅದೆ ಪರಮಾನಂದ ರಾಜ ಗೋವಿಂದ.

ಅಂತ ಹೇಳಿ ಜೋಲಿ ಹಾಡನ್ನು ಹಾಡುತ್ತಾಳೆ ಇವಳ ಹಾಡು ಹೇಗಿದೆ ಎಂದರೆ "ಚಿಕ್ಕಡಿ ಗಿಡದಲ್ಲಿ ಗಿಣಿಗಳು" "ಬಾಳೆ ಗಿಡಗಳ ಮೇಲೆ ಹಂಸಗಳು" ಹಾಡುವಾಗ "ಉಗರ ಶಿವಯ್ಯ ಉಯ್ಯಾಲೆ ಹಾಡಲು" ನಿನ್ನ ಮಗ ನನ್ನ ಮಗ ಕಾವಲುಗಾಗಿ ಕಾಯುತ್ತಿರಲು "ಜೋ...... ಜೋ...... ಮುಕುಂದ ಗೋಪಾಲನಂದ" ಎಂದು ಹಾಡಿದರೆ ಆ ಮಧುರವಾದ ಕಂಠದಿಂದ ಮಾತೃ ಮೂರ್ತಿ ಹಾಡಿದರೆ ಯಾವ ಮಗು ಸಹ ಬೆಳಕಲ್ಲಿಯು ಸಹ ನಿದ್ರಿಸುತ್ತದೆ.[೨]

ನಂತರ ಚನ್ನಯ್ಯ ಹೇಳುವ ನನ್ನ ತಂದೆ ಶಿವ ತಾಯಿ ಪಾರ್ವತಿ ದೇವಿ ಪರಿಚಯ ಮಾಡಿಕೊಳ್ಳುತ್ತಾ ಅವನ ವೃತ್ತಿ ಏನು? ಕಾಮಧೇನುವನ್ನು ಕಾಯುವುದು ಅದು ಸಹ ಅವನಿಗೆ ಕಷ್ಟವಾಗುತ್ತದೆ. ಅದಕ್ಕೆ ನೀನೆ ಹೋಗಿ ಮೇಯಬಾರದೆ ಗೋಮಾತೆ ಎಂದು ಹೇಳುತ್ತಾ ಯಾರಿಗೆ ಹೇಳಲಿ? ಎಂದು ತನ್ನಲ್ಲೆ ಮರುಗುತ್ತಾನೆ. ಕಾಮಧೇನು ಸತ್ತಾಗ ಮೂಲ ಚನ್ನಯ್ಯ "ತಾತಾ ಜಾಂಬವಂತ ನೀಲವರ್ಣ ಗಜೋನತ ಮಾಲ ಮೇಲೆ ಹೋಗಿ ನಿನ್ನ ಒಳ್ಳೆಯ ಮನಸ್ಸಿನಿಂದ ಕೆಳಗೆ ಇಳಿಯಯ್ಯ" ಎಂದು ಕರೆಯುತ್ತಾನೆ.

ಆಗ ಜಾಂಬವಂತ ಮತ್ತು ಚನ್ನಯ್ಯ ಇಬ್ಬರು ಕಾಮಧೇನು ಮಾಂಸವನ್ನು ಅಡಿಗೆ ಮಾಡಿ ತಿಂದಾಗ ತಾತಾ ಮತ್ತು ಮೊಮ್ಮಗನಿಗೆ ಕೈಲಾಸದಲ್ಲಿ ಪ್ರವೇಶವಿಲ್ಲದೆ ಕೈಲಾಸ ಬಾಗಿಲು ಮುಚ್ಚುತ್ತಾರೆ. ಈ ಅನ್ಯಾಯವನ್ನೇ ತೆಲುಗು ನರ ಜಾತಿಯಲ್ಲಿ ಯಾವುದೇ ಅಂಟು ಇಲ್ಲದೆ ಯಾವುದಾದರು ತಿನ್ನಬಹುದು ಎಂದು ಹೇಳುತ್ತಾರೆ.

ಇಲ್ಲಣ್ಣಾ ಮಾದಿಗ ಮಾದಿಗ ಅಂತಾರೆ ಕಾನಿ ತಮಟೆ ಹೊಡೆಯಲು ನಾವೆಬೇಕು, ಕೈಗೆ ಕೋಲು ಹೊಡೆಯುವು ಕಂಕಳಿಗೆ ಜೋಲು ಹಾಕಿ ಭಿಕ್ಷೆ ಬೇಡುವವರು ನಾವೆ. ನಮ್ಮ ಕೈಯಲ್ಲಿ ಚಪ್ಪಲಿಯನ್ನು ಹೊಲಿದು ಅದನ್ನ ಹಾಕಿಕೊಳ್ಳುವರು ನೀವು ಅದಕ್ಕೆ ಇಲ್ಲದ ಅಂಟು ನಮಗೆ ಯಾಕೆ ಅಂಟು ಎಂದು ಕೆಳಜಾತಿ ಎಂದು ದೂರುವಿರ ಎಂದು ಜಾಂಬವಂತ ಹೇಳುತ್ತಾನೆ. ಹೀಗೆ ಜಾಂಬವಂತ ಮೂಲ ಮಾದಿಗ ಕುಲಗಳ ಅಸ್ತಿತ್ವವನ್ನು ಮತ್ತು ಆತ್ಮ ಗೌರವವನ್ನು ವಿವರಿಸುತ್ತಾನೆ. ಆದರೆ ಅಲ್ಲಿಗೂ ಸಹ ಅಂಟು ದೂರವಾಗಿಲ್ಲ ಎಂದು ತೋರಿಸುತ್ತದೆ. ಹೀಗಾಗಿ ಎಲ್ಲಾ ಪುರಾಣಗಳಿಗಿಂತ ದಕ್ಕಲ ಪುರಾಣದ ಸಾಹಿತ್ಯದ ಸ್ಪಷ್ಟತೆ ಇದರ ವೈಷಿಷ್ಟ್ಯತೆಯನ್ನು ತನ್ನಲ್ಲೆ ಅಡಗಿಸಿಟ್ಟಿದೆ.

**೩.೨.೪. ಅರುಂಧತಿ ಪುರಾಣ (ಅರುಂಜ್ಯೋತಿ ಮದುವೆ)**

ಅಧಿಪತ್ಯ ಕುಲಗಳ ಸಾಂಸ್ಕೃತಿಕವಾಗಿ ಬೆರೆಯುವುದಕ್ಕೆ ಮಾಡಿದ ಪ್ರಯತ್ನದಲ್ಲಿ ಹುಟ್ಟಿದ ಈ ಅರುಂಧತಿ ಪುರಾಣ ಜಾನಪದ ಪುರಾಣದಲ್ಲಿ ಭಿನ್ನವಾದ ಪುರಾಣವಲ್ಲದೆ ಶಿಷ್ಟ ಪುರಾಣಗಳು ಹೇಳಿದ ಅಂಶಗಳು ತನ್ನಲ್ಲೇ ಅಡಗಿಸಿಟ್ಟ ಕೆಳಜಾತಿಗಳ ಪುರಾಣವಾಗಿದೆ. ಪಾತಿವತ್ರ್ಯಕ್ಕೆ, ಸೌಭಾಗ್ಯಕ್ಕೆ, ಅನ್ಯೋನ್ಯಕ್ಕೆ ಪ್ರತೀಕವಾದ ದೈವಾಂಶ ಸಂಭೂತಳು ಅರುಂಧತಿ. ಅದಕ್ಕೆ ನೂತನ ವಧು-ವರರು ಅರುಂಧತಿ ನಕ್ಷತ್ರವನ್ನು ದರ್ಶಿಸುತ್ತಾರೆ ಎಂದು ಪುರಾಣಗಳು ಹೇಳುತ್ತವೆ. ಆ ಸಂಪ್ರದಾಯ ಈಗಲೂ ಮುಂದುವರೆದಿದೆ. ಇಂತಹ ಪಸಿದ್ಧಿಯಾದ ಪತಿವ್ರತೆಯ ಸ್ಥಾನದಲ್ಲಿ ಸೇರಿದ ಅರುಂಧತಿ ದೇವ ಋಷಿಗಳಿಗೆ ಅಲ್ಲದೆ ಮಾನವರಿಗೂ ಸಹ ಪೂಜ್ಯ ನಿಯಾಳಾಗುತ್ತಾಳೆ.

ಎಲ್ಲಾ ಜಾತಿಗಳಿಗೂ ಗುರಿಯಾಗಿ ಬರುತ್ತಾ ಕೆಳ ಜಾತಿಯ ಕುಲದವರಿಗೆ ನೈತಿಕತೆಯ ಧೈರ್ಯವನ್ನು ನೀಡುತ್ತಾಳೆ. ಋಷಿಗಳಿಗಾಗಿ ಮಾಲ ಹಳ್ಳಿಯಲ್ಲಿ ಹುಟ್ಟುವುದು ಆ ಕುಲದ ಅತ್ಯಾಭಿಮಾನವನ್ನು ಹೆಚ್ಚಿಸುತ್ತದೆ. ಕೆಳಜಾತಿಯ ಸಾಂಘಿಕ ಜೀವನವನ್ನ ಪ್ರಭಾವಿತವಾಗಿಸಿ ಅವರಲ್ಲಿ ಗೂಡು ಕಟ್ಟಿಕೊಂಡು ಆತ್ಮ ನ್ಯೂನ್ಯತೆ ಭಾವನೆಗಳನ್ನು ತೋರಿಸುತ್ತದೆ. ವರಂಗಲ್ ಜಿಲ್ಲೆ ನಸಕಲ್ ಗ್ರಾಮದ ನಿವಾಸಿ ದಕ್ಕಲ ಗೋಪಾಲ ಹಾಗೂ ಕರ್ನಾಟಕದ ಹೊಸಕೋಟೆ ತಾಲ್ಲೂಕಿನ ದಕ್ಕಲ ಮುನಿಸ್ವಾಮಿಯವರು ಹೇಳುವ ಮಾತಾಗಿದೆ.

**ಅರುಂಧತಿ**

ಮಹಾ ಪತಿವ್ರತೆಯಾದ ಅರುಂಧತಿ ಸೌಭಾಗ್ಯವತಿಯೆಂದು ಶಿಷ್ಟ ಪುರಾಣಗಳು ಅಲ್ಲದೆ ಅವೇಶದಿಂದ ಜಾನಪದ ಪುರಾಣಗಳು ಸಹ ಘೋಷಿಸುತ್ತವೆ. ಶಾಪದಿಂದ ಕೆಳಜಾತಿಯಲ್ಲಿ

ಹುಟ್ಟಿದ ಅರುಂಧತಿ ತನ್ನ ಕೌಶಲ್ಯದಿಂದ (ಪಾತಿವ್ರತೆಯಿಂದ) ಮಹಾಮುನಿಯ ಮಡದಿಯಾಗಿರುವುದೆ ಈ ಪುರಾಣಕ್ಕೆ ಇರುವ ವೈಶಿಷ್ಟತೆ. ಪುರಾಣದಲ್ಲಿ ಅವಳು ಸೌಮ್ಯ ಪ್ರಜಾಪತಿಯ ಮಗಳು ಸುಮವತಿ ಎಂದು ಹೇಳಿದರೆ, ಶಿಷ್ಟ ಪುರಾಣದಲ್ಲಿ ಆಕುತಿ ಕರ್ದಮಲ ಪ್ರಜಾಪತಿ ಮಗಳು ಅರುಂಧತಿ ಎಂದು ಹೇಳುತ್ತಾರೆ. ಇದರ ವೈಶಿಷ್ಟ್ಯವೇನೆಂದರೆ ಇವರು ಇಬ್ಬರು ಪ್ರಜಾಪತಿ ಮಗಳು ಸುಮವತಿ ಅವಳ ಭಾವ ಪ್ರಜಾಪತಿ ಎಂಬ ಹೆಸರು ಮಾಡಿಕೊಂಡು ಅವಳಿಗೆ ಪತಿ ಭಕ್ತಿ ಇಲ್ಲದ ಕಾರಣವಾಗಿ ಮೂಲ ಕುಟುಂಬದಲ್ಲಿ ಜನಿಸು ಎಂದು ಶಾಪ ನೀಡುತ್ತಾರೆ. ಅವಳ ತಂದೆ ಶ್ರೇಷ್ಠ ಪ್ರಜಾಪತಿ ಸೇರಿ ವೈಶ್ಯೆಗೆ ಹುಟ್ಟು ಎಂದು ಶಾಪ ನೀಡುತ್ತಾರೆ. ಆ ಶಾಪದಿಂದ ಆ ದಂಪತಿಗಳು ಅರುಂಧತಿ ವಸಿಷ್ಠೆಯಾಗಿ ಪುನರ್ ಜನ್ಮವಾಗುತ್ತಾರೆ.

ದಕ್ಕಲು ಜಾಂಬ ಪುರಾಣದಲಿ ಅರುಂಧತಿಯು ಜಾಂಬವಂತನ ಮಗಳಾಗಿ ಜನಿಸುತ್ತಾಳೆ. ಅವಳಿಗೆ ನಿತ್ಯ ಸೌಭಾಗ್ಯವತಿಯಾಗಿ ಪತಿವ್ರತೆಯಾಗಿ ಇರುವಂತೆ ಆಶೀರ್ವದಿಸುತ್ತಾರೆ. ಹೀಗೆ ದಕ್ಕಲು ಸಮುದಾಯಗಳು ತಮ್ಮ ಜಾಂಬ ಪುರಾಣದಲ್ಲಿ ಅರುಂಧತಿ ತಮ್ಮ ಮನೆ ಮಗಳು ಎಂದು ಹೇಳುತ್ತಾರೆ.

ಅಷ್ಟೇ ಅಲ್ಲದೆ ತಂಗಡಿ ದ್ಯಾವರವನ್ನು ಆಚರಿಸುವಾಗ ಪಠಿಸಲಾಗುವ ಪುರಾಣ ಕಥೆಗಳಲ್ಲಿ ಅರುಂಧತಿಯ ಕಥೆ ತುಂಬ ಮುಖ್ಯವಾದದ್ದು ಈ ಕಥೆಯಲ್ಲಿ ಅರುಂಧತಿ ಆದಿ ಜಾಂಬವಂತನ ಮಗಳಾಗಿಯೇ ಬರುತ್ತಾಳೆ ಆದರೆ ಇಲ್ಲಿ ಅವರ ತಾಯಿ ಯಾರೆಂಬುದುದರ ಬಗ್ಗೆ ಮಾಹಿತಿಯಿಲ್ಲ. ದಕ್ಕಲರು ಈ ಪುರಾಣವನ್ನ ಗಂಗ ಭಾರತವೆಂಬ ಗೇಯ ಕಥೆಯನ್ನಾಗಿಸಿ ರಾತ್ರಿಯಿಡೀ ಹಾಡಬಲ್ಲರು.

**ವಸಿಷ್ಠ**

ವಸಿಷ್ಠ ಮಹರ್ಷಿ ಶಿಷ್ಟ ಪುರಾಣಗಳ ಪ್ರಕಾರ ಬ್ರಹ್ಮದೇವನ ವರದಿಂದ ಬ್ರಾಹ್ಮಣ ಕುಟುಂಬದಲ್ಲಿ ಜನಿಸಿದನು. ಬ್ರಾಹ್ಮಣ ಕುಟುಂಬದಲ್ಲಿ ಜನಿಸಿದ ವಸಿಷ್ಠ ಸಪ್ತ ಋಷಿಗಳಲ್ಲಿ ಇವರು ಒಬ್ಬರು ತದನಂತರ ವಸಿಷ್ಠ ತನಗೆ ಮದುವೆ ಮಾಡು ಎಂದು ತನ್ನ ತಾಯಿಯನ್ನು ಕೇಳಲು ಆಗ ತಾಯಿ ಭೂಮಿಯ ಮೇಲೆ ಬ್ರಾಹ್ಮಣ ವಂಶ ಇಲ್ಲವಯ್ಯ ನಾನು ಯಾರನ್ನು ಕೊಟ್ಟು ಮದುವೆ ಮಾಡಲಿ ಎಂದು ಹೇಳುತ್ತಾ ಚಿಂತೆಗೆ ಗುರಿಯಾಗಿ ನಂತರ ವಶಿಷ್ಠನ ತಾಯಿ ತನ್ನ ಅಣ್ಣನಂತಿರುವ ವಿಶ್ವಬ್ರಹ್ಮನ ಬಳಿ ಹೋಗುತ್ತಾಳೆ. ಹಾಗೆ ವಿಶ್ವಬ್ರಹ್ಮನು ಪಂಚಾಂಗವನ್ನ ನೋಡಿ ಯಾರೆ ಪತಿವ್ರತೆ ಸಿಕ್ಕರೂ ಮದುವೆಯಾಗಬಹುದು ಎಂದು ಹೇಳುತ್ತಾನೆ. ಹೀಗೆ ತಾಯಿ ಇಂತಹ ಪತಿವ್ರತೆ ಸಿಗುವ ವಿಧಾನ ಯಾವುದೆಂದು ಒತ್ತಾಯಿಸಿದಾಗ ಒಂಬತ್ತು ವರ್ಣಕೆ ಸೇರಿದ ವಿಶ್ವಕರ್ಮ ಜೋತಿನಗರದ ಶೆಟ್ಟಿಗಳು ಸೇರಿ ಜ್ಯೋತಿಷ್ಯ ನೋಡಲಾಗಿ ಆ ವಿಧಾನವಾಗಿ ಮರಳು ಒಂದು ಮೂಟೆ ಕಟ್ಟಿ ಕಬ್ಬಿಣದ ಬೇಳೆ ಒಂದು ಮೂಟೆ ಕಟ್ಟಿ ಮೇಣದ ಮುದ್ದೆ ಕಟ್ಟಿ ಜೈಂಬಲೆ ಕಟ್ಟು ಕಟ್ಟಿ ವಶಿಷ್ಠನಿಗೆ ಹೇಳುತ್ತಾರೆ.

ಏನಪ್ಪ ಬ್ರಾಹ್ಮಣ ಕುಟುಂಬದಲ್ಲಿ ಜನಿಸಿದ ವಸಿಷ್ಠ ನೋಡು ಯಾರು ಈ ಮೇಣವನ್ನು ಕಂಬ ಮಾಡಿ ಆದಿಶೇಷನನ್ನ ಬಟ್ಟೆಯಾಗಿ ಸುತ್ತಿ ತನ್ನ ನೆತ್ತಿಯ ಮೇಲಿಟ್ಟುಕೊಂಡು ಈ ಮೇಣದಲ್ಲಿ ನೀರು ತಂದು ಈ ಮರಳಿನಿಂದ ಅನ್ನವನ್ನು ಬೇಯಿಸಿ ಕಬ್ಬಿಣದಿಂದ ಬೇಳೆ ಬೇಯಿಸಿ ಸಾರು ಮಾಡಿ ಈ ಜೈಂಬಲೆ ಹೊಲಿದು ಊಟದೆಲೆ ಮಾಡಿ ಯಾವ ಹೆಣ್ಣು ನಿನಗೆ ಊಟ ಬಡಿಸುತ್ತಾಳೋ ಅಂತಹ ಪತಿವ್ರತೆ ಹೆಣ್ಣನ್ನು ನೀನು ವಿವಾಹವಾಗು ಬಾರಪ್ಪ ಎಂದು ಹೇಳಿ ಕಳುಹಿಸುತ್ತಾರೆ. ಈ ವರ್ಣ ಒಂಭತ್ತು ಪಣಗಳಾಗಿರುವ ಈ ಮುಖ್ಯ ಅತಿಥಿಗಳು ಸೇರಿ ಆ ಸಂದರ್ಭದಲ್ಲಿ ಹೆಣ್ಣನ್ನು ಪತಿವ್ರತೆಯೋ ಅಲ್ಲವೋ ಎಂದು ತೀರ್ಮಾನಿಸಲು ಒಂದು ಮೂಟೆ ಮರಳು ಒಂದು ಕಬ್ಬಿಣದ ಬೇಳೆಯ ಮೂಟೆ, ಮೇಣದ ಮುದ್ದೆ, ಜೈಂಬೆಲೆ ಕಟ್ಟನ್ನು ಕೊಟ್ಟು ದೇಶಾಂತರ ಕಳಿಸಿದಾಗ ವಶಿಷ್ಠ ಈ ವಸ್ತುಗಳನ್ನು ತೆಗೆದುಕೊಂಡು ದೇವಲೋಕ, ಭೂಲೋಕ ನಾಗಲೋಕಗಳು ಸುತ್ತಿದರು ಇಂತಹ ಪತಿವ್ರತೆಯು ಸಿಕ್ಕಿ ಈ ಭೋಜನ ತಯಾರಿಸಿ ಬಡಿಸುವವರೆಗೂ ಆತ ಏನನ್ನೂ ತಿನ್ನುವಂತಿಲ್ಲ. ಹೀಗಾಗಿ ಆತ ಸಿಕ್ಕ ಸಿಕ್ಕ ಹೆಣ್ಣು ಮಕ್ಕಳನ್ನ ಕೇಳಿದರು ಯಾರು ಸಹ ಮುಂದೆ ಬರದೆ ತಮ್ಮ ಪಾಡಿಗೆ ಹಿಂತಿರುಗುತ್ತಾರೆ.

ಹೀಗೆ ವಸಿಷ್ಠ ಎಲ್ಲಾ ಜಾತಿಗಳ ಬೀದಿ ಕೇರಿಗಳಲ್ಲಿ ಅಲೆದಾಡಿ ಕೊನೆಗೆ ಮಾತಂಗವಾಡಿಯ ಜಾಂಬವನ ಮನೆಗೆ ಬರುತ್ತಾನೆ. ಆಗ ವಸಿಷ್ಠ ಕೂಗಿ ಯಾರಮ್ಮ ಮನೆಯೊಳಗೆ ಬಂದು ನನ್ನ ಜೊತೆ ಮಾತಾಡಿ ಹೋಗಮ್ಮ ಎಂದು ಕರೆಯುತ್ತಾನೆ. ಆಗ ಮನೆಯಲ್ಲಿದ್ದ ಅರುಂಜ್ಯೋತಿ ಒಬ್ಬಳೆ ಅವಳ ಅಣ್ಣಂದಿರು ಏಳು ಜನ ಬೆಟ್ಟಕ್ಕೆ ಸೌದೆ ತರಲು ಹೋಗಿರುತ್ತಾರೆ. ಅಪ್ಪ ಜಾಂಬವ ದೇವಲೋಕಕ್ಕೆ ಹೋಗಿರುತ್ತಾನೆ. ಅಂತಹ ಹೊತ್ತಿನಲ್ಲಿ ಆಕೆ ಬಾಗಿಲಿಗೆ ಬಂದು ವಶಿಷ್ಠ ನೋಡಿ ಇವನು ಬ್ರಾಹ್ಮಣ ಜಾತಿಗೆ ಸೇರಿದವನು ಇರಬಹುದೆಂದು ತಿಳಿದು ಏನಯ್ಯ ನೀನು ಬ್ರಾಹ್ಮಣ ಜಾತಿಗೆ ಸೇರಿದವನು ನಾವು ಮತಂಗರು ನಮ್ಮ ಕೇರಿಗೆ ಏಕೆ ಬಂದೆ ಎಂದು ಪ್ರಶ್ನಿಸುತ್ತಾಳೆ. ಅದಕ್ಕೆ ವಶಿಷ್ಠ ಯಾವ ಕುಲ ಆದರೇನು? ಎಂದು ಹೇಳಿ ಅವಳ ರೂಪಕ್ಕೆ ಮೋಹಕನಾಗಿ ನಂತರ ತಾನು ಬಂದ ವಿಷಯವನ್ನು ತಿಳಿಸಿದಾಗ ಅರುಂಧತಿ ಒಪ್ಪುತ್ತಾಳೆ. ಅವಳ ಪಾತಿವ್ರತ್ಯದ ಮಹಿಮೆಯಿಂದ ವಸಿಷ್ಠ ಅವಳೆ ನನ್ನ ಹೆಂಡತಿ ಎಂದು ಹೇಳಿ ವಶಿಷ್ಠ ಮತ್ತು ಅರುಂಧತಿ ನಡುವೆ ದಾಂಪತ್ಯ ಪ್ರಾರಂಭವಾಗುತ್ತದೆ.

**ಕಲ್ಯಾಣ**

ಶಿಷ್ಟ ಪುರಾಣದ ಕಥೆಗಳಲ್ಲಿ ಅರುಂಧತಿಯ ಮದುವೆಯು ಒಂದು ವೈವಿಧ್ಯಮಯವಾದ ಪ್ರಸಂಗವಾಗಿದೆ. ಪತಿವ್ರತೆಯ ಅಗ್ನಿ ಪರೀಕ್ಷೆ ಮದುವೆ ಎಂದರೂ ತಪ್ಪಾಗಲಾರದು. ಏಕೆಂದರೆ ಮಾತಂಗ ಕುಲದಲ್ಲಿ ಜಾಂಬವಂತನ ಮಗಳು ಅರುಂಧತಿ ಪುರಾಣಗಳಲ್ಲಿ ಅನೇಕ ಸ್ತ್ರೀಯರು ಪತಿವ್ರತೆಯನ್ನು ತೋರಿಸಿ ಅಗ್ನಿ ಪರೀಕ್ಷೆ ಒಳಗಾಗಿದ್ದಾರೆ. ಅಂತಹ ಪತಿವ್ರತೆಯ ಪರೀಕ್ಷೆಯಲ್ಲಿ ತೊಡಗಿದ ಸೌಭಾಗ್ಯವತಿ ಅರುಂಧತಿ ಇವಳ ಪತಿವ್ರತೆ ಭಕ್ತಿ ಅವಳ ಸೌಂದರ್ಯಕ್ಕೆ ಅವಳ ಪತಿವ್ರತ ಮಹಿಗೆ ಬ್ರಾಹ್ಮಣ ಕುಟುಂಬದಲ್ಲಿ ಹುಟ್ಟಿದ ವಸಿಷ್ಠನನ್ನೆ ಮೂರ್ಛೆಗೆ ಗುರಿಪಡಿಸುತ್ತಾಳೆ.

ಹೀಗೆ ವಶಿಷ್ಠನಿಗೆ ಕೊಟ್ಟು ವಸ್ತುಗಳನ್ನ ಮರುಳು ಮೂಟೆ, ಕಬ್ಬಿಣದ ಬೇಳೆಯ ಮೂಟೆ, ಮೇಣದ ಮುದ್ದೆ ಜೈಂಬೆಲೆ ಕಟ್ಟನ್ನು ಕಂಕುಳಲ್ಲಿ ಇರಿಸಿ ಎಲ್ಲಾ ಜಾತಿಗಳ ಕೆರೆಗಳಲ್ಲಿ ತಿರುಗಿದರು ಪತಿವ್ರತೆಯ ಮಹಾತಾಯಿ ಸಿಗುವುದಿಲ್ಲ. ಕೊನೆಗೆ ಮಾತಂಗವಾಡೆಯ ಜಾಂಬವಂತ ಮನೆ ಮುಂದೆ ನಿಂತು ಯಾರಮ್ಮ ಮನೆಯೊಳಗೆ ನನ್ನ ಜೊತೆ ಮಾತಾಡಿ ಹೋಗು ಬಾರಮ್ಮ ಎಂದು ಕರೆದಾಗ ಆ ಗುಡಿಸಿಲಲ್ಲಿ ಅರುಂಜ್ಯೋತಿ ಒಬ್ಬಳೆ ಇರುತ್ತಾಳೆ. ಅವಳ ಅಣ್ಣಂದಿರು ಬೆಟ್ಟಕ್ಕೆ ಸೌದೆ ತರಲು ಹೋಗಿರುತ್ತಾರೆ. ಅವರ ಅಪ್ಪ ಜಾಂಬವ ದೇವಲೋಕಕ್ಕೆ ಹೋಗಿರುತ್ತಾನೆ. ಇಂತಹ ಹೊತ್ತಿನಲ್ಲಿ ಯಾರು ನನ್ನ ಕರೆದವರು ಎಂದು ಬಾಗಿಲ ಬಳಿ ಬಂದು ನೋಡಿದಾಗ ಬಾಗಿಲಲ್ಲಿ ವಶಿಷ್ಠರು ಇರುತ್ತಾರೆ. ಬಾಗಿಲಿಗೆ ಬಂದ ಬ್ರಾಹ್ಮಣನನ್ನು ನೋಡಿ ಇವನು ಬ್ರಾಹ್ಮಣ ಜಾತಿಗೆ ಸೇರಿದವನು ಎಂದು ಹೇಳಿ "ಏ ಬ್ರಾಹ್ಮಣಯ್ಯ" ನೀನು ಬ್ರಾಹ್ಮಣ ಜಾತಿಗೆ ಸೇರಿದವನು ನಾನು ಮತಂಗ ಜಾತಿಗೆ ಸೇರಿದವಳು ಈ ಕೇರಿಗೆ ಯಾಕೆ ಬಂದೆ ಎಂದು ಪ್ರಶ್ನಿಸುತ್ತಾಳೆ. ಅದಕ್ಕೆ ವಶಿಷ್ಠ ಯಾವಕುಲ ಯಾವಜಾತಿ ಎಂದು ಹೇಳಿ ಯಾರು ನೀನು? ನಿನ್ನ ತಂದೆ ಯಾರು? ನಿನ್ನ ಹೆಸರೇನು? ನಿನ್ನ ತಾಯಿ ಯಾರು? ಎಂದು ಕೇಳುತ್ತಲೇ ಅವಳ ರೂಪಕ್ಕೆ ಮೂರ್ಛೆ ಹೋಗುತ್ತಾನೆ. ತದ ನಂತರ ತಾನು ಏಳು ದಿನಗಳಿಂದ ಅನ್ನ ನೀರು ಕಾಣದೆ ಹಸಿವಿನಿಂದ ಬಳಲುತ್ತಿದ್ದೇನೆ ಎಂದು ತನ್ನ ಮಾತನ್ನು ತಿರುವುತ್ತಾನೆ ಅವನ ಮಾತಿಗೆ ಅರುಂಜ್ಯೋತಿಗೆ ಮನ ಕರಗಿ ಇಷ್ಟೇನಾ ಬಿಡು ಎಂದು ವಶಿಷ್ಠ ಹೇಳುವ ಒಪ್ಪಂದವನ್ನ ಸ್ವೀಕರಿಸುತ್ತಾಳೆ.

ವಸಿಷ್ಠ ಹಾಕಿದ ಒಪ್ಪಂದವನ್ನ ಸ್ವೀಕರಿಸಿ ನಂತರ ಅರುಂಧತಿ ಹೇಳುತ್ತಾಳೆ ಅಡುಗೆ ಮಾಡಿ ಬಡಿಸಿದರೆ ನೀನು ಊಟ ಮಾಡಿ ಹಿಂತಿರುಗಬೇಕು ಎಂದು ಸ್ಪಷ್ಟಪಡಿಸುತ್ತಾಳೆ. ಅದಕ್ಕೆ ವಶಿಷ್ಠ ಒಪ್ಪಿಕೊಳ್ಳುತ್ತಾನೆ. ನಂತರ ವಶಿಷ್ಠ ಕೊಟ್ಟ ಸಾಮಗ್ರಿಗಳನ್ನ ಅರುಂಧತಿ ಸಮುದ್ರ ತೀರಕ್ಕೆ ಬಂದು ಅಲ್ಲಿದ್ದ ನೇರಳೆ ಮರದ ಕೆಳಗೆ ಎಲ್ಲವನ್ನೂ ಇಟ್ಟು ಮೇಣದಿಂದ ಕುಂಭ ಮಾಡಿ ಆಧಿಶೇಷನನ್ನು ಬಟ್ಟೆಯಾಗಿ ಸುತ್ತಿ ನೆತ್ತಿಯ ಮೇಲೆ ಇಟ್ಟುಕೊಂಡು ಕುಂಭದಲ್ಲಿ ನೀರು ತರುತ್ತಾಳೆ. ಮರಳನ್ನ ಅನ್ನ ಮಾಡಿ ಕಬ್ಬಿಣದಿಂದ ಬೇಳೆ ಸಾರು ಮಾಡಿ ಕೂದಲೆಳೆಯಷ್ಟಿರುವ ಜೈಂಬೆಲೆಗಳಿಂದ ಊಟದೆಲೆಯಾಗಿ ಪೋಣಿಸಿ (ಹೊಲೆದು) ವಶಿಷ್ಠನಿಗೆ ಊಟ ಬಡಿಸುತ್ತಾಳೆ. ಇದನ್ನ ಗಮನಿಸಿದ ವಶಿಷ್ಠ ತನ್ನ ಮನಸ್ಸಿನಲ್ಲಿ ನನಗೆ ಮದುವೆ ಪ್ರಾಪ್ತಿಯಾಯಿತು ಎಂದು ಕೊಳ್ಳುತ್ತಾನೆ. ಅರುಂಧತಿಯ ಪಾತಿವ್ರತ್ಯತೆಯನ್ನು ಕಣ್ಣಾರೆ ನೋಡಿದ ವಶಿಷ್ಠ ಇಂತಹ ಪತಿವ್ರತೆಯೆ ನನ್ನ ಹೆಂಡತಿ ಎಂದು ಹಿಗ್ಗುತ್ತಾನೆ. ಉಳಿದ ಊಟವನ್ನು ಬೆನ್ನಿಗೆ ಕಟ್ಟಿ ಅರುಂಜ್ಯೋತಿಯ ಸೆರಗನ್ನ ಹಿಡಿಯುತ್ತಾನೆ. ಈ ಆಘಾತದಿಂದ ಬೆಚ್ಚಿ ಬಿದ್ದ ಅರುಂಜ್ಯೋತಿ ನನ್ನ ಕೈ ಅನ್ನವತಿಂದು ನನ್ನ ಸೀರೆಗೆ ಕೈ ಹಾಕಿದೆಯ ಎಂದು ನನ್ನ ವ್ರತಕ್ಕೆ ಭಂಗವಾಯಿತು ಎಂದು ಹಲಬುತ್ತಾಳೆ (ದುಃಖಿಸುತ್ತಾಳೆ) ಆಗ ವಶಿಷ್ಠ ಬ್ರಾಹ್ಮಣ ನಾನೆ ಗಂಡ ನೀನೆ ಹೆಂಡತಿ ಎಂದು ಹೇಳಿದಾಗ ವಶಿಷ್ಠ ಬ್ರಾಹ್ಮಣ

ಅರುಂಜ್ಯೋತಿ ಸಂಬಂಧಕ್ಕೆ ಬೆಚ್ಚಿ ಬಿದ್ದು ಅರುಂಧತಿ "ನಿನ್ನ ಬೆಂಕೀಲಿ ಬಟ್ಟೆ ಸುಟ್ಟು ಬೂದಿ ಮಾಡಬೇಕು ಆ ಬೂದಿನ ತಗಂಡೋಗಿ ಗಂಗೇಲಿ ಕಲಿಸಬೇಕು" ಎಂದು ತನ್ನ ಮೈ ಮೇಲೆ ಬೀಳಲು ಬಂದ ಭಂಡ ಬ್ರಾಹ್ಮಣನನ್ನು ದೂಷಿಸುತ್ತಾಳೆ.

ಹೀಗೆ ವಶಿಷ್ಠ ಪಟ್ಟು ಹಿಡಿದು ಅರುಂಧತಿಯ ಮನೆಯಲ್ಲಿ ಕೂರುತ್ತಾನೆ. ಆಗ ಅರುಂಧತಿ ಬೇರೆ ದಾರಿ ಕಾಣದೆ ಬ್ರಹ್ಮ ದೇವನನ್ನ ಪ್ರಾರ್ಥಿಸಿ ಮನೆ ತುಂಬ ದನದ ಮಾಂಸ ಕರುಣಿಸುವಂತೆ ಕೇಳಿಕೊಳ್ಳುತ್ತಾಳೆ ಆಗ ಮನೆ ತುಂಬಾ ದನದ ಮಾಂಸ ಉದ್ಭವವಾಗುತ್ತದೆ. ಆಗ ಅರುಂಧತಿ ವಶಿಷ್ಠನಿಗೆ ತೋರಿಸುತ್ತಾ ಬಾಡಿನ ಗುಡ್ಡೆಗಳು ಧನದ ಮಾಂಸವನ್ನು ಕಾವ್ಯವಾಗಿ ವರ್ಣಿಸುತ್ತಾ ಹೇಳುತ್ತಾಳೆ.

"ಪಡಸಾಲೆಯ ಗಲಬಾನೆ ನೋಡು
ಹೊರಗೆ ಗೋವಿನ ಚರ್ಮ ನೋಡು
ಎಮಿಕೆಗಳ ಗುಡ್ಡೆಯ ನೋಡು
ನಡು ಮನೆಯಲ್ಲಿರೂ ಬಾಡು ನೋಡು
ದೊಮ್ಮೆಗಳ ತೋರಣ ನೋಡು
ಗುಂಡೆಗಳ ಗುತ್ತಿಗಳು ನೋಡು
ಕರುಳುಗಳ ಸಗಶಿಯ ನೋಡು
ನಮ್ಮ ನಗರ ಬಿಟ್ಟು ಹೋಗಯ್ಯ"

ಚರ್ಮ ಮತ್ತು ಮಾಂಸಕ್ಕಾಗಿ ದನಗಳ ಕಡಿದು ಸುಲಿದು ಮಾಂಸದ ಅನುಭವದ ಸಾರವೇ ಈ ಕಾವ್ಯದ ವರ್ಣನೆಯೆ ಅಡಗಿಕೊಂಡಿದೆ. ದನಗಳ ಚರ್ಮ ಮಾಂಸವೇ ಇವರ ಬೆಳೆ ಅರುಂಧತಿಯ ಮನೆಯಲ್ಲಿ ಧನದ ಮಾಂಸದ ಬುಗ್ಗೆಗಳು ಕಂಡುಬರುತ್ತವೆ. ಆದರೆ ಇದು ನಿಜವಲ್ಲ ಬ್ರಹ್ಮದೇವರ ಕರುಣೆಯಿಂದ ಸೃಷ್ಟಿಯಾಗಿರುವ ಮಾಂಸ ಎಂದು ವಶಿಷ್ಠ ತನ್ನ ದಿವ್ಯ ದೃಷ್ಟಿಯಿಂದ ಕಂಡುಕೊಂಡು ವಶಿಷ್ಠ ಅವೆಲ್ಲಾ ಇರಲಿ ಬಿಡು ನೀನು ನನ್ನ ಮದುವೆಯಾಗದೆ ನಾನು ಇಲ್ಲಿಂದ ಹೋಗುವುದಿಲ್ಲ ಎಂದು ಹೇಳುತ್ತಾನೆ.

ಆಗ ಅರುಂಜ್ಯೋತಿ ವಶಿಷ್ಠನಿಗೆ ತಂಗಡಿ ಸೌದೆಗೆ ಹೋಗಿರುವ ಅಣ್ಣಂದಿರು ಇನ್ನೇನು ಬರುವ ಹೊತ್ತಾಯಿತು ದೇವಲೋಕಕ್ಕೆ ಹೋಗಿರುವ ತನ್ನ ತಂದೆ ಜಾಂಬವ ಬರುವ ಹೊತ್ತಾಯಿತು. ಹೊರಟು ಹೋಗು ಎಂದು ಪರಿಯಾಗಿ ಹೇಳಿದರು ಕೇಳದೆ ಅವರು ಬಂದರೆ ಬರಲಿ ಅವರು ನನ್ನ ಭಾವಂದಿರು ಮತ್ತು ನಿಮ್ಮ ತಂದೆ ಮಾವನಲ್ಲವೇ ಎಂದು ಪಟ್ಟು ಹಿಡಿದು ಕೂರುತ್ತಾನೆ. ನಂತರ ಸೌದೆಗೆ ಹೋದ ಅಣ್ಣಂದಿರು ಬಂದು ಈ ಬ್ರಾಹ್ಮಣನನ್ನು ನೋಡಿ ಎಚ್ಚರಿಸಿದರೂ ಏಳಲಿಲ್ಲ. ಆಗ ವಸಿಷ್ಠ ಮುದ್ದು ಭಾವಂದಿರೇ ನನಗೆ ನಿಮ್ಮ ತಂಗಿಯನ್ನು ಕೊಟ್ಟು ಮದುವೆ ಮಾಡಿಕೊಡಿ ಎಂದಾಗ ಅಣ್ಣಂದಿರು ಗಂಡು ಕೋಡಲಿಯಿಂದ ವಸಿಷ್ಠನನ್ನು ಸಾಯಿಸುವುದಕ್ಕೆ

ಮುಂದಾಗುತ್ತಾರೆ. ಆಗ ಅರುಂಧತಿಯು ಅಡ್ಡ ಬಂದು ನಡೆದ ವಿಚಾರವನ್ನು ಹೇಳಿ ನನ್ನ ಸೆರಗನ್ನು ಮುಟ್ಟಿದ್ದಾನೆ. ಹಾಗಾಗಿ ಅವನೆ ನನ್ನ ಗಂಡ, ಆದರಿಂದ ನನ್ನ ಅವರಿಗೆ ಕೊಟ್ಟು ವಿವಾಹ ಮಾಡಿ ಕೊಡಬೇಕು. ಒಂದು ವೇಳೆ ಅವನನ್ನ ಕೊಂದರೆ ನಾನು ಮುಂಡೆಯಾಗುತ್ತೇನೆ. ನಿಮಗೆ ಬ್ರಹ್ಮ ಹತ್ಯಾದೋಷ ತಗಲುತ್ತದೆ. ಅವನದೇನು ತಪ್ಪಿಲ್ಲ ತಪ್ಪೆಲ್ಲಾ ನನ್ನದೆ ಕೊಲ್ಲಬೇಡಿ. ಒಂದು ವೇಳೆ ಕೊಂದರೆ ನನ್ನನ್ನು ಕೊಂದು ಹಾಕಿ ಎಂದು ತಡೆಯುತ್ತಾಳೆ. "ಯಾರನ್ನು ಕೊಂದರು ದೋಷವಿಲ್ಲ ಆದರೆ ಬ್ರಾಹ್ಮಣನನ್ನು ಕೊಂದರೆ ಮಾತ್ರ ಬ್ರಹ್ಮನ ಕೊಂದ ಪಾಪ ತಗಲುತ್ತದೆ ಎಂದು ಬ್ರಾಹ್ಮಣ ಮೌಲ್ಯಗಳು ಸಮಾಜದಲ್ಲಿ ಬೇರು ಬಿಟ್ಟ ಆ ನಂತರ ಈ ರೀತಿಯ ನಂಬಿಕೆ ಸೃಷ್ಟಿಯಾಗಿರಬಹುದು ಎಂದು ತಿಳಿಯುತ್ತದೆ.[೩]

ಕ್ರೋದಗೊಂಡ ಅರುಂಧತಿಯ ಅಣ್ಣಂದಿರು ವಸಿಷ್ಠ ಮತ್ತು ಅರುಂಧತಿಯನ್ನು ಕತ್ತು ಹಿಡಿದು ಹೊಸ್ತಿಲಾಚೆ ತಳ್ಳುತ್ತಾರೆ. ಆಕೆ ಅವರಿಗೆ ಶಾಪ ನೀಡುತ್ತಾಳೆ ಏನೆ ಭಾಗ್ಯವಿದ್ದರೂ ಕೊನೆಗೆ "ಪುಲ್ಲೆಲುಗು ಮಲ್ಲಂಗಂಜಿ" (ಪುರಲೆ ಬೆಳಕು ಗುನುರಾಗಿ ಗಂಜಿ ಅಂಗಡಿ ಅಕ್ಕಿ ತಂಗಡಿ ಸೌದೆ) ಯೇ ಗತಿ ಆಗಬೇಕು ಎಂದು ಶಪಿಸಿ ನಿರ್ಗಮಿಸುತ್ತಾಳೆ. ಇವಳ ಇಟ್ಟ ಶಾಪವೇ ಇಂದಿಗೂ ದೀಪಕ್ಕೆ ಎಣ್ಣೆಯೂ ಗತಿ ಇಲ್ಲದೆ ಕಡ್ಡಿ ಪುರಲೆ ಬೆಳಕೆ ಬಳ್ಳೆರಾಗಿ ಗಂಜಿಗೂ ಗತಿಯಿಲ್ಲದೆ ಗುನಗುರಾಗಿ ಗಂಜಿಯೇ ಗತಿಯಾಗಿರುವ ತಮ್ಮ ದಾರಿದ್ರ್ಯಕ್ಕೆ ಆ ತಾಯಿ ಅರುಂಜ್ಯೋತಮ್ಮ ಇಟ್ಟ ಶಾಪವೇ ಕಾರಣ ಎಂದು ದಕ್ಕಲಿಗರು ಹೇಳುತ್ತಾರೆ.

ನಂತರ ವಸಿಷ್ಠ ಅರುಂಜ್ಯೋತಿಯೊಂದಿಗೆ ಹೊರಟಾಗ ಕೋಮಿಟಿ ಅಣ್ಣಂದಿರು ನಿಮ್ಮ ಜೊತೆ ಬರುತ್ತೇವೆ ಎಂದಾಗ ಕೋಮಿಟಿ ಅಣ್ಣಂದಿರಿಗೆ ಮಾತ್ರ ಅರಂಜ್ಯೋತಿ "ನಿಮ್ಮ ಪಾಶ ಇರುವವರೆಗೆ ಕಾಸಿಗೆ ಕಾಸು ಕೂಡಿ ಕೋಟೆಯಾಗಿ ಹೆಡೆ ಬಿಚ್ಚಲಿ" ಎಂದು ಹಾರೈಸಿ ಹೊರಡುತ್ತಾಳೆ. ಕಥಾಂತ್ಯದಲ್ಲಿ ವಸಿಷ್ಠ ಅರಂಜ್ಯೋತಿಯರ ವಿವಾಹವನ್ನ ವಿಶ್ವ ಬ್ರಹ್ಮನು ಕಾಶಿಯಲ್ಲಿ ನೆರವೇರಿಸುತ್ತಾನೆ. ಹೀಗೆ ಇಂದಿಗೂ ದಕ್ಕಲಿಗರೂ ಅರುಂಧತಿಯನ್ನ ತಮ್ಮ ಮನೆ ಹೆಣ್ಣು ಮಗಳು ಎಂದು ಹೇಳಿ ಅವಳನ್ನು ಪೂಜಿಸುತ್ತಾರೆ.

### ೩.೨.೫. ಬಲಭದ್ರ ವಿಜಯ

ದಕ್ಕಲ ಪುರಾಣಗಳ ವೈಶಿಷ್ಟ್ಯತೆಯಲ್ಲಿ ಈ ಬಲಭದ್ರ ವಿಜಯ ಪುರಾಣವು ಚಾರಿತ್ರ್ಯವುಳ್ಳ ಪುರಾಣವೆಂದು ಪರಿಗಣಿಸಲಾಗುತ್ತದೆ. ಏಕೆಂದರೆ ಬಲಭದ್ರನು ಬೇಸಾಯ ಬೆಳೆಗಳನ್ನು ಬೆಳೆಯುವ ಹೊಲಗಳ (ತೋಟ) ಕಾವಲುಗಾರ ಇವನಿಗೆ ಕೃಷಿ ಆಧಾರಿತ ಕಸುಬುಗಳು ಅವರ ಸಹಾಯಕರು. ಶಂಕರ ಪಾರ್ವತಿಯರು ಬಲಭದ್ರನ ದಾತುತ್ವವನ್ನು ಪರೀಕ್ಷಿಸಬೇಕು ಎಂದು ಅಲ್ಲಿಗೆ ಬರುತ್ತಾರೆ. ಅವನ ಬೆಳೆ ಲೋಕಕ್ಕೆ ತಿಳಿಸಿ ಇದು ಲೋಕಕ್ಕೆ ಆಧಾರವಾಗಬೇಕು ಎಂಬುವುದು ಶಿವ ದಂಪತಿಯರ ಇಚ್ಛೆ, ಈ ಪರೀಕ್ಷೆಯಲ್ಲಿ ಕಂಠಮ ಮಹೇಶ್ವರನ ಗೌಡ ಪುರಾಣ "ಪಿಚ್ಚುಕ ಗುಂಟುಲು" ಮುತ್ತು ರಾಶಿ ಎರಕಲು (ಕೊರವಂಜಿ) ಜಾತಿಗಳ ಹುಟ್ಟು ಪ್ರಸ್ತಾಪಗೊಳ್ಳುತ್ತದೆ.

ಅಂತಿಮವಾಗಿ ೧೮ ಪಣಗಳು ೨೪ ಜಾತಿಗಳುವರನ್ನು ಆಶ್ರಯಿಸಿ ಜೀವಿಸುವ ಉಪಕುಲಗಳ ವ್ಯವಸ್ಥೆಯನ್ನಿ ಹೇಳಲಾಗುತ್ತಿದೆ. ಹೀಗೆ ಮಾದಿಗರನ್ನು ಚಿಂದು ಬೈಂಡಳ ಮಾಪನಿ ದಕ್ಕಲಿ ಮಲಕ ಚಂದಯ್ಯಲ ನಿಯೋಗವನ್ನ ನಿರ್ದೇಶಿಸುವ ಮೂಲಕ ದಕ್ಕಲಿ ಪುರಾಣ ಮುಗಿಯುತ್ತದೆ.

**ಎರಡನೆಯ ಕಥೆ**

ಆದಿ ಜಾಂಬವ ಪುರಾಣವನ್ನು ದಕ್ಕಲ ಸಮುದಾಯಗಳು ಆಯಾ ಪ್ರದೇಶಗಳಿಗೆ ತಕ್ಕಂತೆ ಅವರ ಹಿರಿಯರು ಹೇಳಿರುವ ಹಾಗೆ ಕಥೆಯನ್ನು ಹೆಣೆಯುತ್ತಾರೆ. ಜಾಂಬವ ಪುರಾಣ ಎಷ್ಟೇ ವಿಧದಲ್ಲಿ ಹೇಳಿದರೂ ಸಹ ಈ ಸಮುದಾಯಗಳ ಮೂಲ ಪುರುಷ ಆದಿಜಾಂಬವ ಇದೆ ಎಂದು ನಂಬಿ ಲೋಕ ಗ್ರಹಿಕೆಯ ಹಿಂದೆ ಪ್ರಥಮ ಸ್ಥಾನದಲ್ಲಿ ಪ್ರತಿಷ್ಠಾಪಿಸಿಕೊಳ್ಳುವ ಹೆಗ್ಗಳಿಕೆಯನ್ನು ನೋಡಬೇಕಾಗುತ್ತದೆ. ಸಮಾಜದಲ್ಲಿ ಅಂತ್ಯಜನಾಗಿ ಗುರುತಿಸಲ್ಪಟ್ಟು ಅಸ್ಪೃಶ್ಯತೆಯ ಅಗ್ನಿಯಲ್ಲಿ ಬೆಂದವನು ಲೋಕದ ಸೃಷ್ಟಿಯಲ್ಲಿ ಮಾತ್ರ ತಮ್ಮ ಸಮುದಾಯಗಳೆಂದು ಗಂಗಭಾರತ ಪುರಾಣ ಮೊದಲ ಸ್ಥಾನಕ್ಕೆ ಏರಿರುವುದರ ಹಿಂದೆ ಪ್ರತಿರೋಧದ ಸಾಂಸ್ಕೃತಿಕ ಹೆಗ್ಗಳಿಕೆಯು ಇದೆ. ಸುಗಟೂರು ಗ್ರಾಮದ ದಕ್ಕಲ ನಾರಾಯಣಸ್ವಾಮಿಯವರು ಹೇಳುವ ಜಾಂಬವ ಪುರಾಣ ಸ್ವಲ್ಪ ಮಟ್ಟಿನ ಬದಲಾವಣೆ ಇದ್ದರು ಭೂಮಿ ಆಕಾರ ತಳೆಯುವುದಕ್ಕೆ ಕಾರಣ ದಕ್ಕಲರ ಹುಟ್ಟು ಮಾತ್ರ ಒಂದೇ ವಿಧದಲ್ಲಿ ಸೇರಿಕೊಳ್ಳುತ್ತದೆ. ಆಯಾ ಪ್ರದೇಶದ ದಕ್ಕಲ ಸಮುದಾಯ ಎಷ್ಟೇ ವಿಧದಲ್ಲಿ ಜಾಂಬವ ಪುರಾಣವನ್ನು ಹೇಳಿದರೂ, ತಮ್ಮ ಹೊಟ್ಟೆ ಪಾಡಿನ ವಿಚಾರಕ್ಕೆ ಸಾಂಸ್ಕೃತಿಕ ಪ್ರತೀಕವಾದರೂ, ತಮ್ಮ ಕುಲ ಪುರಾಣವನ್ನು ನಂಬುತ್ತಾರೆ. ಆದರೆ ಈ ಸಮುದಾಯಗಳ ಮಾತು ಒಂದೇ, ಸಮಾಜದಲ್ಲಿ ತಮ್ಮ ಸಮುದಾಯಗಳಿಗೆ ಸ್ಥಾನ ಹಾಗೂ ಸಮಾಜದ ಗೌರವವನ್ನು ದೊರೆಕಿಸಿಕೊಳ್ಳುವುದು. ತಮ್ಮಿಂದ ಸಮಾಜ ಇಂದು ಈ ಸ್ಥಿತಿಯಲ್ಲಿದೆ ಎಂದು ಹೇಳುತ್ತಾರೆ.

ಭೂಮಿ ಆಕಾರ ತಾಳುವುದಕ್ಕೆ ಮುಂಚೆ ಹೇಗಿತ್ತು ಎಂದರೆ ಬಾಳೆ ಎಲೆ ನೀರು ಮೇಲೆ ಹೇಗೆ ತೆವಳಿಕೊಂಡು ಇರುತ್ತಿತ್ತು. ಹಾಗೆ ಭೂಮಿ ಜಲಮಯವಾಗಿ ತೇಲಾಡುತ್ತಿತ್ತು. ಹಾಗೆ ಆಕಾಶವು ಗಾಳಿಗೆ ಪೇಪರ್ ಹೇಗೆ ಗಾಳಿಪಟದ ಹಾಗೆ ಹಾರಾಡುತ್ತಿತ್ತೋ ಹಾಗೇ ಆಕಾಶ ಗಟ್ಟಿ ಇರಲಿಲ್ಲ. ಹೀಗೆ ಇವರ ಕಥೆ ಪ್ರಾರಂಭವಾಗಿ ನಂತರ ಆದಿಜಾಂಬವನ ಮುಖಾಂತರ ಭೂಮಿಯು ಗಟ್ಟಿ ಮಾಡಿರುವುದಕ್ಕೆ ಶಿವ ಮತ್ತು ಪಾರ್ವತಿಯ ವಿವಾಹ ಕಾರಣಾಗುತ್ತದೆ. ಆದಿಶಕ್ತಿಯಿಂದ ಹುಟ್ಟಿದ ಶಿವ, ಬ್ರಹ್ಮ, ವಿಷ್ಣು ಆದಿಶಕ್ತಿಯನ್ನು ವಿವಾಹವಾಗಲು ನಿರಾಕರಿಸಿ ಅವಳನ್ನು ಸುಟ್ಟು ಆವಳ ಬೂದಿಯನ್ನು ಮೂರು ಭಾಗಗಳಾಗಿ ಮಾಡಿ ಅದರಿಂದ ಪಾರ್ವತಿ ಲಕ್ಷ್ಮೀ ಸರಸ್ವತಿ ಹುಟ್ಟುತ್ತಾರೆ. ಹೀಗೆ ಇವರಿಗೆ ಮದುವೆ ಸಂಪ್ರದಾಯಗಳು ಇಲ್ಲದೆ ಇರುವಾಗ ದೇವತೆಗಳ ಮನಸ್ಸಿನಲ್ಲಿ ಒಂದು ಆಲೋಚನೆ ಮಾಡಿ ಸಾಮಾನ್ಯ ಮನುಷ್ಯರು ಉಪ್ಪು, ಕಾರ, ತಿಂದು ಕಾಮ, ಕ್ರೋದ, ಲೋಭ, ಮದ, ಮೋಹ, ಮಾತ್ಸರ್ಯ ಎಲ್ಲಾವೂ ಇದೆ. ನಾವು ಅಮೃತ ಸೇವಕರು ನಮಗೆ ಏನೂ ಇಲ್ಲ. ನಂತರ ಇವರಲ್ಲಿ ಒಬ್ಬರಿಗೊಬ್ಬರು ಹೊಡೆದಾಡಿಕೊಂಡು ಗಲಭೆಮಾಡುತ್ತಾರೆ. ಹಾಗಾಗಿ ಇದಕ್ಕೆ ಒಂದು ಕಟ್ಟಡ ಕಟ್ಟಬೇಕು ಎಂದು ದೇವತೆಗಳು ಒಂದು

ಪಂಚಾಯಿತಿ ಇಡುತ್ತಾರೆ. ಈ ಪಂಚಾಯಿತಿಯಲ್ಲಿ ಒಂದು ಮದುವೆ ಮಾಡಬೇಕು ಎಂದು ವಿಷ್ಣು, ಬ್ರಹ್ಮ, ಶಿವನ ಜಾತಕವನ್ನು ಬ್ರಹ್ಮ ನೋಡುತ್ತಾನೆ. ಅದರಲ್ಲಿ ಶಿವನಿಗೆ ಲಗ್ನವಿದೆ ಎಂದು ತಿಳಿಯುತ್ತದೆ. ಆಗ ಶಿವ ಪಾರ್ವತಿಯರ ವಿವಾಹ ತಯಾರಿ ಮಾಡಬೇಕು. ಇದಕ್ಕೆ ಸುರ ಮೂವತ್ತು ಮೂರು ಕೋಟಿ ದೇವತೆಗಳು, ಅರವತ್ತು ಆರು ಕೋಟಿ ಶಕ್ತಿಗಳು, ಅಷ್ಟ ದಿಕ್ಪಾಲಕರು, ನವಗ್ರಹಗಳು, ಪಂಚ ಭೂತಗಳು ಮುನಿಗಳು ಸಿದ್ದರು, ಕಿನ್ನರ ಕಿಂ ಪುರುಷರು, ಯಕ್ಷ ಗಂಧರ್ವರು, ಕರಿ ಇರುವೆಯಿಂದ ಹಿಡಿದು ವ್ಯಾಘ್ರಗಳು, ಗಂಢ ಬೇರುಂಡ, ದೊಡ್ಡ ಪ್ರಾಣಿಗಳವರಿಗೆ ಶಿವನ ಮದುವೆ ಕೇಳಿದ ಹಾಗೆ ಆನಂದಕ್ಕೆ ಪಾರವೆ ಇರಲಿಲ್ಲ. ಆದರೆ ಜಲಮಯವಾಗಿರುವ ಭೂಮಿಯು ಒಡೆದು ಗಂಗೆಯಲ್ಲಿ ನಾವು ಮುಳಗಿ ಸಾಯುತ್ತೇವೆ. ಹಾಗಾಗಿ ಈ ಭೂಮಿಯನ್ನು ಗಟ್ಟಿ ಮಾಡಿದರೆ ನೆಮ್ಮದಿಯಾಗಿರುತ್ತೇವೆ ಎಂದು ನಮಗಿಂತ ಎಲ್ಲರಿಗೂ ದೊಡ್ಡವ ಆದಿಜಾಂಬವ ತಾತ ಅವನನ್ನು ಕೇಳೋಣ ಎಂದು ಹೇಳುತ್ತಾರೆ. ಆಗ ಆದಿಜಾಂಬವ ಭೂಮಿತಾಯಿಯನ್ನು ಪ್ರತ್ಯಕ್ಷ ಮಾಡಿಸುತ್ತಾನೆ. ಭೂಮಿತಾಯಿಯು ಆದಿಜಾಂಬವನಿಗೆ ನಿನ್ನ ಮಗನನ್ನು ಬಲಿಕೊಡಬೇಕು ಎಂದಾಗ ಜಾಂಬವ ತಾತ ತನ್ನ ಏಳು ಮಕ್ಕಳಲ್ಲಿ ದೊಡ್ಡ ಮಗ ಯುಗಮುನಿ ಮಠದಲ್ಲಿ ಭಜನೆ ಮಾಡುತ್ತ ಕುಳಿತಿರುವವನನ್ನು ಕರೆಸುತ್ತಾನೆ. ಯುಗಮುನಿ ಬಂದು ಆದಿಜಾಂಬವನನ್ನು ಕೇಳುತ್ತಾನೆ. ಆಗ ಜಾಂಬವ ಭೂದೇವಿಗೆ ಹೇಳುತ್ತಾನೆ. ಭೂದೇವಿ ಯುಗಮುನಿಯನ್ನು ನೋಡುತ್ತಾಳೆ. ನೋಡಿದ ತಕ್ಷಣ ಯುಗಮುನಿ ವಾಂತಿ ಬೇಧಿಯಾಗಿ ಕೆಳಗೆ ಬೀಳುತ್ತಾನೆ. ರಕ್ತ ಗಡ್ಡೆ ಗಡ್ಡೆಯಾಗಿ ರಕ್ತ ಹೇಗೆ ಹರಿಯಿತೋ ಹಾಗೆ ಭೂಮಿ ಗಟ್ಟಿಯಾಗುತ್ತದೆ. ನಂತರ ಭೂದೇವಿ ಆದಿಜಾಂಬವನಿಗೆ ನಿಮ್ಮ ಕುಲಗಳು ಎಷ್ಟು ಯುಗಗಳು ಇರುತ್ತದೆಯೋ ಅಲ್ಲಿಯವರೆಗೆ ಶಿಲೆಯಾಗಿ ಇರುತ್ತೇನೆ ಎಂದು ಹೇಳಿ ಮಾಯವಾಗುತ್ತಾಳೆ.

ಹೀಗೆ ಭೂಮಿಯು ಮಾದಿಗ ಮತ್ತು ಉಪಕುಲಗಳು ಎಲ್ಲಿಯವರೆಗೂ ಇರುತ್ತವೆಯೋ ಅಲ್ಲಿಯವರೆಗೂ ಗಟ್ಟಿಯಾಗಿಯೇ ಇರುತ್ತದೆ. ಹಾಗಾಗಿ ಭೂಮಿ ಇದುವರೆಗೂ ಗಟ್ಟಿಯಾಗಿಯೇ ನೆಲೆನಿಂತಿದೆ. ಶಿವನ ಮದುವೆಗೆ ನಾಲ್ಕು ದಿಕ್ಕುಗಳಿಗೂ (ಉತ್ತರ, ದಕ್ಷಿಣ, ಪೂರ್ವ, ಪಶ್ಚಿಮ) ಜಾಬನ್ನು (ಆಹ್ವಾನ ಪತ್ರಿಕೆ) ಕಳಿಸುತ್ತಾರೆ. ಮೂರು ದಿಕ್ಕುಗಳ ಜಾಬು ವಾಪಸ್ಸು ಬರುತ್ತದೆ. ಉತ್ತರ ದಿಕ್ಕಿನ ಆಹ್ವಾನ ಪತ್ರಿಕೆ ಬರುವುದಿಲ್ಲ. ಆಗ ಯಾಕೆ ಈ ದಿಕ್ಕಿನಿಂದ ಬಂದಿಲ್ಲ ಎಂದು ಯೋಚಿಸಿದಾಗ ಈ ಆಹ್ವಾನ ಪತ್ರಿಕೆ ಯಾರಿಗೆ ಸೇರಿದೆ ಎಂದರೆ ಗಾರ್ಗೇಯ ಕುಮಾರ ಅಗಸ್ತ್ಯನಿಗೆ ಸಿಕ್ಕಿದೆ. ಇವನು ರಾಕ್ಷಸ ಕುಲದವನು. ಇವನ ದೇಹ ದೈತ್ಯಾಕಾರವಾಗಿದೆ. ಇವನು ಹುಟ್ಟಿದಾಗಿನಿಂದ ಹೊಟ್ಟೆಗೆ ಊಟ ಇರಲಿಲ್ಲ. ಕಾರಣ ಭೂಲೋಕದಲ್ಲಿ ಬೆಳೆದ ಬೆಳೆ ಇವನಿಗೆ ಒಂದು ದಿನದ ಊಟ. ಹಾಗಾಗಿ ಇವನು ಮದುವೆಗೆ ಬಂದರೆ ಮದುವೆಗೆ ಮಾಡಿದ ಅಡುಗೆಯನ್ನು ಎಲ್ಲಾ ಇವನಿಗೆ ಬಡಿಸಿದರೆ ಉಳಿದವರು ಏನು ಮಾಡುವುದು? ಎಂದು ಇವರ ಯೋಚನೆಯಾಗಿರುತ್ತದೆ. ಆದರೆ ಅಗಸ್ತ್ಯನು ಇಂತಹವರ ಮದುವೆಗೆ ಹೋದರೆ ಹೊಟ್ಟೆ ತುಂಬ ಊಟ ಮಾಡಬಹುದು, ಹೊಟ್ಟೆ ತುಂಬ ನೀರು ಕುಡಿಯಬಹುದು ಎಂದು ಆಹ್ವಾನವನ್ನು

ವಾಪಸ್ಸು ಕಳಿಸುವುದಿಲ್ಲ. ದೇವತೆಗಳು ಮದುವೆ ಮಾಡುತ್ತಿದ್ದಾರೆಂದರೆ ಇದು ಸಾಮಾನ್ಯ ಮದುವೆಯಲ್ಲ. ಇದಕ್ಕೆ ಬೇಕಾದ ಊಟದ ಎಲೆ ಸಿಗುವುದಿಲ್ಲ ಹಾಗಾಗಿ ನಾನೆ ಎಲೆಯನ್ನು ತೆಗೆದುಕೊಂಡು ಹೋಗಬೇಕೆಂದು ಕಾಡಿನ ದಿವಗಡ್ಡೆಯ (ಕೆರೆಯ ಕಟ್ಟೆ) ಸಮೀಪ ಹೋಗಿ ನೋಡುತ್ತಾನೆ. ಅಲ್ಲಿನ ಜಂಬಿ ವೃಕ್ಷವನ್ನು ನೋಡಿ, ಅದರ ಎಲೆಯ ಅಗಲ ಆರು ಅಡಿ ಇದೆ ಇದನ್ನು ನೋಡಿ ಇದು ಸರಿ ಹೋಗುತ್ತದೆ ಎಂದು ಜಂಬು ವೃಕ್ಷದಲ್ಲಿ ಒಂದು ಎಲೆ ಬಿಡದೆ ಎಲ್ಲಾ ಎಲೆಗಳನ್ನು ಕಿತ್ತುಕೊಂಡು ಕೆರೆಯ ಕಟ್ಟೆಯ ಮೇಲೆ ಹಾಕಿಕೊಂಡು ಮೂರು ತಿಂಗಳು ನಿದ್ದೆ, ಆಹಾರ ಇಲ್ಲದೆ ಊಟದ ಎಲೆಯನ್ನು ಹೊಲೆಯುತ್ತಾನೆ. ನಂತರ ಇದನ್ನು ತೆಗೆದುಕೊಂಡು ಹೋಗುವುದು ಹೇಗೆ ಎಂದು ಯೋಚಿಸಿ ೧೨ ಆನೆಗಳನ್ನು, ೧೨ ರಥಗಳಿಗೆ ಕಟ್ಟಿ ಅದರ ಮೇಲೆ ಇಟ್ಟು ಸ್ವಲ್ಪ ದೂರ ಬರುತ್ತಾನೆ. ನಂತರ ನಿಲ್ಲಿಸಿ ಯೋಚಿಸಿ, ಅಂತಹ ಸಭೆಯಲ್ಲಿ ನನಗೆ ನೀರು ಸಿಗುತ್ತದೆಯೋ ಇಲ್ಲವೋ ಎಂದು ಮೂರು ಕೆರೆಯ ನೀರು ಸೊರೆ ಬುರ್ರೆಯಲ್ಲಿ ಸುರಿದುಕೊಂಡು ಎಡ ಕಂಕುಳಲ್ಲಿ ಹಾಕಿಕೊಳ್ಳುತ್ತಾನೆ. ಅವನು ಬರುತ್ತಿದ್ದರೆ ಅವನ ತಲೆ ಆಕಾಶಕ್ಕೆ ತಾಕುತ್ತದೆ ಎಂದು ತಲೆ ತಗ್ಗಿಸಿ ಬರುತ್ತಿದ್ದಾನೆ. ದಾರಿಯಲ್ಲಿ ಗಿಡ, ಮರ, ಬೆಟ್ಟ ಗುಡ್ಡಗಳು ಬಂದರೆ ಅಗ್ನಿ ಮಳೆ ಸುರಿಸಿ ಸುಟ್ಟು ಭಸ್ಮ ಮಾಡುತ್ತಾ ಬರುತ್ತಿದ್ದಾನೆ. ಇವನು ಸಾಮಾನ್ಯ ಮನುಷ್ಯನಲ್ಲ, ದೈತ್ಯ ರಾಕ್ಷಸನಾಗಿರುತ್ತಾನೆ.

ಆಗ ದೇವತೆಗಳು ಇವನನ್ನು ತಡೆಯಬೇಕು ಇಲ್ಲವಾದರೆ ಸಾಯಿಸಬೇಕು. ಇಲ್ಲದೇ ಇದ್ದರೆ ಮದುವೆ ಹಾಳಾಗುತ್ತದೆ ಎಂದು ಶಿವನನ್ನು ಕೇಳುತ್ತಾರೆ. ಶಿವ ನಿರಾಕರಿಸುತ್ತಾನೆ. ವಿಷ್ಣು, ಬ್ರಹ್ಮ ಎಲ್ಲಾ ದೇವತೆಗಳು ಅವನ ಮೇಲೆ ಯುದ್ಧಕ್ಕೆ ಹೋಗುವುದಕ್ಕೆ ನಿರಾಕರಿಸುತ್ತಾರೆ. ಜಾಂಬವಂತ ತಾತ ಹೋಗುವ ಹಾಗಿಲ್ಲ. ಆಗ ಅವನಿಗೆ ಯಾರಿಂದ ಸಾವು ಇದೆ ಎಂದು ಜಾತಕ ನೋಡುತ್ತಾರೆ. ಬ್ರಹ್ಮ ಅವನ ಜಾತಕ ನೋಡಿ ಅವನಿಗೆ ಕಾಳಿಕಾದೇವಿಯ ವರದಿಂದ ಹುಟ್ಟಿದ ಮೇಘಾವರನಿಂದ (ವಿಶ್ವಬ್ರಹ್ಮನಿಂದ) ಇವನಿಗೆ ಮರಣವಿದೆ ಎಂದು ತಿಳಿಯುತ್ತದೆ. ಆಗ ಜಾಂಬವಂತ ಅವನನ್ನು ಕರೆಸುತ್ತಾನೆ. ವಿಶ್ವಬ್ರಹ್ಮ ಬಂದು ಎಲ್ಲರಿಗೂ ನಮಸ್ಕರಿಸಿ ಕರೆದ ಉದ್ದೇಶವನ್ನು ಕೇಳುತ್ತಾನೆ. ಶಿವ-ಪಾರ್ವತಿಯರಿಗೆ ಮದುವೆ ಅದಕ್ಕೆ ನಿನ್ನ ಕರೆಸಿದೆವು ನಿನ್ನಿಂದ ಒಂದು ಸಹಾಯವಾಗಬೇಕು ಎಂದು ಹೇಳುತ್ತಾರೆ. ನನ್ನಿಂದ ಏನಾಗಬೇಕು ಎಂದು ಕೇಳಿದಾಗ ಎಲ್ಲರೂ ನಿರಾಕರಿಸಿದ ಹಾಗೆ ಇವನು ನಿರಾಕರಿಸಿದರೆ ಹೇಗೆ ಎಂದು ಯೋಚಿಸಿ ಮೊದಲು ನೀನು ನಮಗೆ ಮಾತುಕೊಟ್ಟರೆ ಹೇಳುತ್ತೇವೆ ಎಂದು ಹೇಳುತ್ತಾರೆ. ಆಗ ವಿಶ್ವಬ್ರಹ್ಮ ಮಾತು ಕೊಡುತ್ತೇನೆ ಎಂದಾಗ ಗಂಗೆಯ ಕುಮಾರ ಅಗಸ್ತ್ಯನು ಬರುತ್ತಿದ್ದಾನೆ. ಅವನು ಮದುವೆಗೆ ಬರಬಾರದು. ಅವನನ್ನು ನಿನ್ನ ಉಪಾಯದಿಂದ, ನಿನ್ನ ಮಂತ್ರದಿಂದ ವಾಪಸ್ಸು ಕಳಿಸಬೇಕು. ಇಲ್ಲವಾದರೆ ನಿನ್ನ ಮಾಯದಿಂದ ಅವನನ್ನು ಸಾಯಿಸಬೇಕು ಎಂದಾಗ ವಿಶ್ವಬ್ರಹ್ಮ ಸ್ವಾಮಿ ನಿಮ್ಮ ಹತ್ತಿರ ಭಿಕ್ಷೆ ಬೇಡಿ ಜೀವನ ಮಾಡುತ್ತಿರುವವನು ನಾನು. ನನ್ನನ್ನು ಕಳುಸುತ್ತಿದ್ದೀರಲ್ಲ ಎಂದಾಗ ದೇವತೆಗಳು ನಾವು ನಿನ್ನ ಬೆನ್ನ ಹಿಂದೆಯೇ ಇರುತ್ತೇವೆ. ನಿನ್ನನ್ನು ಬಿಡುವುದಿಲ್ಲ. ನಿನ್ನ

ಕೈಯಲ್ಲಿ ಅವನ ಮರಣವಿದೆ ಹೋಗು ಎಂದಾಗ, ಸರಿ ನಿಮಗೆ ಕೊಟ್ಟ ಮಾತು ಉಳಿಸಬೇಕು. ತಪ್ಪಿಸಿಕೊಳ್ಳಲು ಆಗುವುದಿಲ್ಲ ಹಾಗಾಗಿ ಹೋಗುತ್ತೇನೆ. ಆದರೆ ಅವನ ಕೊನೆಯ ನಾಲಿಗೆಯಲ್ಲಿ ಕತ್ತರಿ ಇದೆ. ನನ್ನ ನಾಲಿಗೆ (ಮಧ್ಯ ನಾಲಿಗೆ)ಯಲ್ಲಿ ಮಚ್ಚೆ ಇದೆ. ಅವನು ಶಪಿಸಿದರೆ ಸರ್ವ ನಾಶವಾಗುತ್ತದೆ. ನನ್ನ ಮೂರೇ ಮೂರು ಮಂತ್ರದಿಂದ ನನ್ನ ಜೀವನ ನಾಶವಾಗುತ್ತದೆ. ನಂತರ ನನಗೆ ಜೀವನ ಕೊಡುವವರು ಯಾರು? ಎಂದಾಗ ಮುಕ್ಕೋಟಿ ದೇವತೆಗಳು ಸಾಂತ್ವನ ಹೇಳಿದರು ಒಪ್ಪಲಿಲ್ಲ. ಈಶ್ವರ, ಬ್ರಹ್ಮ, ವಿಷ್ಣು ಹೇಳಿದರೂ ಒಪ್ಪಲಿಲ್ಲ. ಆಗ ವಿಶ್ವಬ್ರಹ್ಮ ಎಲ್ಲರಿಗಿಂತ ದೊಡ್ಡವ ಆದಿಜಾಂಬ ತಾತ ಹೇಳಿದರೆ ಹೋಗುತ್ತೇನೆ ಎಂದಾಗ ಆದಿಜಾಂಬವಂತ ಸರಿ ಹೋಗು ನಾನು ಕೊಡುತ್ತೇನೆ ಎಂದು ಹೇಳಿದಾಗ, ವಿಶ್ವಬ್ರಹ್ಮ ಯುದ್ಧಕ್ಕೆ ಹೋಗುತ್ತಾನೆ. ಯುದ್ಧಕ್ಕೆ ಹೋಗುವಾಗ ಏಳು ತೂತು ಬಿದ್ದಿರುವ ಮಡಕೆ, ನುಚ್ಚು ಅಕ್ಕಿ, ನುಚ್ಚು ಬೇಳೆ ಹರಿದಿರುವ ಬಟ್ಟೆ ಹಾಕಿಕೊಂಡು ವೃದ್ದ ಬ್ರಾಹ್ಮಣ ರೂಪದಲ್ಲಿ ಹೋಗುತ್ತಾನೆ. ಅಗಸ್ತ್ಯನು ಕಾಡಿನಲ್ಲಿ ಆಮಾಡಿ ಮೈಲಿ (ಹನ್ನೆರಡು ಮೈಲಿ) ದೂರಕ್ಕೆ ಒಂದು ಹೆಜ್ಜೆ ಹಾಕಿಕೊಂಡು ಬರುತ್ತಿದ್ದಾನೆ. ಆಗ ವಿಶ್ವಬ್ರಹ್ಮ ನೋಡಿ ಓ ಇವನು ಇಷ್ಟು ದೈತ್ಯವಾಗಿರುವುದರಿಂದ ದೇವತೆಗಳು ಯುದ್ಧಕ್ಕೆ ಬರಲಿಲ್ಲ ಎಂದು ಅವನಿಗೆ ಸರಿ ಸಮನಾಗಿ ಎದುರುಗಡೆ ಹೋದರೆ ಅವನ ಕಾಲು ನನ್ನ ತಲೆಯ ಮೇಲೆ ಇಟ್ಟರೆ ಕರಿ ಇರುವೆ ನುಸುಳಿ ಸಾಯುವ ಹಾಗೆ ನಾನು ಸಾಯುತ್ತೇನೆ. ಹೀಗಾದರೆ ನಾನು ಯುದ್ಧ ಮಾಡುವುದು ಹೇಗೆ? ನಂತರ ದೇವತೆಗಳು ಕಾರ್ಯ ಮಾಡುವುದು ಹೇಗೆ? ಇದು ಸರಿಯಾದ ಮಾರ್ಗವಲ್ಲ ಎಂದು ಅವನು ಬರುವ ದಾರಿ ಬಿಟ್ಟು ಪಕ್ಕಕ್ಕೆ ಹೋಗುತ್ತಾನೆ.

ಬ್ರಹ್ಮನನ್ನು ಧ್ಯಾನ ಮಾಡಿ ಮೂವತ್ತು ಮೂರು ಕೋಟಿ ದೇವತೆಗಳನ್ನು ನೆನೆದು ಮಂತ್ರವನ್ನು ಉಪದೇಶ ಮಾಡಿ ಮರಳು ಹಾಕುತ್ತಾನೆ. ಅಲ್ಲಿ ಬ್ರಹ್ಮದಂಟು ಗಿಡ ಬೆಳೆಯುತ್ತದೆ. ಅದನ್ನು ಉತ್ಪತ್ತಿ ಮಾಡಿಕೊಂಡು ಇವನು ತಂದ ಸಾಮಗ್ರಿಗಳನ್ನು ತೆಗೆದು ಅಲ್ಲಿ ಇಟ್ಟು ಕುಳಿತುಕೊಳ್ಳುತ್ತಾನೆ. ಅಗಸ್ತ್ಯ ಆಕಡೆ, ಇವನು ಈಕಡೆ ಕುಳಿತು ಶಿವನಿಗೆ ಮತ್ತು ಪಾರ್ವತಿಗೆ ಮದುವೆಯಾಯಿತು ಎಂದು ಜೋರಾಗಿ ಕಿರುಚುತ್ತಾನೆ. ಆಕಾಶದ ಎತ್ತರ ಇರುವ ಅಗಸ್ತ್ಯನ ಕಿವಿಗಳಿಗೆ ನಿಧಾನವಾಗಿ ಕೇಳಿಸುತ್ತದೆ. ಆಗ ಅಗಸ್ತ್ಯ ಕೆಳಗೆ ನೋಡಿ ಈ ಅರಣ್ಯದಲ್ಲಿ ಯಾವುದೋ ಶಬ್ದವಾಗುತ್ತಿದೆಯಲ್ಲ, ಯಾರೋ ನರನಿಗೆ ಅಪಾಯವಾಗಿರಬೇಕು ಎಂದು ರಥವನ್ನು ನಿಲ್ಲಿಸಿ ನಾಲ್ಕು ಕಡೆ ನೋಡುತ್ತಾನೆ. ಗಿಡದ ಪಕ್ಕದಲ್ಲಿ ವೃದ್ದ ಬ್ರಾಹ್ಮಣನ ವೇಷದಲ್ಲಿ ವಿಶ್ವಬ್ರಹ್ಮ ಕಾಣಿಸುತ್ತಾನೆ. ರಥವನ್ನು ತಿರುಗಿಸಿ ಏನಪ್ಪ ಇದು ಏನು ಕೂಗಿಕೊಳ್ಳುತ್ತಿದ್ದೀಯಾ ಎಂದು ಕೇಳುತ್ತಾನೆ. ವಿಶ್ವಬ್ರಹ್ಮ ಆಕಾಶಕ್ಕೆ ನೋಡುತ್ತಾನೆ. ನಂತರ ಮತ್ತೊಂದು ಕೂಗಿಗೆ ನಾಲ್ಕು ದಿಕ್ಕುಗಳಿಗೆ ನೋಡುತ್ತಾನೆ. ಮೂರನೆ ಕೂಗಿಗೆ ಭೂಮಿಯನ್ನು ನೋಡುತ್ತಾನೆ. ಅಗಸ್ತ್ಯನಿಗೆ ಕೋಪ ಬಂದು ಏನಯ್ಯ ನನ್ನ ಮಾತು ಕೇಳಿದರೆ ದೇವತೆಗಳು ಘಡ ಘಡ ಅಂತ ನಡುಗುತ್ತಾರೆ. ಒಂದು ಮಾತು ಮಾತನಾಡಿದರೂ ಮಾತನಾಡಲಿಲ್ಲ ಎರಡನೇ ಮಾತಿಗೂ

ಉತ್ತರವಿಲ್ಲ ಯಾರು ನೀನು? ಎಂದಾಗ, ವಿಶ್ವಬ್ರಹ್ಮ ನೋಡಿ ಯಾಕೆ ಎಂದಾಗ ಅಲ್ಲಯ್ಯ ನಾನು ಕರೆದರೆ ನಿನಗೆ ಕೇಳಿಸಲಿಲ್ಲ. ಸ್ವಾಮಿ ನಾನು ಶತವಾರಿ (ವೃದ್ಧ) ಬ್ರಾಹ್ಮಣನು. ನನಗೆ ಕಿವಿ ಕೇಳುವುದಿಲ್ಲ, ಕಣ್ಣು ಕಾಣುವುದಿಲ್ಲ. ನೀನು ಒಂದು ಸಾರಿ ಕೂಗಿದ್ದ ಕೂಗು ಗುಡಿಗಿದ ಹಾಗೆ ಆಯಿತು ಅದಕ್ಕೆ ಆಕಾಶಕ್ಕೆ ನೋಡಿ ಮಳೆ ಬರುತ್ತದೆ ಎಂದು ಅಂದುಕೊಂಡೆ. ಮತ್ತೊಂದು ಕೂಗಿಗೆ ಗಾಳಿ ಬಂದಾಗೆ ಆಯಿತು. ಅದಕ್ಕೆ ಸುತ್ತಲೂ ನೋಡಿದೆ. ಮೂರನೇ ಕೂಗಿಗೆ ಬೆಂಕಿ ಕೆಂಡ ಬಿದ್ದಾಗೆ ಆಯಿತು, ಅದಕ್ಕೆ ಭೂಮಿ ಕಡೆ ಬಗ್ಗಿ ನೋಡಿದೆ. ಸ್ವಾಮಿ ನಿನ್ನನ್ನು ನಾನು ನೋಡಿಲ್ಲ ಎಂದನು. ಇದನ್ನು ಕೇಳಿ ಅಗಸ್ತ್ಯನಿಗೆ ಕೋಪ ತಣ್ಣಗೆ ಆಯಿತು. ಸ್ವಾಮಿ ನೀನು ಎಲ್ಲಿಗೆ ಹೋಗುತ್ತಿದೀಯ? ಎಂದು ಅಗಸ್ತ್ಯನನ್ನು ಕೇಳಿದಾಗ, ಅಗಸ್ತ್ಯ ಶಿವ ಪಾರ್ವತಿಯರ ಮದುವೆಗೆ ಹೋಗುತ್ತಿದ್ದೇನೆ ಎಂದು ಹೇಳುತ್ತಾನೆ. ಆಗ ವಿಶ್ವಬ್ರಹ್ಮ ಅಯ್ಯೋ ಶಿವ–ಪಾರ್ವತಿಗೆ ಮದುವೆನಾ! ಆ ಮದುವೆಗೆ ಹೋಗುತ್ತಿದ್ದೀಯಾ! ಅಯ್ಯೋ ಎಂತಹ ಮಾತು ಹೇಳುತ್ತಿದ್ದೀಯಾ. ನನಗೆ ನಿನ್ನಂತಹ ದೈತ್ಯನು, ನಿನ್ನಂತಹ ದಾನವನು ಅಂತಹ ಪಾಪಾತ್ಮನ ಮದುವೆಗೆ ಹೋಗುತ್ತಿದ್ದೀಯಾ ಎಂದಾಗ, ಏನಯ್ಯ ಅಂತಹ ಶಿವ–ಪಾರ್ವತಿಗೆ ಹಾಗಂತೀಯಾ?. ಇಲ್ಲ ಸ್ವಾಮಿ ಮೂರು ದಿನ ಆರು ಹೊತ್ತು ಉಪವಾಸವಿದ್ದು, ನಾನೇ ಮದುವೆ ಮಾಡಿದ್ದು. ನಾನು ಇಷ್ಟೆಲ್ಲಾ ಮಾಡಿ ನಾನು ಬರುತ್ತಿದ್ದೇನೆ ಅಂತಹ ಪಾಪದ ಮದುವೆಗೆ ನೀನು ಹೋಗುತ್ತಿದ್ದೀಯಾ? ಆಗ ಅಗಸ್ತ್ಯನು ಏನಯ್ಯ ಹೇಳುತ್ತಿರುವುದು? ಅಂತಹ ಪಾಪದ ಮದುವೆಗೆ ಹೋಗಿದ್ದಕ್ಕೆ ನೋಡು ತೂತು ಹೋಗಿರುವ ಮಡಿಕೆ ಕೊಟ್ಟಿದ್ದಾರೆ. ನುಚ್ಚು ಅಕ್ಕಿ ಕೊಟ್ಟಿದ್ದಾರೆ. ನುಚ್ಚು ಬೇಳೆ ಎಲ್ಲಾವೂ ಅಗಸ್ತ್ಯನ ಮುಂದೆ ಇಡುತ್ತಾನೆ. ಉಪ್ಪು ಕೇಳಿದರೆ ಮರಳು ತೆಗೆದು ಕೊಡುತ್ತಾನೆ. ಬಟ್ಟೆ ಕೇಳಿದರೆ ಹರಿದಿರುವ ಬಟ್ಟೆಗಳನ್ನು ತೆಗೆದು ನೋಡು ಎಂದು ಅಗಸ್ತ್ಯನಿಗೆ ತೋರಿಸುತ್ತಾನೆ. ನಿಜವೇ ಇದು? ಎಂದು ಅಗಸ್ತ್ಯ ಕೇಳಿದಾಗ, ಹೌದು ನಿಜ ಎಂದು ಹೇಳುತ್ತಾನೆ. ತಾಳೆ ಪತ್ರವನ್ನು ತೆಗೆದು ತಲೆಯ ಮೇಲೆ ಇಟ್ಟುಕೊಂಡು ಸರಸ್ವತಿ ಮೇಲೆ ಆಣೆ ಎಂದು ಹೇಳಿದಾಗ ಅಗಸ್ತ್ಯ ಏನು ಮಾಡುವುದು ಪರಮಾತ್ಮ ಎಂದು ಈ ಎಲೆಯಲ್ಲಿ ತಿನ್ನುವುದಕ್ಕೆ ಋಣ ಇಲ್ಲ ಎಂದು ಎರಡು ಭಾಗ ಮಾಡಿ ಹರಿದು ಎಲೆಯನ್ನು ಬಿಸಾಡುತ್ತಾನೆ.

ನಂತರ ವಿಶ್ವಬ್ರಹ್ಮನಿಗೆ ನೆನಪು ಬಂದು ಒಂದು ವೇಳೆ ಅಗಸ್ತ್ಯನು ಜೋಬಿನಲ್ಲಿ ಇರುವ ಲಗ್ನ ಪತ್ರಿಕೆಗೆ ಕೈ ಹಾಕಿದರೆ ಲಗ್ನಪತ್ರಿಕೆ ಸಿಗುತ್ತದೆ ಎಂದು ಯೋಚಿಸಿ, ಅವನು ಬಿಸಾಡಿದ ಎರಡು ತುಂಡು ಎಲೆ ಸೇರಿಸಿದರೆ ಒಂದು ಆಗುತ್ತದೆ ಎಂದು ಬ್ರಹ್ಮನನ್ನು ನೆನೆದು ಗೆದ್ದಲು ಹುಳುಗಳನ್ನು ಸೃಷ್ಟಿಸುತ್ತಾನೆ. ಗೆದ್ದಲ ಹುಳುಗಳು ಎಲೆಯನ್ನು ಸೀಗೆ ಎಲೆಗಿಂತ ಚಿಕ್ಕದಾಗಿ ಕತ್ತರಿಸಿ ಹಾಕುತ್ತವೆ. ನಂತರ ಅಗಸ್ತ್ಯನು ವಿಶ್ವಬ್ರಹ್ಮನನ್ನು ಕುರಿತು ಏನಯ್ಯಾ ಬರುವಾಗ ನನಗೆ ಏನು ಅಪಶಕುನ ಆಗಲಿಲ್ಲ. ಹೋಗುವಾಗ ಇಂತಹ ಅಪಶಕುನವಾಗುತ್ತಿದೆ. ನಡು ರಸ್ತೆಯಲ್ಲಿ ನಾನು ವಾಪಸ್ಸು ಹೋಗಬೇಕು ಮತ್ತೆ ಏನಾದರೂ ಆಗುತ್ತದೆಯೋ ಏನು? ಎಂದು ಯೋಚಿಸಿ ನಿನಗೆ ಪಂಚಾಂಗ ನೋಡುವುದಕ್ಕೆ ಬರುತ್ತಿದೆಯೋ ಎಂದಾಗ ವಿಶ್ವಬ್ರಹ್ಮ ಹೌದು ಪಂಚಾಂಗ

ನೋಡುತ್ತೇನೆ ಎಂದನು. ಯಾಕೆಂದು ಕೇಳಿದಾಗ, ಹಾಗಾದರೆ ನನ್ನ ಪಂಚಾಂಗ ನೋಡು ನಾನು ವಾಪಸ್ಸು ಹೋಗಬೇಕು ಎಂದಾಗ ಪಂಚಾಂಗ ಹೇಳಬೇಕಾದರೆ ಅದಕ್ಕೆ ಬೇಕಾದ ವಸ್ತುಗಳು ಬೇಕಾಗುತ್ತವೆ. ಐದು ಎಲೆ, ಐದು ಅಡಕೆ, ಐದು ನಾಲ್ಕಾಣೆ ತಂದು ನನಗೆ ದಕ್ಷಿಣೆ ಕೊಡಬೇಕು. ಕೊಟ್ಟರೆ ಶಾಸ್ತ್ರ ಹೇಳುತ್ತೇನೆ ಎಂದಾಗ ಅಗಸ್ತ್ಯನು ಕಾಡಿನಲ್ಲಿ ಈ ವಸ್ತುಗಳು ಎಲ್ಲಿ ಸಿಗುತ್ತವೆ ನಮ್ಮೂರಿಗೆ ಬಂದರೆ ನಿನಗೆ ಬೇಕಾದ ವಡವೆಗಳು, ನವಧಾನ್ಯಗಳು ಕೊಡುತ್ತೇನೆ. ಈ ಕಾಡಲ್ಲಿ ಎಲ್ಲಿಂದ ತರುವುದು ಎಂದು ವಿಶ್ವಬ್ರಹ್ಮನಿಗೆ ಹೇಳುತ್ತಾನೆ. ಆಗ ವಿಶ್ವಬ್ರಹ್ಮ ದಕ್ಷಿಣೆ ಕೊಡಲಿಲ್ಲ ಎಂದರೆ ಪಂಚಾಂಗ ಹೇಳುವುದಿಲ್ಲ ಎನ್ನುತ್ತಾನೆ. ಆಗ ಇಬ್ಬರ ನಡುವೆ ವಾದ ಪ್ರತಿವಾದಗಳು ನಡೆಯುತ್ತವೆ. ನಂತರ ವಿಶ್ವಬ್ರಹ್ಮ ಊಟದ ಎಲೆ ನಾಶ ಮಾಡಿದೆ ಇನ್ನು ಸೋರೆಬುರ್ರೆಯಲ್ಲಿ ಇರುವ ನೀರು ಎಷ್ಟು ಪ್ರಾಣಿ ಪಕ್ಷಿಗಳು ಕುಡಿಯುತ್ತಿದ್ದವು ಎಂದು ವಿಷ್ಣುವನ್ನು ಧ್ಯಾನಿಸುತ್ತಾನೆ. ಆಗ ವಿಷ್ಣು ಕಾಗೆಯ ರೂಪದಲ್ಲಿ ಕಬ್ಬಿಣದ ಕೊಕ್ಕನ್ನು ಹಾಕಿಕೊಂಡು ಸೋರೆ ಬುರ್ರೆಯನ್ನು ತೂತು ಮಾಡುತ್ತಾನೆ. ಎರಡು ಸಮುದ್ರದ ನೀರು ಎರಡು ಸಮುದ್ರಕ್ಕೆ ಸೇರುತ್ತದೆ. ಇನ್ನು ಉಳಿದಿರುವುದು ಒಂದು ಸಮುದ್ರದ ನೀರು ಆಗ ಅಗಸ್ತ್ಯನು ನೀರಿನ ಭಾರ ಕಡಿಮೆಯಾಯಿತಲ್ಲ ಎಂದು ಹಿಂದೆ ತಿರುಗಿ ನೋಡುತ್ತಾನೆ. ಎರಡು ಸಮುದ್ರದ ನೀರು ಇಲ್ಲ, ಒಂದು ಸಮುದ್ರ ನೀರನ್ನಾದರೂ ಕುಡಿಯೋಣ ಎಂದು ಒಂದು ಸಮುದ್ರದ ನೀರು ಕುಡಿಯುತ್ತಾನೆ. ನಂತರ ಅಗಸ್ತ್ಯ ಮೂತ್ರಕ್ಕೆ ಹೋಗುತ್ತಾನೆ. ಅವನು ಮೂತ್ರ ಹೋಗುತ್ತಿದ್ದರೆ ಸಮುದ್ರ ನೀರು ಹರಿಯುವ ಹಾಗೆ ಹರಿಯುತ್ತದೆ. ಆ ಮೂತ್ರ ಒಂದು ಸಮುದ್ರವಾಗುತ್ತದೆ. ಅದು ಉಪ್ಪು ಉಪ್ಪಾಗಿ ಇರುತ್ತದೆ. ಇದೆ ಹೀಗೆ ಲವಣ ಸಮುದ್ರವಾಗಿರುವುದು ಎಂದು ಈ ಸಮುದಾಯಗಳ ಮಾತು. ನಂತರ ಊಟದ ಎಲೆ ನಾಶವಾಯಿತು ನೀರು ಸಮುದ್ರ ಸೇರಿತು ಹೀಗೆ ಇಬ್ಬರ ನಡುವೆ ಉಪನ್ಯಾಸ ಮಾಡಿಕೊಂಡು ಇದ್ದರೆ, ಬಂದಿರುವುದು ಯುದ್ಧಕ್ಕೆ ಎಂದು ವಿಶ್ವಬ್ರಹ್ಮ ಮನಸ್ಸಿನಲ್ಲಿ ಯೋಚಿಸಿ ಏನಯ್ಯ ನಾನು ವೃದ್ಧ, ಬ್ರಾಹ್ಮಣ ಬಂದಾಗಿನಿಂದ ನಾನು ಸ್ವಾಮಿ, ಬುದ್ಧಿ, ದೇವರೆ ಎಂದು ಹೇಳುತ್ತಿದ್ದೇನೆ. ನೀನು ಬಾರೋ, ಹೇಳೋ ಎಂದು ಏಕವಚನದಲ್ಲಿ ಮಾತನಾಡುತ್ತೀದ್ದಿಯಾ ಎಂದಾಗ ಅಗಸ್ತ್ಯನು ನನಗೂ ನಿನಗೂ ಒಂದೇನಾ? ಎಂದಾಗ ನೀನು ನನಗೆ ಏಕವಚನದಲ್ಲಿ ಮಾತನಾಡಿದರೆ ನಾನು ಏಕವಚನದಲ್ಲಿ ಮಾತನಾಡುತ್ತೇನೆ ಎಂದು ವಿಶ್ವಬ್ರಹ್ಮ ಎಂದಾಗ ಅಗಸ್ತ್ಯನಿಗೆ ಕೋಪ ಬರುತ್ತದೆ. ಆಗ ೧೨ ಆನೆಗಳನ್ನು ಕೈಯಲ್ಲಿ ಹಾಕಿಕೊಂಡು ಅವುಗಳನ್ನು ನುಸಳಿ ಬಾಯಿಗೆ ಹಾಕಿಕೊಳ್ಳುತ್ತಾನೆ. ನಂತರ ಪಂಚಾಂಗ ಹೇಳುತ್ತೀಯಾ? ವಿಶ್ವಬ್ರಹ್ಮ ಇಲ್ಲಯ್ಯ, ಇಷ್ಟು ಮಾತನಾಡುತ್ತೀಯಾ ನಿನ್ನ ಹತ್ತಿರ ಇರುವ ಲಗ್ನ ಪತ್ರಿಕೆ ನೋಡು ಎಂದಾಗ ಆಗ ಅಗಸ್ತ್ಯನಿಗೆ ನೆನಪು ಬಂದು ಲಗ್ನಪತ್ರಿಕೆಯನ್ನು ನೋಡುತ್ತಾನೆ. ನೋಡಿ ಶಿವ ಪಾರ್ವತಿಯರ ಮದುವೆ ಇನ್ನು ತುಂಬಾ ದಿನ ಇದೆ ಎಂತಹ ಕೆಲಸ ಮಾಡಿದೆ ವೃದ್ದ ಬ್ರಾಹ್ಮಣ ಎಂದಾಗ ನಾನು ಮೊದಲೇ ಹೇಳಿದ್ದೆ, ನನಗೆ ಕಣ್ಣು ಕಾಣುವುದಿಲ್ಲ, ಕಿವಿ ಕೇಳುವುದಿಲ್ಲ ಅಂತ. ಹಾಗಾದರೆ ನನ್ನ ಮೇಲೆ ಪಂದ್ಯ ಕಟ್ಟುತ್ತೀಯಾ? ಎಂದು ಅಗಸ್ತ್ಯ ಊ ಎಂದಾಗ

ಮೂಗಿನಿಂದ ಬೆಂಕಿ ಕೆಂಡಗಳು ಬಿದ್ದು ಬೆಂಕಿ ಹತ್ತಿಕೊಳ್ಳುತ್ತದೆ. ಆಗ ವಿಶ್ವಬ್ರಹ್ಮ ಶಿವನನ್ನು ನೆನೆಯುತ್ತಾನೆ. ಶಿವಗಂಗೆಯನ್ನು ಕಳಿಸುತ್ತಾನೆ. ಗಂಗೆ ಮಳೆಯನ್ನು ಸುರಿಸಿ ಬೆಂಕಿ ಆರಿಸುತ್ತಾಳೆ. ಕಾಡಿನ ಎಲ್ಲಾ ಕಡೆ ಬೆಂಕಿಯು ಹತ್ತಿಕೊಳ್ಳುತ್ತದೆ. ಆಗ ವಿಶ್ವಬ್ರಹ್ಮ ವಾಯು ದೇವನನ್ನು ನೆನೆದು ದೇವಲೋಕಕ್ಕೆ ಹೋಗಿ ನನಗೆ ಅಗಸ್ತ್ಯನಿಗೆ ಘೋರ ಯುದ್ಧ ನಡೆಯಿತು ಯುದ್ಧದಲ್ಲಿ ಅಗಸ್ತ್ಯನು ಬೆಂಕಿಯ ಕೆಂಡಗಳನ್ನು ಉರುಳಿಸುತ್ತಿದ್ದಾನೆ. ಆದ್ದರಿಂದ ಕಾಡು ಸುಟ್ಟುಹೋಗುತ್ತಿದೆ. ಮಳೆಯನ್ನು ಎಲ್ಲಾ ಕಡೆ ಸುರಿಸುವಂತೆ ಸೂಚಿಸುತ್ತಾನೆ. ಇವರ ಮಳೆಗಾಳಿಗೆ ಅಗಸ್ತ್ಯ ತಡೆಯನ್ನುಂಟುಮಾಡಲು ಕಷ್ಟಕರವಾಗಿ ಕೆಳಗೆ ಬಿದ್ದು ಹೋಗುತ್ತಿದ್ದಾನೆ. ಪ್ರಾಣ ಹೋಗುವುದಕ್ಕೆ ಆಗದೆ ಒದ್ದಾಡುತ್ತಿದ್ದಾನೆ. ನಂತರ ವಿಶ್ವಬ್ರಹ್ಮ ಬಂದು ಏನಯ್ಯ ಅಗಸ್ತ್ಯ ನಾನು ವಾಪ್ಸು ಹೋಗಿ ಏನು ಮಾಡದೆ? ಎಂದಾಗ ಅಗಸ್ತ್ಯನು ನೀನು ಬ್ರಾಹ್ಮಣನಲ್ಲ, ನನ್ನ ಪ್ರಾಣಕ್ಕೆ ಮೃತ್ಯುವು, ನಾನು ಮೋಸ ಹೋದೆ ಈಗ ನಾನು ಏನು ಮಾಡುವುದಕ್ಕೆ ಆಗುವುದಿಲ್ಲ. ನೀನು ಯಾರು ಅಂತ ಈಗಲಾದರೂ ಹೇಳು ಎಂದಾಗ, ಏನಯ್ಯ ಅಗಸ್ತ್ಯ ನಾನು ಕಾಳಿಕಾದೇವಿ ವರದಿಂದ ಹುಟ್ಟಿದ ವಿಶ್ವಬ್ರಹ್ಮ. ನಿನಗೆ ಗೊತ್ತಿಲ್ಲವೇ? ಎಂದು ಹೇಳುತ್ತಾನೆ.[೪]

ಆಗ ಅಗಸ್ತ್ಯನು ಹೌದು ನಮ್ಮ ತಂದೆ ಹೇಳಿದ್ದ, ಮೋಸ ಹೋದೆ ಇಲ್ಲ ಅಂದಿದ್ದರೆ ಬಾಳೆ ಹಣ್ಣು ತಿಂದಂಗೆ ತಿಂದು ಹಾಕುತ್ತಿದ್ದೆ. ಸರಿ ಈಗಲೂ ಸಮಯ ಮೀರಿಲ್ಲ ನಾನು ನಿನಗೆ ಶಾಪ ಕೊಡುತ್ತೇನೆ. ಇದನ್ನಾದರೂ ಸ್ವೀಕರಿಸು ಎಂದಾಗ, ವಿಶ್ವಕರ್ಮ ಒಪ್ಪಿಕೊಂಡು ಕೊಡು ಎನ್ನುತ್ತಾನೆ. ಆಗ ಅಗಸ್ತ್ಯನು ಇನ್ನು ಮುಂದೆ ವಿಶ್ವಬ್ರಹ್ಮ ಅಲ್ಲ ವಿಶ್ವಕರ್ಮನಾಗಿ ಹುಟ್ಟಿ ರಾಗಿ ಕಾಳಿನಷ್ಟು ತಪ್ಪು ಇಲ್ಲದೇ ಇದ್ದರೆ ನಿನಗೆ ಹೊಟ್ಟೆ ನೋವು ಬರುತ್ತದೆ (ಅಗಸ್ತ್ಯನು ಕೊಟ್ಟ ಶಾಪದಿಂದ ಈಗಲೂ ಆಚಾರ್ಯರು ನಾವು ತೆಗೆದುಕೊಂಡು ಹೋಗುವ ಬಂಗಾರದಲ್ಲಿ ಸ್ವಲ್ಪವಾದರೂ ತೆಗೆದುಕೊಂಡು ನಮಗೆ ಒಡವೆ ಮಾಡಿಕೊಡುತ್ತಾರೆ) ಹಾಗಾಗಿ ಈಗಲೂ ಆಚಾರ್ಯರು ಮೋಸ ಮಾಡಬೇಕು. ಅವನು ಕೊಟ್ಟ ಶಾಪದಿಂದ ಆಚಾರ್ಯರು ಮೋಸ ಮಾಡುವುದು. ನಂತರ ವಿಶ್ವಕರ್ಮನು ಅಗಸ್ತ್ಯನಿಗೆ ಶಾಪ ಕೊಡುತ್ತಾನೆ. ನೀನು ಅಗಸಿ ಮರವಾಗಿ ಹುಟ್ಟು, ಆರು ತಿಂಗಳಲ್ಲಿ ಒಂದು ಸಾರಿ ನಿನ್ನ ಸುಳೆಯನ್ನು ಕತ್ತರಿಸಬೇಕು ಇಲ್ಲವಾದರೆ ಅದು ಆಕಾಶದ ಅಷ್ಟು ಎತ್ತರ ಬೆಳೆಯುತ್ತದೆ. ನಂತರ ನಿನ್ನ ಈ ಕೂಗು ಪ್ರತಿ ಕೂಗಾಗಿ ಕೇಳಬೇಕು. ಯಾರೆ ಕೂಗಿದರೂ ಅವರ ಪ್ರತಿ ಕೂಗು ಆಗಿ ನೀನು ಪ್ರತಿ ಧ್ವನಿಸಬೇಕು ಎಂದು ಶಾಪ ಕೊಡುತ್ತಾನೆ. ಆ ಶಾಪವೇ ನಾವು ಕಾಡಿನಲ್ಲಿ ಮನೆಯಲ್ಲಿ ನಿಶಬ್ದ ಪ್ರದೇಶಗಳಲ್ಲಿ ಕೂಗಿದರೆ ಪ್ರತಿಧ್ವನಿಯಾಗಿ ಕೇಳುತ್ತದೆ. ಹೀಗೆ ಅಗಸ್ತ್ಯನನ್ನು ಸಂಹರಿಸಿ ಪುನಃ ಹಿಂತುರುಗಿ ಬುರುತ್ತಾನೆ ಇಲ್ಲಿ ಶಿವನ ಮದುವೆಗೆ ಐದು ಪಾಂಚಾಲಕರನ್ನು ನೇಮಿಸುತ್ತಾರೆ. ಅವರು

೧. ಚಳಿ ಜ್ವರ ಇಲ್ಲದೆ ಬೆಂಕಿ ಕಾಯುವವನು – ಆಚಾರ್ಯ ಕುಲದವರು

೨. ಉಪ್ಪು ಕಾರ ಇಲ್ಲದೆ ಕೈ ನೆಕ್ಕುವನು – ದೇವಾಂಗ ಕುಲದವರು

೩. ಮಧ್ಯ ತಾಳ ಇಲ್ಲದೆ ನಾಟಕವಾಡುವವರು - ಕುಂಬಾರರು

೪. ನೋವು ನೂಲಿಗೆ ಇಲ್ಲದೆ ಮೈಮರಿಯುವವನು - ಆಗಸನು

೫. ಸಾಲ ಇಲ್ಲದೆ ಕಲ್ಲುವರಿಯುವವನು - ಬಜಂತ್ರಿ

ಹೀಗೆ ಪಾಂಚಾಲಕರನ್ನು ನೇಮಿಸಿ ಮದುವೆ ಮಾಡಿಸುವುದಕ್ಕೆ ಪ್ರಾರಂಭಿಸುತ್ತಾರೆ. ಆದರೆ ವಿಶ್ವಕರ್ಮ ಬಂದು ಜಾಂಬವಂತ ತಾತನನ್ನು ನಾನು ಅಗಸ್ತ್ಯನನ್ನು ಸಾಯಿಸುವುದಕ್ಕೆ ಮೂರು ಮಂತ್ರಗಳನ್ನು ಉಪಯೋಗಿಸಿದ್ದೇನೆ. ಈಗ ಏನು ಮಾಡುವುದು ಎಂದು ಹೇಳಿದಾಗ ಜಾಂಬವಂತನು ಭೂದೇವಿಗೆ ಬಲಿಕೊಟ್ಟ ಯುಗಮುನಿಯ ಅಂಗಾಂಗಗಳನ್ನು ತೆಗೆದು ತಲೆ ಬುರಡೆಯನ್ನು ಅಡಿಗಲ್ಲು ಮಾಡಿ, ಕಣ್ಣುಗಳನ್ನು ಸುಲೋಚನ ಮಾಡಿ, ಮೂಗನ್ನು ಕೊಳವೆ ಮಾಡಿ, ಕಿವಿಗಳ ಗೂಗಿಯನ್ನು ಲಕ್ಕಅಗರ ಮಾಡಿ, ನಾಲಿಗೆಯನ್ನು ಆಕ್ರಾಯಿ ಮಾಡಿ, ಕೈಗಳನ್ನು ಸುತ್ತಿಗೆ ಮಾಡಿ, ಬೆರಳುಗಳನ್ನು ಸಂಧಿ ಹಿಕ್ಕಳ ಮಾಡಿ, ಕಾಲುಗಳನ್ನು ಚಮ್ಮಟೆಗೆ ಮಾಡಿ, ಗುಂಡಿಗೆಯನ್ನು ಮುಸೆ ಮಾಡಿ, ಹೀರುವ ಮತ್ತು ದೊಮ್ಮೆಯನ್ನು ಇದ್ದಿಲು ಮಾಡಿ, ಹೊಟ್ಟೆಯೊಳಗಿನ ಕಲ್ಮಶವನ್ನು ನೆಲ್ಲು ಹುಟ್ಟೆ ಮಾಡಿ, ತಲೆ ಮೆದುಳು ಎಲಿಗಾರ ಮಾಡಿ, ಅಂಗೈಗಳನ್ನು ತಕ್ಕಡಿ ಮಾಡಿ, ಪಕ್ಕ ಎಲುಬುಗಳನ್ನು ಕಬ್ಬಿಣ ಉಕ್ಕು ಮಾಡಿ, ಮೈ ಚರ್ಮವನ್ನು ಕೈ ತಿತ್ತಿಗಳನ್ನು ಮಾಡಿ, ಉಗುರುಗಳನ್ನು ಪಾಗರೆಗಳನ್ನಾಗಿ ಮಾಡಿ, ಹಲ್ಲುಗಳನ್ನು ಭಾಗಳಸಿ ಮಾಡಿ, ನರಗಳನ್ನು ಕೂರಿಗೆ ಬಿಗಿಯುವ ದಾರಗಳನ್ನಾಗಿ ಮಾಡಿ, ಕಂಠ ಕೊಲಿಮೆಗೆ ಕೊಳವೆ ಮಾಡಿ, ಪುರುಷ ಬೀಜಗಳನ್ನು ಸಣ್ಣ ಸುತ್ತಿಗಳನ್ನಾಗಿ ಮಾಡಿ ಇವುಗಳನ್ನು ತೆಗೆದುಕೊಂಡು, ಹಿಂದೆ ತಿರುಗಿ ನೋಡದೇ ಹೋಗಿ ನಿನ್ನ ಕೆಲಸವನ್ನು ಪ್ರಾರಂಭಿಸು ಎಂದು ಹೇಳಿ ಕಳಿಸುತ್ತಾನೆ.

ವಿಶ್ವಕರ್ಮ ಆ ವಸ್ತುಗಳನ್ನು ತೆಗೆದುಕೊಂಡು ಬೆಳ್ಳಿ ಬೆಟ್ಟ ಮತ್ತು ಬಂಗಾರದ ಬೆಟ್ಟಕ್ಕೆ ಮಧ್ಯೆ ಕುಲುಮೆಯನ್ನು ಇಟ್ಟು ಬಂಗಾರ ಕರಗಿಸುವುದಕ್ಕೆ ಪ್ರಾರಂಭ ಮಾಡುವ ಮುನ್ನ ಏನಾದರೂ ಮರೆತಿದ್ದೇನಾ ಎಂದು ಹಿಂದೆ ತಿರುಗಿ ನೋಡುತ್ತಾನೆ. ಆಗ ಅಗಸ್ತ್ಯನು ಕೊಟ್ಟ ಶಾಪ ಯುಗಮುನಿಯ ದಟ್ಟದ ಮೇಲೆ ಕುಳಿತುಕೊಳ್ಳುತ್ತದೆ. ಉಳಿದ ಮೂಳೆ ಮತ್ತು ಮಾಂಸವನ್ನು ತೆಗೆದುಕೊಂಡು ಮಗನನ್ನು ಬದುಕಿಸುತ್ತೇನೆ ಎಂದು ತೆಗೆದುಕೊಳ್ಳಲು ಬಂದಾಗ ವಿಶ್ವಕರ್ಮ ಹಿಂತಿರುಗಿ ನೋಡಿದನ್ನು ಜಾಂಬವಂತ ನೋಡುತ್ತಾನೆ. ಏಕೆ ಮಂತ್ರ ಹಾಕಿದರು ಮಗ ಬದುಕಲಿಲ್ಲ? ಇದು ವಿಶ್ವಕರ್ಮ ನೋಡಿದ್ದರಿಂದ ನನ್ನ ಮಗ ಬದುಕಲಿಲ್ಲ ಎಂದು ಜಾಂಬಮುನಿ ತಿಳಿದು ದಕ್ಕೆಯನ್ನು ತೆಗೆದುಕೊಂಡು ಹೋಗಿ ಗೋಡೆಯ ಮೇಲೆ ಇಟ್ಟು ಮಠದಲ್ಲಿ ಕುಳಿತು ಅಳುತ್ತಿರುತ್ತಾನೆ. ಇಲ್ಲಿ ದೇವತೆಗಳು ಶಿವ-ಪಾರ್ವತಿಯ ಮದುವೆ ಮಾಡುವ ಸಂತೋಷದಲ್ಲಿ ಇರುತ್ತಾರೆ. ದೇವಲೋಕದ ನಾರದರು ಆದಿ ಜಾಂಬವ ತಾತ ಬರಲಿಲ್ಲ ಎಂದು ನೋಡುತ್ತಾನೆ. ಜಾಂಬವಂತ ಅಳುತ್ತಿರುವ ಕಣ್ಣೀರು ಕಾಲುವೆಯಾಗಿ ಹರಿಯುತ್ತಿರುತ್ತದೆ. ಆಗ ದೇವತೆಗಳು ಸೂರ್ಯ ನಮಸ್ಕಾರ ಮಾಡುವುದಕ್ಕೆ ಕೋನೆರಿಯಲ್ಲಿ ಕೈ ಕಾಲು ತೊಳೆಯಲು ಬಂದಾಗ

ನೀರು ವಾಸನೆ ಬರುವುದನ್ನು ಗಮನಿಸುತ್ತಾರೆ. ತೆಂಗಿನ ಕಾಯಿ ನೀರಿಗಿಂತ ಈ ನೀರು ಶ್ರೇಷ್ಠವಾಗಿತ್ತು. ಯಾಕೆ ವಾಸನೆ ಬರುತ್ತಿದೆಯಲ್ಲ ಎಂದಾಗ ನಾರದರು ಈ ನೀರು ಜಾಂಬವ ತಾತನ ಕಣ್ಣೀರು ಎಂದು ಹೇಳುತ್ತಾನೆ. ನಂತರ ನಾರದರು ಎಲ್ಲ ಕೆಲಸ ಮಾಡುವುದಕ್ಕೂ ತಾತನನ್ನು ಮುಂದೆ ಇಡುತ್ತಿದ್ದಿರಿ ಆದರೆ ಮದುವೆಗೆ ಕರೆಯಲಿಲ್ಲ ಎಂದಾಗ ಜಾಂಬವ ತಾತ ಎಲ್ಲಿ ಎಂದಾಗ ಮಠದಲ್ಲಿ ಕುಳಿತು ಅಳುತಿದ್ದಾನೆ ಎಂದು ಹೇಳುತ್ತಾನೆ. ದೇವತೆಗಳು ಜಾಂಬವಂತನನ್ನು ಕರೆಯಲು ಹೇಳುತ್ತಾರೆ. ಆಗ ನಾರದರು ಬಂದು ಕರೆದಾಗ ಆಗ ಜಾಂಬಂತ ಹೇಳುವವನಿಗೆ ಏನು ಗೊತ್ತು? ಮುಟೆ ಹೊರಿಯುವವನಿಗೆ ಗೊತ್ತು ಅದರ ನೋವು! ಎಂದು ಹೇಳಿ ಕಳಿಸುತ್ತಾನೆ. ಆಗ ನಾರದರು ದೇವತೆಗಳಿಗೆ ಜಾಂಬವಂತ ಹೇಳಿದ ವಿಷಯವನ್ನು ಹೇಳುತ್ತಾನೆ. ಆಗ ದೇವತೆಗಳು ಬಂದು ಜಾಂಬವಂತನನ್ನು ಕೇಳಲು ತನ್ನ ಮಗ ಸತ್ತಿದ್ದಾನೆ. ಅವನನ್ನು ಬದುಕಿಸಿಕೊಳ್ಳಲು ಪ್ರಯತ್ನಿಸಿದೆ ಆದರೆ ವಿಶ್ವಕರ್ಮ ಹಿಂತಿರುಗಿ ನೋಡಿದ್ದರಿಂದ ನನ್ನ ಮಗನಿಗೆ ಪ್ರಾಣ ಬರಲಿಲ್ಲ ಎಂದು ಹೇಳುತ್ತಾನೆ. ಆಗ ದೇವತೆಗಳು ತಮ್ಮ ಶಕ್ತಿಯನ್ನು ಉಪಯೋಗಿಸಿ ದಕ್ಕೆಯ ಮೇಲೆ ಬಿಡುತ್ತಾರೆ. ಆಗ ಧಕ್ಕೆಯಿಂದ ಒಂದು ಮಗು ಮಾಂಸದಿಂದ ಒಂದು ಮಗು ಹುಟ್ಟುತ್ತಾರೆ. ಹೀಗೆ ದಕ್ಕೆಯಿಂದ ಹುಟ್ಟಿದ ದಕ್ಕಲ ಮುನಿ, ಮಾಂಸದಿಂದ ಹುಟ್ಟಿದ ಮಾಸ್ಪೀಕನು ಎಂದು ಮುಂದೆ ಪ್ರಸಿದ್ಧಿಯಾಗುತ್ತಾರೆ. ನಂತರ ಆದಿಜಾಂಬವ ನನ್ನ ಶಕ್ತಿಯಿಂದ ಈ ಮಗು ಹುಟ್ಟಲಿಲ್ಲ. ದೇವತೆಗಳ ಶಕ್ತಿಯಿಂದ ಹುಟ್ಟಿರುವವನು ದಕ್ಕಲಮುನಿ. ಹಾಗಾಗಿ ಇವನು ಯಾರಿಗೂ ದಕ್ಕದವನು ಎಂದು ಹೇಳುತ್ತಾನೆ.

ಹೀಗೆ ದಕ್ಕಲಮುನಿ ಮಾದಿಗರಲ್ಲಿ, ಮಾಸ್ಪೀಕರಲ್ಲಿ, ಸಿಂಧ್ ಮಾದಿಗರಲ್ಲಿ ಬಿಟ್ಟು ಬೇರೆ ಯಾರ ಮನೆಗಳಲ್ಲಿ ಭಿಕ್ಷೆ ಬೇಡುವ ಹಾಗಿಲ್ಲ. ಮಾದಿಗರೆ ಇವರಿಗೆ ಆಶ್ರಯದಾತರು. ದಕ್ಕಲಿಗನು ಮಾದಿಗ ಮನೆಗೆ ಬಂದರೆ, ಭಿಕ್ಷೆ ಕೇಳಿದರೆ ಅವನನ್ನು ವಾಪಸ್ಸು ಕಳಿಸುವ ಹಾಗಿಲ್ಲ. ನಂತರ ಇವರ ಕಷ್ಟ-ಸುಖಗಳಿಗೆ ಮಾದಿಗರು ಕುಲಬಂಧುಗಳಾಗಿ ಸಹಕರಿಸುತ್ತಾರೆ ಎಂದು ಅಂದು ಆದಿಜಾಂಬ ನೀಡಿದ ವರನೆ ಇಂದು ದಕ್ಕಲ ಸಮುದಾಯಗಳು ಮುಂದುವರಿಸುತ್ತಿದ್ದಾನೆ. ಅಂದು ಆದಿಜಾಂಬ ಒಂದು ಪ್ರಶ್ನೆಯನ್ನು ಕೊಟ್ಟು ಇದೆ ನಿನಗೆ ಮನೆ ನಿನ್ನ ಆಹಾರ ಮಾದಿಗರ ಮನೆ ಎಂದು ಹೇಳಿದ ದಕ್ಕಲರಿಗೆ ಭೂಮಿಯ ಮೇಲೆ ಆಶ್ರಯ ಕಲ್ಪಿಸಿರುವ ಛತ್ರಿಯ ನೆರಳಲ್ಲಿ ನೀನು ವಾಸ್ತವ್ಯ ಹೂಡಬೇಕು ಎಂದು ಹೇಳಿರುವುದು. ಈ ಸಮುದಾಯಗಳು ಸಹ ಅದರ ಅಡಿಯಲ್ಲಿ ಜೀವನವನ್ನು ಸಾಗಿಸುತ್ತಾ ಇತ್ತೀಚಿಗೆ ಗುಡಿಸಲು ಮಣ್ಣಿನ ಮನೆಗಳನ್ನು ನಿರ್ಮಿಸಿಕೊಂಡಿರುವುದು ಎಂದು ಈ ಸಮುದಾಯದವರು ಹೇಳುತ್ತಾರೆ. ಒಂದು ವೇಳೆ ಭಿಕ್ಷೆ ನೀಡದೇ ಇದ್ದರೆ ಅವರಿಗೆ ಭೂಮಿ ಮೇಲೆ ಜಾಗ ಇಲ್ಲ ಎಂದು ಮುವತ್ತು ಮೂರು ಕೋಟಿ ದೇವತೆಗಳು ಸೂರ್ಯ, ಚಂದ್ರ, ಭೂಮಿ, ಆಕಾಶ, ಸಾಕ್ಷಿಯಾಗಿ ಹೇಳುತ್ತೇನೆ ಎಂದು ಆದಿ ಜಾಂಬವ ಮಾದಿಗರಿಗೆ ಹೇಳುತ್ತಾನೆ. ಹಾಗಾಗಿ ಮಾದಿಗರು ದಕ್ಕಲರನ್ನು ಮನೆ ಮಕ್ಕಳಾಗಿ, ದಕ್ಕಲ ಮಗನಾಗಿ ಭಿಕ್ಷೆಯನ್ನು ನೀಡಿ ಕಳಿಸುತ್ತಾರೆ ಎಂದು ದಕ್ಕಲ ನಾರಾಯಣಸ್ವಾಮಿ ಅವರು ಕ್ಷೇತ್ರಕಾರ್ಯದ ಸಮಯದಲ್ಲಿ ಮಾಹಿತಿ ನೀಡಿದ್ದಾರೆ.

**ಮೂರನೆಯ ಕಥೆ:** ದಕ್ಷಿಣ ಕರ್ನಾಟಕದವರು ಹೊಂದಿರುವ ಕಂಚಿ ಶಾಸನಂ ಕೈಫಿಯತ್ತು ಶುಭ ಕಂಚಿಶಾಸನ ಲಾಭ

"ಕಂಚಿ ಶಾಸನ ಬರೆಯುವುದಕ್ಕೆ ಶುಭಮಸ್ತು ಶೋಬಾನ ಮಸ್ತು"
॥ ಶ್ಲೋಕಂ ॥
ನಭೋಮಿನಚ । ನಚಲಂ । ಜೈನವಚಃ । ತೇಜೋನಚ ।
ವಾಯುವು ನಮಃ । ನಕಾಶಕನಚಲ । ಚತಂ । ಚಲನಂ ।
ಬುದ್ದಿಯೇ ಗೋಚರ । ನಚವಿಷ್ಣು । ನಚರುದ್ರ
ಶ್ವೇತಾರಕ । ಸರ್ವಶೂನ್ಯ ।
ನೀಲಂಭ । ಬುದ್ದಿ ಶ್ರೀ ಕರ್ಣಂ ।

ಭೂಮಿ ಇಲ್ಲದ ವೇಳೆಯಲ್ಲಿ, ಜಲವಿಲ್ಲದ ವೇಳೆಯಲ್ಲಿ, ವಾಯುವಿಲ್ಲದ ವೇಳೆಯಲ್ಲಿ, ಸೂರ್ಯ, ಚಂದ್ರ, ಅಂಗಾರಕ, ಬುಧ, ಬೃಹಸ್ಪತಿ, ಶುಕ್ರ, ಶನಿ, ರಾಹು, ಕೇತು, ನವಗ್ರಹಗಳು ಇಲ್ಲದ ವೇಳೆಯಲ್ಲಿ, ಕಾಮ, ಕ್ರೋದ, ಲೋಭ, ಮದ, ಮತ್ಸರ, ಅಹಂಕಾರ ಮೂಲಕೃತಿಗಳಿಲ್ಲದ ವೇಳೆಯಲ್ಲಿ ಸಾಕ್ಷಾತ್ ವಿಶ್ವರೂಪವಾದ ಭಗವಂತನು ವಿಶ್ವರೂಪವನ್ನು ತಾಳಿದ.

ಸಹಸ್ರ ಕಲೆಗಳಿಂದ, ಸಹಸ್ರ ಬಾಹುಗಳಿಂದ, ಸಹಸ್ರ ನೇತ್ರಗಳಿಂದ, ಸಹಸ್ರ ಕರ್ಣಗಳಿಂದ, ಸಹಸ್ರ ಶಿರಸ್ಸುಗಳಿಂದ ಸಹಸ್ರ ಪಾದಗಳಿಂದಲೂ ವಿಶ್ರರೂಪವನ್ನು ನಿರ್ಮಿಸುವುದಕ್ಕೆ ವಿಶ್ವರೂಪವನ್ನು ಧರಿಸಿ ಭಗವಂತನ ಹೆಸರಿನಿಂದ ಇರಲು, ಆಗ ಅಂದರೆ ನನ್ನಿಂದ ಜಗತ್ತು ನಿರ್ಮಿತವಾಗಬೇಕೆಂದು ಯೋಚಿಸಿ ಆತ್ಮಯವಾದ ಜಲದಲ್ಲಿ ಒಂದು ಶಂಕುವನ್ನು ನಿರ್ಮಿಸಿ ಆ ಶಂಕುವಿನಲ್ಲಿ ತನ್ನ ಸಹಸ್ರ ಕಲೆಗಳಂ ತುಂಬಿದನು. ಆ ಶಂಕುವಿನಲ್ಲಿ ಉತ್ಪತ್ತಿಯಾದ ಬಲ್ಲೂಕಪತಿ, ಆದಿಜಾಂಬವಂತನು ಉದ್ಭವಿಸಿದನು. ಈ ಪ್ರಕಾರ ಹುಟ್ಟಿದಂಥ ಜಾಂಬಮುನಿಯನ್ನು ಜಂಬೂ ದ್ವೀಪಾಂತರಕ್ಕೆ ತಪಸ್ಸಿಗೆ ಹೋಗು ಎಂದು ಸಾಕ್ಷಾತ್ ಭಗವಂತನು ಅಪ್ಪಣೆಯಂ ಕೊಡಲು, ಜಂಬು ಮುನಿಯು ಜಾಂಬೂ ದ್ವೀಪಾಂತರಕ್ಕೆ ಹೋಗಿ ಜಂಬೂಕ ನದಿಯ ಹತ್ತಿರ ತಾವರೆ ಕಮಲದ ಮೇಲೆ ಕುಳಿತು ತಪಸ್ಸು ಮಾಡುತ್ತಿರಲು

ಶ್ಲೋಕಂ: "ಗುರುಬ್ರಹ್ಮ ತಸ್ಮಯ ಶ್ರೀ ಗರುವೇ ನಮಃ"
ಒಂದಾನೊಂದು ಕಾಲದಲ್ಲಿ ಪಂಚವಂಶಿತ ಕೋಟಿ ಯೋಜನೆ ವಿಸ್ತೀರ್ಣ ನಿರ್ಮಾಣಕ್ಕೆ
ಶ್ಲೋಕಂ: ಆದಿಶಕ್ತಿ ಮಯಂ ॥ಬೀಜಂ॥ ಬೀಜ ಶಕ್ತಿ ಮಯಂ ॥ಶಿವಂ॥
ಶಿವಶಕ್ತಿಮಯಂ ॥ವಿಷ್ಣುಂ॥ ಸರ್ವ ವಿಷ್ಣುಮಯಂ ॥ಜಗತ್ತು॥

ಎಂಬ ಸೃಷ್ಟಿಯ ಪ್ರಕಾರ ಶ್ರುತಿ ಪ್ರಮಾಣದಂತೆ ಈ ಮೂರು ಮಂದಿ ಶಕ್ತಿಯರಿಂದ ಜಗತ್ತು ಉದ್ಭವಿಸಬೇಕೆಂದು ಸೃಷ್ಟಿಗೆ ಬ್ರಹ್ಮನೇ ಕರ್ತನೆಂದು ಅಭಿದಾನವಿತ್ತು, ಇವರುಗಳಲ್ಲಿ ಸಮಸ್ತ ಕಥೆಗಳನ್ನು ಶಿವನು ಕೊಟ್ಟ ಮಾತ್ರಕ್ಕೆ ಸಾಕ್ಷಾತ್ ವಿರಾಟ್ ಪುರುಷನಾದ ಕಾರಣ ಭಗವಂತನು

ಸದ್ಯೋಜಾತ, ವಾಮದೇವ, ಅಗೋರ, ತತ್ಪುರುಷ, ಈಶಾನ್ಯ ಎಂಬ ಐದು ಮುಖಗಳಿಂದ ಜಲಮಯವಾದ ಮಹಾ ಪ್ರಳಯವನ್ನು ಪೂರ್ವ ದೃಷ್ಟಿಯಿಂದ ನಿರೀಕ್ಷಿಸಿ ನೋಡಲಾಗಿ ಅಂಥ ಜಲದಲ್ಲಿ ಒಂದು ಕಳಿಯೆ ಆದಿ ಜಾಂಬುವಂತನಾಗಿ ಹುಟ್ಟಿ ತಾವರೆ ಕಮಲದ ಮೇಲೆ ಕುಳಿತು ಇರುವುದನ್ನು ಕಂಡು. ವಿರಾಟ ಪುರುಷನಾದ ಭಗವಂತನು, ಸದ್ಯೋಜಾತ ಮುಖವೆಂಬ ಕಮಲದಿಂದ ವಿರಾಟ್ ಬ್ರಹ್ಮ ವಿಶ್ವವನ್ನು ಉತ್ಪತ್ತಿ ಮಾಡಬೇಕೆಂದು ಯೋಚಿಸಿ ತಪಸ್ಸಿಗೆ ಹೋದನು. ಆದಿ ಜಲ ಜಾಂಬವರ ಬಳಿಗೆ ಒಬ್ಬ ಮಾಯ ಶಕ್ತಿಯನ್ನು ನಿರ್ಮಿಸಿ ಆಕೆಗೆ ಚಂದ್ರಕಾಮಧಾರೆ ಕನ್ಯೆ ಎಂದು ಹೆಸರಿಟ್ಟು, ಆಕೆಯನ್ನು ಜಾಂಬುವಂತರ ಬಳಿಗೆ ತಪೋಭಂಗಕ್ಕೆ ಕಳಿಸಲಾಗಿ ಅಂಥ ಶಕ್ತಿಯು ತಪಸ್ಸಿನ ಜ್ವಾಲೆಗೆ ನಿಲ್ಲಲಾರದೇ ಇವರ ಮೇಲೆ ಆಪೇಕ್ಷೆಯಿಂದ ಅವರ ರೂಪು, ರೇಖೆ, ಸೌಂದರ್ಯವನ್ನು ನೋಡಿ ಸಂತೋಷವಂ ಪಟ್ಟು ನಿಂದಿರಲು ಅಷ್ಟು ಮಾತ್ರಕ್ಕೆ ಇವಳಿಗೆ ಗರ್ಭ ದಾನವು ಉಂಟಾಗಿ ನವ ಮಾಸಗಳು ತುಂಬಿ ಏಳು ಮಂದಿ ಮಕ್ಕಳು ಹುಟ್ಟಿದರು, ಆದಿಶಕ್ತಿ ಗರ್ಭದಲ್ಲಿ ಅಂಡಾ, ಪಿಂಡಾ, ಬ್ರಹ್ಮಾಂಡಗಳು, ತ್ರಿಮೂರ್ತಿಗಳು ಹುಟ್ಟಿದರು. ಜಾಂಬವರ ವಂಶಭೂತರಾಗಿ ಹುಟ್ಟಿದಂತ ಮಕ್ಕಳಿಗೆ ಜಗಮುನಿ, ಬಿಗಿಮುನಿ, ಯುಗಮುನಿ, ಜಗತ್ತುಮುನಿ, ಹೆಪ್ಪುಮುನಿ, ರಕ್ತಮುನಿ ಹಾಗೂ ಕೊನೆಯ ಮಗನಿಗೆ ಗುರುಮುನಿ ಎಂದು ಹೆಸರುಗಳನ್ನಿಟ್ಟು, ಅನಂತರ ಆದಿ ವಿಷ್ಣುವಿನ ನಾಭಿ ಕಮಲದಲ್ಲಿ ಚತುರ್ ಬ್ರಹ್ಮ ಹುಟ್ಟಿದನು. ಚತುರ್ ಬ್ರಹ್ಮನಿಗೆ ದೇವ ಬ್ರಹ್ಮ ಹುಟ್ಟಿದನು. ದೇವ ಬ್ರಹ್ಮನಿಗೆ, ಆದಿ ಬ್ರಹ್ಮ ಹುಟ್ಟಿದನು. ಆದಿ ಬ್ರಹ್ಮನಿಗೆ ಶಿವಬ್ರಹ್ಮ ಹುಟ್ಟಿದನು. ಶಿವಬ್ರಹ್ಮನಿಗೆ ಪುಲಸ್ಯ ಬ್ರಹ್ಮ ಹುಟ್ಟಿದನು. ಪುಲಸ್ಯ ಬ್ರಹ್ಮನಿಗೆ ಪೂಜಾರಿ ಬ್ರಹ್ಮ ಹುಟ್ಟಿದನು. ಪೂಜಾರಿ ಬ್ರಹ್ಮನಿಗೆ ಸುಖ ಬ್ರಹ್ಮ ಹುಟ್ಟಿದನು. ಸುಖಬ್ರಹ್ಮನಿಗೆ ನವಬ್ರಹ್ಮ ಹುಟ್ಟಿದನು. ನವಬ್ರಹ್ಮನಿಗೆ ಕಶ್ಯಪ ಬ್ರಹ್ಮ ಹುಟ್ಟಿದನು. ಕಶ್ಯಪ ಬ್ರಹ್ಮನಿಗೆ ದೇವೇಂದ್ರನು ಹುಟ್ಟಿದನು.

ದೇವೇಂದ್ರನು ಅಸ್ಥಿರ ಸಮ್ಮಯಂಗಳಂ ಹೆಸರು ಉಂಟು ಮಾಡಿ ಯಾವುದೆಂದರೆ, ಅದಿ, ಅಳಂದರ, ಕಳಂದರ, ಅನಂತ, ಅದ್ಭುತ, ತಂಡಜ, ತಾರಜ, ಬಿನ್ನಜ, ಆಯುಕ್ತ, ಅನುದಾಯುಕ್ತ, ಮಣಿರಣ, ಮಾನ್ಯರಣ, ವಿಶ್ವರಮ, ವಿಶ್ವವಶು, ಅಲಂಕೃತ, ತಮಂದ, ತಾಳಂದರ, ಕೃತಯುಗ, ಶ್ವೇತಾಯುಗ, ದ್ವಾಪರಯುಗ, ಕಲಿಯುಗವೆಂದು ಇವುಗಳಿಗೆ ಹೆಸರುಗಳನ್ನಿಟ್ಟು ಅಲ್ಲಿಂದ ಈಚೆ, ವಿರಾಟ್ ವಿಶ್ವ ಬ್ರಹ್ಮನು ಕೂಡಿಸಿ ಈ ಜಲಮಯವಾಗಿರುವ ಜಗತ್ತನ್ನು ಆದಿ ಜಾಂಬುವರ ಒಂದನೇ ಮಗ ಜಗಮುನಿಯಿಂದ ಜಗತ್ತು ಎಂಬುದಾಗಿ ಕರೆದು, ಎರಡನೇ ಮಗ ಬಿಗಿಮುನಿಯಿಂದ ಜಗತ್ತಿನ ಜಲವನ್ನು ಹೀರಿಸಿ, ಮೂರನೇ ಮಗ ಯುಗಮುನಿಯಿಂದ ಜಲವನ್ನು ಕೂಡಿಸಿ, ನಾಲ್ಕನೇ ಮಗ ಜಗತ್‌ಮುನಿಯಿಂದ ಜಲವನ್ನು ಹೆಪ್ಪುಮಾಡಿಸಿ, ಐದನೇ ಮಗ ಹೆಪ್ಪುಮುನಿಯಿಂದ ರಕ್ತ ಮಾಂಸಾದಿಗಳನ್ನು ಉಂಟುಮಾಡಿ, ಉಳಿದ ಎರಡು ಮಕ್ಕಳಾದ ರಕ್ತಮುನಿ ಮತ್ತು ಗುರುಮುನಿ ಇವರನ್ನು ಜಲಪ್ರಳಯಕ್ಕೆ ಭೇದಿಸಿ, ಭೂಮಿಗೆ ಹೆಪ್ಪು ಕೊಟ್ಟು ಭೂಮಿಯು ಜಂಬೂ ದ್ವೀಪವೆಂದು ಹೆಸರಾಯಿತು.

ಇಲ್ಲಿಂದ ತ್ರಿಮೂರ್ತಿಗಳು, ಮೂವತ್ತು ಮೂರು ಕೋಟಿ ದೇವತೆಯರಿಗೂ ಇನ್ನು ನಿರ್ಮಿತವಾಗುವಂತ ಸಮಸ್ತರಿಗೂ ಮೋಕ್ಷ ಉಂಟು ಮಾಡುವ ಸಾಮಗ್ರಿಗಳನ್ನು, ನಿರ್ಮಿಸುವುದಕ್ಕೆ ಪರಮೇಶ್ವರನು, ವಿಶ್ವಬ್ರಹ್ಮನು, ಆದಿಜಾಂಬವರು ಸೇರಿ ಸಾಕ್ಷತ ಶಿವನ ನವಮಂತ್ರಗಳಿಂದ ಶಿವ ಚಲ್ಲೆ ಒದಿಸಿ, ತೀರ್ಥವನ್ನು ಹಾಕಿ ಇಬ್ಬರು ಮಕ್ಕಳನ್ನು ಎಬ್ಬಿರಿಸಿ ಅವರಲ್ಲಿಯ ಹಿರಿಯ ಮಗನ ಶರೀರವನ್ನು ಕತ್ತರಿಸಿ, ಮುಂದೆ ಯಜ್ಞಸೂತ್ರ, ಮಂಗಳಸೂತ್ರ, ಕಾಲುಸೂತ್ರ ನಿರ್ಮಿಸುವುದಕ್ಕೆ ಈ ಮಗನ ತಲೆಬುರುಡೆಯನ್ನು, ಅಡಿಗಲ್ಲು ಮಾಡಿ ಕಣ್ಣುಗಳನ್ನು ಸುಲೋಚನ ಮಾಡಿ, ಕಿವಿಗಳನ್ನು ತ್ರಾಸು ಮಾಡಿ ಮೂಗನ್ನು ಊದು ಕೊಳವೆ ಮಾಡಿ ಗುಂಡಿಗೆಯನ್ನು ಮೂಸೆ ಮಾಡಿ ನಾಲಿಗೆಯನ್ನು ವರೆ ಹಚ್ಚುವ ಕಲ್ಲು ಮಾಡಿ ತಲೆಯ ಮೆದಳನ್ನು ಬಿಳಿಗಾರ ಮಾಡಿ, ಹಲ್ಲುಗಳನ್ನು ಹಠಗಳನ್ನಾಗಿ ಮಾಡಿ ಉಗುರುಗಳನ್ನು ಸಣ್ಣ ಪಾಗರಿಗಳನ್ನು ಮಾಡಿ, ಎರಡು ಪಕ್ಷದ ಚರ್ಮವನ್ನು ಸುಲಿದು ಬೆನ್ನುರಿ ಬೀವುಗಳಿಂದ ಹೊಲಿದು ತಿದಿಗಳಂ ಮಾಡಿ ಬೆರಳುಗಳನ್ನು ಶ್ರವಣ ಮಾಡಿ, ಎದೆಯಲ್ಲಿನ ರಕ್ತ ಹೀರಿ ದೊಮ್ಮೆಯನ್ನು ಇದ್ದಿಲು ಮಾಡಿ, ಹೊಟ್ಟೆಯೊಳಗಿನ ಕಲ್ಮಸವನ್ನು ನೆಲ್ಲು ಹೊಟ್ಟು ಮಾಡಿ ಕೈಗಳನ್ನು ಸುತ್ತಿಗೆ ಮಾಡಿ, ಕಾಲುಗಳನ್ನು ಚಮಟಿಗೆ ಮಾಡಿ, ಬಗ್ಗುರಿ ಎಲುಬುಗಳನ್ನು ಕಬ್ಬಿಣ ಹುಕ್ಕುಗಳನ್ನಾಗಿ ಮಾಡಿ, ಕಿವಿಯಲಿರುವ ಗುಗ್ಗೆಯನ್ನು ಅರಗು ಮಾಡಿ ಮತ್ತೊಂದು ಬಗ್ಗುರಿಯನ್ನು ಕಂಡಶ ಮಾಡಿ, ಪ್ರಪಂಚಕ್ಕೆ ಆಧಾರವಾದ ಸಾಮಾಗ್ರಿಗಳನ್ನು ಮಾಡಿದರು. ಜಾಂಬುಮುನಿ ವಿಶ್ವಬ್ರಹ್ಮನು ಶಿವನ ಮಂತ್ರೋಪದೇಶದಿಂದ ಕಿರಿಯ ಮಗನ ದೇಹದ ದೊಕ್ಕೆಯಲ್ಲಿ ದಕ್ಕದ ಮುನಿ ಹುಟ್ಟಿದನು. ಮಾಂಸದ ಮಾಚಳ ಹುಟ್ಟಿದನು.

ಶ್ಲೋಕಂ: "ಸ್ತ್ರೀ ಹತ್ಯೆ ಬದ್ಧತೆ, ಕೋಟಿಯುಗ ಮುಕ್ತರಂ
ಗೋಹತ್ಯೆ, ಬಾಲಹತ್ಯೆ, ಕೋಟಿ ಹತ್ಯೆ, ಬ್ರಹ್ಮಹತ್ಯೆ"

ಬ್ರಹ್ಮಕಲ್ಪಿತುಂ ಎಂಬ ಸೃಷ್ಟಿಯ ಪ್ರಕಾರ ಈ ಜಗತ್ತನ್ನು ನಿರ್ಮಾಣ ಮಾಡಲು ಆದ್ಯ ತಂದೆಯಾದ ಜಾಂಬು ಮುನಿಯ ಮಗನಾದ ದಕ್ಕದ ಮುನಿಗೆ ಅಭಯ ಕೊಟ್ಟಿದ್ದು ಬ್ರಹ್ಮನೇ ಸಾಕ್ಷಿ. ಸೂರ್ಯ-ಚಂದ್ರರೇ ಸಾಕ್ಷಿ, ಭೂಮಂಡಲವೇ ಸಾಕ್ಷಿ, ಆಕಾಶವೇ ಸಾಕ್ಷಿ, ತೊಂಭತ್ತಾರು ಕೋಟಿ ದೇವತೆಗಳೇ ಸಾಕ್ಷಿ, ಚಂದ್ರಾರ್ಕವಾಗಿ ನಿನಗೆ ಗ್ರಾಮ, ಗ್ರಾಮದಲ್ಲೂ ಕಮರಿ ಬೇಟೆ, ಸುರಾಪಾನ, ಅನ್ನ, ವಸ್ತ್ರ, ಕೊಡಲು ಒಪ್ಪಿದನು. ನಂತರ ಮಾಚಳನಿಗೆ ನಗಾರಿಕತ್ತಿ ಮುಂದು ಬಳಸುವ ಕಂಚುಕಾಳೆ ಈ ಬಿರುದುಗಳಿಂದ ಮಾಚಳ ನಿಂತರು. ಶಿವನು ವಿಶ್ವಬ್ರಹ್ಮನು ಆದಿಜಾಂಬವರು ಈ ದಕ್ಕದ ಮುನಿಗೆ, ಕ್ಷೀರಗಂಧ, ಶಿವದಾರ, ರುದ್ರಾಕ್ಷಿ, ಕಾವಿ, ಕಮಂಡಲ, ವಿಭೂತಿ, ಕೆಂಪು ಛತ್ರಿ, ತುದಿಗಾಲು ಪಾಪೋಸು, ವೇದ ಪುಸ್ತಕ ಈ ಬಿರುದುಗಳಿಂದ ದಕ್ಕದ ಮುನಿಯು ಬ್ರಹ್ಮನ ಜ್ಞಾನದಲ್ಲಿ ನಿಂತನು. ಅನಂತರ ಜಾಂಬುವರು ವಿಶ್ವಬ್ರಹ್ಮನು ಕಲೆತು ಉಂಟಾದ ಸಾಮಗ್ರಿಗಳಿಂದ ಕತ್ತಿಮನೆ, ಕುದುರಿನ ಮನೆ, ತ್ರಾಸಿನ ಮನೆ, ಗಂಟದ ಮನೆ, ನೇಗಿಲತುದಿ ಈ ಮುಖ್ಯ ಸಾಮಗ್ರಿಗಳನ್ನು ಉಂಟು ಮಾಡಿ ಸೃಷ್ಟಿಸಿದರೆ ಪ್ರಪಂಚಕ್ಕೆ

ಆಧಾರವಾಗುವವೆಂದು ಯೋಚಿಸಿ ಸಂತೋಷಪಟ್ಟರು. ಉಂಟಾದ ಸಾಮಗ್ರಿಗಳನ್ನು ಉಪಯೋಗಿಸಿ ಕೊಂಡು ಆಮೇಲೆ ಈ ಏಳು ಲೋಕಗಳನ್ನು ನಿರ್ಮಿಸಿ ಮನು, ಮಯ, ತ್ವಷ್ಟಿ ಶಿಲ್ಪಜ್ಞಾನೆಂಬ ಅಭಿದಾನ ಪಡೆದ ಮೇಲೆ ನಮೂದಿಸಿರುವ ಎಲ್ಲಾ ಯುಗಾಂತರಗಳನ್ನು ಕುರಿತು ಆಯಾ ಕಾಲಕ್ಕೆ ಸರಿಯಾಗಿ ಉತ್ಪತ್ತಿ ಅಂಗಗಳನ್ನು ವಿವರಿಸಿದರು. ಅದು ಹೇಗೆಂದರೆ ಅಲ್ಲಿಂದ ಆಚೆ ಪೂರ್ವಪರವನ್ನು ನೋಡಲಾಗಿ ಮಹಾಕೃತಿ ಆನಂದವು ಸಾಕ್ಷಾತ್ ಪಂಕಿವ್ರಹ ವಿಶ್ವಬ್ರಹ್ಮನು ಜಾಂಬುವರು ಉತ್ಪತ್ತಿಯಾದನಂತರ ನಾರಾಯಣನೆಂಬ ಅಭಿದಾನ ಉಂಟಾಯಿತು. ಆತ ನಾರಾಯಣ ನಾಭಿ ಕಮಲದಲ್ಲಿ ಜ್ಞಾನಶಕ್ತಿ, ತದ್ರೂಪನಾದ ಬ್ರಹ್ಮನು ಬಲಿಷ್ಠನಾಗಿ ಹುಟ್ಟಿದನು. ತಾರಜ ಎಂಬ ಯುಗದಲ್ಲಿ ಅಂಥ ಬ್ರಹ್ಮನಿಗೆ ಅಜನೆಂಬ ಹೆಸರಾಯಿತು. ತಂಡಜ ಎಂಬ ಯುಗದಲ್ಲಿ ಅಂಥ ಬ್ರಹ್ಮನಿಗೆ ಶುದ್ಧ ರೂಪವಾಯಿತು.

ಭಿನ್ನಜ ಎಂಬ ಹಂತ ಹಂತವು ಭಿನ್ನವಾಗಿ ಭಿನ್ನಾಯುಕ್ತ ಎಂಬ ಯುಗದಲ್ಲಿ ಆಕಾಶ, ವಾಯು, ಪಾರಿಜಾತಂಗಳು ಹುಟ್ಟಿದವು. ಆಯುಕ್ತ ಎಂಬ ಯುಗದಲ್ಲಿ ಆಕಾರಗಳು ಹುಟ್ಟಿದವು. ಅಮುದಾಯುಕ್ತ ಎಂಬ ಯುಗದಲ್ಲಿ ವಾಯುದೇವರು ಹುಟ್ಟಿದರು. ಮಣಿರಣ ಎಂಬ ಯುಗದಲ್ಲಿ ವಿಘ್ನೇಶ್ವರನು ಹುಟ್ಟಿದನು ಮಾನ್ಯರಣ ಎಂಬ ಯುಗದಲ್ಲಿ ಪೃಥ್ವಿ ಹುಟ್ಟಿತು. ವಿಶ್ವವಸು ಎಂಬ ಯುಗದಲ್ಲಿ ಕಾಮಧೇನು ಕಲ್ಪವೃಕ್ಷಗಳು ಹುಟ್ಟಿದವು. ಅಲಂಕೃತ ಎಂಬ ಯುಗದಲ್ಲಿ ಸರ್ವ ಅಲಂಕಾರಗಳು ಹುಟ್ಟಿದವು. ತ್ರೇತಾಯುಗದಲ್ಲಿ ಸಪ್ತನದಿಗಳು ಹುಟ್ಟಿದವು. ತ್ರೇತಾಯುಗದಲ್ಲಿ ಸಪ್ತನದಿಗಳು ಹುಟ್ಟಿದವು. ದ್ವಾಪರಯುಗದಲ್ಲಿ ಸಪ್ತಋಷಿಗಳು ಹುಟ್ಟಿದರು. ಕಲಿಯುಗದಲ್ಲಿ ನಾಲ್ಕು ವೇದಗಳು ಹುಟ್ಟಿದವು. ಅವು ಯಾವುವೆಂದರೆ ಋಗ್ವೇದ, ಯಜುರ್‌ವೇದ, ಅಥರ್ವಣ ವೇದ, ಸಾಮವೇದ ಎಂದು ನಾಲ್ಕು ವಿಭಾಗಗಳಾದವು. ನಂತರ ಆರು ಶಾಸ್ತ್ರಗಳು, ಅಷ್ಟದನು, ಹದಿನೆಂಟು ಪುರಾಣಗಳು ಕಲ್ಪಿಸಿ ಮುಂದೆ ಶ್ರೀಮದ್ರಮಣನಾದ ಕಾರಣ ಮಹಾವಿಷ್ಣುವು ನಾನಾ ರೂಪತಾಳಿ ಕುಲಗೋತ್ರಗಳು ವಿಂಗಡಣೆಗಳಾದವು. ಯಾವ ಮೇರೆಗೆ ಶ್ರೀ ಮದ್ರಮಣನಾದ ಮಹಾವಿಷ್ಣುವಿನ ನಾಭಿ ಕಮಲದಲ್ಲಿ ಬ್ರಹ್ಮ ಹುಟ್ಟಿದನು. ಬ್ರಹ್ಮನಿಗೆ ಮಾರೀಚ ಹುಟ್ಟಿದನು. ಮಾರೀಚನಿಗೆ ಕಶ್ಯಪ ಹುಟ್ಟಿದನು. ಜಲಜಾಪ್ತ ಮನುವಿಗೆ ವೈವಶ ಹುಟ್ಟಿದನು. ವೈವಶನಿಗೆ ವಿಕುಷಿ ಹುಟ್ಟಿದನು. ವಿಕುಷಿಗೆ ಅಂಬರೀಶ ಹುಟ್ಟಿದನು. ಅಂಬರೀಶನಿಗೆ ಅಕ್ಷತಾತ್ಮಜ ಹುಟ್ಟಿದನು. ಅಕ್ಷತಾತ್ಮಜನಿಗೆ ಬಾನು ಹುಟ್ಟಿದನು. ಬಾನುವಿಗೆ ಸರ್ವರೇಣ್ಯ ಹುಟ್ಟಿದನು. ಸರ್ವರೇಣ್ಯನಿಗೆ ತ್ರಿಶಂಕು ಹುಟ್ಟಿದನು. ತ್ರಿಶಂಕುವಿಗೆ ಹರಿಶ್ಚಂದ್ರ ಹುಟ್ಟಿದನು. ಹರಿಶ್ಚಂದ್ರನಿಗೆ ಲೋಹಿತಾಶ್ವ ಹುಟ್ಟಿದನು. ಲೋಹಿತಾಶ್ವನಿಗೆ ದುಂದುಬಿ ಮಹಾರಾಜ ಹುಟ್ಟಿದನು. ದುಂದುಬಿ ಮಹಾರಾಜನಿಗೆ ಸಮನಶ್ಯ ಹುಟ್ಟಿದನು. ಸಮನಸ್ಯನಿಗೆ ಸುನಂತ ಹುಟ್ಟಿದರು. ಸುನಂತನಿಗೆ ಅಂಬರೀಶ ಹುಟ್ಟಿದನು. ಅಂಬರೀಶನಿಗೆ ಉದಾಂತ ಸಾಗರ ಹುಟ್ಟಿದನು. ಉದಾಂತಿ ಸಾಗರನಿಗೆ ಕಾಕುಸ್ತ ಹುಟ್ಟಿದನು. ಕಾಕುಸ್ತನಿಗೆ ಕಲಶಾತ್ಮ ಹುಟ್ಟಿದನು. ಕಲಶಾತ್ಮನಿಗೆ ಆಮೀಶ ಹುಟ್ಟಿದನು. ಆಮೀಶನಿಗೆ ಸಾಗರ ಹುಟ್ಟಿದನು. ಸಾಗರನಿಗೆ ಸಮಂಜಯ ಹುಟ್ಟಿದನು. ಸಂಜಯನಿಗೆ ಡಿಂಬು ಹುಟ್ಟಿದನು. ಡಿಂಬುವಿಗೆ ರಘು

ಹುಟ್ಟಿದನು. ರಘುವಿಗೆ ಅಜನು ಹುಟ್ಟಿದನು. ಅಜನಿಗೆ ದಶರಥ, ದಶರಥನಿಗೆ ರಾಮ, ರಾಮನಿಗೆ ಲವಕುಶ, ಲವಕುಶರಿಗೆ ಬಿಂದು, ಬಿಂದುವಿಗೆ ಪ್ರತಾಪರುದ್ರ, ಪ್ರತಾಪರುದ್ರನಿಗೆ ನಂದಗೋಪಾಲ, ನಂದಗೋಪಾಲನಿಗೆ ವಾಸುದೇವ, ವಾಸುದೇವನಿಗೆ ಕುಮಾರನು ಶ್ರೀಕೃಷ್ಣನು ಹುಟ್ಟಿದನು. ಅನಿರುದ್ರ ಕುಮಾರ ಇಂದ್ರವಸು ಇವರುಗಳು ಸೂರ್ಯ ವಂಶದ ರಾಜರುಗಳು ಮುಂದೆ ಅತ್ರಿ, ಅತ್ರಿಗೆ ಚಂದ್ರನು ಹುಟ್ಟಿದನು. ಚಂದ್ರನಿಗೆ ಸಂತ ಗುಪ್ತರು ಹುಟ್ಟಿದನು. ಸಂತ ಗುಪ್ತನಿಗೆ ಪುರೋಹರನು ಹುಟ್ಟಿದನು. ಪುರೋಹರನಿಗೆ ದೇವದತ್ತು ಹುಟ್ಟಿದನು. ದೇವದತ್ತುವಿಗೆ ಆಕ್ಷೇರಾಮ, ಅಕ್ಷೇರಾಮನಿಗೆ ಸಾಂಕೃತನು, ಸಾಂಕೃತನಿಗೆ ಸಮಂಜಯ, ಸಮಂಜಯನಿಗೆ ವ್ಯಾಸನು, ವ್ಯಾಸನಿಗೆ ದೃತಪಾಂಡು ರಾಯರು, ದೃತ ಪಾಂಡುರಾಯನಿಗೆ ಅರ್ಜುನ, ಅರ್ಜುನನಿಗೆ ಅಭಿಮನ್ಯು ಹುಟ್ಟಿದನು. ಅಭಿಮನ್ಯುವಿಗೆ ಪರಿ?ತ್, ಪರಿ?ತ್‌ನಿಗೆ ಜನಮೇಜಯ, ಮನಮೇಜಯನಿಗೆ ರಾಜರಾಜ ನರೇಂದ್ರ, ರಾಜರಾಜ ನರೇಂದ್ರನಿಗೆ ಸಾರಂಗಂಧರನು ಹುಟ್ಟಿದನು ಇವರು ಚಂದ್ರವಂಶದ ರಾಜರುಗಳು.

ಕೃತಾಯುಗದಲ್ಲಿ ಕೂರ್ಮಕರ್ತರೆಂಬ ಕಾರಂಬ ಯುದ್ದವು ದ್ವಾಪರಯುಗದಲ್ಲಿ ಕೌರವ ಪಾಂಡವರ ಯುದ್ಧ, ತ್ರೇತಾಯುಗದಲ್ಲಿ ರಾಮರಾವಣರ ಯುದ್ದವು, ಕಲಿಯುಗದಲ್ಲಿ ಸಮಸ್ತ ರಾಜರುಗಳು ಯುದ್ಧಂಗಳು, ಕಂಚಿಕಾಮಾಕ್ಷಮ್ಮ ನವರ ಪಾದ ಸಾನಿಧ್ಯದಲ್ಲಿ ಮಹಾದೀಶರರು ಕೂಡಿ ನಿಶ್ಚಯಿಸಿ ತೀರ್ಮಾನಿಸಿದಂತಹ ಶಾಸನಕ್ಕೆ ಮಂಗಳ ನಿಜವೆಂದು ಶ್ರುತಿಸಿ ಒಂದಣ ಶ್ರೀ ಮದ್ವಿಜಯ, ಮಹೇಂದ್ರಿಗಿರಿ, ಬೃಂದ ಸಾಕ್ಷಾತ್ ಸತ್ಯ ವಿಚಾರದ ಸಭೆ ಸಂಪನ್ನರಾದಂತಹವರನ್ನು ಅತ್ರಿಕಾಮದೇನು. ಸರ್ವದೇವ ದಯಾಪರರು ನಿತ್ಯ ಅನ್ನದಾನ ವಿನೋದಗಳು ವಿದ್ಯಾದಶದೀತ್ಯರು ನವಬ್ರಹ್ಮರು, ದೃಷ್ಟಿ ನಿಗ್ರಹ ಶಿಷ್ಟ ಪರಿಪಾಲಕರು ಕಶ್ಯಪ ಪಾರದ್ವಜ, ವಿಶ್ವಮಿತ್ರ ಗೌತಮ, ಜಮದಗ್ನಿ, ವಶಿಷ್ಠ ಮಹಾಋುಷಿಗಳಿಗೆ ಗೋಸಂಗಿ ವಂಶಬೂತರಾದ ಅರಳಯ್ಯನವರ ಹಿರಿಯ ಮಗಳಾದ ಅರುಂಧತಿಯನ್ನು ವಶಿಷ್ಠರಿಗೆ ಕೊಟ್ಟು ಮದುವೆ ಮಾಡುವ ಕಾಲದಲ್ಲಿ ತಮ ತಮಗೆ ಮಾಡಿಕೊಟ್ಟಂತಹ ಈ ಮದುವೆಗೆ ಬಿರುದು ಬಾವಲಿಗಳು ಅಂದರೆ ೧೨ ಕಂಬ, ೧೨ ಕುಂಭ, ೧೨ ಪಂಜು, ಹನುಮ ಗರುಡ, ಭಗವನಿಶಾನಿಯಂ ಇಡಿಸಿ, ಕರಿಕಂಬಳಿ ಗದ್ದಿಗೆ, ಕೆಂಪು ನಾಲ್ಕು ಮೂಲೆಗಳ ತಾಳಿ ತೊಂಡಲ ಬಾಸಿಂಗ, ಮಲ್ಲಿಗೆ ಹೂವಿನಹಾರ, ಕೆಂಪು ಕುದುರೆ ವಾಹನ, ಜೋಡಿ ಕಳಸ, ಜೋಡಿ ಕನ್ನಡಿ, ವೀರಕಂಕಣ ದೇವತಾ ಮುದ್ರಿಕೆಗಳು, ಪಟಾವಳಿ ಭತ್ತಿ, ಶಾ ಯುದ್ಧ, ನಗಾರಿ ನೌಭತ್ತು, ಭೇರಿ, ಮೃದಂಗ, ತಪ್ಪಟೆ, ಸೋನಾಯಮೆಳ, ಸಣ್ಣ ಗೆಜ್ಜೆಗಳು, ಚಂದ್ರಕಾವಿ, ಮುಂಡಸ, ಮಲ್ಲಿಗೆ ಹೂವಿನ ತುರಾಯಿ, ಕೆಂಪುಭತ್ರಿ, ಬೆಳ್ಳಿ ಕಟ್ಟಿನ ಬೆತ್ತ, ಮುತ್ತೈದೆಯರಿಂದ ಸೋಬಾನ ಪದಗಳು ವಾದ್ಯಗಳಿಂದ ನೃತ್ಯ ಗೀತೆಗಳು ಮಾವಿನ ಎಲೆ, ಅಪ್ಪು ತೋರಣಗಳಿಂದಲೂ ಬೀಗರ ಭೋಜನ ಪೂರೈಸಿದ ನಂತರ ನಾಗವಲ್ಲಿಯ ಶಾಸ್ತ್ರ ಪೂರೈಸಿದ ನಂತರ ಈ ಮೆರವಣಿಗೆ ಆದ ನಂತರ ಈ ಮದುವೆ ಕೂಡಿದ ಮಹಾಋುಷಿಗಳು, ಗೋಸಂಗಿಯವರಿಗೆ ಈ ಮೂವತ್ತೆರಡು ಬಿರುದಾವಳಿಗಳು ನಿಮಗೆ ಇರಲೆಂದು ಒಪ್ಪಿಸಿದರು.

ಈ ಬಿರುದುಗಳು ಉಪ್ಪು, ನೀರು, ಭೂಮಿ, ಸೂರ್ಯ, ಚಂದ್ರ ಇವರು ಪರ್ಯಾಂತರ ನಿಮಗೆ ಇರಲೆಂದು ನೇಮಿಸಿದರು. ಅದಾದ ಮೇರೆಗೆ ಈ ಮೂಲವನ್ನು ಹಿಡಿದು ಕಲಿಯುಗದೊಳಗೆ ನಡೆಯುತ್ತಾ ಬರುವಲ್ಲಿ ಈ ಚತುರ್ದಶ ಭುಜನಕ್ಕೆ ಅಧಿಕೃತವಾದ ಮಹಾಕಂಚಿನಗರದೊಳಗೆ ಇರುವ ವರದರಾಜ ಸ್ವಾಮಿಯಂಗಳನ್ನು ಪ್ರಾರ್ಥಿಸಿದರು. ಈ ಗೋಸಂಗಿಯವರ ವಂಶಸ್ಥರಾದ ಆದಿ ಜಾಂಬವನ ಮಗನಾದ ಹುಲಿಯಪ್ಪನವರು ತನ್ನ ಮಗನಾದ ಮಾರಪ್ಪನ ಲಗ್ನ ಮಾಡುವ ಕಾಲದಲ್ಲಿ ಪ್ರಥಮ ಶಾಸ್ತ್ರಂ ದ್ವಿತೀಯ ಶಾಸ್ತ್ರಂ ಮಾಡಿ ಪೂರೈಸಿದ ನಂತರ ಐರಾಣಿ ಚಪ್ಪರದ ಕೆಂಪು ಕುದುರೆಯ ಮೇಲೆ ಮೆರವಣಿಗೆ ಬರುವ ಸಮಯದಲ್ಲಿ ಛಲವಾದಿಯವರ ಪೈಕಿ ವೀರಬಸಯ್ಯ ಎಂಬುವನು ಮಸಲತ್ತು ಮಾಡಿ ತನ್ನ ಕುಲಸ್ಥರನ್ನು ಕೂಡಿಸಿಕೊಂಡು ಈ ಜಾಂಬುವಂತನ ಮತಸ್ಥರಿಗೆ ಈ ಬಿರುದಾವಳಿಗಳು ಎಷ್ಟು ಮಾತ್ರಕ್ಕೂ ಸಲ್ಲಲಾರೆಂದು ತಡೆದು ಆತಂಕ ಮಾಡಿದನು. ಆಗ ಅಲ್ಲಿ ಇರುವಂಥ ಉಭಯಸ್ಥರು ಕೂಡಿ ಅಂಥ ಕಂಚಿ ನಗರದೊಳಗೆ ಇರುವ ಸದಾಶಿವೇಗೌಡರು, ಖಾಜಿ ಸಾಹೇಬರು, ಅನಂತಗೌಡರು, ಶಾನುಭೋಗ ತಿಮ್ಮಪ್ಪನವರು, ಮದನಾಡಿಗರು ಈ ಮಹಾರಾಜರುಗಳಿರುವ ಸಭೆಗೆ ಹೋಗಿ ಉಬಯಸ್ಥರ ಮುಂದೆ ಪಿರ್ಯಾದಿ ಹೇಳಿಕೊಳ್ಳಲು ಅಲ್ಲಿ ಇದ್ದಂಥ ಉತ್ತಮ ಮೇಲು ಸಭೆಯ ದೈವಸ್ಥರು, ಮಹಾನೀಯರು, ಆಲೋಚನೆಯಂ ಮಾಡಿ ಭಾರತ, ರಾಮಾಯಣದಲ್ಲಿ ಜಾಂಬುವರು, ಬ್ರಹ್ಮನಿಗಿಂತ ಆರು ತಿಂಗಳು ಮುಂಚಿನವರು. ಈ ಜಾಂಬುವಂತನಿಗಿಂತ ಯಾರು ಹಿರಿಯರಿಲ್ಲ. ಇವರ ಜಗದ ಮೇಲೆ ತ್ರಿಭುವನ ಹುಟ್ಟಿದವು ಎಂಬುದಾಗಿ ಇತಿಹಾಸದಲ್ಲಿ ಪಂಕ್ತಿ ರೂಪವಾಗಿ ಹೇಳಿದೆ ಉಪನಿಷತ್ತಿನಲ್ಲಿಯೂ ಗೋಸಂಗಿಯವರಿಗೆ ಅದಿದೈವ ಎಂದು ಹೇಳಲಾಗಿದೆ. ಬಸವರಾಜ ಎಂಬ ಪುರಾಣದಲ್ಲಿ ಅರಳಯ್ಯನೆಂಬ ಶರಣ ಹೆಚ್ಚಿನ ಶರಣ ಎಂದು ಹೊಗಳಿದೆ. ಇಂತಹ ಭೂಮಿಗೆ ಮುಂಚೆ ಹುಟ್ಟಿದ ಆದಿ ಜಾಂಬವರ ವಂಶಭೂತರಿಗೆ ಮೇಲೆ ನಮೂದಿಸಿರುವ ಬಿರುದಾವಳಿಗಳು, ಹುಲಿಧರ್ಮ, ಲಿಂಗ, ಜನಿವಾರ, ಸಲ್ಲತಕ್ಕದ್ದಲ್ಲವೆಂದು ಹೇಳಲು ನಮ್ಮಿಂದ ಆಗಲಾರದು. ಬ್ರಹ್ಮಾಂಡ ಪುರಾಣದಲ್ಲಿ ಸಮಸ್ತ ಮತ ಹುಟ್ಟಿದುದು. ಇದೇ ಗೋಸಂಗಿಯಾದ ಆದಿ ಜಾಂಬುವನ ಮಕ್ಕಳು ಭೂಮಿಯ ಪುತ್ರರೆಂದು ಹಿರಿಯ ಭಕ್ತರೆಂದು ಹೇಳುತ್ತಾರೆ. ಛಲವಾದಿಯವರಾದ ನಿಮ್ಮ ಮತಕ್ಕೆ ಇಂಥ ಬಿರುದಾವಳಿಗಳು ಸಲ್ಲಲಾರವು ಎಂದು ಹೇಳುವುದಕ್ಕೆ ಆರು ಶಾಸ್ತ್ರಗಳು ಎಂದರೆ ತರ್ಕ, ವ್ಯಾಕರಣ, ಛಂದಸ್ಸು, ಅಲಂಕಾರ, ಮೀಮಾಂಸೆ, ನಿರುಪ್ತಿ ಭೂಲೋಕದಲ್ಲಿಯೂ ಹದಿನೆಂಟು ಪುರಾಣಗಳಲ್ಲಿಯೂ ವಿಷ್ಣು ಸಂಬಂಧ. ನಾಲ್ಕು ಶಿವ ಸಂಬಂಧ, ಹತ್ತು ಬ್ರಹ್ಮ ಸಂಬಂಧ, ಎರಡು ಸೂರ್ಯ-ಚಂದ್ರ ಸಂಬಂಧಿಯಾಗಿ, ಎರಡು ಪುರಾಣಗಳಲ್ಲಿಯೂ ಮತ್ತು ಇತಿಹಾಸದಲ್ಲಿ ಭಾರತ ರಾಮಾಯಣಗಳಲ್ಲಿ ನಿಮ್ಮ ಛಲವಾದಿ ಮತ ಶ್ರೇಷ್ಠವೆಂಬ ದೃಷ್ಟಾಂತ ತಂದರೆ ನಾವು ರಾಯಸಿಂಹಾಸನ ಅಧಿಕಾರಿಗಳು ಮಹನೀಯರು ಒಪ್ಪುತ್ತೇವೆ. ಈ ಮಾತಿಗೆ ಛಲವಾದಿಯವರು ಕೇಳಿಕೊಂಡು ತಾವು ಅಪ್ಪಣೆ ಕೊಟ್ಟಿದ್ದು ಒಪ್ಪಬಹುದು. ಪಂಪಾಕ್ಷೇತ್ರ

ವಿಜಯನಗರದಲ್ಲಿ ನಯ, ನ್ಯಾಯ, ಪಣಕಟ್ಟಿಗೆ ಸೇರಿದ ಶೆಟ್ರು, ಮಠದ ಅಧಿಕಾರಿಗಳಿಗೆ ನಮ್ಮ ಮತದ ಹಿರಿಯರಲ್ಲಿ ಶಾಸ್ತ್ರ ಸಮ್ಮತವಾದ ದುಷ್ಟಾಂತಗಳಿದ್ದರೆ ತಂದೊಪ್ಪಿಸುತ್ತೇವೆ. ತರದಿದ್ದ ಪಕ್ಷದಲ್ಲಿ ಜಾಂಬುವರ ಗೋಸಂಗಿಯವರಿಗೆ ಬಿಟ್ಟು ಬಿಡುತ್ತೇವೆ ಎಂದು ಹೇಳಿದರು.

ವಿಜಯನಗರದ ಪಂಪಾಕ್ಷೇತ್ರ ಶ್ರೀಶೈಲದಲ್ಲಿರುವ ಶ್ರೀ ಮಠದ ಅಧಿಕಾರಿಗಳಿಂದ ರಾಯ ಸಿಂಹಾಸನಾಧೀಶರು. ಶ್ರೀನಿವಾಸ ರಾಯರು, ಅಪ್ಪರಾಯರು, ಮಾದವ ರಾಯರು, ತಿರುಮಲರಾಯರು, ಜಗಪತಿ ದೊರೆಗಳು, ಜಟ್ಟಿಗಳು, ವಿದ್ವಾಂಸರು, ಕಲಿತಿರುವ ಸಭೆಗೆ ಹೋಗಿ ಸಾಷ್ಟಾಂಗವಂ ಮಾಡಿ ಬಿನ್ನಹಂ ಬೇಡಿಕೊಂಡಿದ್ದು ಏನೆಂದರೆ ಮಹಾಸ್ವಾಮಿಯೇ ಮೇಲೆ ನಮೂದಿಸಿರುವ ಬಿರುದಾವಳಿಗಳು ನಮಗೆ ಸಲ್ಲುವವೋ ಅಥವಾ ಗೋಸಂಗಿಯವರಿಗೆ ಸಲ್ಲುವವೋ ಅಪ್ಪಣೆ ಕೊಡಿ ಮಹಾಸ್ವಾಮಿ ಎಂದು ಕೇಳಿಕೊಳ್ಳಲು ಅಲ್ಲಿ ಇದ್ದಂಥ ಮಹನೀಯರು ಆಲೋಚನೆ ಮಾಡಿ ಈ ಗೋಸಂಗಿಯವರಿಗೆ ಮಹಾಋಷಿಗಳು ಕೊಟ್ಟಂಥ ಬಿರುದುಗಳನ್ನು ನಮ್ಮಿಂದ ತೆಗೆಯಲಾಗುವುದಿಲ್ಲ ಎಂದು ಇವು ಅವರಿಗೆ ಸಲ್ಲತಕ್ಕವೆಂದು ನಿಮಗೆ ಎಷ್ಟು ಮಾತ್ರಕ್ಕೂ ಸಲ್ಲಲಾರವು ಎಂದು ಕಂಚಿರಾಯ ಸಿಂಹಾಸನಾಧೀಶರು ಅಪ್ಪಣೆಯಂ ಕೊಡಲು ಅಪ್ಪಣೆಯಂ ಪಡೆದು ಈ ಬಲಗೈಯವರೊಳಗೆ ಒಬ್ಬ ಬುದ್ಧಿವಂತನಾದ ಯಜಮಾನನ ಮಗನಾದ ಪೂಸಯ್ಯ ಎಂಬುವನು ಕೇಳಿಕೊಂಡದ್ದು ಏನೆಂದರೆ ಈ ಬಿರುದುಗಳು ಗೋಸಂಗಿಯವರಿಗೆ ಸಲ್ಲುವವು ಎಂದು ಅಪ್ಪಣೆಯಂ ಕೊಟ್ಟಿರುವಿರಿ. ನಮಗೆ ಸಲ್ಲತಕ್ಕದ್ದಾದರೆ ಒಪ್ಪು ಮಾಡಿಕೊಳ್ಳುತ್ತೇವೆ. ಹಾಗಿಲ್ಲದ ಪಕ್ಷದಲ್ಲಿ ಬಿಟ್ಟು ಬಿಡುತ್ತೇವೆಂದು ಹೇಳಿ ಅಲ್ಲಿಂದ ಕಂಚಿಗೆ ಹೋದರು. ಅಲ್ಲಿ ಇರುವಂಥ ಅಗಟ, ವಜ್ರ ಸಿಂಹಾಸನಾಧೀಶ್ವರರಂ ಪ್ರಾರ್ಥಿಸಿ ಮಹಾರಾಜಶ್ರೀ ಅಪ್ಪರಾಯರು, ನರಸಿಂಹರಾಯರು, ಕಂಚಿವರದಪ್ಪ ಗೌಡರು, ಕರಣಿಕರು, ತಿರುಮಲ್ಲಯ್ಯ, ಧರಣಿ ಕುಮಾರ, ಕರಿಭಟನಾಯಕರು, ಉದ್ಯೋಗಸ್ಥರು, ಸೋಮನಾಯಕರು, ರಘುವರದ ಕೆಂಗಲ್ ಮಾಚೇಗೌಡರು, ಹನುಮ ತಿಮ್ಮೇಗೌಡರು, ರುದ್ರೇಗೌಡರು, ಸಿದ್ದೇಗೌಡರು, ದೇವ ತಿಮ್ಮೇಗೌಡರು, ಪಂಚಾಂಗದ ಬ್ರಾಹ್ಮಣರು, ಕ್ಷತ್ರಿಯರು, ದೇವಾಂಗದವರು, ಗಾಣಿಗರು, ಊರುಗೊಲ್ಲರು, ಬೇರಿ ಕೊಮಟಿಯವರು, ನಗರ್ತರು, ವಾಲ್ಮೀಕರು, ಹಳ್ಳಿಕಾರರು, ಮಡಿವಾಳ ಮಾಚಣ್ಣ, ವಕ್ಕಲಿಗರ ಮುದ್ದಪ್ಪ, ಕುಂಬಾರ ನಿಂಗಣ್ಣ, ಮ್ಯಾದರ ಗುಂಡಪ್ಪ, ಕಮ್ಮಾರ ಗುಂಡಪ್ಪ, ಅಜಾಮರ ಅಪ್ಪಣ್ಣ, ಹುಟ್ಟಿಗೊಲ್ಲ ಗೌಡರು, ಮತ್ತು ಇನ್ನು ಅನೇಕ ಮಹನೀಯರು ಕೂಡಿರುವ ಸಭೆಗೆ ಈ ಚಲವಾದಿಯವರ ಬಲಗೈ ಪೂಸಯ್ಯ ಎನ್ನುವನು ಬಂದು ಸಾಷ್ಟಾಂಗ ನಮಸ್ಕರಿಸಿ, ನಮಗೆ ೧೨ ಕಂಬ, ೧೨ ಕುಂಭ, ೧೨ ಪಂಜು, ಕರಿಕಂಬಳಿ ಗದ್ದಿಗೆ, ಕೆಂಪು ನಾಲ್ಕು ಮೂಲೆಗಳ ತಾಳಿ, ತಾಂಬೂಲ, ಬಾಸಿಂಗ, ಮಲ್ಲಿಗೆ ಹೂವಿನಹಾರ, ಕೆಂಪು ಕುದುರೆ ಮೇಲೆ ಮೆರವಣಿಗೆ, ಜೋಡಿ ಕಳಸ, ಜೋಡಿ ಕನ್ನಡಿ, ದೇವತಾ ಮುದ್ರಿಕೆಗಳು, ಹನುಮ ಗರುಡ, ನಿಶಾನಿಗಟ್ಟಿ, ಪಟಾವಳಿ ಬತ್ತಿ, ಶಾಯಂದ ವಾದ್ಯ ನಗಾರಿ ನೌಭತ್ತು, ಭೇರಿ, ಮೃದಂಗ, ತಪ್ಪಟೆ, ಸೊನಾಯಿ ಮೇಳ, ಸಣ್ಣ ಗೆಜ್ಜೆ, ಚಂದ್ರಕಾವಿ, ಮುಂಡಸ, ಈ ಬೀರುದಾವಳಿಗಳು ಗೋಸಂಗಿಯವರಿಗೆ ಸಲ್ಲುವವೋ, ನಮಗೆ ಸಲ್ಲುವವೋ

ಎಂದು ವಿನಯದಿಂದ ಕೇಳಿಕೊಳ್ಳಲು ಅಲ್ಲಿ ಇದ್ದಂಥ ಮಹಾನೀಯರು ಆಲೋಚನೆ ಮಾಡಿ ಈ ಗೋಸಂಗಿಯವರು ಭೂಮಿ ಕರ್ತರೆಂದು ಬ್ರಹ್ಮಾಂಡ ಪುರಾಣ, ವಿಷ್ಣು ಪುರಾಣ, ಶಿವಪುರಾಣಗಳಲ್ಲಿ, ಮತ್ತು ಇತಿಹಾಸ, ಭಾರತ ರಾಮಾಯಣಗಳಲ್ಲಿ ಪಂಕ್ತಿ ರೂಪವಾಗಿ ಹೇಳಿರುವುದನ್ನು ನಾವು ಕಂಡಿರುವುದರಿಂದ ಈ ಬಿರುದಾವಳಿಗಳು ಗೋಸಂಗಿಯವರಿಗೆ ಸಲ್ಲತಕ್ಕದೆಂದು. ಇವು ನಿಮಗೆ ಎಷ್ಟು ಮಾತ್ರಕ್ಕೂ ಸಲ್ಲಲಾರದೆಂದು. ಗೋಸಂಗಿಯವರು ಗ್ರಾಮ ದೇವರು ಅಂಜನೇಯ ಸ್ವಾಮಿ ದೇವರ ಗುಡಿ ಬಳಿಯಿಂದ ಮೆರವಣಿಗೆ ಮಾಡಬಹುದೆಂದು ಅಪ್ಪಣೆ ಕೊಟ್ಟರು. ಇತೀ ಮೇರೆಗೆ ಚಲವಾದಿಯವರ ಪೂಸಯ್ಯನಿಗೆ ದೈವಸ್ಥರು ಹೇಳಿದ್ದೇನೆಂದರೆ ಚಲವಾದಿಯವರು ಹುಟ್ಟಿದ್ದು ನೋಡಿದರೆ ಪಾರ್ವತಿ ಸೆರಗನಲ್ಲಿ ಹುಟ್ಟಿದವರು. ಹುಟ್ಟಿದ ಕಾಲದಲ್ಲಿ ತೊಟ್ಟಿಲು ಅಂಕೋಲೆ ಗಿಡಕ್ಕೆ ಕಟ್ಟಿದವರು. ಚಲವಾದಿಯವರಾದ ನಿಮಗೆ ಗುರುವು ಇಲ್ಲ. ನಿಮಗೆ ಸಲ್ಲುವ ಬಿರುದು ಯಾವುವೆಂದರೆ ಹೋಳಿ ಹುಣ್ಣಿಮೆ ಕಾಲ ಅಂದರೆ ಮಾಘಶುದ್ಧ ಪೂರ್ಣಿಮ ದಿವಸ ಮದುವೆ ಮಾಡಬಹುದು. ನಿಮಗೆ ಅಂಕೋಲೆ ಕಂಬ ಒಂಭತ್ತು, ಕುಂಭ ಒಂಭತ್ತು, ಪಂಜು ಒಂಭತ್ತು, ಊಡುಗಿನ ನಾರು ತಂದು ಕಂಕಣ ಕಟ್ಟುವುದು, ಮೂರು ಕಳಶ, ಮೂರು ಮೂರ್ತಿ ಕಟ್ಟು, ಮೂರು ಮೂಲೆ ಬಿಳಿ ತಾಲಿ ವಾದ್ಯ ಯಾವುವೆಂದರೆ ಠಕೋರಿ, ಶಂಕ, ಜಾಗಟೆ, ನಂದಣಿಯಿಂದ, ಎತ್ತಿನ ಮೇಲೆ ಅವರವರ ಕೇರಿಯಲ್ಲಿ ಅಲ್ಲದೆ ಅಥವಾ ಬುಡ್ಡೆ ಕಲ್ಲಿಗೆ ಹದ್ದು ಮೀರಬಾರದು. ಹದ್ದು ಮೀರಿ ಹೋದರೆ ನಿಮ್ಮ ತಲೆ ಸಹಸ್ರ ಹೋಳಾಗುವುದು. ನೀವು ನಡೆದುಕೊಳ್ಳಬಹುದೆಂದು ಅಪ್ಪಣೆ ಇತ್ತು, ಇದರ ಮೇಲೆ ನಾವು ಹೇಳಲು ಯಾವ ಶಾಸ್ತ್ರದಲ್ಲೂ, ನಾಲ್ಕುವೇದದಲ್ಲೂ, ಹದಿನೆಂಟು ಪುರಾಣಗಳಲ್ಲೂ, ಶಾಸನಗಳಲ್ಲೂ, ಉಪನಿಷತ್ತಿನಲ್ಲೂ, ಎರಡು ಇತಿಹಾಸಗಳಲ್ಲೂ ಚಲವಾದಿ ಜಾತಿಯವರಾದ ನೀವುಗಳು ನಿಮಗೆ ಗುರುವು ಇಲ್ಲ. ಇವುಗಳನ್ನು ನೀವು ಮದುವೆ ಮಾಡುವ ಕಾಲದಲ್ಲಿ ಹದ್ದು ಮೀರಿ ನಡೆಯಬಾರದು. ಚಲವಾದಿ ಜಾತಿಯವರಾದ ನೀವುಗಳು ಗೋಸಂಗಿಯವರಾದ ಮಣೆಗಾರರು, ಮಾತಂಗರ ಜೊತೆ ತಂಟೆ ತಕರಾರು ಮಾಡಬಾರದು ಎಂದು ಹೇಳಿದ್ದಕ್ಕೆ ಚಲವಾದಿ ಜಾತಿಯ ಯಜಮಾನನ ಮಗನಾದ ಬುದ್ಧಿವಂತ ಪೂಸಯ್ಯ ಎನ್ನುವರು. ಮಹಾಸಭೆಯವರೆಗೂ ರಾಜಶ್ರೀ ನರಪತಿ ದೊರೆಗಳಿಗೂ ಸಾಷ್ಟಾಂಗವಂ ಮಾಡಿ. ಕೇಳಿಕೊಂಡಿದ್ದು ಏನೆಂದರೆ ಮಹಾಸ್ವಾಮಿಗಳೇ ಈ ಮಣೆಗಾರರು, ಗ್ರಾಮದೇವತೆಯ ಮುಂದೆ ಕೋಣವನ್ನು ಕಡಿದು ಬಲಭಾಗಕ್ಕೆ ಕೆಡುವುತ್ತಾರೆ ಮತ್ತು ಬಲಗಾಲು ಕೊಯ್ದು ಪಾದಗಟ್ಟಿಯನ್ನು ಬಾಯಿಯಲ್ಲಿ ಇಡುತ್ತಾರೆ. ಬಲಭಾಗ ನಮ್ಮದಾಗಿದೆ. ಆದ್ದರಿಂದ ಅವರು ಬಲ ಭಾಗಕ್ಕೆ ಕಡೆಯಬಾರದು. ಬಲಗಾಲು ಕೊಯ್ಯಬಾರದು. ಆದ್ದರಿಂದ ಅದು ನಮಗೆ ಅವಮಾನ ಆಗುತ್ತದೆ. ಅವರು ಎಡಭಾಗಕ್ಕೆ ಕೆಡುವಬಹುದು. ಎಡಗಾಲು ಕೊಯ್ಯಬಹುದು. ನಮಗೆ ಕೋಣವನ್ನು ಹಿಡಿಯಲು ರಂಗ, ಕುಂಬ, ಇತ್ಯಾದಿ ಕಾರ್ಯಕ್ಕೆ ಸೇರಿಸುವಂತ ಅಪ್ಪಣೆ ಮಾಡಬೇಕೆಂದು ಚಲವಾದಿ ಪೂಸಯ್ಯನು ಕೇಳಿಕೊಂಡನು. ಅದಕ್ಕೆ ಮಹನೀಯರು ಆಲೋಚನೆಯಂ ಮಾಡಿ ಆಯ್ಯಾ ಚಲವಾದಿ ಪೂಸಯ್ಯನೆ ಮಾದಿಗರೆನುತಲು

ಮಾತಂಗ ಎಂಬ ಶಬ್ದವು ಬ್ರಹ್ಮಾಂಡ ಪುರಾಣದಲ್ಲಿ ೧೦೬ನೇ ಗ್ರಂಥದಿಂದ ಹಿಡಿದು ೧೧೨ನೇ ಗ್ರಂಥದವರೆಗೂ ಇದೆ.

**ಶ್ಲೋಕಂ:** ರುದ್ರಸ್ಯೇ ಬದ್ರಹುನಂ ಅಜಮಂ ನಾಳೇಂದ್ರ
ಬಹುನಂ ಇರಣ್ಯರೆವ ಹರಿಣಂ ಧೀರಂ
ಚರಲಿ ಭಹುನ ಚಂದ್ರ ಬಾಹು ನಶ್ಯನಮಃ

ಮಣೆಗಾರರಿಗೆ ನವಲಕ್ಷ್ಮೀಯರು ಮೂಲ ದೇವತೆಗಳು ಅವರ ನಾಮಗಳು, ಆದಿನಾರಾಯಣ, ಬೃಂದವಾಣಿ, ಲೋಕಮಹಾತಾಯಿ, ಶಶಿ ಸಹೋದರಿ, ಜಾನಕಿ ಕುಮಾರಿ ಹೀಗೆ ೯ ಮಂದಿ ಲಕ್ಷ್ಮೀಯರು. ೯ ಮಂದಿ ಚಾರುಲಕ್ಷ್ಮೀಯರು ಹುಟ್ಟಿದರು. ಅವರ ಮಕ್ಕಳು ಶ್ರೀ ಮಹಾಲಕ್ಷ್ಮೀ, ವಿಜಯಲಕ್ಷ್ಮೀ, ಕೀರ್ತಿಲಕ್ಷ್ಮೀ, ದಾರಿದ್ರ್ಯಲಕ್ಷ್ಮೀ, ಮಾರಿಲಕ್ಷ್ಮೀ, ಗ್ರಾಮಲಕ್ಷ್ಮಿ ಇಂತಿ ೧೮ ಮಂದಿ ಲಕ್ಷ್ಮಿಯರು ಮಾಣೆಗಾರರ ಮೂಲ ದೇವತೆಗಳು ಎಂದು ಹೇಳಿ ಇವರು ಗ್ರಾಮದೇವತೆಯ ಮುಂದೆ ಕಡಿಯುವ ಕೋಣವನ್ನು ಕಡಿಯಬಾರದು. ಗೋಸಂಗಿಯವರೇ ಕಡಿಯತಕ್ಕದ್ದು, ಬಲಭಾಗಕ್ಕೆ ಕೆಡವತಕ್ಕದ್ದು, ಬಲಗಾಲು ಕೊಯ್ದು ಬಾಯಿಯಲ್ಲಿ ಪಾದಗಟ್ಟೆ ಇಡುವುದು, ಹೊಟ್ಟೆಯಲ್ಲಿನ ಪೊರೆ ತೆಗೆದು ತಲೆಯ ಮೇಲೆ ಜ್ಯೋತಿ ಇಡುವುದು. ಅಂಥ ಕಾಲದಲ್ಲಿ ಬಲಗೈಯವರು ಅರೆಗಳ ಮೇಲೆ ಕೆಂಪು ಜೆಲ್ಲಿ ಹಾಕಕೂಡದು. ಕೆಂಪು, ಕರಿದು ಮಣೆಗಾರರಿಗೆ ಸಲ್ಲತಕ್ಕದ್ದು. ಹಳದಿ, ಬಿಳಿ ಬಲಗೈಯವರಿಗೆ ಸಲ್ಲತಕ್ಕದ್ದು. ಇಂತಿ ನೀವುಗಳು ಅನ್ಯೂನ್ಯವಾಗಿರಬೇಕೆಂದು ರಾಜ ಮಹಾರಾಜ ಶ್ರೀ ಅಪ್ಪರಾಯರು, ನರಸಿಂಹರಾಯರು ಎಡಭಾಗಕ್ಕೆ ಎಡಗೈಯವರನ್ನು, ಬಲಭಾಗಕ್ಕೆ ಬಲಗೈಯವರನ್ನು ನಿಲ್ಲಿಸಿ ಸಮವೀಳ್ಯಂ ಕೊಟ್ಟು ಮೊದಲು ಮಣೆಗಾರರಿಗೆ ಅನ್ನವನ್ನು ಇಟ್ಟು ನಂತರ ಚಲವಾದಿಯವರಿಗೆ ಅನ್ನವನ್ನು ಇಟ್ಟು ಸಂತೋಷ ಪಡಿಸಿದರು. ಈ ಗೋಸಂಗಿಯವರಿಗೆ ಸಲ್ಲುವು ಬಿರುದಾವಳಿಗಳು ಯಾವುವೆಂದರೆ ೧೨ ಕಂಬ, ೧೨ ಕುಂಭ, ೧೨ ಪಂಜು, ಹನುಮ ಗರುಡ, ಭಗವನಿಶಾನಿಯಂ ಇಡಿಸಿ, ಕರಿಕಂಬಳಿ ಗದ್ದಿಗೆ ಕೆಂಪು ನಾಲ್ಕು ಮೂಲೆಗಳ ತಾಳಿ ತೊಂಡಲ ಬಾಸಿಂಗ, ಮಲ್ಲಿಗೆ ಹೂವಿನಹಾರ, ಕೆಂಪು ಕುದುರೆ ವಾಹನ, ಜೋಡಿ ಕಳಸ, ಜೋಡಿ ಕನ್ನಡಿ, ದೇವತಾ ಮುದ್ರಿಕೆಗಳು, ಪಟಾವಳಿ ಛತ್ರಿ, ಶಾ ಯುದ್ದ, ಅಪ್ಪು ತೋರಣ, ತಪ್ಪಡಿಗಳು, ನಗಾರಿ ನೌಭತ್ತು, ಬೇರಿ, ಮೃದಂಗ, ತಪ್ಪಟೆ, ಸೋನಾಯಮೆಳ, ಸಣ್ಣ ಗೆಜ್ಜೆಗಳು, ಚಂದ್ರಕಾವಿ, ಮುಂಡಸ, ಎಡಭಾಗಕ್ಕೆ ಮುತ್ತಿನ ತುರಾಯಿ, ಕೆಂಪುಛತ್ರಿ, ಬೆಳ್ಳಿ ಕಟ್ಟಿನ ಬೆತ್ತ, ವೀರಕಂಕಣ ಇಷ್ಟು ಬಿರುದುಗಳು ಜಾಂಬುವಂತರಿಗೆ ಸಲ್ಲತಕ್ಕದ್ದು ಎಂದು ಮತ್ತು ಹುಲಿ ಧರ್ಮ, ಲಿಂಗ, ಜನಿವಾರ ಇವರಿಗೆ ಸೇರತಕ್ಕದ್ದು ಎಂದು ವಶಿಷ್ಠರು ತೀರ್ಮಾನಿಸಿದ್ದು ಮತ್ತು ಯಾವ ಪಟ್ಟಣಗಳಲ್ಲಾಗಲೀ, ಗ್ರಾಮದ ಹಳ್ಳಿಗಳಲ್ಲಾಗಲಿ, ಜಾಂಬುವರು ಆಂಜನೇಯ ಸ್ವಾಮಿ ದೇವಸ್ಥಾನದವರೆಗೂ ರಾಜಬೀದಿ ಮೆರವಣಿಗೆ ಮಾಡಿಕೊಂಡು ಹೋಗಬಹುದು ಎಂದು ಹೇಳಿ ೩೩ ಕೋಟಿ ದೇವತೆಯರು, ಜಾಂಬುವರು, ವಶಿಷ್ಠ ಸೇರಿ ಮೊದಲು ಭೂಮಿಗೆ ಹೆಪ್ಪು ಕೊಟ್ಟಂಥ ಐದನೇ ಮಗನಾದ ಹೆಪ್ಪು ಮುನಿಯ ದೊಕ್ಕೆಯಲ್ಲಿ ಉದ್ಭವಿಸಿದಂತ

ಮಗನಿಗೆ ದೊಕ್ಕದ ಮುನಿ ಎಂದು ಕರೆದು ಈತನೇ ನನ್ನ ಮಗನೆಂದು ಜಾಂಬುವಂತರು ನೇಮಕ ಮಾಡಿಕೊಂಡು ಮುಂದೆ ಕಲಿ ಲೋಕ ನಿರ್ಮಿತವಾಗುವ ಬಗ್ಗೆ ನಿನಗೆ ನಿರ್ಣಯವೇನೆಂದರೆ. ಗೋಸಂಗಿಯವರು ಹೊತ್ತು ಹುಟ್ಟಿ ಬೆಳಗಾದರೆ ಅಡಿಗಲ್ಲು ತೂಕ ಬೆಳ್ಳಿ, ಬಂಗಾರ, ಕೊಡುತ್ತೇನೆಂದು ನಿರ್ಣಯಮಾಡಿ ನನ್ನ ಮಾತ್ರ ಬಿಟ್ಟು ಬೇರೆ ಯಾರನ್ನು ನೀನು ಬೇಡ ಕೂಡದು ಎಂದು ನಿರೂಪಿಸಿ ಜಾಂಬುವರು ಕಲ್ಪಿಸಿದಂತೆ ಪ್ರತಿಯೊಂದು ಮನೆಗೆ ಎರಡು ವರಹ, ೨ ಅರವಿಕಾಳು, ಸುರಪಾನ, ಕಮರಿ ಬ್ಯಾಟೆ, ಊಟ, ಉಪಚಾರಗಳು, ಎಲೆ-ಅಡಿಕೆ, ಹಂಗುದಾರ, ಕುಂಕುಮ, ಅರಿಶಿಣ, ಶಾಲು ಕೊಟ್ಟು ಮೇಲಾದ ಉಡುಗೊರೆ ಈ ದೊಕ್ಕದ ಮುನಿಗೆ ಕೊಡಬೇಕೆಂದು ನೇಮಕ ಮಾಡಿ ನಿರ್ಮಿಸಿರುತ್ತದೆ. ಇವನನ್ನು ಸಂತೋಷದಿಂದ ಕಳಿಸಬೇಕು. ಈ ದೊಕ್ಕದ ಮುನಿಗೆ ಯಾರು ಕೊಡುವುದಿಲ್ಲ ಎಂದು ಉದಾಸೀನ ಮಾಡುತ್ತಾರೋ ಅಂಥವರಿಗೆ ತಲೆ ಸಹಸ್ರ ಹೋಳಾಗಲಿ, ಅವರಿಗೆ ಅಪಜಯ ಸಂಭವಿಸಲಿ ಎಂದು ಜಾಂಬುವರ ಶಾಪದಿಂದ ನಿಬಂಧನೆ ಉದಾಸೀನ ಮಾಡಿ ಕೊಡದೆ ಅನ್ಯಾಯ ಮಾಡಿದಂತ ನೀಚ ಜನರಿಗೆ ಸೀಪಿ ಬಿಟ್ಟ ಎಲುಬು, ತೊಟ್ಟು ಬಿಟ್ಟ ಪಾದರಕ್ಷೆ, ನಾಯಕೊರಳಿಗೆ ಬೇವಿನ ಸೊಪ್ಪು ಒಂದು ಗೊಂಬೆಯನ್ನು ಕಟ್ಟಿ ದೇಶದ ಮಧ್ಯದಲ್ಲಿ ಹೂಳಲು ಏನು ಅಡ್ಡಿ ಇಲ್ಲವೆಂದು ಜಾಂಬುವಂತನು ನಿಬಂಧನೆ ನಿರೂಪಿಸುತ್ತಾರೆ.

ಸತ್ಯಾ ಜಾಂಬುವಂತರು ಮತ್ತು ಆದಿ ಅರಳಪ್ಪನವರು ಸಾಕ್ಷಾತ್ ಶಿವನು ಬಸವೇಶ್ವರನು ಆ ಕಾಲದಲ್ಲಿ ಶಿವನ ನಾಮವಾದರೆ ಮಠಪತಿ ಜಂಗಮಯ್ಯಗಳ ಲಿಂಗ ಮುದ್ರಿಕೆ ಜಾಗದಲ್ಲಿ ೯ ಪಾದ ಅಳತೆ ಮಾಡಿ ಗುಣಿಗುಂದ್ರಂ ತೊಡಿಸಿ ಬಿಲ್ವಪತ್ರೆ, ವಿಭೂತಿ ಮತ್ತು ಶಿವ ಸ್ತೋತ್ರದಿಂದ ಸಂಸ್ಕಾರ ಮಾಡಿಸಬೇಕು ಎಂದು ಶಾಸನದಲ್ಲಿ ನಮೂದಿಸಿರುತ್ತದೆ. ಈ ದೊಕ್ಕದ ಮುನಿಗೆ ಸಾಮಾನು ಹೇರಿಕೊಂಡು ಹೋಗಲು ಗಾಡ್ಡಪ್ಪನನ್ನು ಕೊಟ್ಟರು. ಈಗ ಇದನ್ನು ಯಾರು ಎತ್ತಿ ಎಣಿಸಬಾರದೆಂದು ಶರಣ ಕಾಲದಲ್ಲಿ ಮಡಿವಾಳ ಮಾಚಣ್ಣ ಶರಣನಿಗೆ ಮಗನಾದ ಕಾರಣ ಚಲುವಾದಿಗಳು ಕತ್ತೆ ಸತ್ತರೆ ಎತ್ತಬೇಕು. ನಾಯಿ ಸತ್ತರು ಎತ್ತಬೇಕು ಮತ್ತು ದನಕರುಗಳು ಸತ್ತರೆ ಮಣೆಗಾರರು ಎತ್ತಬೇಕು. ಒಂಟೆ ಸತ್ತರೆ ಮಣೆಗಾರರೇ ಎತ್ತಬೇಕು ಮಂಗ ಸತ್ತರೆ ಪಾಂಚನ ಮೂರು ನಾಮದವರು ಎತ್ತಬೇಕು. ಆನೆ ಸತ್ತರೆ ಗಾಣಿಗರು ಎತ್ತಬೇಕು ಎಂದು ನಿರ್ಮಿತವಿದೆ.

ಜಾಂಬುವರು ದೊಕ್ಕದ ಮುನಿಗೆ ಕೊಡುವಂಥ ಅಂಪಕವನ್ನು ಸಂತೋ?ದಿಂದ ಕೊಟ್ಟು ಕಳಿಸಬೇಕೆಂದು ಮಹರ್ಷಿಗಳು ಶಾಸನದಲ್ಲಿ ನಮೂದಿಸಿರುತ್ತಾರೆ. ಇದಕ್ಕೂ ಮೀರಿ ಉದಾಸೀನ ಮಾಡಿದವರಿಗೆ ಬರುವ ದಾರಿಗೆ ಕರಿಯಹಗ್ಗ ಹಾಕಿ ತಡೆಯಲು ಏನು ಅಡ್ಡಿ ಇಲ್ಲವೆಂದು. ಅದಾಗ್ಯೂ ಕೊಡದೆ ಇದ್ದರೆ ಕಟ್ಟೆ ಕಸುಬು ಯಜಮಾನರಿಗೆ ತಿಳಿಸಿದರೆ ಅವರೇ ತೀರ್ಮಾನಿಸಿ ಕೊಡಬೇಕೆಂದು ತೀರ್ಮಾನವಿದೆ. ಶಾಸನದಲ್ಲಿ ನಮೂದಿಸಿರುವಂತೆ ಆ ಕಾಲದಲ್ಲಿ ಇದರ

ಪ್ರಕಾರ ಭೂಮಿಗೆ ಹೆಪ್ಪು ಕೊಟ್ಟಿದ್ದರಿಂದಲೂ ಅನೇಕ ಬಾಬುಗಳಿರುತ್ತವೆ. ಭೂಮಿ ಪುತ್ರ ಎನಿಸಿದ ದೊಕ್ಕದ ಮುನಿಗೆ ಜಾಂಬುವಂತರು, ಭೂತಬಲಿ, ಸುರಗ ಶಾಂತಿ ಇವರಿಗೆ ಸಲ್ಲತಕ್ಕದ್ದು, ತೇರಿನ ಹಗ್ಗ ಒಗ್ಗೆರೆ ಹಬ್ಬದಲ್ಲಿ ತೇರು ಗಾಲಿಗೆ ಎಡ ಭಾಗಕ್ಕೆ ಹಾಕುವ ಎಡೆ ಜಾಂಬುವಂತರಿಗೆ ಸಲ್ಲತಕ್ಕದ್ದು. ಬಲ ಭಾಗದ ಗಾಲಿಗೆ ಹಾಕುವ ಎಡೆ ವಾಲ್ಮೀಕಿಯರಿಗೆ ಸೇರತಕ್ಕದ್ದು ತೇರಿನ ಕಳಸದ ಎಡೆ ವಿಶ್ವ ಬ್ರಹ್ಮನಿಗೆ ಸಲ್ಲತಕ್ಕದ್ದು. ಏಕೆಂದರೆ ಒಂದು ಯುಗಾಂತರದಲ್ಲಿ ವಿಶ್ವ ಮಗನಿಗೆ ಮಗನಾದ್ದರಿಂದ ಜಾಂಬುವರಿಗೆ ಕಳಸದ ಎಡೆ ಕೊಡಬೇಕು. ಗ್ರಾಮದೇವತೆ ಮಾಡುವಾಗ ಊರಿನ ಒಳ ಭಾಗದಲ್ಲಿ ಕಡಿದ ಮರಿ ವಾಲ್ಮೀಕಿಯರಿಗೆ ಸಲ್ಲತಕ್ಕದ್ದು. ಹೊಳೆ ದೂಳು ಮರಿ ಮಡಿವಾಳರಿಗೆ ಸೇರತಕ್ಕದ್ದು. ಗದ್ದಿಗೆಯ ಮರಿ ಪೂಜಾರಿಗೆ ಸೇರತಕ್ಕದ್ದು. ಗಾವು ಸೀಳಿದ ಮರಿ ಜಾಂಬುವಂತರಿಗೆ ಸೇರಬೇಕು. ಮದುವೆ ದೇವರ ಕಾಲದಲ್ಲಿ ಮೆರವಣಿಗೆ ಮಾಡಿಕೊಂಡು ಊರು ಬಾಗಿಲನ ಬುಡ್ಡೆಕಲ್ಲು ದಾಟಬಾರದು. ಇದು ಶರಣರ ಕಾಲದಲ್ಲಿ ನಿರ್ಮಿತವಾದ ಶಾಸನವನ್ನು ಸುಳ್ಳು ಎಂದು ತಿರಸ್ಕರಿಸಿದಂತವರಿಗೆ ಅಪಜಯ ಆಗುವುದಲ್ಲದೇ ಅಂಥವರ ನಾಲಿಗೆಯಲ್ಲಿ ವಜ್ರಕಂಡು ಹುಳು ಬೀಳುವುದು, ನರಕ ಪ್ರಾಪ್ತಿಯಾಗಿ ಶಿಶುಹತ್ಯೆ, ಸ್ತ್ರೀ ಹತ್ಯೆ, ಗುರುದ್ರೋಹಿ, ಕುಲಹೀನಾ ಪಾಪಕ್ಕೆ ಹೊಂದುವನು ಎಂದು ಮಹನೀಯರು ನಿರೂಪಿಸುತ್ತಾರೆ. ಇದನ್ನು ಓದಿ ಕೇಳಿ ಸಂತೋಷಪಟ್ಟ ಮಹನೀಯರಿಗೆ ಮಹಾಪುಣ್ಯ ಸೇರುವುದಲ್ಲದೆ ಧನ ಕುಬೇರನಷ್ಟು ಲಕ್ಷ್ಮಿ ಪ್ರದಾಯಕರಾಗುವರು ಎಂದು ಶಾಸನದಲ್ಲಿ ನಮೂದಿಸಿದೆ.

ಈ ಮಹಾಕಂಚಿ ಶಾಸನವು ಕಾಮಾಕ್ಷಮ್ಮನವರ ವರದರಾಜ ಸ್ವಾಮಿ ಹಾಲ್ಯ ಮಧ್ಯದಲ್ಲಿರುತ್ತದೆ. ಇದಕ್ಕೆ ಸೂರ್ಯ, ಚಂದ್ರರೇ ಸಾಕ್ಷಿ, ನವಗ್ರಹಗಳೇ ಸಾಕ್ಷಿಯಾಗಿ, ಚಲವಾದಿಯವರು ಸೋತು. ಮಾತಂಗಿಯವರು ಗೆದ್ದಿದ್ದಕ್ಕೆ ಮೂವತ್ತು ಮೂರು ಕೋಟಿ ದೇವತೆಗಳೇ ಸಾಕ್ಷಿಯಾಗಿ, ಅಷ್ಟದಿಕ್ಪಾಲಕರೇ ಸಾಕ್ಷಿಯಾಗಿ, ಏಳು ನಾಲಿಗೆಯ ದುರುಗು ಸಾಕ್ಷಿಯಾಗಿ, ಪಾರ್ವತಿ ಪರಮೇಶ್ವರರೇ ಸಾಕ್ಷಿಯಾಗಿ, ಭೂದೇವಿ ಸಾಕ್ಷಿಯಾಗಿ ದೃಢಪಡಿಸಿದೆ. ಕಂಚಿನಗರಕ್ಕೆ ಅಧಿಕ ತರವಾದ ಅಧಿಪತಿಯಾದಂತ ನಡುಬೀದಿ ತಿರುಮಲ ಚಾರ್ಯರ ಸಹಸ್ರ ಅಕ್ಷರಗಳಿಂದ ಐದೂವರೆ ತೊಲ ಪ್ರಮಾಣ ಇರುವ ಶಾಸನವನ್ನು ತೆಪ್ಪ ಕೋಣೆಯಲ್ಲಿ ನಿರ್ಮಿಸಿರುತ್ತಾರೆ. ಅಸಲಿಗೆ ಸರಿಯಾದ ನಕಲು ಎತ್ತಿ ಬರೆದಿರುತ್ತದೆ. ಕಲ್ಯಪ ಇಪ್ಪತ್ತೈದು ಸಾವಿರ ವರ್ಷ ಪ್ರಮಾಣವಿರುತ್ತದೆ ಮತ್ತು ಈ ಶಾಸನವನ್ನು ಓದಿ ಕೇಳಬೇಕಾದರೆ ತಪ್ಪು ಓದದೆ ಇರುವಂತವರಿಂದ ಸ್ನಾನ ಮಾಡಿಸಿ ಧೂಪ, ದೀಪ, ಕಾಯಿ, ಕರ್ಪೂರ, ನೈವೇದ್ಯದಿಂದ ಪೂಜೆ ಮಾಡಿಸಿ ಮಂಗಳಾರತಿ ಬೆಳಗಿ ಓದಿಸಿ ಕೇಳಬೇಕು. ಓದಿ ಕೇಳಿದಂತವರು ಮಹಾಪುಣ್ಯ ಪಡೆದಾರು."

ಶ್ಲೋಕಂ: "ಉಪೇಂದ್ರ ಇಂದ್ರಿವರಜಂ ॥ ಚಂದ್ರಶೇಖರನ ಸಾಕ್ಷಿಂ ॥
ಮಹಾಕಂಚಿ ಶಾಸನಕ್ಕೆ ॥ ಮಂಗಳಂ ಮಸ್ತು ॥ ಶುಭಮಸ್ತು ॥
ಶ್ರೀ ಶ್ರೀ ಶ್ರೀ ಶ್ರೀ ಶ್ರೀ ಶ್ರೀ ಶ್ರೀ

### ೩.೩. ಗಂಗ ಭಾರತ

ಮಾದಿಗ ಸಮುದಾಯಗಳಲ್ಲಿ ಪ್ರಸಿದ್ಧ ಹೊಂದಿರುವ ಆದಿಜಾಂಬವ ಪುರಾಣವು ಭಾರತದ ಮಹಾಕಾವ್ಯಗಳಾದ ರಾಮಾಯಣ, ಮಹಾಭಾರತದಷ್ಟೇ ಪ್ರಸಿದ್ಧಿಯನ್ನು ಹೊಂದಿ ಜಾಂಬವ ಪುರಾಣವು ಗಂಗಭಾರತವೆಂದು ಈ ಪ್ರದೇಶಗಳಲ್ಲಿ ಪ್ರಸಿದ್ಧಿ ಹೊಂದಿ ಇದನ್ನು ಕೋಲಾರ ಜಿಲ್ಲೆಯ ಶ್ರೀನಿವಾಸಪುರ ತಾಲ್ಲೂಕಿನ ಬೈಕೊತೂರು ಇದು ಆಂಧ್ರಪ್ರದೇಶದ ಗಡಿಗೆ ತೀರಾ ಹತ್ತಿರವಿರುವ ಪುಟ್ಟ ಹಳ್ಳಿಯಾಗಿದೆ. ಈ ಪುಟ್ಟ ಹಳ್ಳಿ ಮನೆಯೊಂಟೋ ಗುಡಿಸಲಲ್ಲಿ ಹುಟ್ಟಿದ ಜೋಂಕಿಣಿ ಮುನಿಯಪ್ಪ ಅದೇ ಗುಡಿಸಲನ್ನು ತನ್ನ ಆರಾಧ್ಯ ದೈವವಾಗಿ ಸ್ವೀಕರಿಸಿ ಗಂಗಭಾರತವನ್ನು ತನ್ನ ಉಸಿರಾಗಿಸಿ ಜೋಂಕಿಣಿಯನ್ನು ಹಿಡಿದು ರಾತ್ರಿ ಇಡೀ ಗಂಗಭಾರತದ ಪುರಾಣವನ್ನು ಹಾಡಿ ಮುಗಿಸುತ್ತಿದ್ದನು. ಆತ ಜೋಂಕಿಣಿ ಹಿಡಿದು ಕಥೆ ಪ್ರಾರಂಭಿಸಿದರೆ ಅದರ ನಾದಸುಧೆ ಹೆಜ್ಜೆ ಹೆಜ್ಜೆಗೆ ಗೆಜ್ಜೆ ಉಲಿ. ಆಲಾಪನೆ ಹೊರಟರೆ ಗಂಗಭಾರತದ ಕಥೆ ನುಡಿಕೆಯ ಕೈ ಮುನೆಪ್ಪನದು ಗೆಜ್ಜೆಯನ್ನು ಫಲಿಕಿಸುವ ಕಾಲು ಮುನೆಪ್ಪನದು ಹಾಡುವ ಹೊರಳು ಮುನೆಪ್ಪನದಾಗಿದೆ.

ಮುನಿಯಪ್ಪ ಮೊದಲಿಗೆ ಜೋಂಕಿಣಿ (ಬೌದಿಕೆ) ಶ್ರುತಿ, ಶ್ರುತಿ ಹಿಡಿಯುತ್ತಲೇ ದರುವು (ಆಲಾಪನೆ) ಧ್ವನಿ ಕೂಡಿ ಕುದುರುತ್ತಲೆ "ತಾಲಿಲ್ಲೋ ಲಿಲ್ಲೆ ಲಿಲ್ಲಾಯಿಲೇ... ಮಂದ್ರದಿಂದ ಏರೇರು ಧ್ವನಿಯಲ್ಲಿ ಗಂಗಭಾರತದ ಕಥೆ ಉಕ್ಕಿ ಹೊರ ಹೊಮ್ಮುತಿತ್ತು. ನಂತರ ಅವರು ಹೇಳುವ ಗಂಗಭಾರತದ ಇಡೀ ಕಥೆ ಜಾಂಬವ ಪುರಾಣದ ಜಾನಪದ ಪೌರಾಣಿಕ ವಸ್ತುವಿನ ಗಿದ್ದು ದಲಿತ ಕುಲ ಮೂಲದ ಕಥೆಯದು. ಹುಟ್ಟಿನಿಂದ ಪ್ರಾರಂಭವಾಗಿ ತ್ರಿಮೂರ್ತಿಗಳಿಗೂ ಮಾದಿಗ ಕುಲಕ್ಕೆ ಇರುವ ಸಂಬಂಧವನ್ನು ಕಥೆ ತಿಳಿಸುತ್ತದೆ. ಹಾಗಾಗಿ ಮಾದಿಗ ಕುಲಕ್ಕೆ ಇತರೆ ಜಾತಿಗಳೊಂದಿಗೆ ಇರುವ ಬಂಧುತ್ವವನ್ನು ಸಾರುತ್ತದೆ. ಈ ಪುರಾಣದ ಪ್ರಕಾರ ಮಾದಿಗರು ಬ್ರಾಹ್ಮಣರಿಗೆ ಬೀಗರು ಆ ಮೂಲದ ಸಂಬಂಧಗಳು ಮಾದಿಗರ ಮನೆ ಮಗಳು ಅರಂಜ್ಯೋತಿ ಇವಳನ್ನು ಬ್ರಾಹ್ಮಣ ಕುಲದ ವಸಿಷ್ಠ ಮುನಿಯ ವಿವಾಹ ಮಾಡಿಕೊಳ್ಳುತ್ತಾನೆ. ಇದರಿಂದ ಬ್ರಾಹ್ಮಣರ ಮತ್ತು ಮಾದಿಗರ ನಡುವೆ ನೆಂಟಸ್ಥಿಕೆ ಬೆಳೆಯುತ್ತದೆ. ಈ ಅಂಶವನ್ನು ಗಂಗಭಾರತದಲ್ಲಿ ತಿಳಿಸುತ್ತಾ ಅದಕ್ಕೆ ತಕ್ಕಂತೆ ಗೆಜ್ಜೆಯನ್ನು ಹಾಕಿಕೊಂಡು ಆಲಾಪನೆ ಮಾಡುತ್ತ ಜಾನಪದ ಪೌರಾಣಿಕತೆಯನ್ನು ತಿಳಿಸುತ್ತಾನೆ.

ನಂತರ ಮಾದಿಗರು ಕಾಮಧೇನುವನ್ನು ಕೊಂದು ಅದರ ಮಾಂಸವನ್ನು ಭಾಗ ಹಾಕಿ ಕುಲದ ಭಾಗದೊಂದಿಗೆ ವಿಷ್ಣು, ಬ್ರಹ್ಮ, ಶಿವ ಮತ್ತು ಅಲ್ಲಾದ್‌ನಿಗೆ ಭಾಗ ದೊರೆಯುತ್ತದೆ. ವಿಷ್ಣುವಿನ ಭಾಗವು ಅಕ್ಷತೆಯಾದರೆ ಶಿವನ ಭಾಗವು ವಿಭೂತಿ ನಾರಾಯಣನ ಭಾಗ ತೀರ್ಥ, ಬ್ರಹ್ಮನ ಭಾಗ ಬ್ರಹ್ಮ ಕಂಕಣ ಅಲ್ಲಾಹ್‌ನ ಭಾಗ ಬಿಸ್ಮಿಲ್ಲ ಆಗುತ್ತದೆ ಎಂದು ಧರ್ಮ ಬೇರೆಯಾದರೂ ಕುಲವೊಂದೆಂದು ಮುನೆಪ್ಪನು ಹಾಡುವ ಗಂಗಭಾರತ ಹೇಳುತ್ತದೆ. ಹೀಗಾದರೂ ಇಷ್ಟೆಲ್ಲಾ ಸಂಬಂಧವಿದ್ದರೂ ಮಾದಿಗರು ಅಸ್ಪೃಶ್ಯರಾದರು ಈ ಬೇರಿಂಗಡವನ್ನು ಗಂಗಭಾರತ

ಪ್ರಶ್ನಿಸುತ್ತಿದೆ. ಪ್ರಥಮ ವರ್ಣದವರ ಸಂಬಂಧವಿದ್ದು ಅಸ್ಪೃಶ್ಯತೆಯ ಅನ್ಯತೆಯ ಅಪಮಾನ ಎಂಡ ನೋವಿಗೆ ಧ್ವನಿಯಾಗಿದೆ. ಕಥೆ ಕುಲದ ಹಿರಿಮೆಯನ್ನು ದೈವದ ಭಕ್ತಿಯನ್ನು ಹೇಳುವುದನ್ನು ಮಾಡನು ಜಾಗೃತ ಅಸ್ಪೃಶ್ಯ ಪ್ರಜೆ ಹಾಕುವ ಪ್ರಶ್ನೆಗಳು ಒಡಲಲ್ಲಿ ತುಂಬಿದ ನೋವುಗಳು ಪ್ರತಿಧ್ವನಿಯಾಗುತ್ತವೆ. ಜಾತಿ ಮತವಾದಿಗಳನ್ನು ಹೆಟ್ಟ ಹೆಟ್ಟ ಹೇಳುತ್ತದೆ.

ಹಂದೀಯ ತಿನುತಾರೆ / ಊರಲ್ಲಿ ಇರುತ್ತಾರೆ / ಗೋವನ್ನು ತಿನುತ್ತೇವೆ / ಊರಾಚೆ ಇರುತ್ತೇವೆ / ಹಂದೇನು ತಿನ್ನುತದೆ / ಗೋವೇನು ತಿನ್ನುತ್ತದೆ ಪ್ರಶ್ನೆಯ ಮುಂದಕ್ಕೆ ಶೋ?ಣೆಯ ಚಿತ್ರ ತರುವುದು ಹೀಗೆ ಹಾಲ ನಿಮ್ಮದು ಮೊಸರು ನಿಮ್ಮದು ಬೆಣ್ಣೆ ತುಪ್ಪಗಳಲ್ಲಿ ನಿಮ್ಮವು ಸಗಣಿ ಗಂಜಲವು ನಿಮ್ಮವು ಹಸು ಮಾತ್ರ ನಮ್ಮದು. ಅದು ಕರೆವ ಹಸುವಲ್ಲ ಜೀವಂತವಲ್ಲ ಬದುಕು ಬಾಳಿಗೊದಗದ ಸತ್ತ ಹಸು ಒಂದೆರಡ ಹೊತ್ತಿಗೆ ಮಾಂಸ ಚರ್ಮಕ್ಕೆ ಮಾತ್ರ ಎಂದು ಧಾರ್ಮಿಕ ಕಥನದೊಂದಿಗೆ ಸಾಮಾಜಿಕ ಪ್ರಜ್ಞೆಯ ಅಂತರ್‌ವಾಹಿನಿಯಾದ ಪುರಾಣವನ್ನು ಪ್ರತಿಬಿಂಬಿಸುತ್ತದೆ. ಹೀಗೆ ಈ ಸಮುದಾಯಗಳು ಗಂಗಭಾರತವನ್ನು ಒಂದು ಮಹಾಭಾರತದ ಹಾಗೂ ರಾಮಾಯಣದಂತೆ ತಮ್ಮ ಹೊಟ್ಟೆ ಪಾಡಿಗಾಗಿ ದಾಸ ಭಿಕ್ಷೆ ಪಡೆಯುವುದಕ್ಕೆ ಕೈಯಲ್ಲಿ ಚೀಂಕಾಣಿ ಹಿಡಿದು ಕಾಲಲ್ಲಿ ಗೆಜ್ಜೆಯನ್ನು ಕಟ್ಟಿ ಕೊರಳಲ್ಲಿ ಹಾಡಿದರೆ ರಾತ್ರಿ ಇಡೀ ಹಾಡುತ್ತಾನೆ ಎಂದು ಲೇಖಕರಾದ ಸ.ರಘುನಾಥ ಅವರು ನೀಡಿದ ಮಾಹಿತಿಯಲ್ಲಿ ತಿಳಿಯುತ್ತದೆ.[೬]

**ಕೊನೆ ಟಿಪ್ಪಣಿಗಳು**

೧. ಜಯದೀರ್ ತಿರುಮಲರಾವ್, **ದಕ್ಕಲಿ ಜಾಂಬ ಪುರಾಣಂ (ತೆಲುಗು ಪುರಾಣ)**, ಪು. ೨೭, ೧೦೨, ೧೧೯, ೧೩೨.

೨. ನನಮಾಸಸ್ವಾಮಿ, **ವೃತ್ತಿ ಪುರಾಣಗಳು (ತೆಲುಗು ಸಾಹಿತ್ಯ)** ಪು. ೨೪, ೧೦೦, ೧೨೦.

೩. ಕೋಟಿಗಾನಹಳ್ಳಿ ರಾಮಯ್ಯ, **ಸಿಂದ್ ಮಾದಿಗರ ಸಂಸ್ಕೃತಿ**, ಪು. ೧೧೨, ೧೧೩.

೪. ಡಾ. ಚಲುವರಾಜು, **ದಕ್ಕಲ, ಸಂಸ್ಕೃತಿ**, ಪು. ೨೩, ೨೪.

೫. ಜಾನಕಲ್ ರಾಜಣ್ಣ.ಎಂ., **ದಕ್ಕಲಿಗ**, ಪು. ೮, ೯, ೧೦.

೬ ಸ. ರಘುನಾಥ್, **ಗಂಗಾಭಾರತದ ಲೇಖನ**.



## ಅಧ್ಯಾಯ : ನಾಲ್ಕು

# ದಕ್ಕಲ ಜಾಂಬಪುರಾಣ ಮತ್ತು ಗಂಗಭಾರತದಲ್ಲಿ ದರುವಿನ ಮಹತ್ವ

ಅಧ್ಯಾಯ : ನಾಲ್ಕು

# ದಕ್ಕಲ ಜಾಂಬಪುರಾಣ ಮತ್ತು ಗಂಗಭಾರತದಲ್ಲಿ ದರುವಿನ ಮಹತ್ವ

## ೧. ದರುವು ಪದದ ಅರ್ಥ

ದರುವು ಸಂಸ್ಕೃತ ಮೂಲ ಪದವಾಗಿದ್ದು ಇದು ತೆಲುಗು ಭಾಷೆಯಲ್ಲಿ ಹೆಚ್ಚು ಬಳಕೆಯಾಗುತ್ತಿದೆ, ದರುವು ಪದವನ್ನು ಕನ್ನಡದಲ್ಲಿ ಆಲಾಪನೆ ಎಂಬ ಅರ್ಥ ನೀಡುತ್ತದೆ, ತೆಲುಗು ನಿಘಂಟುಗಳಲ್ಲಿ ಧ್ರುವತಾಳ ಗೀತ ವಿಶೇಷ ಎಂಬ ಅರ್ಥಗಳನ್ನು ಕೊಟ್ಟಿವೆ. ನಂತರ ದರುವು ಎಂಬುದಕ್ಕೆ ಚೇಯಿ ಕ್ರಿಯಾಪದ ಕೂಡಿ ಕೊಂಡಾಗ ತಾಳಹಾಕು ಎಂದಾಗುತ್ತದೆ. ಅಷ್ಟೇ ಅಲ್ಲದೆ ಶಾಸ್ತ್ರೀಯ ಸಂಗೀತದಂತೆ ಆಲಾಪನೆ ಅಂದರೆ ರಾಗ ವಿಸ್ತಾರವನ್ನು ಹೇಳುವುದು, ದರುವು ಹಾಕುವುದು, ದರುವು ಎತ್ತಿಕೋ, ದರುವು ತೀಯಿ, ರಾಗತೇಗಿ ಎಂಬ ಅರ್ಥಗಳು ಬರುತ್ತವೆ, ಹಾಗೆಯೇ ಕೇಳುಗರಿಗೆ ಇಂಪಾಗಿ ಅವರನ್ನು ತನ್ನತ್ತ ಕಡೆ ಆಕರ್ಷಿಸುತ್ತದೆ.

'ದರುವು ಪಟ್ಟು' ಎಂದರೆ ಹಾಡು ಹಾಡು ಎಂದು ಅರ್ಥ ಇದು ಬಹುವಚನದಲ್ಲಿ ದರುವುಲು ಪೆಟ್ಟು ಆಗುವುದು ಅಂದರೆ ಹಾಡುಗಳನ್ನು ಹಾಡು "ದರಮು" ಎಂಬ ಶಬ್ದವಿದ್ದು ಇದಕ್ಕೆ ಶಂಖು ಎಂದು ಅರ್ಥವಿದೆ ಸಂಸ್ಕೃತದಲ್ಲಿ ದರವೆವರ ಎಂದರೆ ಶ್ರೇಷ್ಠ ಶಂಖ, ವಿಷ್ಣುವಿನ ಶಂಖ ಪಾಂಚಜನ್ಯ, ಏಲ, ಜಾವಳಿ, ಜಕ್ಕಣಿ, ಧ್ರುವ, ಲಾಲಿಹಾಡು ಸುವ್ವಾಲಿ ಹಾಡುಗಳಂತಹ ಗೇಯ ವಿಶೇಷಗಳಲ್ಲಿ ದರುವು ಒಂದಾಗಿದೆ.

'ದರು' ಎಂಬ ಪದ 'ದರುವು' 'ದರುವುಕ' ಎಂದು ವಿಸ್ತಾರಗೊಂಡಿದ್ದು ಈ ಶಬ್ದ ನಮ್ಮನ್ನು ಕೇಳಿಕೆಗಳಲ್ಲಿ ಗಂಗಭಾರತ ಬಿಸ್ಸೇಗೌಡನ ಪದ (ಕೋಲಾರ ಜಿಲ್ಲೆ ಮುಳಬಾಗಿಲು ತಾಲೂಕಿನ ಅರಿಪಿನಾಯನಪಲ್ಲಿಯ ದಿಟ್ಟ ಪಾಳೇಗಾರ) ರೆಡ್ಡಿ ಪಾಪ, ಅಲಂಬಗಿರಿ ಸಾಮಿ ಇನ್ನು ಕೆಲವು ಜನಪದ ಗೀತೆಗಳ ಒಳಗೆ ಕರೆದೊಯ್ಯುತ್ತದೆ ಹಾಗೆಯೇ ಜಾಂಬ ಪುರಾಣವು.

ದರುವು ಪದ ಸಂಸ್ಕೃತದ ಧ್ರುವ ಎಂಬ ಒಂದು ಬಗೆಯ ತಾಳ ಎಂದು ಅಚ್ಚಗನ್ನಡ ನುಡಿ ಕೋಶದಲ್ಲಿ ಹೇಳಲಾಗಿದೆ. ದರುವು ಎಂಬುವುದು ಶಿಷ್ಟ ಪದವಾಗಿ ಬಳಕೆಯಾಗಿ

ಮಾರ್ಗ ಮತ್ತು ದೇಶಿಯ ತೆಲುಗು ಜನಪದರ ಸಚಿತ್ತ ಪದವಾಗಿ ಆಂಧ್ರದ ಗಡಿಗೆ ಹೊಂದಿಕೊಂಡಿರುವ ಕೋಲಾರ, ಚಿಕ್ಕಬಳ್ಳಾಪುರ, ತಮಿಳರ ನುಡಿ ರಾಜಕೀಯದ ನಡುವೆ ಜೀವಂತಿಕೆಗಾಗಿ ಹೋರಾಡುತ್ತಿರುವ ಪದವಾಗಿದೆ, ತೆಲುಗು, ಕನ್ನಡ ಭಾಷೆಯ ಜನಪದ ಕಲೆಗಳನ್ನು ಉಳಿಸಿಕೊಂಡಿರುವ ತಮಿಳುನಾಡಿನ ಹೊಸೂರು, ಕೃಷ್ಣಗಿರಿ, ಸೇಲಂ ಮುಂತಾದ ಪ್ರಾಂತ್ಯಗಳಲ್ಲಿ ದರುವು ಶಬ್ದ ತನ್ನ ಜೀವಂತಿಕೆಯನ್ನು ಉಳಿಸಿಕೊಂಡಿದೆ.

ನಿಘಂಟು ಶಾಸ್ತ್ರಗಳಾಚೆಗೆ ಜಾನಪದರು ಇಂತಹ ಶಬ್ದಗಳ ಅರ್ಥಗಳನ್ನು ವಿಸ್ತರಿಸುವುದು ಸಹಜ ಸಾಮಾನ್ಯ. ಇಲ್ಲಿ ದರುವುಯೆಂದರೆ ಹಾಡುವುದು ಎಂಬುದರೊಂದಿಗೆ, ಆಲಾಪಿಸುವುದು, ಹಾಡಲು ಪ್ರಾರಂಭಿಸುವುದು ಪ್ರಧಾನ ಗಾಯಕ (ಮೇಳದ ನಾಯಕ) ಸಹ ಗಾಯಕರಿಗೆ ತನ್ನ ದರುವಿಗೆ ಹಾಡುವ ಸೂಚನೆ ಕೊಡುವುದು ಆಗುತ್ತದೆ. ಅಲ್ಲದೆ ಪಾತ್ರದಾರಿ ತನ್ನ ಹಾಡನ್ನು ಎತ್ತಿಕೊಳ್ಳುವಂತೆ ಹಿಮ್ಮೇಳದವರಿಗೆ ಕೊಡುವ ಸೂಚನೆಯೂ ಹೌದು ಇದನ್ನು ಮಲಿಯಪ್ಪನಹಳ್ಳಿಯಲ್ಲಿ ಆಡುತ್ತಿದ್ದ ಶಶಿರೇಖಾ ಪರಿಣಯ, ದಾನವಳ್ಳಿಯವರ ಚುಂಚ ಲಕ್ಷ್ಮೀ ಕೆಳಿಕೆಗಳಲ್ಲಿ ಮತ್ತು ಅಬ್ಬೇನಹಳ್ಳಿ ದೊಡ್ಡ ಕಡತೂರುಗಳಲ್ಲಿ ಆಡುತ್ತಿದ್ದ ಕನ್ನಡ ತೆಲುಗು ಪೆರುಮಾಳಪ್ಪನವರ ನೇತೃತ್ವದಲ್ಲಿ ಮಾಲೂರಿನಲ್ಲಿ ಆಡುತ್ತಿದ್ದ ತಮಿಳು ನಾಟಕಗಳಲ್ಲಿ ಗಮನಿಸಬಹುದು.

**ದರುವು ಪದದ ವಿಸ್ತಾರ**

ಇದುವರಿಗೂ ದಕ್ಕಲ ಸಂಸ್ಕೃತಿ ಮತ್ತು ಮಾಸ್ಟೀಕ ಸಂಸ್ಕೃತಿ ಜನಾಂಗದ ಬಗ್ಗೆ ನಡೆದ ಅಧ್ಯಯನದಲ್ಲಿ ದರುವು ಪದದ ಪ್ರಸ್ತಾಪವಾಗದಿರುವುದು ಕಂಡುಬರುತ್ತದೆ. ದರುವಿಗೆ ಸಂಬಂಧಪಟ್ಟ ಹಾಡುಗಳನ್ನು ಈ ಅಧ್ಯಯನಗಳಲ್ಲಿ ಕಂಡುಬಂದರು ಸಹ ಪ್ರತ್ಯೇಕವಾಗಿ ದರುವಿನ ಮಹತ್ವವನ್ನು ತಿಳಿಯದಿರುವುದು ಹಾಗೂ ಅದರ ಬಗ್ಗೆ ಗಮನ ಹರಿಯದಿರುವುದು ತಿಳಿಯುತ್ತದೆ ದರುವಿಗೆ ಸಂಬಂಧಪಟ್ಟ ಹಾಡುಗಳು ಮಾಸ್ಟೀಕರ ಸಂಸ್ಕೃತಿಯಲ್ಲಿ ಸಿಂದ ಮಾದಿಗರಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಆದರೆ ದರುವಿನ ಪ್ರಸ್ತಾಪವಿಲ್ಲ.

ಹೀಗೆ ಜಾಂಬಪುರಾಣ ಮತ್ತು ಗಂಗಭಾರತದ ವಿಷಯಕ್ಕೆ ಸಂಬಂಧಪಟ್ಟು ಕ್ಷೇತ್ರ ಕಾರ್ಯ ಮಾಡಿದಾಗ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಹೊಸಕೋಟೆ ತಾಲೂಕಿನ ಶಿವನಾಪುರ ಎಂಬ ಗ್ರಾಮದ ದಕ್ಕಲ ಮುನಿಸ್ವಾಮಿ ಎಂಬುವವರು ಜಾಂಬ ಪುರಾಣವನ್ನು ಹಾಡುವ ಸಂದರ್ಭದಲ್ಲಿ ಈ ಪದದ ಬಗ್ಗೆ ಪ್ರಸ್ತಾಪವಾಯಿತು. ಹಾಡಿನ ಕೊನೆಯಲ್ಲಿ "ತಾಲಿಲ್ಲೋ ಲಿಲ್ಲೋ ಲಿಲ್ಲಾಯಿಲೋ" ಎಂದು ಹೇಳುವ ಸಾಲು ದರುವು ಎಂದು ತಿಳಿಸಿದಾಗ ಈ ಪದದ ಬಗ್ಗೆ ಸ. ರಘುನಾಥ ಅವರೊಂದಿಗೆ ಚರ್ಚೆ ಮಾಡಿದಾಗ ಅವರು ಬಹುಪಾಲು ಇದಕ್ಕೆ ಸಮ್ಮತಿಸಿ ಸೂಕ್ತವಾಗಿರುವುದು ಇದೆ ಪದ ಅಭಿಮತವಾಗಿತ್ತು. ಆ ಹಿನ್ನೆಲೆಯಲ್ಲಿ ಹಲವು ಕೃತಿಗಳ ಪರಾಮರ್ಶೆ ಬೇಕಾಗುವುದು ಎಂದು ತಿಳಿಸಿದರು, ದರುವಿಗೆ ಸಂಬಂಧಪಟ್ಟ ಬರೆದ ಲೇಖನದ ಮಾಹಿತಿ ಪ್ರಸ್ತಾಪಿಸಲಾಗಿದೆ.

ಹಾಗೆಯೇ 'ದರು' ಇದು ಪ್ರಧಾನವಾಗಿ ನೃತ್ಯಕ್ಕೆ ಸಂಬಂಧಪಟ್ಟ ಇದು ನಾಟ್ಯಶಾಸ್ತ್ರದಲ್ಲಿ ಹೇಳಲಾದ ಧ್ರುವಗಳ ರೂಪಾಂತರ ಎಂದು ಕೆಲವರ ಮತ. ಅಲ್ಲಿ ಈ ಧ್ರುವಗಳ ಉಪಯೋಗವನ್ನು ವಿವರಿಸುವುದಕ್ಕೂ 'ಕೂಚಿಪುಡಿ ಯಕ್ಷಗಾನಗಳಲ್ಲಿ' ಈ ದರುವಿನ ಪಾತ್ರಕ್ಕು ಸಾಮ್ಯವಿದೆ. ಒಂದು ಪಾತ್ರದ ಪ್ರವೇಶವಾಗುವಾಗ ಹಾಡಲಾಗುವ ಧ್ರುವ ಪ್ರವೇಶಿಃ ಧ್ರುವ ಪಾತ್ರವು ರಂಗಸ್ಥಳದಿಂದ ಹೊರಟು ಹೋಗುವಾಗ ಹಾಡುವ ಧ್ರುವ ನಿಷ್ಕಾಮ ಧ್ರುವ ನೃತ್ಯದ ಮಧ್ಯೆ ಮಧ್ಯೆ ಹಾಡಲಾಗುವುದು ಆಕ್ಷೇಪ ಧ್ರುವ ಹೀಗೆ ಆಯಾಸಂದರ್ಭಕ್ಕೆ ಅನುಗುಣವಾಗಿ ರಚಿತವಾಗಿವೆ. ಕೂಚಿಪುಡಿಯಲ್ಲಿಯೂ ಹಾಗೆಯೇ ಪಾತ್ರ ಪ್ರವೇಶ ದರು ಇದೆ. ಸಂಧರ್ಭೋಚಿತವಾಗಿ ನಿರೂಪಿತವಾಗುವ ಇತರ ದರುವುಗಳು.

ದರು ಪ್ರಧಾನವಾಗಿ ನೃತ್ಯಕ್ಷೇತ್ರಕ್ಕೆ ಸಂಬಂಧಪಟ್ಟಿದ್ದು ಎಂದರೂ ಬಿಡಿಯಾಗಿಯೂ ಹಾಡಲಾಗುವವು ಎಂದ "ಗಾನಕಲಾ ಮಂಜರಿ"ಯಲ್ಲಿ "ಬಿ.ವಿ.ಕೆ. ಶಾಸ್ತ್ರೀ" ಅವರು ಹೇಳುತ್ತಾರೆ ಇವುಗಳ ವಸ್ತು ಬಹುತೇಕ ಒಬ್ಬ ಪೋಷಕನ ಗುಣಗಾನ ನಡೆ ಮಧ್ಯೆಗತಿಯಲ್ಲಿ ಚಿಟ್ಟೆ ಸ್ವರಗಳು ಇರುತ್ತವೆ. ಕೆಲವು ದರುವುಗಳು ಮಾತು ಅಥವಾ ಪದ ಭಾಗವನ್ನು ಚಮತ್ಕಾರವಾಗಿ ರಚಿಸಿರುತ್ತಾರೆ. ಇಲ್ಲಿ ಚತುರ ದಾಮೋದರನ ಸಂಗೀತ ದರ್ಪಣದಿಂದ ಒಂದು ಗಮನಾರ್ಹ ಭಾಗವನ್ನು ಉಲ್ಲೇಖಿಸಬೇಕಾಗಿದೆ, ಅಲ್ಲಿ ನೃತ್ಯ ಪ್ರಕರಣದಲ್ಲಿ ಈ ಮೂರು ಪ್ರಕಾರಗಳು ಹೇಳಲ್ಪಟ್ಟಿವೆ, ಚಿಂದು ದರು ಮತ್ತು ಪದ ಚಿಂದು ನೃತ್ಯಕ್ಕೆ ಹಿನ್ನೆಲೆಯಾದ ಗೇಯ ಪ್ರಕಾರ ಅಥವಾ ಹಾಡು ದ್ರಾವಿಡ ಅಥವಾ ತಮಿಳು ಭಾಷೆಯಲ್ಲಿಯೂ ದರು ತ್ರೈಲಿಂಗ ಅಥವಾ ತೆಲುಗು ಭಾಷೆಯಲ್ಲಿಯೂ ಪದವು ಕರ್ಣಾಟಕ ಭಾಷೆಯಲ್ಲಿಯೂ ಇರುವುದಾಗಿ ಹೇಳಿದ್ದಾರೆ. ಹಾಗೆಯೇ ಜಾಂಬ ಪುರಾಣ ಯಕ್ಷಗಾನ, ಚಿಂದುದಕ್ಕಲಿ, ತೊಗಲು ಗೊಂಬೆಯಾಟ ಅಸಾದಿ ಬುರ್ರಕಥಾ ಮುಂತಾದ ಹಾಡು ಕಥೆಗಳು ಸಾಲಾಗಿ ನಿಂತು ದರುವನ್ನು ಕೇಳಿಸುತ್ತವೆ, ತಮಟೆ ವಾದನವಂತು ದರುವಿನಿಂದೆ ಹುಟ್ಟಿದ್ದು ಎಂದು ಅನಿಸುತ್ತದೆ, ದರುವು ಇದಕ್ಕೆಲ್ಲ ಉಸಿರು.[೧]

**೪.೨. ಐತಿಹಾಸಿಕ ಹಿನ್ನೆಲೆ**

ದಾಮೋದರ ಪಂಡಿತ ಮೊದಲು ವಿಜಯನಗರದ ತಿರುಮಲರಾಯನ ಆಸ್ಥಾನದಲ್ಲಿದ್ದು ಆನಂತರ ಮೊಘಲ್ ಚಕ್ರವರ್ತಿ ಜಹಾಂಗೀರ್‌ನ ಆಸ್ಥಾನವನ್ನು ಅಲಂಕರಿಸಿ ಸನ್ಮಾನಿತನಾದವನು, ಸಂಗೀತ ದರ್ಪಣದಲ್ಲಿನ ಈ ಉಲ್ಲೇಖನದಿಂದ ೧೭ನೇ ಶತಮಾನದ ವೇಳೆಗೆ ಚಿಂದು ದರು ಮತ್ತು ಪದ ಪ್ರಕಾರಗಳಿಗೂ ನೃತ್ಯ ಕಲೆಗೂ ನಿಕಟ ಸಂಬಂಧ ಬೆಳೆದಿತ್ತೆಂದು ಹೇಳಬಹುದು.

೧೭-೧೯ನೇ ಶತಮಾಗಳ ಅಂತರದಲ್ಲಿ ಹೇರಳವಾಗಿ ಯಕ್ಷಗಾನ ರಚನೆಯಾಯಿತು ಎಲ್ಲೆಲ್ಲಿ ಒಬ್ಬ ರಸಿಕ ಪೋಷಕ ದೊರೆ ಇದ್ದನೋ ಅಲ್ಲಿ ಯಕ್ಷಗಾನಗಳಿಗೆ ಪ್ರೋತ್ಸಾಹವಿರುತ್ತಿತ್ತು. ಆದರೆ ಇದಕ್ಕೆ ಪ್ರಧಾನ ಕೇಂದ್ರ ತಂಜಾವೂರು. ಅಲ್ಲಿ ರಘುನಾಥ ನಾಯಕರ ಕಾಲದಿಂದಲೂ ಒಂದೇ ಸಮನೆ ಯಕ್ಷಗಾನಗಳು ರಚನೆಯಾಗಿದೆ. ಅವುಗಳಲ್ಲಿ ವಚನ, ಪದ್ಯ ಮುಂತಾದವುಗಳೆ

ಅಲ್ಲದೆ ಬಹುಸಂಖ್ಯೆಯ ದರುವುಗಳೂ ಇವೆ. ಆದರೆ ಅವೆಲ್ಲಾ ತೆಲುಗು ಭಾಷೆಯಲ್ಲಿವೆ. ಅಂದು ತೆಲುಗು ಒಂದು ರೀತಿಯ ರಾಜ ಭಾಷೆ ಅದರಲ್ಲಿಯೂ ಸಂಗೀತ ನೃತ್ಯ ಮುಂತಾದ ಕಲೆಗಳಿಗೆ ಅವಶ್ಯಕವೆನಿಸಿದೆ, ಭಾಷೆ ಇದರ ಪ್ರಭಾವವು ತೆಲುಗು ಬಿಟ್ಟು ಇತರ ಭಾಷಾ ಪ್ರಾಂತ್ಯಗಳಲ್ಲಿಯೂ ಕಾಣಬರುತ್ತದೆ. ಚಿಕ್ಕದೇವರಾಜ ಒಡೆಯರು ಬರೆದ 'ಗೀತ ಗೋಪಾಲ' ಹಾಗೂ 'ಚಿಕ್ಕದೇವರಾಜ ವಿಲಾಸಮು' ಎಂಬ ಯಕ್ಷಗಾನವಿದೆ, ಆತನ ಮಗ ಕಂಠೀರವ ರಾಜ ವಸಂತೋತ್ಸವ ವಿಲಾಸಂ ಕಲಾವಾಣಿ ವಿಲಾಸಂ ಮುಂತಾದ ಹತ್ತು ಹನ್ನೆರಡು ಯಕ್ಷಗಾನಗಳನ್ನು ಬರೆದಿದ್ದಾನೆ. ಹಾಗೆಯೇ ಬೆಂಗಳೂರು ಕಟ್ಟಿದ ಕೆಂಪೇಗೌಡನ ಮೊಮ್ಮಗ ಇಮ್ಮಡಿ ಹಿರಿಯ ಕೆಂಪೇಗೌಡ ಗಂಗಾ ಗೌರೀ ವಿಲಾಸಮು ಎಂಬ ಯಕ್ಷಗಾನವನ್ನು ಬರೆದಿದ್ದಾನೆ, ಇವೆಲ್ಲಾ ತೆಲುಗಿನಲ್ಲಿವೆ. ಇವುಗಳಲ್ಲಿ ಬರುವ ದರುವುಗಳು ಸಂಧರ್ಭೋಚಿತವಾಗಿ ರಚಿತವಾದುದರಿಂದ ಇತರ ಹಾಡುಗಳಂತೆ ಸಾರ್ವಜನಿಕವಾಗಿ ಪ್ರಚಾರಕ್ಕೆ ಬರಲಿಲ್ಲವೆನ್ನಬಹುದು.[೨]

ಗಂಗಭಾರತ ಬಿಸ್ಸೇಗೌನಿಪಾಟ ಮುಂತಾದವನ್ನು ಹೆಸರಿಸಿದಾಗ 'ಜೋಂಕಿಣಿ ಮುನೆಪ್ಪ', 'ಕೋನಿಗ ಹನುಮಪ್ಪ', ಚಿಂತಪಲ್ಲಿ ಮಾನುಪನಿ ಮುನೆಪ್ಪ ಅಯಿ "ದರುವು ಪಾಟಲು" (ಅವು ದರುವಿನ ಹಾಡುಗಳು) ಅನ್ನುತ್ತಿದ್ದರು. ಅಂದರೆ ಆಲಾಪನೆ ಸಹಿತವಾದ ಹಾಡುಗಳು ಸಾಮಾನ್ಯವಾಗಿ ಮಹಿಳಾ ಗಾಯಕರು ದರುವಿಲ್ಲದೆ ಗಂಗಭಾರತವನ್ನು ಹಾಡುವುದುಂಟು. ಗಂಗಭಾರತದಲ್ಲಿ ದರುವಿನ ಕೆಲವು ಹಾಡಿನ ವಾಕ್ಯಗಳನ್ನು ಗಮನಿಸಬಹುದು.

"ತಾಲಿಲ್ಲೋ ಲಿಲ್ಲೆ ಲಿಲ್ಲಾಯಿಲೇ, ತಾಲಿಲ್ಲೋ ಲಿಲ್ಲೆ ಲಿಲ್ಲಾಯಿಲೆ, ಮಾಲೆಲಲೋ, ಜಗ್ಗನಕ, ಜಣ ಕುಜಣ ಜಗಾರೇ" ಇಂತಹ ವಿವಿಧ ತಾಳ ಲಯ ಗತಿಯ ದರುವುಗಳು ತಿಳಿಯುತ್ತವೆ.

ಶಾಸ್ತ್ರೀಯ ಗಾಯನದ ಆಲಾಪನೆಗಳಿಗೂ ಈ ಆಲಾಪನೆಗಳಿಗೂ ವ್ಯತ್ಯಾಸಗಳು ಸ್ಪಷ್ಟವಿದೆ. ಅಲ್ಲಿ ಗಾಯಕನ ಪ್ರತಿಭೆ ಸಾಮರ್ಥ್ಯಗಳಿವೆ. ಆಲಾಪನೆಯ ಕಾಲ ವಿಸ್ತರಿಸುತ್ತದೆ, ಹೋಲಿಸಿದರೆ ಇಲ್ಲೆ ಹ್ರಸ್ವ ಕಿರಿದು ಆದರೆ ಪರಿಗಾಮದಲ್ಲಿ ಶಾಸ್ತ್ರೀಯ ಗಾಯನದ ಆಲಾಪನೆಗಿಂತ ಕಡಿಮೆಯಲ್ಲ, ಹೆಚ್ಚಿನ ಜಾನಪದ ದರುವುಗಳು ಹೊಕ್ಕುಳ ಮೂಲದಿಂದ ಹೊರಡುತ್ತವೆ. ಆದರೆ ಸಂಚಾರದ ವ್ಯಾಪ್ತಿ ಅಷ್ಟಿರುವುದಿಲ್ಲ, ಕಾರಣ ಜನಪದ ಕೇಳುಗರ ಆಸಕ್ತಿ ಪಾಂಡಿತ್ಯದಲ್ಲಿ ಅವರದು ಮಿತಹಿತವಷ್ಟೆ ಆದರೆ ಪ್ರಸಂಗದಲ್ಲಿ ಕಂದ, ಸೀಸ, ವಾಕ್ಯೂತ್ರಗಳಿದ್ದು ದರುವಿನ ಕಾಲಗತಿ ಲಭಿಸಿದರೆ ಇವರು ಅಮಿತ ಆನಂದದಲ್ಲಿ ಮುಳುಗಿ ಇನ್ನೊಂದು ಕಿತ ಅಂಗವನ್ನು ಎಂದು ಪ್ರೇರೇಪಿಸುತ್ತಾರೆ, ಹೀಗಾದಾಗ ಗಾಯಕನಿಗೆ ಹಬ್ಬವಾಗಿರುತ್ತದೆ.

ದರುವಿನಲ್ಲಿ ಖಾಚಿತ್ಯ ಮಾಧುರ್ಯ ವಿರಲೇಬೇಕು. ಅದಿಲ್ಲದೆ ಹಾಗಿರದೆ ದರುವು ಸರಿಯಲ್ಲದಿದ್ದರೆ ತಗಿ ನಮ್ಮೂರ ಪಾಟಮ್ಮನ (ಅಗಸಗಿತ್ತಿ) ಕತ್ತೆ ಕೂಗಿದಂಗಿದೆ ಎಂಬ ನೇರ ಟೀಕೆ ಮುಖದೆದುರೆ ನಡೆಯುತ್ತದೆ. ಇಂತಹ ಸಂದರ್ಭದಲ್ಲಿ ಜನರು ದರುವಿನಲ್ಲೆ ಗಾಯಕನ ಯೋಗ್ಯತೆಯನ್ನು ಅಳೆದು ಬಿಡುವರು. ಅವರು ಹಾಡು ಭಾಷೆಯಲ್ಲೆ "ಎಲ್ಲಿನಿಂಕ ಇಡಕಂಡು

ಬಂದ್ರೋ ಇವನ್ನ" ಅಂದರಂತೂ ಮುಗಿದೇ ಹೋಯಿತು. ಹಾಗಾಗಿಯೇ ದರುವು ಮುಖ್ಯ ಇದು ರಂಜನಿಯವೂ ಅಹುದು. ಹಾಡಿಗೆ ದರುವು ಜೀವ ಎಂಬುದನ್ನು ಈ ಗಾಯಕರು ಚನ್ನಾಗಿ ಬಲ್ಲರು.

ದರುವಿನ ಗಾಯನದ ಪ್ರಸ್ತಾಪವನ್ನು ಶ್ರೀ ರ. ಸತ್ಯನಾರಾಯಣ ರವರು ಸಹ ಕರ್ಣಾಟಕ ಸಂಗೀತವಾಹಿನಿಯಲ್ಲಿ ಬಹಳ ವಿಭಿನ್ನವಾಗಿ ಅದರ ಮಹತ್ವವನ್ನು ತಿಳಿಸಿದ್ದಾರೆ. ದರುವಿನ ಮಹತ್ವ ತಿಳಿಸುವ ಸಂದರ್ಭದಲ್ಲಿ ಶೃಂಗಾರ ರಸವಿನಿಯೋಜ್ಯವಾಗಿ ಗೇಯ ಪ್ರಬಂಧಗಳ ವರ್ಣನೆಯನ್ನು ಮುಗಿಸುವ ಮುನ್ನ ದರುವನ್ನು ಪರಿಚಯಿಸುವುದು ಉಚಿತ. ಧ್ರುವ ಎಂದು ಭರತಮುನಿಯ ನಾಟ್ಯಶಾಸ್ತ್ರದಲ್ಲಿ ನಾಟಕ ಕಥನಿರ್ವಹಣೆಗಾಗಿ ವಿವಿಧ ಪಾತ್ರಗಳು ವಿವಿಧ ಸಂದರ್ಭಗಳಲ್ಲಿ ಅಭಿನಯಿಸಿಕೊಂಡು ಹಾಡಬೇಕಾಗಿದ್ದ ಗೇಯಪ್ರಬಂಧದ ಹೆಸರು ಅಪಭ್ರಂಶಗೊಂಡು ದರು ಎಂದಾಗಿದೆಯೆಂದು ತೋರುತ್ತದೆ. ಇದು ಉಳಿದುಕೊಂಡು ಬಂದಿರುವುದಾದರೂ ಗೇಯರೂಪಕ ಅಥವಾ ನೃತ್ಯ ರೂಪಕಗಳಲ್ಲಿ ಮಾತ್ರ ಶಾಸ್ತ್ರೀಯ ಕರ್ಣಾಟಕ ಸಂಗೀತ ಕಛೇರಿಗಳಿಗಾಗಿ ಇವು ರಚಿತವೂ ಅಲ್ಲ ಪ್ರಯುಕ್ತವೂ ಅಲ್ಲ ಇಂದಿಗೂ ಇವು ಭರತನಾಟ್ಯ ಶಾಸ್ತ್ರಗಳಲ್ಲಿ ಬಳಕೆಯಾಗುವುದೇ ಹೆಚ್ಚು ಎಂದು ಈ ಸಂಗೀತ ವಿದ್ವಾಂಸರು ತಿಳಿಸುತ್ತಾರೆ.[೩]

ದರುವಿನ ಧಾತುವಿನಲ್ಲಿ ಏಕರೂಪವಾದ ರಚನೆಯಿರುವುದು ಕಂಡುಬರುವುದಿಲ್ಲ ಅನೇಕ ದರುವುಗಳಲ್ಲಿ ಕೃತಿ ಪದ ಜಾವಳಿಗಳಲ್ಲಿ ಇರುವಂತೆ ಪಲ್ಲವಿ ಅನುಪಲ್ಲವಿ ಮತ್ತು ಮೂರು ಮತ್ತು ಐದು ಚರಣಗಳಿರುತ್ತವೆ. ಕೆಲವು ವೇಳೆ ಅನುಪಲ್ಲವಿಯೇ ಇರುವುದಿಲ್ಲ ಇನ್ನು ಕೆಲವು ದರುವುಗಳಲ್ಲಿ ಈ ಬಗೆಯ ವಿಂಗಡನೆಯು ಇಲ್ಲದಿದ್ದರೂ ಏಕಧಾತುಕವಾದ ಅನೇಕ ಚರಣಗಳಿರುವಲ್ಲಿ ಮೊದಲನೆಯದೇ ಪುನರುಕ್ತವಾಗುತ್ತದೆ. ಚರಣದ ಕೊನೆಯಲ್ಲಿ ಮುಕ್ತಾಯಸ್ವರವೋ ಪಾಠಕ್ಷರ ರಚನೆಯೋ (ಸೊಲ್ಲುಕಟ್ಟು) ಸೊಲ್ಲುಕಟ್ಟು ಎಂದರೆ ಮಾತಿನ ನುಡಿ ಇರುವುದೆ ಹೆಚ್ಚು. ಮೊದಲನೆಯದು ಗೇಯ ಪ್ರಧಾನವಾದುದು, ಎರಡನೆಯದು ನೃತ್ಯ ಪ್ರಧಾನವಾದುದು, ಕೆಲವು ವೇಳೆ ಮುಕ್ತಾಯಸ್ವರದ ಜೊತೆಗೆ ಸೊಲ್ಲುಕಟ್ಟು ಮಿಶ್ರವಾಗಿರುವುದುಂಟು.

ಹೀಗೆ ಸಂಗೀತ ನೃತ್ಯ ಯಕ್ಷಗಾನಗಳಲ್ಲಿ ದರುವು ಪ್ರಾಮುಖ್ಯತೆ ತಿಳಿಸುವಾಗ ದರುವು ಒಂದೇ ರಾಗದಲ್ಲಿ ಒಂದೇ ತಾಳದಲ್ಲಿ ಮಧ್ಯ ಲಯದಲ್ಲಿ ರಚಿತವಾಗಿರುತ್ತದೆ ಎಂದು ತಿಳಿಸುತ್ತವೆ. ಚಿಂದು ಎಲ್ಲಮ್ಮ ತೆಲುಗು ಸಾಹಿತ್ಯದಲ್ಲಿ ಸಹ ಯಕ್ಷಗಾನ ಪ್ರದರ್ಶನದಲ್ಲಿ ಬರುವ ದರುವಿನ ತರ್ಕ "ತಾಲೆಲ್ಲೇ ಲಿಲ್ಲೆ ಲೆಲ್ಲಾಲ್ಲೇಲೋ ಲೆಲ್ಲೆ", "ತಾಲೆಲ್ಲೇ ಮಾ ಲೆಲ್ಲೆಲೋ" ಎಂದು ಅದರ ಚರಣದ ಬಗ್ಗೆ ತಿಳಿಸುತ್ತಾನೆ.

ಮೊದಲನೆಯ ಅಥವಾ ಕೊನೆಯ ಚರಣವನ್ನು ಸ್ವಲ್ಪ ವಿಲಂಬಿತವಾಗಿ ಹಾಡುವ ಪದ್ಧತಿಯಿದೆ. ಈ ರೀತಿಯ ಧಾತುವಿನ್ಯಾಸವು ದರುವಿನಲ್ಲಿ ನಿಯಮವೇನೂ ಅಲ್ಲ. ಏಕೆಂದರೆ ತಾಳವಿಲ್ಲದೆಯೇ ತಮ್ಮಲ್ಲಿರುವ ಛಂದೋದ್ರವಕ್ಕೆ ಅನುಸಾರವಾಗಿ ಹಾಡುವ ನಡೆಯುವ ದರುವುಗಳೂ ಇವೆ.

ಒಂದು–ಮೂರು, ಎರಡು–ನಾಲ್ಕು ಈ ಪದಗಳಲ್ಲಿ ಪ್ರಾಸವಿರುವ ಚತುಷ್ಪದೀವೃತ್ತಗಳನ್ನು ಇತರ ವೃತ್ತಗಳನ್ನೂ ದ್ವಿಪದಿಗಳನ್ನು ದರುವುಗಳಾಗಿ ಹಾಡುವುದುಂಟು. ಎಂಟು ಚರಣಗಳಿರುವ ದರುವಿಗೆ ಅಷ್ಟಕವೆಂದು ಹೆಸರು. ಇದನ್ನು ನಾಲ್ಕು ದ್ವಿಪದಿಗಳಾಗಿ ವಿಂಗಡಿಸಿಕೊಂಡು ಇದರಲ್ಲಿ ಮೊದಲನೆಯದರ ಧಾತುವನ್ನು ಉಳಿದ ಮೂರರಲ್ಲಿ ಪುನರುಕ್ತಿ ಮಾಡಲಾಗುವುದು.

ಗೇಯ ರೂಪಕ ಅಥವಾ ನೃತ್ಯ ನಾಟಕಗಳಲ್ಲಿ ದರುವುಗಳನ್ನು ವಿಶೇಷವಾಗಿ ಉಪಯೋಗಿಸುತ್ತಾರೆ. ಆಯಾ ಸಂಧರ್ಭಾನುಸಾರವಾಗಿ ದರುವುಗಳನ್ನು ಹೀಗೆ ವಿಂಗಡಿಸಲಾಗುತ್ತದೆ. ಪಾತ್ರ ಪ್ರವೇಶ ದರುವನ್ನು ಒಂದು ಪಾತ್ರವು ರಂಗವನ್ನು ಪ್ರವೇಶಿಸುವಾಗ ತನ್ನ ಪರಿಚಯವನ್ನು ಹೇಳಿಕೊಳ್ಳುತ್ತ ಕಥಾಸಂದರ್ಭವನ್ನು ಪ್ರವೇಶಗೊಳಿಸುತ್ತದೆ. ಇದಕ್ಕೆ ತಕ್ಕ ನೃತ್ಯ, ನೃತ್ಯಗಳು ದರುವಿನಲ್ಲಿ ಇರುತ್ತವೆ. ಬೇರೆ ರೀತಿಯಲ್ಲಿ ಪ್ರೇಕ್ಷಕರಿಗೆ ತಿಳಿಸಬೇಕಾದುದು ಸಾಧ್ಯವಿಲ್ಲದಿದ್ದಾಗ ಅಥವಾ ಅನಾವಶ್ಯಕವಾದಾಗ ಒಂದು ಪಾತ್ರವು ತನ್ನ ಮನೋಗತ ಭಾವ ಅಭಿಪ್ರಾಯ, ಉದ್ದೇಶ ಇತ್ಯಾದಿಗಳನ್ನು ಸ್ವಗತವಾಗಿ ವಿಲಂಬ ಲಯದಲ್ಲಿ ದರುವಿನ ಮೂಲಕ ಪ್ರಕಟಗೊಳಿಸುತ್ತದೆ.

ವರ್ಣದರುವಿನಲ್ಲಿ ವ್ಯಕ್ತಿ ವಿಷಯ ಅಥವಾ ಘಟನೆಗಳ ವರ್ಣನೆಯಿರುತ್ತದೆ. ಕೋಲಾಟ ದರುವು ಪಾತ್ರಗಳು ಕೋಲಾಟವಾಡುತ್ತ ಹಾಡುವ ದರು, ಸಂಭಾಷಣೆಯಲ್ಲಿ ಕಥೆಯು ಮುಂದುವರೆದರೆ ಅಂತಹ ಹಾಡಿಗೆ ಸಂವಾದ ದರುವೆಂದು ಹೆಸರು. ಇದರಲ್ಲಿ ಹಾಡು ನೃತ್ಯಗಳೆರಡೂ ಇರುತ್ತವೆ. ಉತ್ತರ ಪ್ರತ್ಯುತ್ತರ ದರುವಿನಲ್ಲಿ ಎರಡು ಪಾತ್ರಗಳು ಸಂಕ್ಷೇಪವಾದ ಚುರುಕಾದ ವಾಕ್ಯಖಂಡಗಳನ್ನು ಹಾಡಿ ನರ್ತಿಸಿ ಕಥೆಯನ್ನು ಮುಂದುವರಿಸುತ್ತವೆ. ದರುವಿನಲ್ಲಿ ನೃತ್ಯವಿದ್ದರೆ ಅದರ ನೃತ್ಯಾಂಶಗಳಿಗೆ ಬೇರೆ ಬೇರೆ ಹೆಸರುಗಳನ್ನು ಕೊಡಲಾಗುತ್ತದೆ. ದರುವಿನ ಪ್ರಾರಂಭದಲ್ಲಿರುವ ನೃತ್ಯವು ಮುಖಜತಿಯೆನಿಸಿಕೊಳ್ಳುತ್ತದೆ. ದರುವಿನ ಬೇರೆ ಬೇರೆ ಖಂಡಗಳನ್ನು ಮುಗಿಸುವಾಗ ಮಾಡುವ ನೃತ್ಯಕ್ಕೆ ಮುಕುಟಜತಿ ಎಂದು ಹೆಸರು. ಮುಕುಟಜತಿ ಎಂದರೆ ಕಿರೀಟಧಾರಿ ಎಂದು ದರುವಿನ ಮುಕ್ತಾಯದಲ್ಲಿರುವ ನೃತ್ಯಕ್ಕೆ ಅಂತ್ಯಜತಿ ಎಂಬ ಅನ್ವರ್ಥನಾಮವಿದೆ.

ದರುವುಗಳನ್ನು ರಚಿಸಿರುವವರಲ್ಲಿ ಮೇಳತ್ತೂರು ವೆಂಕಟರಾಮಶಾಸ್ತ್ರಿ ಸಾಹಜಿ 'ರಾಮ ಸ್ವಾಮಿ ದೀಕ್ಷಿತ್', 'ತ್ಯಾಗಯ್ಯ ನಾರಾಯಣತೀರ್ಥ', 'ಸ್ವಾತಿತಿರುನಾಳ ಬಾಲುಸ್ವಾಮಿ ದೀಕ್ಷಿತ್' 'ಸುಬ್ಬರಾಮ ದೀಕ್ಷಿತ್' ಮುಂತಾದವರು ಸಹ ಹೇಳಿರುವುದು ಕಂಡುಬರುತ್ತದೆ. ಹೀಗೆ ದರುವಿನಲ್ಲಿ ಮಾತು ನಾಟಕಕ್ಕೆ ಸಂಬಂಧಿಸಿದಿದ್ದರೆ ಪ್ರಭು ಮತ್ತು ನಾಯಕನ ಸೂಕ್ತ ವರ್ಣನೆ ವಿರಹ ಶೃಂಗಾರ ಮುಂತಾದವುಗಳನ್ನು ಒಳಗೊಂಡಿರುತ್ತದೆ.

'ಅಂಗೊಂದು ದರುವಾಕು' ಎಂದರೆ 'ಹಾಡು ಹಾಡು' ಹಾಗೂ 'ಆಲಾಪಿಸು' ಎಂದೂ ಆಗುತ್ತದೆ. ಸರ‍್ಯಾಗಿ ದರುವೆತ್ತಿಕೊ ಎಂದರೆ ಆಲಾಪನೆಯನ್ನು ಸರಿಯಾಗಿ ಮಾಡು ಎಂದಂತೆ, ನೀನೂ ಅವನ ಜೋತ್ಯಾಗ ದರುವಾಕು ಎಂದರೆ ನೀನೂ ಅವನೊಂದಿಗೆ ಹಾಡು ಎಂದರ್ಥ, ದರುವು ಸರಿಲ್ಲ ಅಂದರೆಂದರೆ ಆಲಾಪನೆಯೂ ಹಾಡುಗಾರಿಕೆಯೂ ಸರಿಯಿಲ್ಲವೆಂಬ ಸೂಚನೆ, ಜಾನಪದ ಗಾಯನದಲ್ಲಿ ಮಂದ್ರ ತಾರಕಗಳ ದರುವಿನಲ್ಲಿ ಹೆಣ್ಣುಗಂಡು ಸಮ ಸ್ವರ ಜಟ್ಟಿಗಳು.

ದರುವಿಲ್ಲದೆ ಹೋರಾಟದ ಹಾಡುಗಳು ಕ್ರಾಂತಿ ಗೀತೆಗಳನ್ನು ಹಾಡುವವರು ಇಲ್ಲವೆನ್ನಬಹುದು ಇವರು ಜನಪದ ಗಾಯಕರೆ, ದರುವು ಉಂಟು ಮಾಡುವ ಸಾಮೂಹಿಕ ಪರಿಣಾಮಗಳನ್ನು ಗಮನಿಸಿಯೇ ದರುವನ್ನು ತಮ್ಮ ಹಾಡುಗಾರಿಕೆಗೆ ತೆಗೆದುಕೊಂಡಿರುವರು.

ಹೀಗೆ ಹೇಳುತ್ತ ಕೆಲವೊಮ್ಮೆ ದೇವರುಗಳ ರಸ ಘೋಷಣೆಯನ್ನು ಮಾಡುವುದುಂಟು ಇದನ್ನು ಬುರ್ರ ಕಥಾದಲ್ಲಿ ಕಾಣಬಹುದು.

**೪.೩. ದರುವು ಹಾಡುಗಳ ಪ್ರಸ್ತಾಪ**

ಗಂಗಭಾರತದ ಗಾರುಡಿಗದಲ್ಲಿ ಜೋಂಕಿಣಿ ಮುನಿಯಪ್ಪ ದರುವಿನ ಬಗ್ಗೆ ಹೇಳುವಂತಹ ಹಾಡುಗಳು ಅವರು ಹಾಡುವಂತಹ ಪರಿ ನಾವು ಇಲ್ಲಿ ತಿಳಿಯುತ್ತೇವೆ. ಜಾತ್ರೆಯಲ್ಲಿ, ಸಂತೆಯಲ್ಲಿ ಕರೆಸಿಕೊಂಡವರ ಮನೆ ಮುಂದೆ ಜೋಂಕಿಣಿ ನುಡಿಸುವರು. ಅವರು ಜೋಂಕಿಣಿ ನುಡಿಸಿದರೆ ನಾದಸುದೆ ಹೆಜ್ಜೆ ಹೆಜ್ಜೆಗೆ ಗೆಜ್ಜೆ ಉಲಿ ಆಲಾಪನೆ ಹೊರಟರೆ ಗಂಗಭಾರತದ ಕಥೆ ನುಡಿಕೆಯ ಕೈ ಮುನೆಪ್ಪನದು ಗೆಜ್ಜೆಯನ್ನು ಪಲುಕಿಸುವ ಕಾಲು ಮುನಿಯಪ್ಪದು ಹಾಡುವ ಕೊರಳು ಮುನೆಪ್ಪನದು.

ಮೊದಲಿಗೆ ಜೋಂಕಿಣಿ (ಚೌಡಿಕೆ) ಶ್ರುತಿ ಹಿಡಿಯುತ್ತಲೆ ದರುವು (ಆಲಾಪನೆ) ಧ್ವನಿ ಕೂಡಿ ಕುದುರುತ್ತಲೆ ತಾಲಿಲ್ಲೋ ಲಿಲ್ಲೆ ಲಿಲ್ಲಾಯಿಲೆ.. ಮಂದ್ರದಿಂದ ಏರೇರು ಏರುತ್ತೇರುತ್ತ ಪಂಚಮ ಸಂಚಾರದಲ್ಲಿರುತ್ತದೆ. ಗಾನೋತ್ಸಾಹ ಅಹಹಾ..ಅ..ಥೈ ಹೆಜ್ಜೆ ನೆಲ ಒದ್ದೆದ್ದು ಜುಳು ಜುಳು ಜುಳುಗುಟ್ಟುತ್ತ ಧರೆಗೆ ಇಳಿವ ಗಂಗಭಾರತದ ಆ ಧ್ವನಿ, ಆ ಕೇಕೆ, ಆ ಉತ್ಸಾಹ ಉಕ್ಕುಕ್ಕಿ ಧುಮು ಧುಮು ಧುಮುಕುವ ಕಥಾ ಧಾರೆ. ಇದು ಜೋಂಕಿಣಿ ಮುನೆಪ್ಪನ ಕೊರಳಿಂದ ಧುಮ್ಮಿಕ್ಕುವ ಗಂಗಭಾರತದ ಕಥೆ ಉಕ್ಕಿ ಹರಿದು ಬರುವ ಪರಿ.

ಹಾಗೆಯೇ ಕಥೆ ಕುಲದ ಹಿರಿಮೆಯನ್ನು ದೈವದ ಭಕ್ತಿಯನ್ನು ಹೇಳುವುದನ್ನು ಮಾಡುವುದು ಜಾಗೃತ ಅಸ್ಪೃಶ್ಯ ಪ್ರಜ್ಞೆ ಹಾಕುವ ಪ್ರಶ್ನೆಗಳು ಒಡಲಲ್ಲಿ ತುಂಬಿದ ನೋವುಗಳು ಪ್ರತಿ ಧ್ವನಿಯಾಗುತ್ತದೆ. ಹೀಗೆ ಕುಲದ ಹಿರಿಮೆಯಲ್ಲಿ ಹಾಡುವಂತಹ ದರುವು ಸಹಿತ ಪದಗಳು.

ಪಂದೀನಿ ತಿಂಟಾರು ಊರುಲೋ ಉಂಟಾರು
ಗೋವೊನಿ ತಿಂಟಾಮು, ಊರ ಬೈಟುಂಟಾಮು॥
ಪಂದೇಮಿ ತಿಂಟುಂದಿ, ಗೋವೇಮಿ ತಿಂಟುಂದಿ,
ಸರಿ ಸೂಸಿ ಚಪ್ಪಂಡಿ ಓ ಪೆದ್ದಲಾರಾ॥
ಹಂದೇನ ತಿನ್ನುತ್ತಾರೆ, ಊರಗೇ ಇರುತ್ತಾರೆ॥
ಗೋವುನ ತಿನ್ನುತ್ತೀವಿ, ಊರಾಸೆಗೆ ಹಿರುತೀವಿ॥
ಹಂದೇನು ತಿಂತ್ತಾದೆ, ಗೋವೇನು ತಿಂತ್ತಾದೆ॥
ಸರಿ ಕಂಡು ಹೇಳಿರಾ ಓ ದೊಡ್ಡ ಮನುಸಾರೆ॥

ತಾಲಿಲ್ಲೋ ಲಿಲ್ಲೇ ಲಿಲ್ಲಾಯಿ ಲೋವ. . . .
ಮಾದಿಗ ಮಾದಿಗ ಅಂದೂರಯ್ಯ ಜನಲು
ಮಾದಿ ಕಾಕ ಮೀದೇಮುಂದಯ್ಯ ॥ ತಾಲಿಲ್ಲೋ ॥
ಮಾದಿಗ ಮಾದಿಗ ಅನುತ್ತಾರೆ ಮಂದಿ
ನಮ್ಮದಲುದೆ ನಿಮದೆನ್ನೈತೆ ಅಯ್ಯ

ತಾಲಿಲ್ಲೋ ಲಿಲ್ಲೇ ಲಿಲ್ಲಾಯಿ ಲೋ. . . .
ಜಂಗಾಮು ಮಾದಿ ಲಿಂಗಾಮು ಮಾದಿ
ಗಂಗ ಮಾದಿ ಗಂಗಸ್ಥಾನಮು ಮಾದಿ ॥ ತಾಲಿಲ್ಲೋ ॥
ಜಂಗಾವು ನಮುದು ಲಿಂಗಾವು ನಮುದು
ಗಂಗೇಯ ನಮುದು ಗಂಗೆ ತಾಣವೇ ನಮುದು
ತಾಲಿಲ್ಲೋ ಲಿಲ್ಲೇ ಲಿಲ್ಲಾಯಿ ಲೋ. . . .
ಕಾದು ಕೂಡದಂಟಾರು, ಖಾಯಾನಿ ಕೊಸ್ತಾರು
ಕಂಚಿಲೋ ಉಂದನ್ನ ಶಾಸನಮು,
ಕಂಚಿಲೋ ಶಾಸಮೆಂತಂಗಾ ಸೆದಿವಿನಾ
ಪಂಚಾಲ ಗುರುವುಲಕು ಬಿದ್ದಾಲು ಮೇಮು ॥ ತಾಲಿಲ್ಲೋ ॥
ಬ್ಯಾಡಗೀಡ ಅಂತಾರೆ, ಜಗಳಕ್ಕೆ ಬತ್ತಾರೆ
ಕಂಚಾಗ ಐತಗ್ಯಾ ಶಾಸನ
ಕಂಚಾಗ ಶಾಸನವ ಎಸಾರ ಸದುವಿದರು
ಪಂಚಾಳ ಗುರುಗಳಕ ಸಿಸುಗಳು ನಾವು
ತಾಲಿಲ್ಲೋ ಲಿಲ್ಲೇ ಲಿಲ್ಲಾಯಿ ಲೋ. . . .

**ದರುವು ಹಾಡುಗಳ ಸಂಗ್ರಹಣೆ**

ಈ ಹಾಡುಗಳಲ್ಲಿ ದರುವೆ ಪಲ್ಲವಿಯಾಗಿರುವುದನ್ನು ಗಮನಿಸಬಹುದು ಇದು ಪ್ರತಿ ಚರಣದ ಅಂತ್ಯಕ್ಕೆ ಪುನರಾವರ್ತನೆಗೊಳ್ಳುತ್ತದೆ.

ತಾಲಿಲ್ಲೋ ಲಿಲ್ಲೆ ಲಿಲ್ಲಾಯಿಲೇ, ತಾಲಿಲ್ಲೋ ಲಿಲ್ಲೆ ಲಿಲ್ಲಾಯಿಲೋ
ದಂಡಾಮು ನಾ ಸ್ವಾಮೀ, ದಂಡಾಮು ನಾ ಸ್ವಾಮಿ.
ಸೂಸೇಟಿ ಸಭಲಕು ದಂಡಾಮಯ್ಯ॥
ಸೂಸೇಟಿ ಸಭಲಕು ದಂಡಾಮು ನಾ ಸ್ವಾಮಿ
ನನುಗನ್ನ ತಲ್ಲೀಕಿ ದಂಡಾಮಯ್ಯ॥

ನನುಗನ್ನ ತಲ್ಲೀಕಿ ದಂಡಾಮು ನಾ ಸ್ವಾಮಿ
ನನುಗನ್ನ ತಲ್ಲೀಕಿ ದಂಡಾಮಯ್ಯ॥
ನನುಗನ್ನ ತಂಡ್ರೀಕಿ ದಂಡಾಮಯ್ಯ॥

ನನುಗನ್ನ ತಂಡ್ರೀಕಿ ದಂಡಾಮು ನಾ ಸ್ವಾಮಿ
ನಾ ಪಾಲಿ ಗುರುವೂಕು ದಂಡಾಮಯ್ಯ॥
ನಾ ಪಾಲಿ ಗುರುವೂಕು ದಂಡಾಮು ನಾ ಸ್ವಾಮಿ
ನಾಸೇತಿ ಖತ್ತೀಕಿ ದಂಡಾಮಯ್ಯ॥
ನಾಸೇತಿ ಖತ್ತೀಕಿ ದಂಡಾಮು ನಾ ಸ್ವಾಮಿ
ಭೂ ದೇವಿ ತಲ್ಲೀಕು ದಂಡಾಮಯ್ಯ॥
ಭೂ ದೇವಿ ತಲ್ಲೀಕು ದಂಡಾಮು ನಾ ಸ್ವಾಮಿ
ಆಕಾಶ ವಾಣೀಕು ದಂಡಾಮಯ್ಯ॥
ಆಕಾಶ ವಾಣೀಕು ದಂಡಾಮು ನಾ ಸ್ವಾಮಿ
ಸೂರ್ಯ ಚಂದ್ರಾದುಲಕು ದಂಡಾಮಯ್ಯ॥
ತಾಲಿಲ್ಲೋ ಲಿಲ್ಲೆ ಮಯ, ಶಿವ ತಾಲಿಲ್ಲೋ ಲಿಲ್ಲಿಮಯ.

**ವಿಶ್ವಬ್ರಹ್ಮ:** ಏನು ತಾತ, ವಯಸ್ಸಿಗೆ ತಾತಿ, ನೀರಿಗೆ ತಾತ, ವಿರಾಟನಿಗೆ ತಾತ, ಈ ಭೂಮಿಗೆ ಆರು ತಿಂಗಳು ದೊಡ್ಡವನೆ ನೀನು, ಈಶ್ವರುನಿಗೆ ಲಗ್ನ ಆಗಬೇಕು, ಕೊರಳ ತಾಳಿ ಬೇಕು ತಾತ, ನನಗೆ ತತ್ತಿಗಳು ಬೇಕು, ಸಲಕರಣೆಗಳ್ಯಾವೂ ಇಲ್ಲ. ಅಗಸ್ತ್ಯ ಮಹಾಮುನಿ ಶಾಪದಿಂದ ನನ್ನ ವರವು ಹೋಗಿದೆ. ನಾನು ಬಾಧೆಪಡುತ್ತಿರುವೆ ನನಗೆ ತತ್ತಿಗಳು ಬೇಕು ತಾತ.

ತಾತ ಅವನು ಆದಿ ಜಾಂಬವಂತನು
ಮಗನನ್ನೇ ಕೊಂದು ತಾನು ತಿತ್ತಿ ಸುಲಿದನೋ
//ತಾಲಿಲ್ಲೋ//
ಚರ್ಮದ ತತ್ತಿಗಳ ಆಗಿಸಿದೆ ಸ್ವಾಮಿ
ಕೈಗಳನ್ನೇ ಓಡಿ ಚಿಮ್ಮಟಿಗೆ ಆಗಿಸಿದೆ
//ತಾಲಿಲ್ಲೋ//
ಕೈಗಳನ್ನೇ ಓಡಿ ಚಿಮ್ಮಟಿಗೆ ಆಗಿಸಿದೆ
ಸಿರವ ಕುಮಟಾವ ಆಗಿಸಿದೆ
//ತಾಲಿಲ್ಲೋ//
ಸಿರ ಕಮಟಾವ ಆಗಿಸಿದೆ ಸ್ವಾಮಿ
ತಲೆಮಿದುಳ ಬೆಳ್ಳಿಗಾರ ಆಗಿಸಿದೆ
//ತಾಲಿಲ್ಲೋ//
ತಲೆ ಮಿದುಳ ಬೆಳ್ಳಿಗಾರ ಆಗಿಸಿದೆ ಸ್ವಾಮಿ
ಕಿವಿಗಳ ತಕ್ಕಡಿ ಆಗಿಸಿದೆ
//ತಾಲಿಲ್ಲೋ//

ಕಿವಿಗಳ ತಕ್ಕಡಿ ಆಗಿಸಿದೆ ಸ್ವಾಮಿ
ಕಣ್ಣುಗಳ ಕಣ್ಣದ್ದ ಆಗಿಸಿದೆ

//ತಾಲಿಲ್ಲೋ//

ಕಣ್ಣುಗಳ ಕಣ್ಣದ್ದ ಆಗಿಸಿದೆ ಸ್ವಾಮಿ
ಮೂಗ ಊದುಗೊಳವೆ ಆಗಿಸಿದೆ

//ತಾಲಿಲ್ಲೋ//

ಮೂಗ ಊದುಗೊಳವೆ ಆಗಿಸಿದೆ ಸ್ವಾಮಿ
ತುಟಿಗಳ ತೂಗು ಒಟ್ಟು ಆಗಿಸಿದೆ

//ತಾಲಿಲ್ಲೋ//

ತುಟಿಗಳ ತೂಗು ಒಟ್ಟು ಆಗಿಸಿದೆ ಸ್ವಾಮಿ
ಹಲ್ಲುಗಳ ಆಖರಾಯಿ ಆಗಿಸಿದೆ

//ತಾಲಿಲ್ಲೋ//

ಹಲ್ಲುಗಳ ಆಖರಾಯಿ ಆಗಿಸಿದೆ ಸ್ವಾಮಿ
ಗಂಟಲ ಸ್ವರವ ಆಗಿಸಿದೆ

//ತಾಲಿಲ್ಲೋ//

ಗಂಟ್ಲ ಸ್ವರ ಆಗಿಸಿದೆ ಸ್ವಾಮಿ
ಗುಂಡಿಗೆಯ ಇದ್ದಿಲು ಆಗಿಸಿದೆ

//ತಾಲಿಲ್ಲೋ//

ಗುಂಡಿಗೆಯ ಇದ್ದಿಲು ಆಗಿಸಿದೆ ಸ್ವಾಮಿ
ಎದೆಯ ಪೀಠ ಆಗಿಸಿದೆ

//ತಾಲಿಲ್ಲೋ//

ಎದೆಯ ಪೀಠ ಆಗಿಸಿದೆ ಸ್ವಾಮಿ
ಕರುಳ ನೆಲ್ಲೋಟ್ಟು ಆಗಿಸಿದೆ

//ತಾಲಿಲ್ಲೋ//

ಕರುಳ ನೆಲ್ಲೋಟ ಆಗಿಸಿದೆ ಸ್ವಾಮಿ
ದೊಕ್ಕೆ ಗುಂಪಿಗೆ ಆಗಿಸಿದೆ

//ತಾಲಿಲ್ಲೋ//

ದಕ್ಕೆ ಗುಂಪಿಗೆ ಆಗಿಸಿದೆ ಸ್ವಾಮಿ
ಕಾಲುಗಳು ಚಮ್ಮಟಿಗೆ ಆಗಿಸಿದೆ

//ತಾಲಿಲ್ಲೋ//

**ಆದಿಜಾಂಬವ**

ಏನು ಕಂದಾ ನನ್ನ ದೊಡ್ಡ ಮಗನನ್ನು ಕೊಂದು ನಿನಗೆ ಬೇಕಾದ ಆಯುಧಗನ್ನು ಮಾಡಿಕೊಟ್ಟಿದ್ದೇನೆ. ನೀನು ಹೋಗಿ ಆ ಈಶ್ವರನ ಮದುವೆ ಮಾತ್ರಕ್ಕೆ ತಾಳಿ ಬೊಟ್ಟು ಮಾಡಿಕೊಡು ಹೋಗು.

**ವಿಶ್ವಬ್ರಹ್ಮ**

ಏನು ತಾತ ನಿನ್ನ ದೊಡ್ಡ ಮಗನನ್ನು ಕೊಂದು ನೀನೇನೋ ನನಗೆ ಬೇಕಾದ ಆಯುಧಗಳನ್ನು ಮಾಡಿಕೊಟ್ಟೆ ಅದೇನೋ ಸರಿ.ಆದರೆ ಪ್ರಪಂಚದಲ್ಲಿ ನಿನ್ನ ಹೆಸರು ಮಾತ್ರ ನೀನು ಮಸಾ ಕತ್ತಿ ಮಾಡಿಸಿದೆ ತಾತ.

ನಾನು ಮಸಾಕತ್ತಿ ಕೈಲಿಡಿಸುವೆ
//ತಾಲಿಲ್ಲೋ//
ಚಂದ್ರಗ್ರಹಣದ ದಿನ ಮಾಡಿಸಿದ ಕತ್ತಿ
ಸೂರ್ಯ ಗ್ರಹಣದ ದಿನ ನೋಡಿಸಿದೆ
//ತಾಲಿಲ್ಲೋ//
ಝುಗ ಝುಗ ಅನ್ನೊವ ದಂಥಾದ ಹಿಡಿಕತ್ತಿ
ಎತ್ತಿರದೆ ಏಳು ಗೇಣು ಉದ್ದ ಇರುವುದೋ
//ತಾಲಿಲ್ಲೋ//
ಕತ್ತಿ ತೆಗೆದುಕೊಂಡು ಕಾಶಿ ಘೋಷಾದಲ್ಲಿ
ದಿಟ್ಟಗೆ ಸಿಂದು ಅಡಿದನೋ
//ತಾಲಿಲ್ಲೋ//
ಕೆಂಪು ಬಾವುಟಗಳು ಕ್ವಾರೆ ಮೀಸೆಯು
ಸಲ್ಲುವುದೆ ನಮ್ಮ ಆದಿಜಾಂಬವನಿಗೆ
//ತಾಲಿಲ್ಲೋ//
ಸಣ್ಣಕತ್ತಿ ದೊಡ್ಡಕತ್ತಿ ಸಾಣೆ ಹಿಡಿಯೋವಾಗ
ಸಿಂಧು ತುಳಿದದ್ದು ನನ ಕತ್ತಿಯೋ
//ತಾಲಿಲ್ಲೋ//
ಸಣ್ಣ ಕತ್ತಿ ದೊಡ್ಡಕತ್ತಿ ಸಾಣೆ ಹಿಡಿಯೋವಾಗ
ಏಳು ಖಂಡುಗ ಉಕ್ಕು ಉದುರೀತಲ್ಲ
//ತಾಲಿಲ್ಲೋ//
ಉದುರೀದ ಉಕ್ಕನ್ನು ಮೂಟೇಗೆ ತುಂಬಿ
ರಾಸೂಟಿ ಕೋಟೆಗೆ ಕಳುಹಿಸಿದರೋ
//ತಾಲಿಲ್ಲೋ//
ಸಿಂದು ಸಿಂದು ಅಂತಾರೆ ಸ್ವಾಮಿ
ಎಲ್ಲೆಲ್ಲೂ ಹುಟ್ಟು ಸಿಂದು ಅಲ್ಲವೇನು
//ತಾಲಿಲ್ಲೋ//
ಅಂತಾರೆ ಹನುಮಂತನೋಡನಿರುವ ಎಲ್ಲ ಛತ್ರಿಗಳು
ಸಲ್ಲುವುದೇ ನಮ್ಮ ಪಾಲಿನ ಗುರುವಿಗೆ
//ತಾಲಿಲ್ಲೋ//

ವೇದಗಳ ಓದಿ ನೋಡಿರಿ

ಸೋದಿಸಿ ನಮ್ಮ ಅದಿಕುಲವ

ಏನೋ ಹೇಳಿರಿ

//ತಾಲಿಲ್ಲೋ//

ಜಾತಿಗಳು ಹದಿನೆಂಟು ಜಾತಿಗಳು

ಈ ಪ್ರಪಂಚದಲ್ಲಿ ಜಾತಿಗಳು

//ತಾಲಿಲ್ಲೋ//

ಹದಿನೆಂಟು ಜಾತಿಗಳು

ಹದಿನೆಂಟು ಜಾತಿಗಳು

ಹದಿನೇಳು ಹುಟ್ಟಿದ ತಾವು ಹೇಳಿರಿ

//ತಾಲಿಲ್ಲೋ//

ಗೋವಿಂದ ಗೋವಿಂದ ಅಂತಾರೆ

ಈ ಪ್ರಪಂಚದಲ್ಲಿ ಗೋವಿಂದ ಗೋವಿಂದ ಅಂತಾರೆ

ಗೋಪುಗೆ ಸಂದ ಗೋಸಾಂಗನು ಯಾವ ಕುಲವಯ್ಯ

//ತಾಲಿಲ್ಲೋ//

ಹೇಳು ವೇದವ ಹೇಳು ಅಂತಾರೆ

ಈ ಪ್ರಪಂಚದಲ್ಲಿ ಹೇಳು ಶಾಸ್ತ್ರವ ಹೇಳು ಅಂತಾರೆ

ಚಪ್ಪಲಿ ಕೊಯ್ದ ಜಾಂಬವನು ಯಾವ ಕುಲವಯ್ಯ

//ತಾಲಿಲ್ಲೋ//

ನಾರದಾ ಮುನಿ ಯಾವ ಕುಲವಯ್ಯ

ಈ ಪ್ರಪಂಚದಲ್ಲಿ ನಾರದಾ ಮುನಿ ಯಾವ ಜಾತಿಯೋ

//ತಾಲಿಲ್ಲೋ//

ನಾ ಅಂದರೆ...... ತಂದೆ

ದಾಸಿ ಕುಲವ ಏನೋ ಹೇಳಿರೋ

//ತಾಲಿಲ್ಲೋ//

ಊರ್ವಸೀಗೆ ಗಂಡ ಯಾರಯ್ಯ

ಈ ಪ್ರಪಂಚದಲ್ಲಿ ಊರ್ವಸೀಗೆ

ಗಂಡ ಯಾರಯ್ಯ

//ತಾಲಿಲ್ಲೋ//

ಮರಳು ಮೂಟೆಯ ಅನ್ನ ಮಾಡಿದ

ಆರಂಜ್ಯೋತಿ ಯಾರ ಮಗಳು

//ತಾಲಿಲ್ಲೋ//

ಆದಿ ಆದಿಗೆ ಮೊದಲು ಆದಿ ಶಾಸ್ತ್ರಕ್ಕೆ ಮೊದಲು
ಆದಿಗೆ ಆರ್‍ತಿಂಗ್ಳು ದೊಡ್ಡವರೋ
//ತಾಲಿಲ್ಲೋ//
ಹಂದೀನಿ ತಿಂತೀವಿ ಊರ ಒಳಗಿರ್‍ತೀರಿ
ಗೋವನ್ನು ತಿಂತೀವಿ ಊರ ಹೊರಗಿರ್‍ತೀವಿ
//ತಾಲಿಲ್ಲೋ//
ಹಂದಿ ಹೆಚ್ಚೋ ಗೋವು ಹೆಚ್ಚೋ
ಯಾವ ಕುಲವು ಹೆಚ್ಚೋ ಹೇಳಿರಿ ಸ್ವಾಮಿ
//ತಾಲಿಲ್ಲೋ//
ಮಾದಿಗ ಮಾದಿಗ ಅಂತಾರೆ ಸ್ವಾಮಿ
ನಮ್ಮದಲ್ಲದೆ ನಿಮ್ಮದು ಎಲ್ಲಿದೆ
//ತಾಲಿಲ್ಲೋ//
ಮೇಲು ತಿರುಪತಿಯಲ್ಲಿ ನೇಯ್ಗೆ ಮಾಡುವ
ಪದ್ಮಶಾಲಿ ಹಿರಿಯರು ನಮ್ಮವರು
//ತಾಲಿಲ್ಲೋ//
ಯಿದ್ಯೆ ಹೇಳು ಬುದ್ದಿ ಹೇಳು
ಓದು ಹೇಳು ಶಾಸ್ತ್ರವ ಹೇಳು
//ತಾಲಿಲ್ಲೋ//
ಓದು ಹೇಳು ಶಾಸ್ತ್ರವ ಹೇಳು
ಮದುವೆಗೆ ಹೇಳು ದ್ಯಾವರಕೆ ಹೇಳು
//ತಾಲಿಲ್ಲೋ//
ಮದುವೇಗೆ ಹೇಳು ದ್ಯಾವರಕೆ ಹೇಳು
ರಚ್ಚೇಲಿ ಇರುವ ರೆಡ್ಡೀಗಳಿಗೆ ಹೇಳು
//ತಾಲಿಲ್ಲೋ//
ರಚ್ಚೇಲಿ ಇರುವಂಥ ರೆಡ್ಡೀಗಳಿಗೆ ಹೇಳು
ದಾರಿ ಹಿಂದೆ ಹೋಗುವಂಥ ದೊರೆಗಳಿಗೆ ಹೇಳು
//ತಾಲಿಲ್ಲೋ//
ದಾರಿ ಹಿಂದೆ ಹೋಗುವಂಥ ದೊರೆಗಳಿಗೆ ಹೇಳು
ನಿಮ್ಮ ಅತ್ತೇಗೆ ಹೇಳು ನಿಮ್ಮ ಮಾವನಿಗೆ ಹೇಳು
//ತಾಲಿಲ್ಲೋ//
ನಿಮ್ಮ ಅತ್ತೇಗೆ ಹೇಳು ನಿಮ್ಮ ಮಾವನಿಗೆ ಹೇಳು
ಬರ್‍ತಾ ಹೇಳು ಹೋಗ್ತಾ ಹೇಳು
//ತಾಲಿಲ್ಲೋ//

ಬರ್‍ತಾ ಹೇಳು ಹೋಗ್ತಾ ಹೇಳು
ಮೂವರು ಮೂರ್ತಿಗಳು ರಾಜಮೂಲಕ್ಕೆ ಹೇಳು
//ತಾಲಿಲ್ಲೋ//
ಮೂವರು ಮೂರ್ತಿಗಳ ರಾಜಮೂಲಕ್ಕೆ ಹೇಳು
ಮುಟ್ಟದ್ದಕ್ಕೆ ಹೇಳು ಸುಡೋ ಜ್ವಾಲೆಗೆ ಹೇಳು
//ತಾಲಿಲ್ಲೋ//
ಮುಟ್ಟದ್ದಕ್ಕೆ ಹೇಳು ಸುಡೋ ಜ್ವಾಲೆಗೆ ಹೇಳು
ಸಂತೇಲಿ ನಿಂತು ಸರ್ವರಿಗೆ ಹೇಳು
//ತಾಲಿಲ್ಲೋ//
ಸಂತೇಲಿ ನಿಂತು ಸರ್ವರಿಗೆ ಹೇಳು
ಮೂವರು ಮೂರ್ತಿಗಳಿಗೆ ಮೂಲಾವೇ ಹೇಳು
//ತಾಲಿಲ್ಲೋ//
ಮುಟ್ಟದ್ದಕ್ಕೆ ಹೇಳು ಸುಡೋ ಜ್ವಾಎಗೆ ಹೇಳು
ಯಿದ್ಯೆ ಬುದ್ದಿ ಹೇಳು
//ತಾಲಿಲ್ಲೋ//
ಯಿದ್ಯೆ ಹೇಳು ಬುದ್ದಿ ಹೇಳು
ಓದು ಹೇಳು ಶಾಸ್ತ್ರ ಹೇಳು
//ತಾಲಿಲ್ಲೋ//
ಎಕ್ಕಡ ಅಂದರು ಅವರು ಜನರಿಗೆ ಒಪ್ಪಿಸಿ
ಒಪ್ಪಿಸಿ ಜನರಿಗೆ ಪಕ್ಕಕ್ಕೆ ನಿಂತೀನಿ
//ತಾಲಿಲ್ಲೋ//
ಎಕ್ಕಡ ಎಕ್ಕಡ ಅಂತಾರೆ ಸ್ವಾಮಿ
ಎಲ್ಲೆಲ್ಲೂ ಹುಟ್ಟಿದ್ದು ಎಕ್ಕಡ ಅಲ್ಲವೇ
//ತಾಲಿಲ್ಲೋ//
ಮಾದಿಗ ಮಾದಿಗ ಅಂತಾರೆ ಸ್ವಾಮಿ
ನಮ್ಮದಲ್ಲದೆ ನಿಮ್ಮದೆಲ್ಲದ್ದಾತು
//ತಾಲಿಲ್ಲೋ//
ಬಾರಯ್ಯ ಹೋಗಯ್ಯ ಕೂರಯ್ಯ
ಹೇಳು ನಮ್ಮ ಶಾಸ್ತ್ರವ ಹೇಳು
//ತಾಲಿಲ್ಲೋ//
ಹೇಳು ಅನ್ನುವ ನಿನ್ನ ಎಕ್ಕಡದಲ್ಲಿದೆ
ನನ್ನ ಯಾಕೆ ಸುದ್ದಿ ಕೇಳುವೆಯಯ್ಯ
//ತಾಲಿಲ್ಲೋ//

ಎಕ್ಕಡ ಅಂದ ಅವನ ಜನರೀಗೆ ಒಪ್ಪಿಸಿ
ಒಪ್ಪಿಸಿ ನಾನು ಪಕ್ಕಕ್ಕೆ ನಿಂತೀನಿ
//ತಾಲಿಲ್ಲೋ//
ಆದಿಗೆ ಬೀದಿಗೆ ಅಷ್ಟಲೋಕಕ್ಕೆ
ಆದಿಗೆ ಆರ್ತಿಂಗ್ಳು ದೊಡ್ಡವರು
//ತಾಲಿಲ್ಲೋ//
ಯಿದ್ಯೆಗಳ ಗುರುವೆ ಈರನಾಯಿಕಾ
ಯಿಶ್ವಬ್ರಹ್ಮ ನಿನಗೆ ದಂಡಾವಯ್ಯ
//ತಾಲಿಲ್ಲೋ//
ನಾಯೀಗೆ ಹುಟ್ಟಿದ ಕ್ವಾಮಿಟಿಯವರೆಲ್ಲ
ತಪ್ಪುಲೆಕ್ಕಗಳ ಬಲು ಚನ್ನಾಗಿ ಬರೆದಾರೋ
//ತಾಲಿಲ್ಲೋ//
ಕ್ವಾಮಿಟಿ ಕ್ವಾಮಿಟಿ ಅಂತೀರಿ ಸ್ವಾಮಿ
ಕ್ವಾಮಿಟಿ ನಮ್ಮ ಕುಲ ಬಂಧೂಗನು
//ತಾಲಿಲ್ಲೋ//
ದೊಡ್ಡಮನೆಯವನನ್ನು ಮದುವೇಗೆ ಬಾ ಎಂದು
ಒಪ್ಪಿಸಿ ಕರೆಸಿದಳು ಕ್ವಾಮಿಟೆಲ್ಲಮ್ಮ
//ತಾಲಿಲ್ಲೋ//
ಚಿಕ್ಕ ಮನೆಯವನನ್ನು ಮುಂದಕ್ಕೆ ಮಡಗಿಕೊಂಡು
ಅಕ್ಷತೆ ಸುರಿದಾನೋ ಜಾಂಬವನು
//ತಾಲಿಲ್ಲೋ//
ಇಲ್ಲಸಲ್ಲದೆಂದು ಕಲಹಕ್ಕೆ ಬಂದಾರೆ
ಕಂಚೀಲಿ ಇದೆಯಣ್ಣ ಶಾಸನವೂ
//ತಾಲಿಲ್ಲೋ//
ಕಂಚೀಲಿ ಶಾಸನವ ಎಷ್ಟಂತ ಬರೆದರೂ
ಕಾಳಮ್ಮ ಮಗನೇನೆ ನಮ್ಮ ಗುರುವು
//ತಾಲಿಲ್ಲೋ//
ಹಳೆಯ ಗೋಡೆಗಳಲ್ಲಿ ಮಾದಿಗಿತ್ತಿ ಇದ್ದರೂನೂ
ಮನಸೋತು ಹೋಗಿದ್ದು ಹಾರವನು
//ತಾಲಿಲ್ಲೋ//

ಮೇಲಿನ ಸಾಲುಗಳಲ್ಲಿ ಮಾದಿಗರು ಹಾಗೂ ಉಪಕುಲಗಳು ತಮ್ಮ ಜಾತಿಯನ್ನು ಕೀಳಾಗಿ ಕಾಣುವ ಮೇಲ್‌ವರ್ಗದ ಸಮುದಾಯಗಳಿಗೆ ತಿಳಿ ಹೇಳುವ ಹಂದಿಯನ್ನು ತಿನ್ನುತ್ತಾರೆ.

ಊರಿನ ಒಳಗೆ ವಾಸಿಸುತ್ತಾರೆ. ಗೋವಿನ ಮಾಂಸವನ್ನು ತಿನ್ನುತ್ತೇವೆ. ಊರಿನ ಹೊರಗೆ ಇರುತ್ತಾರೆ. ಗೋಮಾಂಸ ತಿನ್ನುತ್ತೇವೆ ಆದರೆ ಊರಿನಿಂದ ಹೊರಗೆ ಇಟ್ಟಿದ್ದೀರಾ ಹಂದಿ ಏನು ತಿನ್ನುತ್ತದೆ, ಗೋವು ಏನು ತಿನ್ನುತ್ತದೆ. ಯಾವುದು ಸರಿ ನೀವು ಹೇಳಿ ಯಾರು ಮೇಲು ಯಾರು ಕೀಳು ಅಂತ ಎಂದು ಸಮಾಜದಲ್ಲಿ ತಳಸಮುದಾಯಗಳಾದ ಮಾದಿಗ ಹಾಗೂ ಉಪಕುಲಗಳಿಗೆ ಕೊಟ್ಟಿರುವ ಸ್ಥಾನ ಹಾಗೂ ಅವರನ್ನು ದೂರವಿರಿಸಿದ್ದಾರೆ. ಮಾದಿಗ ಮಾದಿಗ ಎಂದು ಎಲ್ಲಾರೂ ನಿಂದ್ಸುವಿಸರ ಎಲ್ಲಾವು ನಮ್ಮದಲ್ಲದೆ ನಿಮ್ಮದೇನಿಗೆ ಹೇಳಿ ಭೂಮಿ ಸೃಷ್ಟಿಗೆ ನಾವೆ ಕಾರಣ ಭೂಮಿಯ ಮೇಲೆ ಎಲ್ಲಾರಿಗಿಂತ ನಾವೆ ಮಾದರಿಗರು ಆದರೆ ಇಂದು ನೆಲ ನಿಲ್ಲಲು ಭೂಮಿಯಿಲ್ಲದೆ ಭಿಕ್ಷೆ ಬೇಡಿ ಊರೂರು ಸುತ್ತಿದ್ದೇವೆ ಎಂದು ನೊಂದ ಧ್ವನಿಯ ನೋವಾಗಿಸಿಕೊಂಡು ದರುವು ಹಾಕಿಕೊಂಡು ಹಾಡುಗಳನ್ನು ಸೃಷ್ಟಿಸಿಕೊಂಡಿದ್ದಾರೆ.

ಜಂಗಮವು ನಮ್ಮದೆ ಲಿಂಗವು ನಮ್ಮದೆ ನಮ್ಮಿಂದಲೆ ಎಲ್ಲಾವೂ ದೊರೆತಿರುವುದು ಹಾಗೆ ಗಂಗೆ ನಮ್ಮ ಕುಲದವಳು ಅವಳು ಹುಟ್ಟಿದ ಸ್ಥಾನವು ನಮ್ಮ ಮನೆ ಆಗಿರುವಾಗ ಕುಡಿಯುವ ಬಿಂದಿಗೆ ತಂದರೆ ದೂರವೇಕೆ ತಳ್ಳುತ್ತೀರಾ ಹಾಗೂ ಊರಿಂದಲ್ಲೇ ದೂರವಿರಿಸಿದ್ದೀರಾ ಹಾಗೂ ನಮ್ಮ ಹಕ್ಕುಗಳಿಗಾಗಿ ಹೋರಾಡಿದರೆ ನಮ್ಮನ್ನು ನಿಂಧಿಸಿ ಜಗಳಕ್ಕೆ ಬರುತ್ತೀರಾ ಕಂಚಿಯಲ್ಲಿನ ಶಾಸನವೇ ಹೇಳುತ್ತದೆ ಪಾಂಚಾಳ ಗುರುಗಳ ಮಕ್ಕಳು ನಾವು ಎಂದು ಸಮಾಜಕ್ಕೆ ತೋರಿಸಿ ನಮ್ಮನ್ನು ಎಲ್ಲಾರ ಹಾಗೆ ಸಮಾನರಾಗಿ ಕಾಣಿರಿ ಎಂದು ದರುವಿನ ತಳಕ್ಕೆ ತಕ್ಕಂತೆ ಬದುಕಿನ ಹಕ್ಕಿಗಾಗಿ ಹೋರಾಡುವ ಹಾಡುಗಳು ಬದುಕಿನ ಮೂಲವಾಗಿದೆ.

ಗೋವಿಂದ ಗೋವಿಂದ ಅಂತೀರಿ ಸ್ವಾಮಿ
ಗೋವಿಂದ ಹುಟ್ಟಿದ ತಾವಲ್ಲಿ
ಗೋವನ್ನು ಕೊಯ್ದು ಗೋವನ್ನು ಅರೆದು
ಗೋವಿಂದ ಹಿಡಿಸುವ ಗೋಸಂಗಿಯೇ ಲಿಂಗ
ತಾಲಿಲ್ಲೋ ಲಿಲ್ಲೋ ಲಲ್ಲಾಯಿ ಲೋ....

ಆ ಗೋವನ್ನು ಕೊಯ್ದು ಆ ಚರ್ಮದ ಮೇಲೀನ
ನಾಲ್ಕು ಮೂಲೇಗೂ ನಾಲಕ್ಕೂ ಪಾಲಾದ್ರೂ ಹಾಕಿದೆ
ವಿಷ್ಣುದು ಒಂದು ಪಾಲು ಈಶ್ವರನದು ಒಂದು ಪಾಲು
ಬ್ರಹ್ಮನದು ಒಂದು ಪಾಲು ಜಾಂಬವನದು ಒಂದು ಪಾಲು
ತಾಲಿಲ್ಲೋ ಲಿಲ್ಲೋ ಲಲ್ಲಾಯಿ ಲೋ....

ವಿಷ್ಣುವಿಗೆ ಕೊಟ್ಟ ಪಾಲು ಒಟ್ಟು ಸೇರಿಸಿಕೊಂಡು
ಸುದ್ದ ನಾಮವ ಮಾಡಿದ ಸೂತ್ರದಂತ ಅಣ್ಣ
ಈಶ್ವರನಿಗೆ ಕೊಟ್ಟ ಪಾಲು ಒಟ್ಟು ಮಾಡಿಕೊಂಡು
ಈ ಭೂತಿ ಮಾಡಿದನು ಯಿಶ್ವದಲ್ಲಿ ಅಣ್ಣ

ಬ್ರಹ್ಮನಿಗೆ ಕೊಟ್ಟ ಪಾಲು ಒಟ್ಟು ಮಾಡಿಕೊಂಡು
ಚಂದನವ ಮಾಡಿದನು ಗೋಪ್ಯದಲ್ಲಿ ಅಣ್ಣ
ಜಾಂಬವನ ಪಾಲೆಲ್ಲ ಜಗತ್ತಿಗೆ ಹಂಚಿದ
ತಾಲಿಲ್ಲೋ ಲಿಲ್ಲೋ ಲಲ್ಲಾಯಿ ಲೋ....

ಈ ಹಾಡಿನ ತ್ರಿಮೂರ್ತಿಗಳ ಹಾಗೂ ಜಾಂಬವಂತನ ನಡುವಿನ ಸಂಬಂಧ ಹಾಗೂ ತಮ್ಮ ಹಿತಕ್ಕೆ ತಾವು ಹಂಚಿಕೆ ಮಾಡಿಕೊಂಡವರ ನಡುವೆ ಇಡೀ ಸಮಾಜದ ಹಿತಕ್ಕೆ ತನ್ನ ಪಾಲನ್ನು ಹಂಚುತ್ತಾನೆ. ಜಾಂಬವಂತ ಮುನಿ ಗೋವನ್ನು ಕೊಯಿದು ನಾಲ್ಕು ಭಾಗ ಮಾಡಿದ ಆ ನಾಲ್ಕು ಭಾಗಗಳು ಮೂರು ಭಾಗ ತ್ರಿಮೂರ್ತಿಗಳಿಗೆ ಹಂಚುತ್ತಾರೆ. ಮತ್ತೊಂದು ಭಾಗ ಜಾಂಬವಂತನಿಗೆ ಹಂಚುತ್ತಾರೆ. ತ್ರಿಮೂರ್ತಿಗಳಾದ ವಿಷ್ಣು ತನಗೆ ಬಂದ ಭಾಗವನ್ನು ಶುದ್ಧ ನಾಮವಾಗಿ ಮಾಡಿಕೊಂಡು ಸೂತ್ರದಂತೆ ಸುಮ್ಮನಾದ ಈಶ್ವರ ವಿಭೂತಿ ಮಾಡಿಕೊಂಡನು ಹಾಗೆ ಬ್ರಹ್ಮ ಚಂದನವ ಮಾಡಿಕೊಂಡು ತಮ್ಮ ಪಾಡಿಗೆ ಇದ್ದು ಬಿಟ್ಟಿದು ಅದರೆ ಜಾಂಬವಂತ ಮಾತ್ರ ತನ್ನ ಪಾಲನ್ನು ಜಗತ್ತಿಗೆ ಹಂಚಿ ಎಲ್ಲರನ್ನು ಸಮಾನವಾಗಿ ಕಂಡನಯ್ಯ. ಆದರೆ ಇಂದು ಜಾಂಬವ ಕುಲದಲ್ಲಿ ಹುಟ್ಟಿದ ನಮ್ಮನ್ನು ಮಾತ್ರ ದೂರವಿರಿಸಿದ್ದಾರೆ ಎಂದು ಮಾದಿಗ ಸಮುದಾಯಗಳ ಮಾತು.

ಮಾದಿಗ ಮಾದಿಗ ಅನುವರು ಆದರೆ
ನನ್ನದೆ ಮದ್ದಲೆ ಡೋಲಿನ ತೊಗಲು
ಕೈಯ ಜಂಬಿಯು ನನ್ನ ತೊಗಲು
ತಲೆಯ ಟೋಪಿಗೆ ನನ್ನದೆ ತೊಗಲು
ತಾಲಿಲ್ಲೋ ಲಿಲ್ಲೆ ಲಿಲ್ಲಾಯಿಲೇ

ಗೌಡರಿಗೆಲ್ಲ ನನ್ನದೆ ತೊಗಲು
ಕಮ್ಮಾರನಿಗೆ ನನ್ನದೆ ತೊಗಲು
ಬ್ರಾಹ್ಮಣ ಜನಿವಾರಕ್ಕೆ ನನ್ನದೆ ತೊಗಲು
ನಿನ್ನವರೆಲ್ಲ ತೊಗಲಾಗಿರಲು
ದೂರ ದೂಡೋದೇತಕೆ
ಜಾತಿಭೇದ ನೋಡುವುದೇತಕೆ
ತಾಲಿಲ್ಲೋ ಲಿಲ್ಲೆ ಲಿಲ್ಲಾಯಿಲೇ

ಹೆಂಗಸರೆಲ್ಲ ಬಾವಿಗೆ ಹೋಗಲು
ಹೆಂಗಸರೆಲ್ಲ ಬಿಂದಿಗೆ ಹಿಡಿದು
ಬಿಂದಿಗೆ ಹಿಡಿದು ನೀರಿಗೆ ಹೋಗಲು

ನಿನ್ನಯ ಜಾತಿ ಯಾವುದು ಎಂದರು
ಬಿಂದಿಗೆ ಬಿಂದಿಗೆ ತಾಕಿತಾಗಿ

ಕಮ್ಮಾರನಿಗೆ ಕೊಡಿರಿ
ಅರ ಶುದ್ಧಿಯ ಮಾಡಿ ಬಾವಿಗೆ ಇಳಿಸಿರಿ
ತಾಲಿಲ್ಲೋ ಲಿಲ್ಲೆ ಲಿಲ್ಲಾಯಿಲೇ

ಎಲ್ಲರೂ ನಮ್ಮನ್ನ ಮಾದಿಗ ಎಂದು ನಿಂದಿಸಿ ಅವಮಾನಿಸುತ್ತೀರಾ. ಆದರೆ ನಾವು ತಯಾರಿಸಿದ ಚರ್ಮದಿಂದ ತಯಾರಿಸಿದ ಡೋಲು ಹಾಗೂ ಚರ್ಮದಿಂದ ತಯಾರಿಸಿದ ಟೋಪಿಯನ್ನು ಆ ಚರ್ಮದ ತೊಗಲ ಹದ ಮಾಡಿದವರು ಯಾರು ಚಪ್ಪಲಿಯ ಧರ್ಮ ಅದಾ ಮಾಡಿ ಚಪ್ಪಲಿಯನ್ನು ತಯಾರಿಸಿದವರು ಯಾರು ಗೌಡರು ಹಾಕಿಕೊಳ್ಳುವ ತೊಗಲು ಯಾರದು ಬ್ರಾಹ್ಮಣ ಹಾಕಿಕೊಳ್ಳುವ ನೂಲಿನ ಜನಿವಾರ ಯಾರು ತಯಾರಿಸಿದರು ಅದರ ತೊಗಲು ಯಾರದು ನನ್ನ ಸಮುದಾಯಗಳ ತೊಗಲು ಹಾಕಿಕೊಂಡು ನಮ್ಮನ್ನು ನಿಂದಿಸಿ ಅವಮಾನಿಸುತ್ತೀರಾ. ಮಾದಿಗ ಸ್ತ್ರೀಯರು ಬಿಂದಿಗೆ ಹಿಡಿದು ನೀರಿಗೆ ಹೋದರೆ ನೀರಿನ ಕೊಳದಲ್ಲಿ ನಿಮ್ಮ ಜಾತಿ ಯಾವುದು ನಿಮ್ಮ ಬಿಂದಿಗೆ ನಮ್ಮ ಬಿಂದಿಗೆ ತಾಕುತ್ತದೆ ಎಂದು ಇರಿಸುವಿರಾ ಕೊಳವನ್ನು ಅಶುದ್ಧ ಮಾಡಿದ್ದೀರಾ. ನಮ್ಮನ್ನು ಯಾಕೆ ದೂರವಿರಿಸಿ ಜಾತಿಭೇದ ತೋರುತ್ತಿರುವ ಭಾವನೆಯನ್ನು ತಿಳಿಸುತ್ತಿದೆ.

ಊರಕೋಣನ ಕೊರಳ ಕಡಿದೊಗೆದು
ಮನೆ ಮನೆಗೊಂದು ಜ್ಯೋತಿ ಬೆಳಗಿಸಿದೆವೋ
ತಾಲಿಲ್ಲೋ ಲಿಲ್ಲೆ ಲಿಲ್ಲಾಯಿಲೇ

ಏಳೇಳು ಸಮುದ್ರಗಳು ಏಕವಾಗಿ ಹರಿಯುವಾಗ
ಕೆರೆಯ ಕಟ್ಟೆಯ ಬುನಾದಿ ಮೂಲ
ತಾಲಿಲ್ಲೋ ಲಿಲ್ಲೆ ಲಿಲ್ಲಾಯಿಲೇ

ಗುರುವಂತ ಹುಟ್ಟೀನಿ ಗುರುವಂತ ಬೆಳೆದೀನಿ
ಗುರುವಾಯಿ ನನ್ನೊಬ್ಬ ಗುರುವೆಂದು ಕೋ
ತಾಲಿಲ್ಲೋ ಲಿಲ್ಲೆ ಲಿಲ್ಲಾಯಿಲೇ

ಕೆರೆಗಳು ತುಂಬಿ ನೆರೆ ಹೋಗುವ ಕಾಲಕ್ಕೆ ಗಂಗ ಮಾತಗೆ ಬಂಬಿಟ್ಟಿನ ದೀಪಗಳ ಹಬ್ಬವ ಮಾಡಿ ಆಕೆಯು ನಮ್ಮ ಮೇಲೆ ತೋರಿದ ಕರುಣೆಗೆ ಪ್ರತಿ ಮನೆಗೊಂದು ಜ್ಯೋತಿ ಬೆಳಗಿಸುವ ವ್ಯಕ್ತಿ ಕೆರೆಯ ಕಟ್ಟೆಯನ್ನು ಭದ್ರಪಡಿಸುವ ವ್ಯಕ್ತಿಗಳು ಸಮಾಜಕ್ಕೆ ಗುರು ಸ್ಥಾನದಲ್ಲಿ ನಿಲ್ಲಬೇಕು ಎಂಬ ಆಶಯ. ಆದರೆ ಇಂತಹ ಸಮಾಜದಲ್ಲಿ ಅರ್ಹತೆಗಳು ಇಲ್ಲದವರು ಗುರುವಾಗಿ ಸ್ವೀಕರಿಸಿ ಬಿಟ್ಟಿದೆಯಲ್ಲ ಅದೆ ನೀನು ಮಾಡಿದ ತೊಡಕು. ಆದ್ದರಿಂದ ಅವರ ಬಾಯಲ್ಲೆ

ನಮ್ಮನ್ನು ಗುರುವೆಂದುಕೊಳ್ಳ ಎನ್ನುವುದನ್ನು ಕೇಳಿಸಿಕೊಳ್ಳಬೇಕಾದ ದುರಂತದಲ್ಲಿ ನಾವು ಇದ್ದೇವೆ ಎಂಬ ಅಂಸವನ್ನು ಈ ಹಾಡಿನ ಮೂಲಕ ವ್ಯಕ್ತಪಡಿಸುತ್ತಿದ್ದಾರೆ.

ಕ್ವಾಮಿಟಿ ಕ್ವಾಮಿಟಿ ಅಂದೂರು ಸ್ವಾಮಿ
ಕ್ವಾಮೀಟೋಡು ಮಾ ಕುಲಬಂಧುಗಡು
ಕುಕ್ಕಕು ಪುಟ್ಟಿನ ಕ್ವಾಮಿಟೋಳ್ಳಂದಾರು
ಲೆಕ್ಕಾಲು ಭೋಬಾಗಾ ರಾಶ್ಯಾರಯರಾ
ತಾಲಿಲ್ಲೋ ಲಿಲ್ಲೆ ಲಿಲ್ಲಾಯಿಲೇ
ಕುಕ್ಕಾಕು ಪುಟ್ಟಿನ ಕ್ವಾಮಿಟಿ ಮಲಶೆಟ್ಟಿ
ತಪ್ಪು ಲೆಕ್ಕಲೆನ್ನೊ ರಾಶ್ಯಾಡಯಲೇ
ಪದ್ದ ಇಂಟವಾನ್ನಿ ಪೆಳ್ಳಕ್ಕಿ ರಮ್ಮನಿ
ಒಪ್ಪುಂಚಿ ಪಿಲಿಪಿಂಚೋ ಕ್ವಾಮಿಟೆಲ್ಲಮ್ಮ
ತಾಲಿಲ್ಲೋ ಲಿಲ್ಲೆ ಲಿಲ್ಲಾಯಿಲೇ

ಚಿನ್ನ ಇಂಟವಾನ್ನಿ ಮುಂದೂಗ ಪೆಟ್ಟಿಕೋನಿ
ತಲಬಾಲು ಪೋಸಿಂದಿ ಜಾಂಬುವುದು
ಕ್ವಾಮಿಟಿ ಕ್ವಾಮಿಟಿ ಅಂತಾರೆ ಸ್ವಾಮಿ
ಕ್ವಾಮಿಟಿ ನಮ್ಮ ಕುಲ ಬಂಧೂಗನು
ತಾಲಿಲ್ಲೋ ಲಿಲ್ಲೆ ಲಿಲ್ಲಾಯಿಲೇ

ನಾಯಿಗೆ ಹುಟ್ಟಿದ ಕ್ವಾಮಿಟಿಯವರೆಲ್ಲ
ಲೆಕ್ಕಗಳ ಬಲು ಚಂದಾಗಿ ಬರೆದಾರಲ್ಲ
ನಾಯಿಗೆ ಹುಟ್ಟಿದ ಕ್ವಾಮಿಟಿ ಮಲಶೆಟ್ಟಿ
ತಪ್ಪು ಲೆಕ್ಕಗಳೆಷ್ಟೋ ಬರೆದಾನಲ್ಲ
ತಾಲಿಲ್ಲೋ ಲಿಲ್ಲೆ ಲಿಲ್ಲಾಯಿಲೇ

ದೊಡ್ಡ ಮನೆಯವನನ್ನು ಮದುವೆಗೆ ಬಾ ಅಂದು
ಒಪ್ಪಿಸಿ ಕರಿಸಿದಳು ಕ್ವಾಮಿಟಲ್ಲಮ್ಮ
ಚಿಕ್ಕ ಮನೆಯವನನ್ನು ಮುಂದಿಟ್ಟುಕೊಂಡು
ಧಾರೆ ಎರೆದನಲ್ಲ ಜಾಂಬವನು
ತಾಲಿಲ್ಲೋ ಲಿಲ್ಲೆ ಲಿಲ್ಲಾಯಿಲೇ

ಈ ಸಾಲುಗಳಲ್ಲಿ ಮಾದಿಗರಿಗೆ ಮತ್ತು ಕ್ವಾಮಿಟಿಗಳ ಸಮುದಾಯಗಳ ನಡುವಿನ ಮನಸ್ತಾಪ ಇದ್ದು ಕ್ವಾಮಿಟಿಗರ ಮಾಡುವ ಕುತಂತ್ರಗಳನ್ನು ನೆನೆದು ಅವರ ಇಬ್ಬರ ನಡುವಿನ ಹತ್ತಿರ ಸಂಬಂಧ ಇದ್ದರು ಕ್ವಾಮಿಟಿ ಗುರು ಇವರನ್ನು ದೂರ ಇಟ್ಟಿದ್ದಾರೆ. ಅಂದು ಅರುಂಧತಿ ಕೊಟ್ಟ

ವರದಿಂದ ಕ್ವಾಮಿಟಿಗರು ಇಂದು ದೊಡ್ಡ ಶ್ರೀಮಂತರಾಗಿದ್ದಾರೆ ಎಂಬ ವಿಷಯ ಗಂಗ ಭಾರತದ ಅರುಂಧತಿ ಕಲ್ಯಾಣದಲ್ಲಿ ಬರುತ್ತದೆ. ಇವನು ನಮ್ಮ ಕುಲ ಬಂಧುವೆ ನಮ್ಮ ಕುಲ ಬಂಧುವಾದರು ತಪ್ಪು ಲೆಕ್ಕಗಳನ್ನು ಬರೆದನು ಎಂದು ನಾಯಿಗೆ ಹುಟ್ಟಿದ ಕ್ವಾಮಿಟಿಗ ಎಂದು ಬೈಯುತ್ತಾರೆ. ಅದರಲ್ಲಿ ದೊಡ್ಡವನಿಗೆ ಮದುವೆಗೆ ಬಾ ಎಂದು ಚಿಕ್ಕವನಿಗೆ ಮದುವೆ ಮಾಡಿದ್ದಾರೆ. ಎರೆದನೆಲ್ಲೆ ಜಾಂಬವನು ಅದರ ಒಂದು ನಿಯತ್ತು ಇಲ್ಲವಲ್ಲ ಹೀಗೆ ತಪ್ಪು ಲೆಕ್ಕಗಳನ್ನು ಈ ಎರಡು ಸಂಬಂಧಗಳು ಇಂದೂ ದೂರವಾಗಿ ಮನೆ ಬಾಗಿಲಿಗೂ ಸೇರಿಸಿದಷ್ಟು ದೂರವಾಗಿ ಬದುಕುತ್ತಿದ್ದಾರೆ.

ಜಂಗಮ ನಮ್ಮದು ಲಿಂಗಾವು ನಮ್ಮದು
ಗಂಗೆ ನಮ್ಮದು ಗಂಗಸ್ಥಳವ ನಮ್ಮದು
ಅಖಿಲಾಂಡೇಶ್ವರಿ ಆದಿ ಪುರಾಂಜ್ಯೋತಿ
ಆದಿ ಹುಟ್ಟಿದದ್ದು ಖಾಯವಯ್ಯ॥
ಕೋಮಟಿ ಕೋಮಟಿ ಅನ್ನುವರಯ್ಯ ಜನರು
ಕೋಮಟಿ ನಮ್ಮ ಸೋದರಳಿಯನು
ತಾಲಿಲ್ಲೋ ಲಿಲ್ಲುಮಯ। ಶಿವ ತಾಲಿಲ್ಲೋ ಲಿಲ್ಲುಮಯ॥

ಬ್ರಾಹ್ಮಣರು ಬ್ರಾಹ್ಮಣರು ಅನ್ನುವರಯ್ಯ ಜನರು
ಬ್ರಾಹ್ಮಣರು ನಮ್ಮ ಮನೆ ಅಳಿಯನಯ್ಯ
ಅರುಂಧತಿ ನಮ್ಮ ಮನೆ ಮಗಳಯ್ಯ
ಬ್ರಾಹ್ಮಣನು ನಮ್ಮ ಮನೆಯಳಿಯನಯ್ಯ
ತಾಲಿಲೋ ಲಿಲ್ಲೇ ಲಿಲ್ಲಾಯಿ ಲೋ॥

ಜಂಗಮು ಮಾದಿ ಲಿಂಗಾಮು ಮಾದಿ
ಗಂಗ ಮಾದಿ ಗಂಗಸ್ಥಾನಮು ಮಾದಿ॥
ಅಖಿಲಾಂಡೇಶ್ವವರಿ ಆದಿ ಪರಾಂಜ್ಯೋತಿ
ಆದಿ ಪುಟ್ಟಿಂದಿದಿ ಖಾಯಮಂಡಿ
ಕೋಮಿಟಿ ಕೋಮಿಟಿ ಅಂದೂರಯ್ಯ ಜನಲು
ಕೋಮಿಟೋಡು ಮಾ ಮ್ಯಾನಲ್ಲಡು
ತಾಲಿಲ್ಲೋ ಲಿಲ್ಲುಮಯ। ಶಿವ ತಾಲಿಲ್ಲೋ ಲಿಲ್ಲುಮಯ॥

ಬಾಪೋಲ್ಲು ಬಾಪೋಲ್ಲು ಅಂದೂರಯ್ಯ ಜನಲು
ಬಾಪೋಡು ಮಾ ಬಂದುಗುಡಯ್ಯ॥
ಅರಂಜ್ಯೋತಿ ಮಾ ಇಂಟಿ ಆಡಬಿಡ್ಡ

ಬ್ರಾಹ್ಮಣುಡು ಮಾ ಇಂಟಿ ಅಲ್ಲೂಡಯ್ಯ
ತಾಲಿಲ್ಲೋ ಲಿಲ್ಲುಮಯ। ಶಿವ ತಾಲಿಲ್ಲೋ ಲಿಲ್ಲುಮಯ॥

ಸಿನ ಕತ್ತಿ ಪೆದ ಕತ್ತಿ ಸಾನು ತೀಸೇಟಪುಡು
ಏಡು ಬುಟ್ಲ ಉಕ್ಕುರಾಲೇನುರಾ॥
ರಾಲೀನ ಉಕ್ಕಂತ ಮಾಟಲಕಿ ಏಪಿಂಚಿ
ರಾಸೂಟ ಕೋಟಲಕಿ ತೋಲಂಪಿರಯ್ಯ॥
ತಾಲಿಲ್ಲೋ ಲಿಲ್ಲುಮಯ। ಶಿವ ತಾಲಿಲ್ಲೋ ಲಿಲ್ಲುಮಯ॥

ಚಿಕ್ಕ ಕತ್ತಿ ದೊಡ್ಡ ಕತ್ತಿ ಸಾಣಿ ಹಿಡಿಯೋವಾಗ
ಏಳು ಬುಟ್ಟಿ ಉಕ್ಕು ಉದುರೀತಯ್ಯ॥
ಉದುರೀದ ಉಕ್ಕನ್ನು ಮೂಟೇಗೆ ತುಂಬಿ
ರಾಯಚೂಟಿ ಕೋಟೇಗೆ ಕಳಕು ಹೀದರಯ್ಯ
ತಾಲಿಲ್ಲೋ ಲಿಲ್ಲುಮಯ। ಶಿವ ತಾಲಿಲ್ಲೋ ಲಿಲ್ಲುಮಯ॥

ಜಂಗಮವು ನಮ್ಮದಲ್ಲೇ ಬಂದಿರುವುದು ಲಿಂಗವು ನಮ್ಮದೇ ನೀವು ಪೂಜಿಸುವ ಹಾಗೂ ಕುಡಿಯುವ ಗಂಗೆಯು ನಮ್ಮವಳು. ಅವಳು ಹುಟ್ಟಿದ ಸ್ಥಳವು ನಮ್ಮದು. ನಂತರ ಆದಿಶಕ್ತಿ ಹುಟ್ಟಿರುವುದು ನಮ್ಮ ಕುಲದಲ್ಲಿ, ಆದರೂ ನಮ್ಮನ್ನು ದೂರುತ್ತಿರ ಸಮಾಜದಿಂದ ದೂರವಿರಿಸಿದ್ದೀರಾ. ಇಂದು ಶ್ರೀಮಂತನಾಗಿ ಬೆಳೆದಿರುವ ಕೋಮಿಟಿಗ ನಮ್ಮ ಮನೆಯ ಸೋದರಳಿಯ ಅರುಂಧತಿಯಿಂದ ವರ ಪಡೆದು ಇಂದು ದೊಡ್ಡ ಶ್ರೀಮಂತರಾಗಿದ್ದಾರೆ. ಬ್ರಾಹ್ಮಣ ಬ್ರಾಹ್ಮಣ ಎಂದು ಕರೆಯುವ ಆ ಬ್ರಾಹ್ಮಣ ನಮ್ಮ ಮನೆಯ ಅಳಿಯ ಅರುಂಧತಿಯನ್ನು ವಿವಾಹವಾದ ವಶಿಷ್ಠ ಮಹರ್ಷಿ ಬ್ರಾಹ್ಮಣ ಕುಲದವನು. ಆ ಬ್ರಾಹ್ಮಣರ ಸೊಸೆ ನಮ್ಮ ಮನೆಯ ಹೆಣ್ಣು ಮಗಳು. ಈ ಎರಡು ಸಮುದಾಯಗಳ ನಡುವೆ ರಕ್ತಸಂಬಂಧ ಬೆರೆಸುತ್ತಾರೆ. ಆದರೆ ಇಂದು ಬ್ರಾಹ್ಮಣರಿಗೆ ಗುರುತು ಪರಿಚಯವಿಲ್ಲದ ಹಾಗೆ ದೂರವಾಗಿ ನಮ್ಮ ಸಮುದಾಯಗಳ ನೆರಳು ಅವರ ಕೇರಿಗಳಲ್ಲಿ ಬೀಳುವ ಹಾಗಿಲ್ಲ. ನಮ್ಮ ನಡುವೆ ಯಾವ ರಕ್ತಸಂಬಂಧಗಳು ಇಲ್ಲದ ಹಾಗೆ ದೂರವಿರಿಸಿದ್ದಾರೆ. ಕಬ್ಬಿಣವನ್ನು ಕರಗಿಸಿ ಉಕ್ಕನ್ನಾಗಿಸಿ ರಾಯಕೋಟೆಗೆ ಕಳುಸಿದರು ಅದರಿಂದ ನಮ್ಮ ಸಮುದಾಯಗಳಿಗೆ ಏನು ಲಾಭವಿಲ್ಲ. ನಮ್ಮನ್ನು ಸಮಾಜದಿಂದ ದೂರ ನೂಕಿದರು ಇಂದು ಮಾದಿಗರು ಎಲ್ಲಾ ಜಾತಿಗಳಿಗೂ ಬೇಡವಾಗಿ ನಮ್ಮದೇ ಜೀವನ ಕಟ್ಟಿಕೊಳ್ಳುವ ಪರಿಸ್ಥಿತಿಯು ಇಲ್ಲವಾಗಿದೆ ಎಂದು ನೊಂದ ಧ್ವನಿಯ ಮೂಲಕ ಹೇಳುತ್ತಾರೆ.[೪]

ಎಕ್ಕಲಾ ದೇವಿಯ ಭಕ್ತರಾದ ಮಾದಿಗರು ಭಿಕ್ಷೆಗೆ ಹೊರಟಾಗ ಎಕ್ಕಲೋ ಜೋಗು ಎಂದು ರಾಗ ಬದ್ಧವಾಗಿ ಕೂಗುವುದನ್ನು ಸಹ ದರುವಿನ ಜೊತೆ ಸೇರಿಸಲಾಗುತ್ತದೆ. ಎಕ್ಕಲೋ ಜೋಗು ಎಂದರೆ ಎಕ್ಕಲ ದೇವಿಗೆ ಭಿಕ್ಷೆ ನೀಡಿ ಎಂದು ಅರ್ಥ ಬುರ್ರ ಕಥೆಯಲ್ಲಿ ಸಹ

ದರುವಿನ ಬಳಕೆ ಇದೆ. ಬುರ್ರಕಥಾ ಗಾಯಕರು ತಮ್ಮ ಕಥೆಯಲ್ಲಿ ದರುವು ತೆಗೆಯುತ್ತಾರೆ. ಹಾಗೂ ಶ್ರಾವಣ ಶನಿವಾರಗಳಲ್ಲಿ ತಿರುಪತಿ ವೆಂಕಟರಮಣನ ಭಕ್ತರು ಮಧುಕರ ವೃತ್ತಿಯನ್ನು ಮಾಡುವಾಗ ಹಾಗೂ ಭಿಕ್ಷೆ ಬೇಡುವ ಸಂಧರ್ಭದಲ್ಲಿ ಈ ಹಾಡುಗಳನ್ನು ಹಾಡುವರು.

"ತಂದಾನಿ ತಾನಿ, ತಾನಿ ತಂದಾನಿ
ದೇವನಂದ ನಾನನ"

ನಂತರ ತೆಲುಗು ಬುರ್ರಕಥೆಗಳಾದ ನಲತಂಗ ಬಾಲನಾಗಮ್ಮ ಕಾಟಮ್ಮರಾಯುಡು ರಾಮಭೋಜ ರಾಜನ ಕಥೆಗಳಲ್ಲಿ ದರುವು ಸಾಕಿ ಕೊಟ್ಟು ರಾತ್ರಿ ಇಡೀ ಸತ್ಯವಂತರ ಕಥೆಗಳನ್ನು ಹರಿಕಥೆಯ ರೀತಿಯಲ್ಲಿ ಹಾಡುತ್ತಾರೆ. ಕಥೆಗಳ ವಿಶ್ಲೇಷಣೆಯನ್ನು ಹೇಳುತ್ತ ಹಾಗೆ ದರುವು ಹಾಕುತ್ತ ಕೇಳುಗರಿಗೆ ಇಂಪಾಗಿ ಸತ್ಯವಂತರ ಸತ್ಯತೆಯನ್ನು ಕೇಳುತ್ತಾರೆ. ಬಾಲನಾಗಮ್ಮ ಬುರ್ರಕಥೆಯಲ್ಲಿ ಬರುವ ದರುವು ಹಾಗೂ ಅದರ ಸಾರಾಂಶ ಈ ಕಥೆಯಲ್ಲಿ ಗಮನಿಸಬಹುದು.

"ಗಂಗಾಧರ ತನಯ। ಗಂಗಾಧರ ತನಯ।
ಗಜಾನನಾ ಗಂಗಾಧರ ತನಯ। ಗಜಾನನಾ ಗಂಗಾಧರ ತನಯ।
ಪುಂಗಮ ಜಂಗಮ ಪುರಗಮ ಜಂಗಮ
ಪುಂಗ ವಿಭೂಷಣ ಮಂಗಳ ಕರದಾಹ ॥ ಗಂಗಾಧರ॥
ತಕ್ಕ ತಕ ತಕ ತಗ್ಗ ಜಣ ಜಣ ತಾ......"

ಈ ಎಲ್ಲವನ್ನು ಗಮನಿಸಿದ ನಂತರ ಮೂಡುವ ಅಭಿಪ್ರಾಯ ಎಂದರೆ ಮಾರ್ಗ ಮತ್ತು ಶಾಸ್ತ್ರೀಯಗಳ ಆಚೆನಿಲ್ಲುವ ದರುವು ಶಬ್ಧವು ಶುದ್ಧವಾಗಿ ಜನಪದ ಗಾಯನದಲ್ಲಿ ಆಲಾಪನೆಗಾಗಿ ಹುಟ್ಟಿಕೊಂಡ ಶಬ್ಧವೆಂದು ಸ್ಪಷ್ಟವಾಗುತ್ತದೆ. ಇದು ಇಲ್ಲಿ ಜನಪದರು ಬಳಸುವ ಹಾಡುಗಳು ಹಾಗೂ ಜಾಂಬ ಪುರಾಣ ಮತ್ತು ಗಂಗ ಭಾರತದಲ್ಲಿ ಬಳಸುವ ದರುವು ಶಬ್ಧ ಜನಪದಿಯರ ಸೃಷ್ಟಿಯೇ ಹೊರತು ನಿಘಂಟು ಕಾರರಲ್ಲಿ ಅಥವಾ ಮಾರ್ಗ ಸಾಹಿತ್ಯ ರಚನೆ ಕಾರರಿಂದ ರೂಪಿತಗೊಂಡ ಶಬ್ದವಲ್ಲ ಎಂಬ ನಿರ್ಣಯಕ್ಕೆ ಬರಬಹುದಾಗಿದೆ.

**ಕೊನೆ ಟಿಪ್ಪಣಿಗಳು**

೧. ಸ. ರಘುನಾಥ, **ದರುವು ಲೇಖನ.**

೨. ರಾ. ಸತ್ಯನಾರಾಯಣ, **ಕರ್ನಾಟಕ ಸಂಗೀತ ವಾಹಿನಿ,** ಪು. ೪೬೫, ೪೬೬.

೩. ಬಿ.ವಿ.ಕೆ. ಶಾಸ್ತ್ರೀ, **ಗಾನಕಲಾ ಮಂಜರಿ,** ಪು. ೩೭೬.

೪. ಕೋಟಿಗಾನಹಳ್ಳಿ ರಾಮಯ್ಯ, **ಪಿಂಧ್‌ಮಾದಿಗರ ಸಂಸ್ಕೃತಿ,** ಪು. ೧೯೬, ೧೯೭.

◆◆◆

ಅಧ್ಯಾಯ : ಐದು

# ದಕ್ಕಲರ ರಕ್ತಸಂಬಂಧಗಳು ಮತ್ತು ಆಚರಣೆಗಳು

೫.೧. ದಕ್ಕಲರ ಬೆಡಗುಗಳು

೫.೨. ದಕ್ಕಲರ ಮದುವೆ ಆಚರಣೆಗಳು

೫.೩. ದಕ್ಕಲರ ಅಂತ್ಯಕ್ರಿಯೆ ಆಚರಣೆಗಳು

೫.೪. ಆರ್ಥಿಕ ವ್ಯವಸ್ಥೆ

೫.೫. ಧಾರ್ಮಿಕ ಆಚರಣೆಗಳು

೫.೬. ಜಾನಪದ ನಂಬಿಕೆಗಳು

೫.೭. ದಕ್ಕಲರ ವೈದ್ಯ ಪದ್ಧತಿ

೫.೮. ಧಾರ್ಮಿಕ ವ್ಯವಸ್ಥೆ

ಅಧ್ಯಾಯ : ಐದು

# ದಕ್ಕಲರ ರಕ್ತಸಂಬಂಧಗಳು ಮತ್ತು ಆಚರಣೆಗಳು

### ೫.೧. ದಕ್ಕಲರ ಬೆಡಗುಗಳು

ಸಮಾಜದಲ್ಲಿ ಎಲ್ಲಾ ಜಾತಿ ಧರ್ಮಗಳಲ್ಲಿ ಒಂದೇ ಜಾತಿಯ ಕೆಲವು ಪಂಗಡಗಳು ಇರುತ್ತವೆ. ಹಿಂದೂ ಧರ್ಮ, ಇಸ್ಲಾಂ ಧರ್ಮ, ಕ್ರಿಶ್ಚಿಯನ್ ಧರ್ಮಗಳಲ್ಲಿ ಕೆಲವು ಒಳಪಂಗಡಗಳಿದ್ದು ಅವುಗಳು ಉಪ ಪಂಗಡಗಳಾಗಿ ವಿಭಾಗಿಸಿಕೊಂಡಿರುತ್ತಾರೆ. ಹಾಗೆ ದಕ್ಕಲ ಸಮುದಾಯಗಳು ಮಾದಿಗರ ಉಪಜಾತಿಯಾಗಿದ್ದು, ಅದರಲ್ಲಿ ೧೨ ಬೆಡಗುಗಳಾಗಿ ವಿಭಾಗ ಮಾಡಿಕೊಂಡಿದ್ದಾರೆ. ಈ ಸಮುದಾಯ ಸಮಾಜದ ಕಟ್ಟಕಡೆಯ ಸಮುದಾಯವಾಗಿದ್ದು ೧೨ ಬೆಡಗುಗಳು, ಗೋತ್ರಗಳು, ಕುಲ, ವಂಶಾವಳಿಗಳು ಮುಂತಾದ ಪರ್ಯಾಯ ಪದಗಳಿಂದ ಕರೆಯುತ್ತಾರೆ, ಇದರಲ್ಲಿ ಎರಡು ಬೆಡಗುಗಳು ಒಂದಾಗಿದ್ದು. ಇವರು ಅಣ್ಣ ತಮ್ಮ ರಕ್ತಸಂಬಂಧಿಗಳಾಗಿದ್ದಾರೆ. ಉಳಿದ ೯ ಬೆಡಗುಗಳು ಒಂದು ಸಂಬಂಧವಾಗಿದ್ದು ಇವರು ಅಣ್ಣ ತಮ್ಮನ ರಕ್ತ ಸಂಬಂಧವಾಗಿದ್ದಾರೆ. ಉಳಿದ ಒಂದು ಬೇಡಗು ಮಾತ್ರ ೧೧ ಬೆಡುಗುಗಳೊಂದಿಗೆ ಯಾವುದೇ ಸಂಬಂಧ ಹೊಂದಿಲ್ಲ ದಕ್ಕಲರಲ್ಲಿ ಪ್ರತ್ಯೇಕ ಬೆಡುಗು ಆಗಿದ್ದು ಇವರು ಕೇವಲ ಶುಭ ಸಮಾರಂಭಗಳಿಗೆ ಮಾತ್ರ ಬಂದು ಹೋಗುತ್ತಾರೆ. ಇವರ ಜೊತೆ ಯಾವ ರಕ್ತಸಂಬಂಧಗಳು ಬೆಸೆಯುವುದಿಲ್ಲ.[೧]

**ಬೆಡಗುಗಳ ಕೋಷ್ಟಕ ಹೀಗಿದೆ:-**

೧. ಪೆದ್ದ ರೆಡ್ಡೇಳು (ದೊಡ್ಡ ಗಾಯಕವಾಡೇರು)

೨. ಚಿನ್ನ ರೆಡ್ಡೇಳು (ಚಿಕ್ಕ ಗಾಯಕವಾಡೇರು)

ಮೇಲಿನ ಎರಡು ಬೆಡಗುಗಳು ಅಣ್ಣತಮ್ಮಂದಿರಾಗಿರುತ್ತಾರೆ.

೩. ರೇಣ ಕೊಂಬೋಳೂ (ಗಣಾಚಾರಿ ಅಥವಾ ಐವಳ್ಯೇರು)

ಎ. ಚಿನ್ನ ಗಣಾಚಾರಿ

ಬಿ. ಪೆದ್ದಗಣಾಚಾರಿ

೪. ಕರ್ನೇಳು (ಕಂಬ್ಯೇರು)

೭. ಚಿನ್ನ ಕರ್ನೇಲು (ಚಿಕ್ಕ ಕಂಬ್ಳೇರು)

೮. ಪೆದ್ದ ಕರ್ನೇಲು (ದೊಡ್ಡ ಕಂಬ್ಳೇರು)

೫. ಪೊಟ್ಟಟೋಲೂ (ಟಗರಿನೋರು)

೬. ನಲ್ಲಪೋಗುಲೋಲು( ಪಾಲೆಯವರು)

೭. ಕಾಮಾಂಚೋಲು (ಕಸ್ತುರೇರು)

೮. ಪೀಶಿನೋಲು

೯. ಅಲ್ಲಮೋಲು

೧೦. ಇರಿಗಿನೋಲು

೧೧. ಮ್ಯಾಕಲೋಲು (ಮಂಡ್ಲರು)

ಈ ಒಂಬತ್ತು ಬೆಡಗಿನವರು ಸೋದರ ಸಂಬಂಧಿಗಳು ಇವರನ್ನು ಯಾವುದೇ ರೀತಿ ರಕ್ತ ಸಂಬಂಧ ಬೆಸೆಯುವುದಕ್ಕೆ ಸಾಧ್ಯವಿಲ್ಲ.

೧೨. ಶಾರಕುಂಟ ಜಗ್ಗನಾಥೋಲು

ಈ ಒಂದು ಬೆಡಗು ದಕ್ಕಲರ ಕೊನೆಯ ಬೆಡಗು ಯಾರೊಂದಿಗು ಸೋದರ ಸಂಬಂಧವಾಗಲಿ ಹಾಗೂ ರಕ್ತ ಸಂಬಂಧವಾಗಲಿ ಬೆಸೆಯುವುದಿಲ್ಲ. ಇವರು ಪ್ರತ್ಯೇಕವಾಗಿರುತ್ತಾರೆ.

**೧. ಪೆದ್ದರೆಡ್ಡಿ (ದೊಡ್ಡ ಗಾಯಕವಾಡೇರು):–** ದಕ್ಕಲ ಸಮುದಾಯದಲ್ಲಿ ಮೇಲು ವರ್ಗ ಮತ್ತು ಮೊದಲ ಬೆಡಗು ಎಂದರೆ ಪೆದ್ದರೆಡ್ಡಿವಾಳು ಇವರನ್ನು ದೊಡ್ಡ ಗಾಯಕವಾಡರು ಎಂದು ಕರೆಯುವರು. ಪೆದ್ದರೆಡ್ಡಿ ಮತ್ತು ಚಿನ್ನರೆಡ್ಡಿವಾಳು ಸೋದರ ಸಂಬಂಧಿಗಳು, ಇವರು ರಕ್ತ ಸಂಬಂಧವನ್ನು ಒಂಭತ್ತು ಬೆಡಗಿನವರೊಂದಿಗೆ ಮಾತ್ರ ಬೆಸೆಯಬೇಕು ಇವರಿಗೆ ಮಾವ ಭಾವ ಸಂಬಂಧಿಗಳಾಗಿರುತ್ತಾರೆ. ಹಾಗಾಗಿ ಹೆಣ್ಣುಕೊಟ್ಟು ತೆಗೆದುಕೊಳ್ಳುವುದಕ್ಕೆ ಯಾವುದೇ ಅಡ್ಡಿ ಇರುವುದಿಲ್ಲ. ಇವರನ್ನು ಬಿಟ್ಟು ಬೇರೆ ಸಂಬಂಧಗಳ ಹೆಣ್ಣನ್ನು ತರುವುದಿಲ್ಲ ಹಾಗೂ ಕೊಡುವುದಿಲ್ಲ.

**೨. ಚಿನ್ನರೆಡ್ಡೀಲೂ (ಚಿಕ್ಕಗಾಯಕವಾಡೆರು):–** ದಕ್ಕಲ ಸಮುದಾಯದ ಎರಡನೇ ಬೇಡಗು ಹಾಗೂ ಸ್ವಲ್ಪ ಮೇಲು ವರ್ಗದವರನ್ನು ಚಿಕ್ಕಗಾಯಕವಾಡರು ಎಂದು ಕರೆಯುತ್ತಾರೆ. ಇವರ ಸೋದರ ಸಂಬಂಧಿಗಳು ಪೆದ್ದರೆಡ್ಡೋಲು ಇನ್ನು ಏಳು ಬೆಡಗುಗಳು ರಕ್ತ ಹಂಚಿಕೊಳ್ಳುವ ಸಂಬಂಧಿಗಳು. ಇವರು ಪೆದ್ದರೆಡ್ಡೋಲು ಹಾಗೆ ಈ ಏಳು ಬೆಡಗುಗಳಲ್ಲಿ ಹೆಣ್ಣನ್ನು ಕೊಟ್ಟುತೆಗೆದುಕೊಳ್ಳುತ್ತಾರೆ. ಇವರಿಗೆ ಮಾವ ಭಾವನ ಸಂಬಂಧಗಳಾಗುತ್ತವೆ. ಆದರೆ ಈ ಸಮುದಾಯಗಳ ಕೊನೆಯ ಬೆಡಗು ಇವರಿಗೂ ಯಾವುದೇ ಸಂಬಂಧಿಕರಲ್ಲಿ ಇವರಲ್ಲಿ ಬೆರಿಕೆಯಿಲ್ಲ ಅವರ ಪ್ರತ್ಯೇಕ ಬೆಡಗಾಗಿದೆ.

ಮೇಲಿನ ಎರಡು ಬೆಡಗುಗಳು ಬಿಟ್ಟು ಉಳಿದ ಏಳು ಬೆಡಗುಗಳು ಸೋದರ ಸಂಬಂಧಿಗಳು ಬೆಡಗುಗಳಲ್ಲಿ ಯಾವುದೇ ರೀತಿಯಾಗಿ ರಕ್ತಸಂಬಂಧವನ್ನು ಹಂಚಿಕೊಳ್ಳುವ ಹಾಗಿಲ್ಲ. ಇವರು ಅಣ್ಣ, ತಂಗಿ, ಅಕ್ಕ, ತಮ್ಮನ ವರಸೆಯಾಗುತ್ತದೆ. ಇವರ ಮಾವನ ಸಂಬಂಧಿಕರಾಗಿ ಹಾಗೂ ಈ ಏಳು ಬೆಡಗುಗಳು ದೊಡ್ಡ ವ್ಯಕ್ತಿಗಳು ಉನ್ನತ ಸ್ಥಾನದಲ್ಲಿ ಇರುತ್ತಾರೆ. ಪೆದ್ದರೆಡ್ಡಿ, ಚಿನ್ನರೆಡ್ಡಿಳ್ಳೊ ಇವರೊಂದಿಗೆ ಸಂಬಂಧವನ್ನು ಬೆಳೆಸುತ್ತಾರೆ. ಯಾವುದೇ ಕೆಲಸಕಾರ್ಯಗಳಾಗಲಿ ಈ ಎರಡು ಬೆಡಗುಗಳಿಗೆ ಆಹ್ವಾನ ಇರುತ್ತದೆ. ಇವರೊಂದಿಗೆ ಏನೇ ಶುಭಕಾರ್ಯಗಳು ನಡೆದರೂ ಇವರಿಗೆ ತಿಳಿಸಬೇಕು. ಈ ಎರಡು ಬೆಡಗುಗಳು ಮುಂದೆ ನಿಂತು ಕಾರ್ಯಗಳನ್ನು ನಡೆಸಿಕೊಡುತ್ತಾರೆ. ಇವರು ಮಾವ ಭಾವ ಸಂಬಂಧಿಯಾದರಿಂದ ಇವರೆ ಮುಂದೆ ನಿಂತು ನಡೆಸಿಕೊಡುವುದು ಇವರ ಕರ್ತವ್ಯವಾಗಿದೆ. ನಂತರ ಈ ಬೆಡಗಿನಲ್ಲಿ ಯಾರಾದರೂ ಸತ್ತರೆ ಅದರ ಕಾರ್ಯ ವಿಧಾನಗಳು ಸಹ ಪೆದ್ದರೆಡ್ಡಿ ಮತ್ತು ಚಿನ್ನರೆಡ್ಡಿಯವರು ಮುಂದೆ ನಿಲ್ಲುತ್ತಾರೆ. ಶವ ಸಂಸ್ಕಾರದಿಂದ ಹಿಡಿದು ತಿಥಿ ಕಾರ್ಯದ ತನಕ ಇವರು ಸಹಾಯ ಹಸ್ತರಾಗಿರುತ್ತಾರೆ. ಶುಭಕಾರ್ಯಗಳು ಎಲ್ಲಾ ಬೆಡಗಿನವರು ಒಂದೇ ರೀತಿಯಲ್ಲಿ ಮಾಡುತ್ತಾರೆ. ಶವಸಂಸ್ಕಾರ ಮಾತ್ರ ಅವರ ಬೆಡಗುಗಳ ಸಂಸ್ಕೃತಿಗೆ ತಕ್ಕಂತೆ ಮಾಡುತ್ತಾರೆ. ಚಿನ್ನರೆಡ್ಡಿ ಮತ್ತು ಪೆದ್ದರೆಡ್ಡಿರವರು ಶವವನ್ನು ಹಲಗೆಯ ಮೇಲೆ ತೆಗೆದುಕೊಂಡು ಹೋದರೆ, ಉಳಿದ ಒಂಭತ್ತು ಬೆಡಗುಗಳು ಬಿದಿರು ಕೋಲುಗಳನ್ನು ಬಳಸುತ್ತಾರೆ. ತಿಥಿ ಕಾರ್ಯ ಎರಡು ಬೆಡಗುಗಳು ಒಂದೇ ರೀತಿಯಲ್ಲಿ ಮಾಡುತ್ತಾರೆ. ೧೨ ದಿನಗಳ ತಿಥಿ, ತಿಂಗಳ ತಿಥಿ, ವರ್ಷದ ತಿಥಿ ನಂತರ ೩ ವರ್ಷದ ತಿಥಿ ಮಾಡುತ್ತಾರೆ.

**ಶಾರಕುಂಟ ಜಗನ್ನಾಥೋಳು:-** ದಕ್ಕಲ ಸಮುದಾಯಗಳಿಗಿಂತ ತಳಸಮುದಾಯವಾಗಿದ್ದು, ಈ ಸಮುದಾಯ ದಕ್ಕಲರಾಗಿದ್ದರು ಮೇಲಿನ ಬೆಡಗುಗಳೊಂದಿಗೆ ಬೆರೆಯದೆ ಇವರು ಪ್ರತ್ಯೇಕ ಬೆಡಗಾಗಿದ್ದು, ಈ ಒಂದು ಬೆಡಗು ೧೧ ಬೇಡಗುಗಳೊಂದಿಗೆ ಸೋದರ ಸಂಬಂಧವಾಗಲಿ ಹಾಗೂ ಮಾವ, ಭಾವ ಸಂಬಂಧವಾಗಲಿ ಮಾಡುವುದಿಲ್ಲ. ಹೆಣ್ಣು ಪಡೆಯಬೇಕಾದರೂ, ಕೊಡ ಬೇಕಾದರು, ತಮ್ಮ ಬೆಡಗಿನವರನ್ನು ಮದುವೆಯಾಗಬೇಕು ಈ ಬೆಡಗಿನವರು ಕರ್ನಾಟಕದಲ್ಲಿ ಎಲ್ಲಿಯು ಇಲ್ಲ ಇವರು ಆಂಧ್ರಪ್ರದೇಶದ ವಾರಂಗಲ್ ಜಿಲ್ಲೆಯ ಸುತ್ತಮುತ್ತ ಹಳ್ಳಿಗಳಲ್ಲಿ ವಾಸಿಸುತ್ತಿದ್ದಾರೆ. ಆದರೆ ಈ ಪ್ರದೇಶಗಳಲ್ಲಿ ಕಂಡು ಬರದೆ ಇರುವುದು ಈಕ್ಷೇತ್ರಕಾರ್ಯದಲ್ಲಿ ತಿಳಿಯುತ್ತದೆ. ಶುಭ ಕಾರ್ಯ ಮತ್ತು ತಿಥಿಕಾರ್ಯಗಳಲ್ಲಿ ಮಾತ್ರ ಬೆರೆಯುತ್ತಾರೆ ಹೊರತು ಬೇರೆ ಯಾವುದೇ ಸಂಬಧಗಳು ಇರುವುದಿಲ್ಲ.

ಹೀಗೆ ದಕ್ಕಲ ಸಮುದಾಯಗಳು ೧೨ ಬೆಡಗುಗಳು ಇದ್ದು ಇವರು ತಮ್ಮ ಕುಲಗಳೊಂದಿಗೆ ಬಿಟ್ಟು ಬೇರೆ ಯಾರೊಂದಿಗೂ ಬೆರೆಯುವುದಿಲ್ಲ. ಹಾಗೆ ಇವರ ಸಂಬಂಧಗಳು ಈ ಕೆಳಗಿನ ಕೋಷ್ಟಕದಲ್ಲಿ ನೋಡಬಹುದು.

**ದಕ್ಕಲಿಗರ ಸಂಬಂಧಗಳನ್ನು ವಿಭಾಗಿಸುವ ಕೋಷ್ಟಕ**

| ಕುಟುಂಬದ ವಿವರ | ಸಂಬಂಧಗಳು |
|---|---|
| ತಂದೆಯ ಸಹೋದರರು | ಚಿಕ್ಕಪ್ಪ, ದೊಡ್ಡಪ್ಪ, |
| ತಂದೆಯ ಸಹೋದರರು | ಸೋದರ ಮಾವ, |
| ತಂದೆಯ ತಂದೆ ಮತ್ತು ತಾಯಿ | ಅಜ್ಜ, ಅಜ್ಜಿ, |
| ತಾಯಿಯ ತಂದೆ ಮತ್ತು ತಾಯಿ | ಅಜ್ಜ, ಅಜ್ಜಿ, |
| ತಾಯಿಯ ಸೋದರಿಯರು | ದೊಡ್ಡಮ್ಮ/ಚಿಕ್ಕಮ್ಮ |
| ಗಂಡನ ಸಹೋದರರು | ಭಾವ(ಮಾವ)ಮತ್ತು ಮೈದುನರು |
| ಗಂಡನ ಸಹೋದರಿಯರು | ನಾದಿನಿ |
| ಹೆಂಡತಿಯ ಸಹೋದರಿಯರು | ಭಾವ ಮತ್ತು ಮಾವ, |
| ಹೆಂಡತಿಯ ಸಹೋದರಿಯರು | ಸೊಸೆ ಮತ್ತು ಅತ್ತಿಗೆ, |
| ಸಹೋದರನ ಪತ್ನಿ | ಅತ್ತಿಗೆ ಮತ್ತು ಸೊಸೆ |
| ಸಹೋದರಿಯರ ಪತಿ | ಭಾವ ಮತ್ತು ಮಾವ |
| ಪುರುಷನ ಸಹೋದರರ ಮಕ್ಕಳು | ಮಕ್ಕಳಾಗುವರು |
| ಪುರುಷನ ಸಹೋದರಿಯರ ಮಕ್ಕಳು | ಸೊಸೆ ಮತ್ತು ಅಳಿಯ |
| ಮಹಿಳೆಯರ ಸಹೋದರರ ಮಕ್ಕಳು | ಸೊಸೆ ಅಳಿಯ |
| ಮಹಿಳೆಯರ ಸಹೋದರಿಯರ ಮಕ್ಕಳು | ಮಕ್ಕಳಾಗುವರು |

ಹೀಗೆ ಸಂಬಂಧಗಳನ್ನು ವಿಂಗಡಿಸಿಕೊಂಡು ತಮ್ಮ ಬಂಧುತ್ವಗಳನ್ನು ಬೆಸೆದುಕೊಳ್ಳುವ ಒಂದು ವಿಧಾನವಾಗಿದೆ.

**೫.೨. ದಕ್ಕಲರ ಮದುವೆ ಆಚರಣೆಗಳು**

ಸಮಾಜದ ಕಟ್ಟಕಡೆಯ ಸಮುದಾಯ ಹಾಗೂ ಮಾದಿಗರ ನೆಲೆಯಲ್ಲಿ ಬದುಕುತ್ತಿರುವ ದಕ್ಕಲ ಸಮುದಾಯಗಳು ಒಂದು ಕಡೆ ನೆಲೆನಿಲ್ಲದೆ ಅರೆ ಅಲೆಮಾರಿಗಳಾಗಿ ಜೀವಿಸುತ್ತಿದ್ದರು. ಈ ಸಮುದಾಯಗಳ ಸಂಪ್ರದಾಯಗಳು ಮಾತ್ರ ಕಟ್ಟುಬಂಧವಾಗಿವೆ. ಎಲ್ಲಾ ಸಮುದಾಯಗಳಿಗಿಂತ ವಿಭಿನ್ನ ರೀತಿಯ ಸಂಸ್ಕೃತಿಯ ನೆಲೆಯಲ್ಲಿ ಮದುವೆ ಆಚರಣೆಗಳನ್ನು ಕಾಣಬಹುದು. ತದನಂತರ ಕರ್ನಾಟಕದಲ್ಲಿ ಕೇವಲ ೩೧೬ ಕುಟುಂಬಗಳಿದ್ದು, ೨೦೦೭ರ ಜನಸಂಖ್ಯೆಯನ್ನು ಆಧರಿಸಿ ಒಟ್ಟು

೧೯೫೫ ಹಾಗೂ ಲಿಂಗವಾರು ಜನಸಂಖ್ಯೆಯನ್ನು ತೆಗೆದುಕೊಂಡಾಗ ಪುರುಷರ ಸಂಖ್ಯೆ ೬೫೫ ಸ್ತ್ರೀಯರ ಸಂಖ್ಯೆ ೬೪೦ ಇದ್ದು ಇತ್ತೀಚಿನ ದಿನಗಳಲ್ಲಿ ಮಹಿಳೆಯ ಸಂಖ್ಯೆ ತುಂಬ ವಿರಳವಾಗಿದ್ದು, ಈ ಸಮುದಾಯಗಳ ಪುರುಷರಿಗೆ ಹೆಣ್ಣನ್ನು ಹುಡುಕುವುದು ತುಂಬಾ ಪ್ರಯಾಸದ ವಿಷಯವಾಗಿದೆ. ದಕ್ಕಲರು ರಕ್ತ ಸಂಬಂಧವನ್ನು ಹಂಚಿಕೊಳ್ಳುವುದು ಕೇವಲ ತಮ್ಮ ಬೆಡಗಿನವರನ್ನೆ ಬಿಟ್ಟು ಇತರ ಜಾತಿಗಳಲ್ಲಿ ಮದುವೆಯಾಗುವುದಿಲ್ಲ, ಪೆದ್ದರೆಡ್ಡಿಳೊ ಮತ್ತು ಚಿಕ್ಕರೆಡ್ಡಿಳೊ ಒಂಭತ್ತು ಬೆಡಗುಗಳೊಂದಿಗೆ ಹೆಣ್ಣನ್ನು ಕೊಡುತ್ತಾರೆ. ಹಾಗೆ ಈ ಒಂಬತ್ತು ಬೆಡಗಿನವರು ಪೆದ್ದರೆಡ್ಡಿ ಮತ್ತು ಚಿನ್ನರೆಡ್ಡಿಯವರೊಂದಿಗೆ ಹೆಣ್ಣನ್ನು ಕೊಟ್ಟು ತೆಗೆದುಕೊಳ್ಳುತ್ತಾರೆ. ಹೀಗೆ ರಕ್ತ ಸಂಬಂದಗಳನ್ನು ಮಾಡಿ ಕೊಳ್ಳುತ್ತಾರೆ ಹೊರತು ಬೇರೆ ಕುಲಗಳೊಂದಿಗೆ ಬೇರೆಯುವುದಿಲ್ಲ, ಇಂತಹ ಕಟ್ಟುನಿಟ್ಟಿನ ಸಂಪ್ರದಾಯ ಈ ಸಮುದಾಯಗಳಲ್ಲಿ ಪಾಲಿಸಿಕೊಂಡು ಬರುತ್ತಿದ್ದಾರೆ.

**ಹೆಣ್ಣು ಮತ್ತು ಗಂಡಿನ ಆಯ್ಕೆ:-** ದಕ್ಕಲ ಸಮುದಾಯಗಳ ಮಕ್ಕಳು ಪ್ರಾಪ್ತ ವಯಸ್ಸಿಗೆ ಬಂದ ನಂತರ ಹೆಚ್ಚು ಕಾಲ ಮನೆಯಲ್ಲಿ ಇಟ್ಟಿಕೊಳ್ಳುವುದು ಉತ್ತಮವಲ್ಲ ಎಂದು ವರನನ್ನು ನೋಡುವುದಕ್ಕೆ ಪ್ರಾರಂಭಿಸುತ್ತಾರೆ. ಹೆಣ್ಣಿಗೆ ೧೮ ವರ್ಷ ಗಂಡಿಗೆ ೨೦ ವರ್ಷ ತುಂಬಿದರೆ ಮದುವೆ ಮಾಡುವುದಕ್ಕೆ ಮುಂದಾಗುತ್ತಾರೆ. ೨೦೦ ದಶಕಗಳ ಹಿಂದೆ ಹೆಣ್ಣಿಗೆ ೧೪ ವರ್ಷ ತುಂಬಿದರೆ ಸಾಕು ಮದುವೆ ಮಾಡಿ ಗಂಡನ ಮನೆಗೆ ಕಳಿಸಿದರೆ ಸಾಕು ಎಂದು ಹೆಣ್ಣು ಮಕ್ಕಳ ಋತುಮತಿಯಾಗದೆ ವಿವಾಹ ಮಾಡುತ್ತಿದ್ದರು. ರಕ್ತ ಸಂಬಂಧಗಳಿಗೆ ಹೆಣ್ಣು ಗಂಡು ಹುಟ್ಟಿದರೆ ಅಂದೆ ನಿಶ್ಚಯ ಮಾಡಿ ಬಾಲ್ಯ ವಿವಾಹ ಮಾಡುತ್ತಿದ್ದರು. ಈ ಪದ್ಧತಿಯು ಈ ಸಮುದಾಯಗಳಲ್ಲಿ ಇದ್ದು ಈಗ ಕಾನೂನಿಗೆ ಹೆದರಿ ಬಾಲ್ಯವಿವಾಹ ಮಾಡುತ್ತಿಲ್ಲ. ಈಗ ಹೆಣ್ಣು ಅಪ್ರಾಪ್ತ ವಯಸ್ಸಿಗೆ ಬಂದ ಮೇಲೆ ವಿವಾಹ ಮಾಡುತ್ತಾರೆ. ಈ ಸಮುದಾಯಗಳ ಹಿರಿಯರು ಜವಾಬ್ದಾರಿಯುತವಾಗಿ ತಮ್ಮ ಸಂಬಂಧಿಕರನ್ನು ಕರೆಸಿ ಮಗನ ಮದುವೆ ಬಗ್ಗೆ ಪ್ರಸ್ತಾಪಿಸಿ ಹೆಣ್ಣನ್ನು ಹುಡುಕಲು ಹೇಳುತ್ತಾರೆ. ಎಲ್ಲಾ ಸಂಬಂಧಿಕರು ಒಂದು ಕಡೆ ಸೇರಿ ಮದುವೆಯ ಬಗ್ಗೆ ಮಾತನಾಡುತ್ತಾರೆ. ತಮ್ಮ ಸಂಬಂಧಿಕರ ೧೧ ಕುಲಗಳಲ್ಲಿ ಸ್ವಗೋತ್ರಗಳು ಸಹೋದರ ಆಗುವ ಕುಲಗಳಲ್ಲಿ ನಿಷಿದ್ಧವಾಗಿದ್ದು ಪರಸ್ಪರ ಬೀಗರಾಗುವ ಬೆಡಗುಗಳಲ್ಲಿ ಮಾತ್ರ ಹೆಣ್ಣನ್ನು ನೋಡುವುದಕ್ಕೆ ಪ್ರಾರಂಭಿಸುತ್ತಾರೆ. ಸಾಮಾನ್ಯವಾಗಿ ಈ ಸಮುದಾಯಗಳಲ್ಲಿ ಹೆಣ್ಣನ್ನು ಹಬ್ಬ ಹರಿದಿನ ಜಾತ್ರೆಗಳಿಗೆ ಬಂದಾಗ ಅಲ್ಲೇ ನೋಡಿಕೊಳ್ಳಲು ಹೇಳುತ್ತಾರೆ. ಕೆಲವು ಸಂದರ್ಭಗಳಲ್ಲಿ ಹುಡುಗನ ತಂದೆ ಹುಡುಗಿಯ ತಂದೆಗೆ ಹೆಣ್ಣನ್ನು ನೋಡಲು ಇಂತಹ ದಿನ ಬರುತ್ತೇನೆ ಎಂದು ಹೇಳಿ ಕಳಿಸುತ್ತಿದ್ದರು. ಮೊದಲು ಹುಡುಗ ಹುಡುಗನ ತಂದೆ ನಂತರ ಸಂಬಂಧಿಕರು ಇಬ್ಬರು ಹೆಣ್ಣನ್ನು ನೋಡಲು ಹೋಗುತ್ತಾರೆ. ಹೆಣ್ಣು ಇಷ್ಟವಾದರೆ ನಂತರ ತಾಯಿ ಸಮುದಾಯದ ಮುಖ್ಯಸ್ಥರು, ಸೋದರರು ಬಂದು ಹುಡುಗಿಯನ್ನು ನೋಡಿ ನಂತರ ಅವರಿಗೆ ಬರುವಂತೆ ಹೇಳುತ್ತಾರೆ. ಹೆಣ್ಣಿನ ಕಡೆಯವರು ಬಂದು ಹುಡುಗನ ಮನೆ ನೋಡಿ ಇಬ್ಬರಿಗೂ ಇಷ್ಟವಾದರೆ ಮುಂದಿನ ಕಾರ್ಯಕ್ಕೆ ಅಣಿಯಾಗುವರು ನಿಶ್ಚಿತಾರ್ಥಕ್ಕೆ ಬ್ರಾಹ್ಮಣರ ಹತ್ತಿರ ಹೋಗಿ ಪಂಚಾಂಗ ನೋಡಿ ಶುಭದಿನವನ್ನು ಕೇಳುತ್ತಾರೆ.

ಬ್ರಾಹ್ಮಣರು ಕೊಟ್ಟ ಶುಭದಿನವನ್ನು ಕಡ್ಡಾಯ ಮಾಡಿ ತಮ್ಮ ಸಂಬಂಧಿಕರಿಗೆ ಹೇಳುವರು ಮದುವೆ ಕಡ್ಡಾಯವಾದ ಮೇಲೆ ಹೆಣ್ಣಿನ ಕಡೆಯವರು ಗಂಡಿನ ಕಡೆಯವರು ಆರ್ಥಿಕವಾಗಿ ಮುಂದಿನ ಕಾರ್ಯಕ್ಕೆ ಮುಂದಾಗುವರು.

**ಮದುವೆಯ ಆರ್ಥಿಕತೆ**

ದಕ್ಕಲರು ಮದುವೆಯನ್ನು ನಿಶ್ಚಯ ಮಾಡಿದ ಮೇಲೆ ಮದುವೆಯ ಖರ್ಚುವೆಚ್ಚಗಳಿಗಾಗಿ ಹಣದ ಸಮಸ್ಯೆ ಎದುರಾಗುತ್ತದೆ. ಹಣಕ್ಕಾಗಿ ತಮ್ಮ ಕುಲ ಬಂಧುಗಳಾದ ಮಾದಿಗರ ಮನೆಗಳಿಗೆ ಹೋಗುತ್ತಾರೆ. ನಾವು ನಿಮ್ಮ ದಕ್ಕಲ ಮಕ್ಕಳು ಬಂದಿದ್ದೇವೆ ಸ್ವಾಮಿ, ನಮ್ಮ ಮಗ ಅಥವಾ ಮಗಳಿಗೆ ಮದುವೆ ಮಾಡಬೇಕು ಹಣದ ಸಹಾಯ ನೀಡಿ ಎಂದು ಭಿಕ್ಷೆ ಬೇಡುತ್ತಾರೆ. ಆಗ ಅವರು ನೀಡಿದ ಅಲ್ಪಸ್ವಲ್ಪ ಹಣ ಹಾಗೂ ವಸ್ತ್ರ-ಒಡವೆಗಳನ್ನು ತೆಗೆದುಕೊಳ್ಳುತ್ತಾರೆ. ಹಾಗೆ ಕೂಲಿಕೆಲಸಗಳಿಗೆ ಹೋಗಿ ದುಡಿದು ಕೂಡಿಟ್ಟ ಹಣವನ್ನು ಮದುವೆ ಖರ್ಚುಗಳಿಗೆ ವ್ಯಯ ಮಾಡುತ್ತಾರೆ. ಅಷ್ಟೇ ಅಲ್ಲದೆ ತಾವು ಸಾಕಿದ ಹಂದಿಗಳನ್ನು ಮಾರಿ ಅದರಿಂದ ಬಂದ ಹಣವನ್ನು ಮದುವೆ ಖರ್ಚಿಗೆ ಇಟ್ಟುಕೊಳ್ಳುತ್ತಾರೆ. ಮಾದಿಗರ ಮನೆಯಲ್ಲಿ ದವಸ-ಧಾನ್ಯಗಳನ್ನು ಸಂಗ್ರಹಿಸಿತರುತ್ತಾರೆ. ಆರ್ಥಿಕತೆಗೆ ತಕ್ಕಂತೆ ಮದುವೆ ಸಮಾರಂಭಗಳನ್ನು ಮಾಡುತ್ತಾರೆ. ಈ ಸಮುದಾಯಗಳಲ್ಲಿ ವರದಕ್ಷಿಣೆ ಕೊಡುವುದು ಇದುವರೆಗೂ ಕಂಡುಬಂದಿಲ್ಲ. ತಮ್ಮ ಹೊಟ್ಟೆ ತುಂಬಿಸಿಕೊಳ್ಳಲು ದಿನದ ಕೂಲಿಗಾಗಿ ಕಾಯುವ ಈ ಸಮುದಾಯಗಳಲ್ಲಿ ಇನ್ನು ಹೆಚ್ಚುಹಣ ವ್ಯಯ ಮಾಡಿ ಮದುವೆ ಮಾಡಲು ಎಲ್ಲಿಂದ ಸಾಧ್ಯವಾಗುತ್ತದೆ. ಹೀಗಾಗಿ ಮದುವೆ ಖರ್ಚು ವೆಚ್ಚಗಳು ಅಷ್ಟಾಗಿ ಬರುವುದಿಲ್ಲ. ಆದರೆ ಮದುವೆ ಮಾಡಿಕೊಡುವುದಕ್ಕೆ ಮಾತ್ರ ಇವರ ಹಣ ಸಂಗ್ರಹಿಸಬೇಕಾಗುತ್ತದೆ. ಹಾಗೇ ಈ ಸಮುದಾಯ ಘನತೆಗಳು ತನ್ನ ಗೌರವಕ್ಕೆ ತಕ್ಕಂತೆ ಆರ್ಥಿಕತೆಗೆ ತಕ್ಕಂತೆ ಮದುವೆ ಮಾಡುವುದಕ್ಕೆ ಮುಂದಾಗುತ್ತಾರೆ. ತಮ್ಮ ಕುಲ ಬಂಧುಗಳಾದ ಮಾದಿಗರು ಕೊಟ್ಟ ಹಣ ಹಾಗೂ ಒಡವೆ ವಸ್ತ್ರಗಳು ಮತ್ತು ಅವರ ಸಂಪಾದನೆಯ ಹಣವನ್ನು ಮದುವೆಯ ಆರ್ಥಿಕತೆಗೆ ಬಳಸಿಕೊಳ್ಳುತ್ತಾರೆ.

**ವಸ್ತ್ರ ಮತ್ತು ಒಡವೆಗಳು**

ತಳಸಮುದಾಯಗಳಲ್ಲಿ ಆರ್ಥಿಕವಾಗಿ ಹಿಂದುಳಿದಿರುವ ಕಾರಣ ವಸ್ತ್ರ ಮತ್ತು ಒಡವೆಗಳು ತುಂಬ ಸರಳವಾಗಿರುತ್ತದೆ. ಹೊಸ ಬಟ್ಟೆಯನ್ನು ಖರೀದಿ ಮಾಡಿ ಹಾಕಿಕೊಳ್ಳುವುದಕ್ಕೆ ಇವರು ಹಣ ಎಲ್ಲಿಂದ ಬರುವುದಕ್ಕೆ ಸಾಧ್ಯವಾಗುತ್ತದೆ. ಭಿಕ್ಷೆ ಬೇಡಿ ತಂದ ಬಟ್ಟೆಯನ್ನು ತೊಳೆದು ಆ ಬಟ್ಟೆಗಳೇ ಇವರ ಹೊಸ ಬಟ್ಟೆಗಳಾಗಿರುತ್ತವೆ. ಇಲ್ಲವಾದರೆ ಕೂಲಿ ಕೆಲಸಗಳಿಗೆ ಹೋಗಿ ಹಣ ಸಂಪಾದಿಸಿದರೆ ಆ ಹಣವನ್ನು ಕೊಟ್ಟು ನೂರು ರೂಪಾಯಿ ಸೀರೆ ತೆಗೆದುಕೊಂಡರೆ ಅದೇ ಇವರ ರೇಷ್ಮೆ ಸೀರೆಯಾಗಿರುತ್ತದೆ. ಇನ್ನು ಮದುವೆ ಸಮಾರಂಭಗಳನ್ನು ಹೇಳುವ ಹಾಗಿಲ್ಲ ತುಂಬ ಸರಳವಾಗಿ ಮದುವೆ ಮುಗಿಸುತ್ತಾರೆ. ಇತ್ತೀಚೆಗೆ ಸ್ವಲ್ಪಮಟ್ಟಿಗೆ ಬದಲಾವಣೆ ಹೊಂದಿದ್ದು

ಐನೂರು ರೂಪಾಯಿಯ ಸೀರೆಗಳನ್ನು ಮದುವೆ ಹೆಣ್ಣಿಗೆ ರೇಷ್ಮೆ ಸೀರೆ ಇಳಕಲ್ ಸೀರೆಗಳನ್ನು ಖರೀದಿಸುತ್ತಾರೆ. ಉಳಿದ ಮನೆಯಲ್ಲಿ ಎಲ್ಲರು ಭಿಕ್ಷೆ ಬೇಡಿ ತಂದ ಬಟ್ಟೆಯೇ ಇವರ ವಸ್ತ್ರಗಳಾಗಿರುತ್ತವೆ. ಅಲೆಮಾರಿಗಳಾದ ತಳ ಸಮುದಾಯಗಳು ನಿಲ್ಲುವುದಕ್ಕೆ ನೆಲೆ ಇಲ್ಲದಿದ್ದಾಗ ಇನ್ನ ಅವರಿಗೆ ಹೊಸ ಬಟ್ಟೆಯನ್ನು ಖರೀದಿಸುವಷ್ಟು ಆರ್ಥಿಕತೆ ಎಲ್ಲಿಂದ ಸಾಧ್ಯವಾಗುತ್ತದೆ. ತಮ್ಮ ಕುಲಬಂಧುಗಳಾದ ಮಾದಿಗರ ಕೇರಿಗೆ ಹೋಗಿ ಅವರಲ್ಲಿ ಸ್ವಾಮಿ ನಿಮ್ಮ ಮನೆ ಮಗ ದಕ್ಕಲ ಮಗ ಬಂದಿದ್ದಾನೆ ಮದುವೆ ಖರ್ಚಿಗೆ ಹಣ ದವಸಧಾನ್ಯಗಳು ಬೇಕು ಎಂದು ಜೋರಾಗಿ ಕೂಗಿದಾಗ ಮಾದಿಗರು ಅವರ ಘನತೆಗೆ ತಕ್ಕಂತೆ ವಸ್ತ್ರ-ಧಾನ್ಯಗಳನ್ನು ತಂದು ಕೊಡುತ್ತಾರೆ. ಹೀಗೆ ಭಿಕ್ಷೆ ಬೇಡಿ ತಂದ ವಸ್ತ್ರ, ಹಣ, ಧಾನ್ಯಗಳ ಜೊತೆಗೆ ಅವರು ಕೂಡಿಟ್ಟಿರುವ ಹಣವನ್ನು ಹಾಕಿ ಮದುವೆ ಮಾಡುವುದಕ್ಕೆ ಮುಂದಾಗುತ್ತಾರೆ.

ಇತ್ತೀಚಿನ ದಿನಗಳಲ್ಲಿ ದಕ್ಕಲ ಸಮುದಾಯಗಳು ಭಿಕ್ಷೆ ಬೇಡುವುದನ್ನು ಬಿಟ್ಟು ಸ್ವಾಭಿಮಾನದಿಂದ ತಾವೆ ದುಡಿದು ಹಣವನ್ನು ಸಂಪಾದಿಸಿ ತಮ್ಮ ಜೀವನವನ್ನು ಸಾಗಿಸುತ್ತಿದ್ದಾರೆ. ಹಾಗೆ ಮಕ್ಕಳ ಮದುವೆಯ ಖರ್ಚು-ವೆಚ್ಚಗಳು ಸ್ವಾಭಿಮಾನದಿಂದ ದುಡಿದ ಹಣದಿಂದ ತಮ್ಮ ಘನತೆಗೆ ತಕ್ಕಂತೆ ಮದುವೆ ಮಾಡುತ್ತಾರೆ. ಮದುವೆ ಹೆಣ್ಣಿಗೆ ಬೇಕಾದ ಒಡವೆಗಳು ವಸ್ತ್ರಗಳು ಸ್ವಲ್ಪ ಮಟ್ಟಿನಗುಣಮಟ್ಟದ ಸೀರೆಗಳನ್ನು ಖರೀದಿಸುತ್ತಾರೆ. ಇಳಕಲ್ ಸೀರೆ, ರೇಷ್ಮೇ ಸೀರೆ, ಮುಹೂರ್ತದ ಸೀರೆಯು ರೇಷ್ಮೆ ಸೀರೆಯಾಗಿರುತ್ತದೆ. ಬಳೆಗಳು ಹಸಿರು ಮತ್ತು ಕಪ್ಪು ಬಣ್ಣದ್ದಾಗಿರುತ್ತದೆ. ಕಾಲು ಚೈನು, ಕಿವಿ ಓಲೆ, ಜುಮುಕಿ, ಮೂಗುನತ್ತು, ಕತ್ತಿಗೆ ನೆಕ್ಲೇಸ್ ಹೀಗೆ ಮದುಮಗಳ ವಸ್ತ್ರವಾದರೆ ವರನವಸ್ತ್ರಗಳು ಬಿಳಿ ಪಂಚೆ, ಬಿಳಿ ಅಂಗಿ, ನಿಕ್ಕರು ಬನಿಯನ್, ಉಂಗುರ, ಕೈಗೆ ವಾಚ್, ಮಾವನ ಕಡೆಯಿಂದ ಎರಡು ಜೊತೆ ಬಟ್ಟೆ ಕಾಲಿಗೆ ಚಪ್ಪಲಿ ವಧುವಿನ ವಸ್ತ್ರಗಳಿಗಿಂತ ವರನ ವಸ್ತ್ರಗಳು ತುಂಬ ಸರಳವಾಗಿವೆ.

ಹೀಗೆ ಸಮಾಜದ ಬದಲಾವಣೆಯತ್ತ ದಾಪುಗಾಲು ಹಾಕುತ್ತ ಮದುವೆಯ ವಿಧಿ ವಿಧಾನಗಳಲ್ಲಿಯೂ ಬದಲಾವಣೆಗೊಂಡು ಪೂರ್ವಿಕರಿಗಿಂತ ಸ್ವಲ್ಪ ಮಟ್ಟಿಗೆ ಸುಧಾರಿಸಿಕೊಂಡಿದ್ದಾರೆ.

**ನಿಶ್ಚಿತಾರ್ಥ**

ದಕ್ಕಲ ಸಮುದಾಯಗಳಲ್ಲಿ ಮದುವೆಯ ನಿಶ್ಚಿತಾರ್ಥದ ಖರ್ಚು ವೆಚ್ಚಗಳು ಹುಡುಗಿಯ ಕಡೆಯವರದ್ದೆ ಆಗಿರುತ್ತದೆ. ಈ ಸಮುದಾಯಗಳಲ್ಲಿ ನಿಶ್ಚಿತಾರ್ಥದ ವಿಶೇಷತೆ ಎಲೆ, ಅಡಿಕೆ ಶಾಸ್ತ್ರ ಎಂದು ಕರೆಯುತ್ತಾರೆ. ಎರಡು ಸಂಬಂಧಗಳನ್ನು ಗಟ್ಟಿ ಮಾಡುವ ಶಾಸ್ತ್ರವಾಗಿದೆ. ಇಬ್ಬರ ಪ್ರೀತಿ ವಿಶ್ವಾಸ ಮೂಡಿಸುವ ಅನ್ಯೋನ್ಯ ಶಾಸ್ತ್ರ ಎಂದು ಹೇಳುತ್ತಾರೆ. ಹೆಣ್ಣು-ಗಂಡು ಒಪ್ಪಿಗೆಯಾದ ನಂತರ ನಿಶ್ಚಿತಾರ್ಥದಲ್ಲಿ ಗಂಡಿನ ಕಡೆಯವರು ಹೆಣ್ಣಿನ ಕಡೆಯವರಿಗೆ ಎಲೆ ಅಡಿಕೆ ಕೊಟ್ಟು ನಿಮ್ಮ ಮಗಳನ್ನು ನಮ್ಮ ಮಗನಿಗೆ ಕೊಟ್ಟು ವಿವಾಹ ಮಾಡಬೇಕು ಎಂದು ಹೆಣ್ಣಿನ ಕಡೆಯವರು ಗಂಡಿನ ಕಡೆಯವರಿಗೆ ಎಲೆ ಅಡಿಕೆ ಕೊಟ್ಟು ನಮ್ಮ ಮಗಳನ್ನು ನಿಮ್ಮ

ಮಗನಿಗೆ ಕೊಟ್ಟು ವಿವಾಹ ಮಾಡುವುದಕ್ಕೆ ನಮಗೆ ಸಂಪೂರ್ಣ ಒಪ್ಪಿಗೆಯಿದೆ ಎಂದು ಒಬ್ಬರಿಗೊಬ್ಬರು ಹೇಳಿಕೊಂಡು ಎಲೆ ಅಡಿಕೆ ಹಂಚಿಕೊಳ್ಳುತ್ತಾರೆ ಇದಕ್ಕೆ ಎಲೆ ಅಡಿಕೆ ಶಾಸ್ತ್ರ ಎಂದು ಕರೆಯುವರು.

ನಿಶ್ಚಿತಾರ್ಥದ ದಿನ ಬ್ರಾಹ್ಮಣ ಬಳಿ ನೋಡಿದ ಪಂಚಾಂಗದ ಸಮಯಕ್ಕೆ ಪಡಸಾಲೆಯಲ್ಲಿ ಕುರ್ಚಿಗಳನ್ನು ಹಾಕಿ ಅದರ ಮೇಲೆ ಬಿಳಿ ಬಟ್ಟೆಯನ್ನು ಹಾಕಿ ಅದರ ಮೇಲೆ ಕೂರಿಸಿ ವಧುವಿನ ಮನೆಯ ಮುಂಭಾಗದಲ್ಲಿ ಎರಡು ಕಡೆಯ ಸಂಬಂಧಿಕರು ಸೇರಿ ಐದು ಜನ ಮುತ್ತೈದೆಯರು ಬಂದು ಇಬ್ಬರಿಗೂ ಅರಿಸಿಣ, ಕುಂಕುಮ ಇಟ್ಟು ವಸಿಗೆಯ ತಟ್ಟೆಯನ್ನು ವಧು ವರರಿಗೆ ಕೊಟ್ಟು ನಮಸ್ಕರಿಸಿರುತ್ತಾರೆ. ಹೆಣ್ಣು ಮತ್ತು ಗಂಡಿಗೆ ಹೂವಿನ ಮಾಲೆಯನ್ನು ಕೊಟ್ಟು ಒಬ್ಬರಿಗೊಬ್ಬರು ಹಾಕಿಕೊಳ್ಳುವಂತೆ ಹೇಳಿ ನಂತರ ವಧು ವರರ ಮುಂದೆ ಅಕ್ಕಿ ಬೆಲ್ಲಗಳನ್ನು ಇಟ್ಟು ಸೋಬಾನೆ ಪದಗಳನ್ನು ಹಾಡಿ ಕುಂಕುಮದ ಕಾರ್ಯಕ್ರಮ ಮುಗಿದ ಮೇಲೆ ವಧುವಿನ ಕೈ ಬೆರಳಿಗೆ ವರ ಉಂಗುರವನ್ನು ಹಾಕುತ್ತಾನೆ. ಹಾಗೆ ವಧು ವರನ ಕೈ ಬೆರಳಿಗೆ ಉಂಗುರ ಹಾಕುತ್ತಾಳೆ. ತದ ನಂತರ ಸಿಹಿಯನ್ನು ತಿನ್ನಿಸುವರು ಕೊನೆಯಲ್ಲಿ ಮುತ್ತೈದೆಯರು ಆರತಿಯನ್ನು ಬೆಳಗಿಸಿ ಮನೆಯ ಬಾಗಿಲ ಮುಂದೆ ಹಾಕುತ್ತಾರೆ. ವಿಶೇಷ ಅಡುಗೆಯನ್ನು ಎಲ್ಲರಿಗೂ ಬಡಿಸಿ ಊಟವಾದ ಬಳಿಕ ಒಂದು ಕಡೆ ಕೂತು ಮದುವೆಯ ದಿನ ನಿಶ್ಚಯ ಮಾಡುತ್ತಾರೆ. ಹೆಣ್ಣು ಗಂಡಿನ ಮುಹೂರ್ತ ಬ್ರಾಹ್ಮಣರ ಪಂಚಾಂಗದ ಪ್ರಕಾರ ಶುಭ ದಿನದಂದು ದಿನಾಂಕವನ್ನು ನಿಗದಿ ಪಡಿಸುತ್ತಾರೆ. ತದನಂತರ ಸಿಹಿಯನ್ನು ಹಂಚಿ ನಿಶ್ಚಿತಾರ್ಥ ಕಾರ್ಯವನ್ನು ಮುಗಿಸುತ್ತಾರೆ.

**ಮದುವೆಯ ವಿಧಾನ**

ನಿಶ್ಚಿತಾರ್ಥ ಮುಗಿದ ತಿಂಗಳ ಒಳಗೆ ಮದುವೆ ಮಾಡುತ್ತಾರೆ. ಮದುವೆಯನ್ನು ಹೆಚ್ಚು ದಿನಗಳು ಇಟ್ಟುಕೊಳ್ಳುವುದಿಲ್ಲ. ದಕ್ಕಲ ಮದುವೆ ಸರಳವಾಗಿದ್ದರು ಸಾಂಸ್ಕೃತಿಕವಾಗಿರುತ್ತದೆ. ಮದುವೆಯ ವಿಧಿ ವಿಧಾನ ಎರಡು ಸಂಬಂಧಗಳನ್ನು ಬೆಸೆಯುವ ಒಂದು ವಿಧಾನವೆಂದು ಇವರ ನಂಬಿಕೆ. ಹಾಗಾಗಿ ಜೋಡಿ ಚಪ್ಪರಗಳನ್ನು ಹಾಕುತ್ತಾರೆ. ಎರಡು ರಕ್ತ ಸಂಬಂಧಗಳ ಜೋಡಣೆ ಕುಟುಂಬ ವೃದ್ಧಿಯ ತೊಟ್ಟಿಲು ತಮ್ಮ ಸಮುದಾಯಗಳ ಅಭಿವೃದ್ಧಿಸುವ ಸಂತಾನದ ತೊಟ್ಟಿಲು ಎಂಬ ಅರ್ಥದ ಅಡಿಯಲ್ಲಿ ಜೋಡಿ ಚಪ್ಪರಗಳನ್ನು ಹಾಕುತ್ತಾರೆ. ಮದುವೆಯ ನೆಪದಲ್ಲಿ ಗಂಡು ಹೆಣ್ಣಿನ ಬೆಸಿಗೆಯಲ್ಲಿ ಸಂಬಂಧಗಳ ಬಾಂಧವ್ಯ ಹೆಚ್ಚಿಸುವ ವಿಧಾನವಾಗಿರುತ್ತದೆ. ತಿಂಗಳಿಂದ ಮದುವೆಗೆ ಇನ್ನು ಒಂದು ತಿಂಗಳು ಇರುವಾಗಲೇ ಮನೆಯನ್ನು ಸ್ವಚ್ಛ ಮಾಡಿ ಸುಣ್ಣ ಬಳಿದು ಗೋಡೆಗಳಿಗೆ ಚಿತ್ತಾರಗಳನ್ನು ಹಾಕಿ ಶುಭ್ರಗೊಳಿಸಿರುತ್ತಾರೆ. ಮದುವೆಗೆ ನಾಲ್ಕು ದಿನಗಳ ಮುಂದೆ ಶಾಸ್ತ್ರಗಳು ಪೂಜೆಗಳು ಪ್ರಾರಂಭವಾಗುತ್ತದೆ. ನಿಶ್ಚಿತಾರ್ಥ ಪ್ರಾರಂಭವಾದ ದಿನದಿಂದ ಹಿಡಿದು ಮದುವೆ ಮುಗಿಯುವ ತನಕ ಮಾಂಸ ತಿನ್ನುವ ಹಾಗಿಲ್ಲ. ಇವರ ಮದುವೆಯ ವಿಶೇಷತೆ ಜೋಡಿ ಚಪ್ಪರಗಳು.

**ಚಪ್ಪರ ಹಾಕುವ ಶಾಸ್ತ್ರ**

ಮದುವೆ ಕಾರ್ಯಕ್ರಮ ಪ್ರಾರಂಭವಾದ ದಿನಕ್ಕೆ ಹಾಗೂ ಮುಹೂರ್ತದ ಮುಂದಿನ ದಿನ ಚಪ್ಪರ ಹಾಕುವ ಶಾಸ್ತ್ರವಿರುತ್ತದೆ. ಈ ಶಾಸ್ತ್ರ ಎಲ್ಲಾ ಸಮುದಾಯಗಳಿಗಿಂತ ಭಿನ್ನವಾಗಿದ್ದು ಜೋಡಿ ಚಪ್ಪರಗಳನ್ನು ಹಾಕುತ್ತಾರೆ, ಇದಕ್ಕೆ ೧೨ ಕಂಬಗಳು ಮತ್ತು ೧೨ ಕುಂಬಗಳು ಹಾಕುತ್ತಾರೆ. ಇದರ ಕೆಳಗೆ ಅರಿವೇಣಿಗೆಗಳು ಇಟ್ಟು ಕೆಂಪು ಬಾವುಟ ಇಟ್ಟು ಜೋಡಿ ಚಪ್ಪರ ಹಾಕುತ್ತಾರೆ. ಈ ಜೋಡಿ ಚಪ್ಪರ ವಧು ಮತ್ತು ವರನ ಮನೆಯ ಮುಂದೆ ಕೂಡಿಸಿ ಹಾಕುತ್ತಾರೆ. ಇದರ ಖರ್ಚು ವೆಚ್ಚಗಳು ಹೆಣ್ಣಿನ ಕಡೆಯವರದು. ಚಪ್ಪರಕ್ಕೆ ಹತ್ತಿ ಮರದ ಕೊಂಬೆ ಮತ್ತು ಕಳ್ಳಿ ಮರ ತೆಂಗಿನ ಗರಿಗಳನ್ನು ಹೊಂಗೆ ಮರದ ಕೊಂಬೆಗಳ ಎಲೆಗಳು ಹಾಕಿ ಚಪ್ಪರವನ್ನು ಹಾಕುತ್ತಾರೆ. ನಂತರ ಚಪ್ಪರಕ್ಕೆ ಕೆಂಪು ಬಾವುಟ ಇಟ್ಟು ಅರಿವೇಣಿಗಳು ಇಟ್ಟು ೧೨ ಕಂಬಗಳಿಗೂ ಪೂಜೆ ಮಾಡಿಸುವರು. ಈ ಜೋಡಿ ಚಪ್ಪರಗಳ ಶಾಸ್ತ್ರವನ್ನು ಮದಲಿಂಗ ಶಾಸ್ತ್ರ ಎಂದು ಕರೆಯುತ್ತಾರೆ. ಈಶಾನ್ಯ ದಿಕ್ಕಿಗೆ ನೆಟ್ಟಿರುವ ಕಂಬಕ್ಕೆ ಶಾಸ್ತ್ರೋಕ್ತವಾಗಿ ಮದುವೆಯ ವಧು–ವರರು ಪೂಜೆಮಾಡುತ್ತಾರೆ, ಚಪ್ಪರದ ಕಂಬಗಳಿಗೆ ತೆಂಗಿನಗರಿಗಳನ್ನು ಸುತ್ತಿ ಮಾವಿನ ತೋರಣಗಳನ್ನು ಕಟ್ಟಿ ಹೂಗಳಿಂದ ಅಲಂಕರಿಸಿ ಚಪ್ಪರದ ಕೆಳಗೆ ಹೂವುಗಳನ್ನು ತೂಗಿ ಬಿಡುತ್ತಾರೆ, ನಂತರ ಮುತ್ತೈದೆಯರು ಚಪ್ಪರಕ್ಕೆ ಪೂಜೆ ಮಾಡಿ ಆರತಿಯನ್ನು ಬೆಳಗಿಸುತ್ತಾರೆ.

**ಬೀಗರನ್ನು ಎದುರುಗೊಳ್ಳುವ ಶಾಸ್ತ್ರ**

ಮದುವೆ ಒಂದು ದಿನ ಮುಂಚಿತವಾಗಿ ಅಂದರೆ ಚಪ್ಪರದ ದಿನ ಅರಿಶಿನದ ಶಾಸ್ತ್ರವನ್ನು ಮಾಡುತ್ತಾರೆ. ಅರಿಶಿನ ಹಚ್ಚಿ ವರ ಮತ್ತು ವರನ ಕಡೆಯವರು ವಧುವಿನ ಮನೆಗೆ ಬರುತ್ತಾರೆ. ಆಗ ವಧುವಿನ ಕಡೆಯವರು ತಮ್ಮ ಕೇರಿಯ ಬಾಗಿಲ ಬಳಿ ಬಂದಾಗ ವಧುವಿನ ಕಡೆಯವರು ವಾದ್ಯಗಳ ಸಮೇತ ಕಳಸಗಳು, ಪೂಜೆ ತಟ್ಟೆ, ಪಾನಕ ಕೊಳಗಳನ್ನು ತೆಗೆದುಕೊಂಡು ಹೋಗಿ ವರನಿಗೆ ಛತ್ರಿ ಹಿಡಿದು ವರನ ಪಾದಗಳನ್ನು ತೊಳೆದು ಪೂಜೆ ಮಾಡಿ ಚಪ್ಪಲಿಯನ್ನು ಹಾಕಿ ಪಾನಕ ಪನ್ನಾರ ಹಂಚಿ ಕೆರೆಯ ಒಳಗೆ ಬರಮಾಡಿಕೊಳ್ಳುತ್ತಾರೆ. ವರನನ್ನು ವಧುವಿನ ಸಂಬಂಧಿಕರ ಮನೆಯಲ್ಲಿ ಇರಿಸುವರು ವಧುವಿನ ಸಂಬಂದಿಕರ ಮನೆಗೆ ದಿಬ್ಬಣ ಮನೆ ಎಂದು ಕರೆಯುತ್ತಾರೆ. ಮದುವೆಯಾಗುವ ತನಕ ವರನು ವಧುವಿನ ಮನೆಗೆ ಹೋಗುವ ಹಾಗಿಲ್ಲ. ಹಾಗಾಗಿ ಸಂಬಂಧಿಕರ ಗುಡಾರದಲ್ಲಿ ಇರಿಸಿ ಅಲ್ಲೆ ಶಾಸ್ತ್ರಗಳನ್ನು ಮಾಡುತ್ತಾರೆ. ಸಂಬಂಧಿಕರ ಮನೆಯಲ್ಲಿ ಕಳಸಗಳನ್ನು ಇಟ್ಟು ವಸೆಗೆಯನ್ನು ಹಾಕಿ ಮುತ್ತೈದೆಯರು ಅರಿಶಿಣವಿಟ್ಟು ಸೋಬಾನೆ ಪದಗಳೊಂದಿಗೆ ಎದುರುಗೊಳ್ಳುತ್ತಾರೆ.

**ನಾಗವಲ್ಲಿ ಶಾಸ್ತ್ರ**

ಚಪ್ಪರದ ದಿನ ಚಪ್ಪರದ ಕೆಳಗೆ ಸಿಂಹಾಸನ ಹಾಕಿ ನಾಗವಲ್ಲಿ ಶಾಸ್ತ್ರ ಮಾಡುತ್ತಾರೆ. ಸಿಂಹಾಸನಕ್ಕೆ ಕರಿ ಕಂಬಳಿ ಹಾಕಿ ಅದರ ಮೇಲೆ ಅಕ್ಕಿ ಹಾಕಿ ಬೆಲ್ಲ ಖರ್ಜೂರ, ಕಲ್ಲು, ಸಕ್ಕರೆ,

ಬೆಲ್ಲದ ರೊಟ್ಟಿಗಳನ್ನು ಇಟ್ಟು ಅದರ ಜೊತೆಯಲ್ಲಿ ಐದು ಕಳಸಗಳನ್ನು ಪೂಜಿಸುವುದಕ್ಕೆ ಅರಿವೇಣಿಗಳು ಎಂದು ಕರೆಯುವರು. ಇದಕ್ಕೆ ಸಿಂಹಾಸನ ಹಾಕಿ ವಧುವನ್ನು ಕರೆಯುತ್ತಾರೆ. ನಂತರ ಹಿರಿಯರು ಈ ಸಿಂಹಾಸನದಲ್ಲಿ ಕೂತು ಇದರಲ್ಲಿ ಗೌಡಸ್ಥರು, ಕರಣಿಯೋರು, ಗಣಾಚಾರಿ, ಎಲ್ಲಾ ಬೆಡಗಿನವರು ಬಂದು ಕೂರುತ್ತಾರೆ. ೧೨ ಬೆಡಗುಗಳಿಗೂ ೧೨ ಗೋತ್ರಗಳಿದ್ದು, ಸ್ವಗೋತ್ರದವರು ಸಿಂಹಾಸನದ ಮೇಲೆ ೧೨ ತಾಂಬೂಲಗಳನ್ನು ಸಾಲಾಗಿ ಹಿಡಿದು ೧೨ ಗೋತ್ರಗಳು ಹಿರುಗೋನಿ ಗೋತ್ರ ಮುರಿದು ಹೋಗಿದೆ ಅವರಿಗೆ ಒಂದು ತಾಂಬೂಲ ಎಂದು ಹೇಳಿ ೧೨ ಗೋತ್ರದವರು ತಾಂಬೂಲವನ್ನು ಕೊಟ್ಟು ನಾಗವಲ್ಲಿ ಶಾಸ್ತ್ರವನ್ನು ಮುಗಿಸಿ ಅರಿಶಿನ ಹಚ್ಚುವುದಕ್ಕೆ ಪ್ರಾರಂಭಿಸುತ್ತಾರೆ.

**ಅರಿಶಿಣ ಹಚ್ಚುವ ಶಾಸ್ತ್ರ**

ನಾಗವಲ್ಲಿ ಶಾಸ್ತ್ರದ ನಂತರ ರಾತ್ರಿಯಿಡಿ ಗಂಡು ಮತ್ತು ಮದುವೆ ಹೆಣ್ಣಿಗೆ ಸೋಬಾನೆ ಹಾಡುಗಳನ್ನು ಹಾಡುತ್ತಾ ಶಾಸ್ತ್ರೋಕ್ತವಾಗಿ ಅರಿಶಿಣವನ್ನು ಹಚ್ಚುತ್ತಾರೆ. ಬಿಳಿಸೀರೆಯನ್ನು ಉಡಿಸಿ ವರನಿಗೆ ಬಿಳಿ ಪಂಚೆ, ಬನಿನು ಹಾಕಿ ಮುತ್ತೈದೆಯರಿಂದ ಅರಿಶಿಣ ಹಚ್ಚುವರು ಅರಿಶಿಣ ಹಚ್ಚುವಾಗ ಸೋಭಾನೆ ಹಾಡುಗಳನ್ನು ಹಾಡಲೇಬೇಕು ಇಲ್ಲವಾದರೆ ವಧು ವರರು ಅರಿಶಿಣವನ್ನು ಹಚ್ಚಿಸಿಕೊಳ್ಳುವುದಿಲ್ಲ. ವರನ ಕಡೆ ಐದು ಮುತ್ತೈದೆಯರು ಮತ್ತು ವಧುವಿನ ಕಡೆ ಐದು ಜನ ಮುತ್ತೈದೆಯರು ಅರಿಶಿಣ ಹಚ್ಚಿ ಕೊನೆಯಲ್ಲಿ ಆರತಿಯನ್ನು ಎತ್ತಿ ವಧುವನ್ನು ವಧುವಿನ ಗುಡಾರದಲ್ಲಿ ಉಳಿದರೆ, ವರನು ವಧುವಿನ ಸಂಬಂಧಿಕರ ಮನೆಯಲ್ಲಿ ಉಳಿದುಕೊಳ್ಳುತ್ತಾನೆ.

**ಸುರಗಿ ನೀರುಹಾಕುವ ಶಾಸ್ತ್ರ**

ದಕ್ಕಲರು ಮದುವೆ ದಿನ ಸುರಗಿ ನೀರು ಹಾಕುವ ಶಾಸ್ತ್ರ ವಿವರವು ಜಾನಕಲ್ ರಾಜಣ್ಣ ಬರೆದ ದಕ್ಕಲರ ಪುಸ್ತಕದ ಮಾಹಿತಿಯನ್ನು ನಂತರ ಕ್ಷೇತ್ರಕಾರ್ಯದಲ್ಲಿ ತೆಗೆದುಕೊಂಡ ಮಾಹಿತಿ ಹಾಗು ಜಾನಕಲ್ ರಾಜಣ್ಣನೊಂದಿಗೆ ಚರ್ಚಿಸಿದಾಗ ಅದರಲ್ಲಿ ಇರುವ ಮಾಹಿತಿಯನ್ನು ನೀಡಿದ್ದಾರೆ. ಅವರು ಹೇಳಿರುವ ಎಲ್ಲಾ ಅಂಶಗಳನ್ನು ಎಲ್ಲವನ್ನು ಗಮನದಲ್ಲಿ ಇರಿಸಿಕೊಂಡು ಬರೆಯಲಾಗಿದೆ. ಮುಹೂರ್ತದ ದಿನ ಶಾಸ್ತ್ರೋಕ್ತವಾಗಿ ನಿಗದಿಮಾಡಿದ ಸಮಯವನ್ನು ಅನುಸರಿಸಿ ನೀರು ತುಂಬಿದ ನಾಲ್ಕು ಮಣ್ಣಿನ ಅಥವಾ ಪ್ಲಾಸ್ಟಿಕ್ ಬಿಂದಿಗೆಯನ್ನು ಚೌಕಾಕಾರವಾಗಿ ಇಟ್ಟು ಇವುಗಳ ಕೆಳಗಡೆ ದವಸ-ಧಾನ್ಯಗಳು ಅಥವಾ ಮರಳು ಯಾವುದಾದರೊಂದನ್ನು ಹಾಕಿ ಬಿಂದಿಕೆ ಉರುಳದಂತೆ ತುಂಬಾ ಜಾಗರೂಕತೆಯಿಂದ ಇಡುವರು. ಹೀಗೆ ಇರಿಸಿದ ಬಿಂದಿಗೆಗಳಿಗೆ ಸ್ತ್ರೀ-ಪುರುಷರು ಸೇರಿದಂತೆ ಮುತ್ತೈದೆಯರಿಂದ ಮೂರು ಅಥವಾ ಐದು ಜನರು ಬಿಳಿ ದಾರವನ್ನು ಒಂಭತ್ತು ಸುತ್ತು ಸುತ್ತುವರು ಸುರುಗಿ ನೀರನ್ನು ವಧುವರರನ್ನು ಮಧ್ಯ ಕುಳ್ಳಿರಿಸಿ ಒನಕೆಯನ್ನು ಇಟ್ಟು ಎಲೆ-ಅಡಿಕೆ ಮತ್ತು ನಿಂಬೆಹಣ್ಣು ಚುಚ್ಚಿದ ಚಾಕುವನ್ನು ಇಬ್ಬರು ತಮ್ಮ ಕೈಗಳಲ್ಲಿ ಹಿಡಿದುಕೊಂಡಿರುತ್ತಾರೆ. ಈ ಸುರಿಗೆಯನ್ನು ಹೊರಭಾಗದಲ್ಲಿ ವಧುವರನು ಒಂದೇ ಜೊತೆಯಲ್ಲಿ

ಒಂಭತ್ತು ಸಲ ಬಲಭಾಗದಿಂದ ಎಡಭಾಗಕ್ಕೆ ಸುತ್ತುವರಿದು ಕೊನೆಯ ಸುತ್ತಿನಲ್ಲಿ ಎಲೆ ಅಡಿಕೆ ಭೂಮಿಗೆ ಇಟ್ಟು ನಮಸ್ಕರಿಸಿ ವಧುವರರು ಬಲಗಾಲನ್ನು ಸುರಗಿಯ ಒಳಗೆ ಇಟ್ಟು ಒನಕೆಯ ಮೇಲೆ ಕುಳಿತುಕೊಳ್ಳುತ್ತಾರೆ. ನಂತರ ಮುತ್ತೈದೆಯರು ಅರಿಶಿಣ ಹಚ್ಚಿ ನಂತರ ಎಣ್ಣೆಯನ್ನು ತಲೆಗೆ ಹಚ್ಚಿಸಿ ಸುರಗಿ ನೀರನ್ನು ಪೂಜಿಸಿ ಅದರ ಜೊತೆಗೆ ಬಿಸಿ ನೀರನ್ನು ಸೇರಿಸಿ ಸ್ನಾನ ಮಾಡಿಸುವರು. ಇದನ್ನು ಸುರಗಿ ನೀರು ಶಾಸ್ತ್ರ ಎನ್ನುವರು.

**ತಾಳಿ ಕಟ್ಟುವ ಶಾಸ್ತ್ರ**

ರಾತ್ರಿಯಿಡಿ ಅರಿಶಿಣ ಹಚ್ಚಿ ಸುರಗಿ ನೀರಿನ ಶಾಸ್ತ್ರ ನಾಗವಲ್ಲಿ ಶಾಸ್ತ್ರ ಮುಗಿದ ಮೇಲೆ ಬೆಳಗ್ಗೆ ಮುಹೂರ್ತ ನಡೆಯುತ್ತದೆ. ವರ ವಧುವಿಗೆ ತಾಳಿಕಟ್ಟಿ ತಮ್ಮ ಜೀವನಕ್ಕೆ ವಧುವನ್ನು ಆಹ್ವಾನಿಸುವ ಶಾಸ್ತ್ರ, ಬಾಳ ಸಂಗಾತಿಯಾಗಿಸಿಕೊಳ್ಳುವ ಶಾಸ್ತ್ರ ಎಂದು ಸಹ ಕರೆಯುತ್ತಾರೆ. ಬ್ರಾಹ್ಮಣರ ಪಂಚಾಂಗದಂತೆ ಆ ಶುಭಗಳಿಗೆಯನ್ನು ವಧು ವರರು ಮದುವೆಯ ರೇಷ್ಮೆ ಸೀರೆ, ಒಡವೆಯನ್ನು ಹಾಕಿ, ಜಡೆಗೆ ಹೂವನ್ನು ಸುತ್ತಿ ಅಲಂಕರಿಸಿ ವಧುವಿಗೆ ಮಾವನ ವರೆಸೆಯಾಗುವವರು. ವಧುವಿಗೆ ಬಾಸಿಂಗ ಕಟ್ಟಿ ಹಸೆಮಣೆಯ ಮೇಲೆ ಕೂರಿಸುತ್ತಾರೆ. ಹಾಗೆ ವರನನ್ನು ಬಿಳಿ ಪಂಚೆ ಬಿಳಿ ಶರ್ಟ್ ಹಾಕಿಕೊಂಡು ಮಾವನ ಕೈಯಿಂದ ಬಾಸಿಂಗ ಕಟ್ಟಿಸಿ ಹಸೆಮಣೆ ಏರುತ್ತಾರೆ. ಇಲ್ಲಿಂದ ಮುಹೂರ್ತಗಳು ಪ್ರಾರಂಭವಾಗಿ ಪುರೋಹಿತರು ವಧುವರರ ಕೈಗೆ ಕಂಕಣ ಕಟ್ಟುವರು ಕಂಕಣ ಬಿಳಿದಾರಕ್ಕೆ ಅರಿಶಿನವನ್ನು ಹಚ್ಚಿ ಅದಕ್ಕೆ ಕೊಂಬು ಕಟ್ಟಿ ಅದಕ್ಕೆ ವೀಳೆದೆಲೆಯನ್ನು ಕಟ್ಟಿ ಹೆಣ್ಣುಗಂಡಿಗೆ ಕಟ್ಟಿದರೆ ಗಂಡು ಹೆಣ್ಣಿಗೆ ಕಟ್ಟುತ್ತಾರೆ.

ಮುಹೂರ್ತದ ಸಂದರ್ಭದಲ್ಲಿ ವರನ ತಂದೆ ತಾಯಿ ಮತ್ತು ವಧುವಿನ ತಂದೆ ತಾಯಿಯವರು ಪಕ್ಕದಲ್ಲೆ ಕುಳಿತು ಪುರೋಹಿತರು ಹೇಳಿದ ಮಂತ್ರಗಳನ್ನು ಹೇಳಿ ಶಾಸ್ತ್ರೋಕ್ತವಾಗಿ ಮದುವೆ ಮುಂದುವರಿಸುವರು ಕಳಸ ಮತ್ತು ತೆಂಗಿನಕಾಯಿಯನ್ನು ವಧುವರರ ಕೈಯಲ್ಲಿ ಕೊಟ್ಟು ತಂದೆ ತಾಯಿಯರು ಅದಕ್ಕೆ ಪೂಜೆ ಮಾಡಿ ಹಾಲು ತುಪ್ಪ ಬಿಡುತ್ತಾರೆ. ನಂತರ ವಧುವಿನ ತಂದೆ ತಾಯಿ ವರನಿಗೆ ಕನ್ಯಾಧಾನ ಮಾಡುವ ವಿಧಾನ ವರನ ಕಾಲುಗಳನ್ನು ತಟ್ಟೆಯಲ್ಲಿ ಇಟ್ಟು ವಧುವಿನ ತಂದೆ ವರನ ಕಾಲು ತೊಳೆದರೆ ತಾಯಿ ನೀರು ಹಾಕುತ್ತಾಳೆ. ನಂತರ ಅರಿಶಿಣ ಕುಂಕುಮ ಇಟ್ಟು ಪುರೋಹಿತರು ಹೇಳುವ ಮಂತ್ರಗಳನ್ನು ಹೇಳಿ ನನ್ನ ಮಗಳನ್ನು ನಿಮಗೆ ಧಾರೆ ಎರೆಯುತ್ತಿದ್ದೇನೆ ನನ್ನ ಮಗಳನ್ನು ಸ್ವೀಕರಿಸು ಎಂದು ವಧುವಿನ ತಂದೆ ವರನಿಗೆ ಕನ್ಯಾಧಾನದ ಮೂಲಕ ಶಾಸ್ತ್ರೋಕ್ತವಾಗಿ ಧಾರೆ ಎರೆಯುವ ಶಾಸ್ತ್ರಕ್ಕೆ ಕನ್ಯಾದಾನ ಎನ್ನುವರು. ಕನ್ಯಾಧಾನ ಮುಗಿದ ನಂತರ ವಧುವರನನ್ನು ನಿಲ್ಲಿಸಿ ಹೂವಿನ ಹಾರ ಹಾಕಿಸಿ ನಿಶ್ಚಯ ಮಾಡಿದ ಶುಭಗಳಿಗೆಯ ಸಮಯಕ್ಕೆ ವರನ ಕೈಯಿಗೆ ತಾಳಿಕೊಟ್ಟು ಎಲ್ಲರಿಗೂ ತೋರಿಸಿ ಎಲ್ಲರ ಎದುರಿಗೆ ಗುರುಹಿರಿಯರಿಗೆಲ್ಲಾ ತಿಳಿಸಿ ಅರಿಶಿಣದ ದಾರಕ್ಕೆ ತಾಳಿ ಅದರ ಜೊತೆಗೆ ಕರಿಮಣಿ ಸೇರಿಸಿದ ತಾಳಿಯನ್ನು ಪುರೋಹಿತನ ಮಂತ್ರಗಳು ಮಂಗಳವಾದ್ಯಗಳ ಜೊತೆಯಲ್ಲಿ ವರನು

ವಧುವಿಗೆ ತಾಳಿ ಕಟ್ಟುತ್ತಾನೆ. ತದನಂತರ ವರ ಕಟ್ಟಿದ ಮೂರು ಗಂಟಿಗೆ ಅರಿಶಿನ ಕುಂಕುಮ ಇಟ್ಟು ಪೂಜೆ ಮಾಡುತ್ತಾನೆ. ಎಲ್ಲರೂ ಅಕ್ಷತೆ ಕಾಳು ಹಾಕಿದ ನಂತರ ವಧುವರರು ಪುರೋಹಿತರ ತಂದೆ-ತಾಯಿಯರ ಆಶೀರ್ವಾದ ಪಡೆಯುವರು. ತಾಳಿ ಕಟ್ಟಿದನಂತರ ವಧು ವರರ ಭುಜದ ಮೇಲಿನ ವಸ್ತ್ರಗಳನ್ನು ಶಾಸ್ತ್ರೋಕ್ತವಾಗಿ ಅಕ್ಕಿ ಬೆಲ್ಲ ಅರಿಶಿನ ಕುಂಕುಮ ಇಟ್ಟು ಇಬ್ಬರ ವಸ್ತ್ರಗಳ ಗಂಟು ಹಾಕುತ್ತಾರೆ. ಇದನ್ನು ಬ್ರಹ್ಮಗಂಟು ಎಂದು ಕರೆಯುತ್ತಾರೆ. ವಧುವರರು ಇಬ್ಬರು ಸಪ್ತಪದಿ ತುಳಿಯುತ್ತಾರೆ. ಇಲ್ಲಿಗೆ ಮುಹೂರ್ತ ಮುಗಿದು ಆರತಕ್ಷತೆಗೆ ಅಣಿಯಾಗುತ್ತಾರೆ. ಮದುವೆ ಮುಗಿದ ರಾತ್ರಿ ವಧುವಿನ ಮನೆಯಲ್ಲಿ ಆರಕ್ಷಕತೆ ಮಾಡುತ್ತಾರೆ. ವಿಶೇಷ ಅಡಿಗೆಗಳನ್ನು ಮಾಡಿ ಗುಡಾರದ ಮುಂದೆ ಖುರ್ಚಿಗಳನ್ನು ಹಾಕಿ ವಧುವರರನ್ನು ಕೂರಿಸಿ ವಸಗೆ ಹಾಕುತ್ತಾರೆ. ಮುತ್ತೈದೆಯರು ಅರಿಶಿಣ ಕುಂಕುಮವಿಟ್ಟು ವರನನ್ನು ರೇಗಿಸುತ್ತಾರೆ. ತಮಾಷೆ ಮಾಡುತ್ತಾರೆ. ವರನ ಕಡೆಯವರು ವಧುವಿಗೆ ರೇಗಿಸಿ ತಮಾಷೆ ಮಾಡುತ್ತಾರೆ. ಆರಕ್ಷತೆ ಮುಗಿದ ಮೇಲೆ ವಿಶೇಷ ಅಡುಗೆಯನ್ನು ಎಲ್ಲರಿಗೂ ಬಡಿಸಿ ಮಾರನೆ ದಿನ ವರನ ಮನೆಯಲ್ಲಿ ಆರಕ್ಷತೆಗೆ ಹೊರಡುವರು. ಇವರು ಬರುವ ಹೋಗುವ ಖರ್ಚು-ವೆಚ್ಚಗಳು ವಧುವಿನ ಕಡೆಯವರೇ ನೋಡಿಕೊಳ್ಳಬೇಕು ಮದುವೆಗೆ ಹೆಚ್ಚುಖರ್ಚು ವಧುವಿನ ಕಡೆಯವರದೆ ಇರುತ್ತದೆ.

**ಸೋಬಾನ ಶಾಸ್ತ್ರ**

ಮದುವೆ ಮುಗಿದಮೇಲೆ ವಧುವರರು ವಧುವಿನ ಮನೆಗೆ ಹೋಗುತ್ತಾರೆ. ಶೋಭಾನ ಶಾಸ್ತ್ರ ಶಾಸ್ತ್ರೋಕ್ತವಾಗಿ ವಧುವಿನ ತಂದೆಯ ಮನೆಯಲ್ಲಿ ಮಾಡುತ್ತಾರೆ. ಹೆಣ್ಣಿನ ಕನ್ಯೆತ್ವವನ್ನು ಬಿಡಿಸುವ ಶಾಸ್ತ್ರವಾಗಿದ್ದು, ಈ ಶಾಸ್ತ್ರ ವಧುವಿನ ತಂದೆಯ ಮನೆಯಲ್ಲಿ ಮಾಡುವ ವಿಧಾನವಾಗಿರುತ್ತದೆ. ಅಲ್ಲಿಯ ತನಕ ವಧು-ವರರು ಒಬ್ಬರಿಗೊಬ್ಬರು ಸೇರುವ ಹಾಗಿಲ್ಲ. ಶೋಭನದ ದಿನವನ್ನು ಗಂಡು ಹೆಣ್ಣು ದೈಹಿಕ ಸಂಪರ್ಕವನ್ನು ಹಂಚಿಕೊಳ್ಳುವ ದಿನವಾಗಿದೆ. ತಮ್ಮ ಭಾವನೆಗಳನ್ನು ಹಂಚಿಕೊಂಡು ದೈಹಿಕ ಸಂಪರ್ಕ ಹೊಂದುವ ಶುಭಗಳಿಗೆಯಾಗಿರುತ್ತದೆ. ಮುಂದಿನ ಪೀಳಿಗೆ ವಂಶದ ವೃದ್ಧಿಸುವ ದಿನ ಎಂತಲು ಹೇಳುತ್ತಾರೆ. ಈ ಕಾರ್ಯಕ್ಕೆ ಹಿರಿಯರು ಬ್ರಾಹ್ಮಣರ ಹತ್ತಿರ ಹೋಗಿ ಪಂಚಾಂಗವನ್ನು ನೋಡಿ ಒಳ್ಳೆಯ ಸಮಯವನ್ನು ನಿಗದಿ ಮಾಡುವರು. ಅಂದು ರಾತ್ರಿ ಇಬ್ಬರಿಗೂ ವಸಿಗೆಯನ್ನು ಹಾಕಿ ಸೋಬಾನದ ಕೊಠಡಿಯನ್ನು ಅಲಂಕರಿಸಿ, ನಂತರ ವಧು ವರರು ಇಬ್ಬರಿಗೂ ಅಲಂಕರಿಸಿ ಕುರ್ಚಿಗಳನ್ನು ಹಾಕಿ ವಸಿಗೆಯನ್ನು ಹಾಕಿ ಮುತ್ತೈದೆಯರು ಕುಂಕುಮ ಇಟ್ಟು ಆರತಿ ಬೆಳಗಿಸಿ, ಸೋಬಾನೆ ಪದಗಳನ್ನು ಹೇಳಿ ವಸಿಗೆಯನ್ನು ಮಾಡುವರು. ನಂತರ ವಧು-ವರರು ಎಲೆ ಅಡಿಕೆಯನ್ನು ಗುರುಹಿರಿಯರಿಗೆ ನಮಸ್ಕರಿಸಿ, ಅವರಿಂದ ಆಶೀರ್ವಾದ ಪಡೆದು ಸೋಬಾನ ಕೊಠಡಿಗೆ ಹೋಗುವರು ವಧುವು ಹಾಲಿನ ಗ್ಲಾಸನ್ನು ತೆಗೆದುಕೊಂಡು ಒಳಗೆ ಹೋಗುವಳು. ಸೋಬಾನದ ಕೊಠಡಿಯೊಳಗೆ ಸಿಹಿ ತಿನಿಸುಗಳು ಹಣ್ಣು ಹಂಪಲು ಕಳಸವಿಟ್ಟಿರುತ್ತಾರೆ. ತದನಂತರ ವಧುವು ಹಾಲು ತೆಗೆದುಕೊಂಡು

ಹೋದ ನಂತರ ಇಬ್ಬರು ಹಂಚಿಕೊಂಡು ಕುಡಿಯುವರು. ನಂತರ ಇಬ್ಬರು ತಮ್ಮ ಭಾವನೆಗಳನ್ನು ಹಂಚಿಕೊಂಡು ದೈಹಿಕ ಸಂಪರ್ಕವನ್ನು ಬೆಳೆಸುವರು ಈ ದಿನ ವಧು-ವರರು ಸೇರುವ ಸುಂದರ ದಿನ ಎಂದು ಹೇಳುತ್ತಾರೆ.

**ಒಡಲು ತುಂಬುವ ಶಾಸ್ತ್ರ**

ಮದುವೆ ಶೋಭಾನವಾದ ಬೆಳಗ್ಗೆ ವಧುವಿನ ತವರು ಮನೆಯವರು ಒಡಲು ತುಂಬುತ್ತಾರೆ, ಏಕೆಂದರೆ, ನಮ್ಮ ಮನೆ ಮಗಳು ಇಷ್ಟು ದಿನ ನಮ್ಮ ಮನೆಯಲ್ಲಿ ಇದ್ದು, ಮದುವೆಯ ನಂತರ ಗಂಡನ ಮನೆಗೆ ಹೋಗುತ್ತಾಳೆ. ಒಂದು ಈ ಮನೆಯ ಋಣ ತೀರಿತು ಎಂದು ಅಕ್ಕಿ, ಬೆಲ್ಲ, ರವಿಕೆ, ಎಲೆ, ಅಡಿಕೆ, ಸೀರೆ ಎಲ್ಲವನ್ನು ವಧುವಿನ ಸೆರಗಿನಲ್ಲಿ ಇಟ್ಟು ಅವಳಿಗೆ ಈ ಮನೆ ಋಣ ತೀರಿತು ಇನ್ನು ಮುಂದೆ ಗಂಡನ ಮನೆ ನಿನಗೆ ಆಶ್ರಯ ಗಂಡನ ಮನೆಯಲ್ಲಿ ಸುಖವಾಗಿ ಅತ್ತೆ ಮಾವನ ಸೇವೆ ಮಾಡಿಕೊಂಡು ಗಂಡನಿಗೆ ಒಳ್ಳೆಯ ಹೆಂಡತಿಯಾಗಿ ಬಾಳು ತಂದೆ ತಾಯಿಗೆ ಒಳ್ಳೆಯ ಹೆಸರು ಉಳಿಸು ಎಂದು ಹೇಳಿ ತನ್ನ ಮಗಳನ್ನು ತನ್ನ ಮನೆಯಿಂದ ಬೀಗರ ಮನೆಗೆ ಕಳಿಸುತ್ತಾರೆ. ಈ ಸಂದರ್ಭದಲ್ಲಿ ದುಃಖದ ಸನ್ನಿವೇಶವೇ ವಿಸ್ತರಿಸಿರುತ್ತದೆ.

**ಮನೆ ತುಂಬುವ ಶಾಸ್ತ್ರ**

ಮದುವೆಯಾದ ಬಳಿಕ ತವರು ಮನೆ ಬಿಟ್ಟು ಮಧು ಮಗಳು ಅತ್ತೆ ಮನೆಗೆ ಬರುತ್ತಿದ್ದಾಳೆ, ಇನ್ನು ಮುಂದೆ ಈ ಮನೆಯ ಗೌಡತಿ ಈ ಮನೆಯನ್ನು ಬೆಳಗುವಳು ಎಂದು ಅವಳನ್ನು ಮನೆಗೆ ಸ್ವಾಗತಿಸುವ ಶಾಸ್ತ್ರವೇ ಮನೆ ತುಂಬುವ ಶಾಸ್ತ್ರ. ಮನೆಯನ್ನು ಶುಭ್ರಗೊಳಿಸಿ ವಿಶೇಷ ಅಡುಗೆಯನ್ನು ಮಾಡಿಕೊಂಡಿರುತ್ತಾರೆ. ಬಾಗಿಲಿನಲ್ಲಿ ಒಂದು ಸೇರಿನ ಅಕ್ಕಿ ತುಂಬಿ ಅದರ ಮೇಲೆ ಬೆಲ್ಲವನ್ನು ಇಟ್ಟು ಆರತಿ ತಟ್ಟೆಯನ್ನು ಹಿಡಿದುಕೊಂಡು ವಧು ಬರುವುದನ್ನು ಎದುರು ನೋಡುತ್ತಿರುತ್ತಾರೆ, ವಧು ಬಂದ ಮೇಲೆ ಆರತಿಯನ್ನು ಬೆಳಗಿಸಿ ಕುಂಕುಮವಿಟ್ಟು ಆರತಿಯನ್ನು ಬಾಗಿಲ ಮುಂದೆ ಚೆಲ್ಲುತ್ತಾರೆ. ತದನಂತರ ವಧುವಿನ ಬಲಗಾಲಿನಿಂದ ಅಕ್ಕಿಯ ಕಾಳನ್ನು ತಳ್ಳುವಂತೆ ಹೇಳುತ್ತಾರೆ. ವಧು ತಳ್ಳಿದ ಅಕ್ಕಿಯ ಕಾಳು ಮನೆ ತುಂಬ ಚೆಲ್ಲಿದರೆ ಆ ಮನೆ ಸಂಸಾರ ದೀಪವಾಗಿ ಬೆಳಗುತ್ತದೆ ಎಂಬ ನಂಬಿಕೆ ಈ ಸಮುದಾಯಗಳಲ್ಲಿದೆ ನಂತರ ಬಲಗಾಲನ್ನು ಹೊಸ್ತಿಲ ಒಳಗೆ ಇಟ್ಟು ಒಳ ಬರುತ್ತಾಳೆ.

**ಕಂಕಣ ಬಿಚ್ಚುವ ಶಾಸ್ತ್ರ**

ಮುಹೂರ್ತದ ಸಂದರ್ಭದಲ್ಲಿ ಕಟ್ಟಿರುವ ಕಂಕಣವನ್ನು ಐದು ದಿನಗಳ ತನಕ ಬಿಚ್ಚುವ ಹಾಗಿಲ್ಲ. ಐದನೇ ದಿನದಂದು ಅರವಶಿಗಳನ್ನು ಹಾಕಿ ಐದು ಜನ ಮುತ್ತೈದೆಯರು ಸ್ನಾನ ಮಾಡಿಕೊಂಡು ಹುತ್ತದ ಹತ್ತಿರ ವಧು-ವರರನ್ನು ಕರೆದುಕೊಂಡು ಹೋಗಿ ಎರಡು ಬುಟ್ಟಿಯಷ್ಟು ಹುತ್ತದ ಮಣ್ಣನ್ನು ತುಂಬಿಸಿ ಇವರ ತಲೆಯ ಮೇಲೆ ಒಂದೆ ಟವಲನ್ನು ಇಬ್ಬರಿಗೂ ಹೊದಿಕೆ ಮಾಡಿ ಇಟ್ಟು ಬುಟ್ಟಿಗಳನ್ನು ಇಡುವರು. ಈ ಹುತ್ತದ ಮಣ್ಣನ್ನು ತೆಗೆದುಕೊಂಡು ವಾದ್ಯಗಳ

ಸಮೇತವಾಗಿ ಬರಬೇಕಾಗುತ್ತದೆ. ಇವರ ಜೊತೆಯಲ್ಲಿ ಕಳಸಗಳು ಬರುತ್ತವೆ. ಹುತ್ತದ ಮಣ್ಣನ್ನು ತೆಗೆದುಕೊಂಡು ಅತ್ತಿ ಮರಕ್ಕೆ ಹಾಕಬೇಕು. ಹುತ್ತದ ಮಣ್ಣು ಹತ್ತಿ ಮರಕ್ಕೆ ಹಾಕುವುದರ ವಿಶೇಷತೆ ಏನೆಂದರೆ ಹತ್ತಿ ಮರವನ್ನು ದಕ್ಕಲರ ಮರುಗು ಭಾಷೆಯಲ್ಲಿ ಮೇಡಿ ವೃಕ್ಷ ಎಂದು ಕರೆಯುತ್ತಾರೆ. ಶಿವ-ಪಾರ್ವತಿ ಒಂದು ದಿನ ೮೪ ಲಕ್ಷ ಜೀವ ರಾಶಿಗಳಿಗೆ ಅನ್ನ ಆಹಾರ ಹಾಕಿಕೊಂಡು ಮನೆಗೆ ಹೋಗುವಾಗ ಒಂದು ಕೋನೆರಿಯಲ್ಲಿ ಸ್ನಾನ ಮಾಡುತ್ತಾರೆ. ಸ್ನಾನ ಮಾಡಿ ಹೊರಗೆ ಬಂದಾಗ ಕೋನೆರಿಯ ಕಟ್ಟಡದ ಮೇಲೆ ಹತ್ತಿ ಮರ ಇರುತ್ತದೆ. ಆ ಮರ ಮತ್ತು ಆ ಮರದ ಹಣ್ಣುಗಳು ಬೆಳ್ಳಗೆ ಕೋಳಿ ಮೊಟ್ಟೆಯಾಗಿ ಇರುತ್ತದೆ. ಆಗ ಪಾರ್ವತಿ ಇದನ್ನು ನೋಡಿ ಎಷ್ಟು ಸುಂದರವಾಗಿದೆ ಎಂದು ಬಂದು ಹತ್ತಿ ಮರದ ಹಣ್ಣನ್ನು ತಿನ್ನಲು ಮುಟ್ಟುತ್ತಾಳೆ. ಬಿಳಿಯಾಗಿದ್ದ ಮರ ಕೆಂಪಗೆ ಬೆಂಕಿಯಂತೆ ಹೊಳೆಯುತ್ತದೆ. ಆಗ ಶಿವ ಏಕೆ ಬೆಂಕಿಯಂತೆ ಹತ್ತಿಕೊಂಡಿತು ಎಂದು ನೋಡಿದಾಗ ಬಿಳಿಯಾಗಿದ್ದ ಹತ್ತಿ ಮರ ಕೆಂಪಗೆ ಹೊಳೆಯುತ್ತಿರುತ್ತದೆ. ಪಾರ್ವತಿ ಮುಟ್ಟಿದಕೂಡಲೇ ಬೆಂಕಿ ಹತ್ತಿಕೊಂಡಿತು. ಇವಳಲ್ಲಿ ಏನೋ ಇದೆ ಎಂದು ಮನಸ್ಸಲ್ಲಿ ಚರ್ಚಿಸುತ್ತಾನೆ. ಏಕೆಂದರೆ ಮುಟ್ಟಾದ ಪಾರ್ವತಿ ಮುಟ್ಟಿದ್ದರಿಂದ ಹತ್ತಿ ಮರಕ್ಕೆ ಭಿನ್ನವಾಗಿರುತ್ತದೆ. ಹಾಗಾಗಿ ಹತ್ತಿ ಮರ ಬೆಂಕಿಯಂತೆ ಉರಿಯುತ್ತಿದೆ ಎಂದು ಶಿವನು ಸಂಶಯ ಬಂದು ಪಾರ್ವತಿಯನ್ನು ಕೇಳುತ್ತಾನೆ. ಪಾರ್ವತಿ ಮುಟ್ಟಾಗಿರುವ ವಿಷಯ ಹೇಳುವುದಕ್ಕೆ ಹಿಂಜರಿಯುತ್ತಾಳೆ. ಆದರೂ ಶಿವನು ಬಿಡದೆ ಇದ್ದಾಗ ಪಾರ್ವತಿ ನಾನು ಭಯಪಟ್ಟು ಹೇಳಬೇಕಾ ಅಥವಾ ಧೈರ್ಯವಾಗಿ ಹೇಳಬೇಕಾ ಎಂದಾಗ ಶಿವ ಭಯ ಪಡದೆ ನಡೆದುದ್ದನ್ನು ಹೇಳು ಎಂದಾಗ ಪಾರ್ವತಿ ನಿನ್ನ ರಥ ಮತ್ತು ನನ್ನ ರಥ ಹಿಂದೆ ಮುಂದೆ ಬರುತ್ತಿದ್ದು, ಅಲ್ಲಿ ಜಿಂಕೆಗಳು ಸಂಭೋಗದಲ್ಲಿ ನಿರತವಾಗಿದ್ದವು ಅದನ್ನು ನೋಡಿದೆ ಇವು ಕಾಡಿನಲ್ಲಿ ಮೇವು ತಿಂದು ಸಮುದ್ರದಲ್ಲಿ ನೀರು ಕುಡಿದು ಇದಕ್ಕೆ ಇಷ್ಟು ಆನಂದ ಕೊಟ್ಟಿದ್ದಾನೆ. ನಾವು ದೇವತೆಗಳು ನಮಗೆ ಇಂತಹ ಸುಖ ಇಲ್ಲವಲ್ಲ ಎಂದು ಮನಸ್ಸಿನಲ್ಲಿ ಅಂದು ಕೊಂಡೆ ನೀನು ನೋಡಿದ ಜಾಗದಲ್ಲಿ ರಕ್ತದ ಮಾಂಸ ಉತ್ಪತ್ತಿಯಾಯಿತು (ಆಗ ಸ್ತ್ರೀಯರಿಗೆ ಅಂಟು ಹುಟ್ಟಿಕೊಂಡಿದ್ದು) ಅದಕ್ಕೆ ಸೀರೆಯನ್ನು ಬಿಚ್ಚಿ ಅಲ್ಲಿ ಇಟ್ಟು ಆ ಮರವನ್ನು ಮುಟ್ಟಿಕೊಂಡೆ ಅದಕ್ಕೆ ಹೀಗಾಯಿತು ಎಂದು ಹೇಳುತ್ತಾಳೆ. ಆಗ ಶಿವ ಇದು ನಿಜವೇ ಸುಳ್ಳೇ ಎಂದು ನೋಡುತ್ತಾನೆ.

ಹತ್ತಿಹಣ್ಣನ್ನು ಯಾರೇ ತಿನ್ನಬೇಕಾದರೂ ಅದನ್ನು ಹಾಗೆ ಹೊಡೆದು ತಿಂದರೆ ಪಾಪ ಬರುತ್ತದೆ. ಅದು ಒಡೆಯದೆ ತಿಂದರೆ ಪುಣ್ಯ ಸಿಗುತ್ತದೆ. ಕಾರಣ ಆ ಹಣ್ಣನ್ನು ಒಡೆದು ತಿಂದರೆ ಅದರಲ್ಲಿ ಬರಿ ಹುಳುಗಳೆ ಇರುತ್ತೆ ಒಡೆಯದೆ ತಿಂದರೆ ಹುಳ ಇರುವುದಿಲ್ಲ. ಹಾಗಾಗಿ ಎಲ್ಲರೂ ಹಣ್ಣನ್ನು ಒಡೆಯದೆ ತಿನ್ನುತ್ತಾರೆ. ನಂತರ ಆ ಮರದ ಬುಡದಲ್ಲಿ ಒಂದು ಮಗು ಜನಿಸಿ ಅಳುತ್ತಿರುತ್ತದೆ. ಅದನ್ನು ಕಂದ ಪಾರ್ವತಿ ಇಲ್ಲೆ ನನಗೆ ಅಂಟಾಗಿದ್ದು ಎಂದಾಗ ಶಿವ ಹೋಗಿ ನೋಡು ಎಂದು ಹೇಳುತ್ತಾನೆ. ಪಾರ್ವತಿ ನೋಡುತ್ತಾಳೆ, ಗಂಡು ಮಗು ಆಗಿರುತ್ತದೆ. ನೋಡುವುದಕ್ಕೆ

ಸುಂದರವಾಗಿರುತ್ತಾನೆ. ಆಗ ಶಿವ ಇದು ನಮ್ಮ ಮಗು ನಮ್ಮ ಗರ್ಭದಲ್ಲಿ ಹುಟ್ಟಿರುವ ಮಗು ಎಂದು ದೇವತೆಗಳ ಹತ್ತಿರ ಜಾತಕ ತೋರಿಸುತ್ತಾರೆ. ಜಾತಕದಲ್ಲಿ ಮುಟ್ಟು ಬಟ್ಟೆಯಿಂದ ಹುಟ್ಟಿದ ಮಗು ಆಗಿದ್ದರಿಂದ ಯಾವುದೇ ಸಮಯದಲ್ಲಿ ಆಗಲಿ ಕಾಮಧೇನುವಿನ ಹಾಲು ಕುಡಿದರೆ ಅದಕ್ಕೆ ಸಂಬಂಧಿಸಿದ ಆಹಾರ ತಿಂದರೆ ಅಂದೆ ಕಾಮಧೇನುವಿಗೆ ಮರಣ ಸಂಭವಿಸುತ್ತದೆ. ಅದರ ಭಾಗದಲ್ಲಿ ಯಾವುದೇ ಆಹಾರ ತಿಂದರು ಕಾಮಧೇನು ಸಾಯುತ್ತದೆ ಎಂದು ಜಾತಕದಲ್ಲಿ ಬಂದ ಮಾಹಿತಿಯನ್ನು ಹೇಳುತ್ತಾರೆ. ಹೀಗಾಗಿ ದಕ್ಕಲ ಸಮುದಾಯಗಳು ಮದುವೆಯ ನಂತರ ಗಂಡು ಹೆಣ್ಣಿನ ಕೈಯಲ್ಲಿ ಅತ್ತಿ ಮರದ ಬುಡಕ್ಕೆ ಮಣ್ಣನ್ನು ಹಾಕಿಸಿ ಸಂಸಾರದಲ್ಲಿ ಯಾವುದೇ ತೊಂದರೆಗಳು ಬರಬಾರದು ಎಂದು ಪೂಜೆ ಮಾಡುತ್ತಾರೆ. ನಂತರ ಹಾಲು ಕಂಬ ಮತ್ತು ಅತ್ತಿ ಕೊಂಬೆ ತೆಗೆದುಕೊಂಡು ಬಂದು ಚಪ್ಪರದ ಕೆಳಗೆ ಅದನ್ನು ಹೂಳುತ್ತಾರೆ. ಅದಕ್ಕೆ ಪೂಜೆ ಮಾಡಿ ನಂತರ ವಧು ವರರಿಗೆ ಮದುವೆ ಮಾಡುತ್ತಾರೆ. ಹೀಗಾಗಿ ಹತ್ತಿ ಗಿಡಕ್ಕೆ ಮಣ್ಣು ಹಾಕಿ ಪೂಜೆ ಮಾಡಿ ನಂತರ ಕಂಕಣ ಬಿಚ್ಚುತ್ತಾರೆ. ಇಲ್ಲಿಗೆ ಮದುವೆ ಕಾರ್ಯಕ್ರಮ ಮುಗಿಯುತ್ತದೆ.

**ಅಂತರ್ಜಾತಿಯ ವಿವಾಹ**

ದಕ್ಕಲ ಸಮುದಾಯಗಳಲ್ಲಿ ಅಂತರ್ಜಾತಿಯ ವಿವಾಹಗಳು ಬಹಳ ಕಡಿಮೆ ಒಂದು ವೇಳೆ ಪ್ರೀತಿಸಿ ಮದುವೆಯಾದರೆ ಅವರ ಮೇಲೆ ಕಟ್ಟುನಿಟ್ಟಿನ ಕ್ರಮಗಳನ್ನು ಜರುಗಿಸುತ್ತಾರೆ. ಈ ಸಮುದಾಯಗಳು ಯಾವುದೇ ಕಾರಣಕ್ಕೂ ಅಂತರ್ಜಾತಿಯ ವಿವಾಹ ಮಾಡಿಕೊಂಡರೆ ಹೊಡೆದಾಡುವುದಾಗಲಿ ಗಲಾಟೆ ಮಾಡುವುದಾಗಲಿ ಇರುವುದಿಲ್ಲ. ನೇರವಾಗಿ ಹಿರಿಯರನ್ನು ಕರೆಸಿ ಪಂಚಾಯ್ತಿ ಇಡುತ್ತಾರೆ. ಪಂಚಾಯ್ತಿ ಕಟ್ಟೆಗೆ ಪಂಚಾಯ್ತಿ ತೀರ್ಮಾನ ಮಾಡುವ ಹಿರಿಯರು ಹುಡುಗನ ಸಂಬಂಧಿಕರು ತಂದೆ ತಾಯಿ ಮತ್ತು ಹುಡುಗಿಯ ತಂದೆ ತಾಯಿ ಸಂಬಂಧಿಕರನ್ನು ಕರೆಸುತ್ತಾರೆ. ಇಬ್ಬರ ಕುಟುಂಬಗಳು ಬಂದ ನಂತರ ಚರ್ಚೆ ಪ್ರಾರಂಭಿಸುತ್ತಾರೆ. ಈ ಪಂಚಾಯ್ತಿ ಕಟ್ಟೆಯೇ ಈ ಸಮುದಾಯಗಳ ಸುಪ್ರೀಂಕೋರ್ಟ್. ನ್ಯಾಯ ತೀರ್ಮಾನ ಮಾಡುವ ಹಿರಿಯರೇ ಮುಖ್ಯ ನ್ಯಾಯಾಧೀಶರು. ದೇವಸ್ಥಾನವೇ ನ್ಯಾಯ ತೀರ್ಮಾನ ಮಾಡುವ ನ್ಯಾಯ ಸ್ಥಾನವಾಗಿರುತ್ತದೆ.

ಇಂತಹ ನ್ಯಾಯ ಸ್ಥಾನದಲ್ಲಿ ನ್ಯಾಯ ಹೇಳುವುದಕ್ಕೆ ಪ್ರಾರಂಭಿಸುತ್ತಾರೆ. ಎರಡು ಕುಟುಂಬಗಳು ವಾದ ವಿವಾದದ ನಂತರ ನ್ಯಾಯಸ್ಥಾನದ ಮುಖ್ಯಸ್ಥರು ಒಂದು ತೀರ್ಮಾನಕ್ಕೆ ಬರುತ್ತಾರೆ. ಒಂದು ವೇಳೆ ಹುಡುಗ ಬೇರೆ ಜಾತಿಯ ಹುಡುಗಿಯನ್ನು ಕರೆದುಕೊಂಡು ಬಂದಿದ್ದರೆ ಆ ಹುಡುಗಿಯನ್ನು ಹುಡುಗನ ಸಂಬಂಧಿಕರು ಯಾರಾದರೂ ಒಬ್ಬರು ತಮ್ಮ ಮಗಳು ಎಂದು ಒಪ್ಪಿಕೊಳ್ಳಬೇಕು ನಂತರ ಹುಡುಗನ ಕಡೆಯವರಿಗೆ ದಂಡ ವಿಧಿಸುತ್ತಾರೆ. ಹಾಗೆ ಹುಡುಗಿಯನ್ನು ತಮ್ಮ ಮಗಳು ಎಂದು ಒಪ್ಪಿಕೊಂಡ ಸಂಬಂಧಿಕರು ದಂಡ ಕಟ್ಟಿ ಆ ಹುಡುಗಿಯನ್ನು ತಮ್ಮ ಸಮುದಾಯಕ್ಕೆ ಸೇರಿಸಿಕೊಳ್ಳುತ್ತಾರೆ. ತದನಂತರ ಇಬ್ಬರನ್ನು ಸೇರಿಸಿ ಮದುವೆಗೆ ಮುಂದಾಗುತ್ತಾರೆ.

ತೀರ್ಮಾನವಾದ ಮೇಲೆ ಎರಡು ಕುಟುಂಬಗಳು ಮಾಂಸದ ಊಟ ಸಾರಾಯಿ ಕೊಟ್ಟು ಮರ್ಯಾದೆ ಮಾಡಬೇಕಾಗಿರುತ್ತದೆ.

ಒಂದು ವೇಳೆ ದಂಡ ಕಟ್ಟದೆ ಇದ್ದಾಗ ಅವರನ್ನು ತಮ್ಮ ಸಮುದಾಯದಿಂದ ಬಹಿಷ್ಕರಿಸುವರು ಬಹಿಷ್ಕರಿಸಿದ ಕುಟುಂಬ ಯಾವುದೇ ಸಮಾರಂಭಗಳಲ್ಲಿ ಭಾಗವಹಿಸುವಂತಿಲ್ಲ ಈ ಸಮುದಾಯಗಳಲ್ಲಿ ರಕ್ತ ಸಂಬಂಧಗಳು ಮಾಡಿಕೊಳ್ಳುವ ಹಾಗಿಲ್ಲ ಇವರು ಪ್ರತ್ಯೇಕವಾಗಿರಬೇಕಾಗುತ್ತದೆ. ಇಂತಹ ಕಟ್ಟುನಿಟ್ಟಿನ ಸಂಪ್ರದಾಯ ದಕ್ಕಲರಲ್ಲಿ ಈಗಲೂ ಇದೆ. ದಂಡಕಟ್ಟಿ ದೇವಸ್ಥಾನದಲ್ಲಿ ದೇವರ ಮುಂದೆ ಪ್ರಮಾಣವನ್ನು ಮಾಡಿಸಿ ಕರೆದುಕೊಂಡು ಬಂದ ಹುಡುಗ ಅಥವಾ ಹುಡುಗಿಯನ್ನು ತಮ್ಮ ಮಗ ಹಾಗೂ ಮಗಳು ಎಂದು ಶಾಸ್ತ್ರೋಕ್ತವಾಗಿ ಬರಮಾಡಿಕೊಂಡು ಪಂಚಾಯ್ತಿ ಕಟ್ಟೆಗೆ ಬಂದ ಹಿರಿಯರಿಗೆ ಸಂಬಂಧಿಕರಿಗೆ ಎಲೆ ಅಡಿಕೆ ಕೊಟ್ಟು ಮಾಂಸದ ಊಟವನ್ನು ಹಾಕಿ ಮದ್ಯಪಾನ ಸೇವಿಸಿ ಕುಣಿದು ಕುಪ್ಪಳಿಸಿ ಕೆಲವು ಸಂದರ್ಭಗಳಲ್ಲಿ ಈ ಸಂಬಂಧಗಳಲ್ಲಿ ಹೆಣ್ಣನ್ನು ಎತ್ತಿಕೊಂಡು ಹೋಗಿ ದೇವಸ್ಥಾನದಲ್ಲಿ ಮದುವೆಯಾದರು ಇದಕ್ಕೆ ಪಂಚಾಯ್ತಿ ಕಟ್ಟೆ ಹತ್ತುವರು. ಕುಲಬಾಂಧವರು ಸೇರಿ ಬುದ್ಧಿವಾದ ಹೇಳಿ ಪಂಚಾಯ್ತಿ ಕಟ್ಟೆಯಲ್ಲಿ ಸಮಸ್ಯೆಯನ್ನು ಬಗೆಹರಿಸಿಕೊಳ್ಳುತ್ತಾರೆ. ಎಂತಹ ಸಮಸ್ಯೆ ಬಂದರು ಪಂಚಾಯ್ತಿಯಲ್ಲಿ ತೀರ್ಮಾನವಾಗುತ್ತದೆ. ಪೋಲೀಸ್ ಸ್ಟೇಷನ್ ಕೋರ್ಟು ಕಛೇರಿಗಳಿಗೆ ಹೋಗುವುದಲ್ಲಿ ಒಂದು ವೇಳೆ ಹೋದರು ಅದಕ್ಕೆ ಖರ್ಚು ಮಾಡುವಷ್ಟು ಹಣ ಇವರಲ್ಲಿ ಇಲ್ಲ ನಂತರ ತನ್ನ ಹಿರಿಯರ ಸಂಸ್ಕೃತಿಯ ಬಗ್ಗೆ ಗೌರವದ ಭಾವನೆಯಿಂದ ಆಗಾಗಿ ಪಂಚಾಯ್ತಿ ಕಟ್ಟೆಯ ಮೆಟ್ಟಿಲು ಹತ್ತುವರು. ಪಂಚಾಯ್ತಿ ಕಟ್ಟೆಯ ಇವರ ಅಂತಿಮ ತೀರ್ಮಾನವಾಗಿರುತ್ತದೆ. ಅವರ ಆರ್ಥಿಕತೆಗೆ ತಕ್ಕಂತೆ ದಂಡ ವಿಧಿಸುವುದೇ ಪಂಚಾಯ್ತಿ ಕಟ್ಟೆಯ ಕರ್ತವ್ಯವಾಗಿರುತ್ತದೆ. ಹಾಗಾಗಿ ಯಾವುದೇ ಸಮಸ್ಯೆ ಇದ್ದರು ಈ ಪಂಚಾಯ್ತಿ ಕಟ್ಟೆಯಲ್ಲೇ ತೀರ್ಮಾನವಾಗುತ್ತದೆ.

**ವಿಧವಾ ವಿವಾಹ**

ಗಂಡ ಸತ್ತ ಮಹಿಳೆ ಮತ್ತೆ ಮದುವೆಯಾಗುವುದು. ಇಂತಹ ಸಂದರ್ಭಗಳು ಈ ಸಮುದಾಯಗಳಲ್ಲಿ ಬಾಲ್ಯ ವಿವಾಹವಾದ ಮಹಿಳೆಯರು ವಿಧವಾ ವಿವಾಹ ಮಾಡಿಕೊಳ್ಳುತ್ತಾರೆ. ಏಕೆಂದರೆ ಬಾಲ್ಯ ವಿವಾಹ ಮಾಡಿದ ಮಹಿಳೆಯ ಗಂಡ ಚಿಕ್ಕ ವಯಸ್ಸಿನಲ್ಲಿ ಅಕಾಲ ಮರಣಕ್ಕೆ ತುತ್ತಾದರೆ. ಈ ಹೆಣ್ಣು ಮಗಳು ವಯಸ್ಸಿಗೆ ಬಂದ ಮೇಲೆ ವಿಧವೆಯಾಗಿ ಬದುಕಬೇಕಾಗುತ್ತದೆ. ಇವಳನ್ನು ಯಾರಾದರೂ ಅಕ್ರಮ ಸಂಬಂಧವಾಗಿ ಇಟ್ಟುಕೊಳ್ಳುತ್ತಾರೆ ಎಂಬ ಕಾರಣಕ್ಕೆ ಹಿರಿಯರು ಒಂದು ಕಡೆ ಸೇರಿ ಚರ್ಚೆ ಮಾಡಿ ಹುಡುಗನನ್ನು ನೋಡುತ್ತಾರೆ. ಇಲ್ಲವಾದರೆ ಹೆಂಡತಿ ಸತ್ತಿರುವ ಗಂಡನನ್ನು ನೋಡಿ ಎರಡನೇ ಮದುವೆ ಮಾಡುತ್ತಾರೆ. ಈ ಮದುವೆ ಯಾವುದೇ ಶಾಸ್ತ್ರಗಳು ಇಲ್ಲದೆ ದೇವಸ್ಥಾನದಲ್ಲಿ ಹೋಗಿ ತಾಳಿ ಕಟ್ಟಿಸುತ್ತಾರೆ. ಒಂದು ವೇಳೆ ವಯಸ್ಸಿಗೆ ಬಂದ ಮೇಲೆ ಸ್ವಲ್ಪ ದಿನಗಳಲ್ಲಿ ಸಂಸಾರ ಮಾಡಿ ಗಂಡ ಸತ್ತರೆ ಆಗ ಹಿರಿಯರ ಒಪ್ಪಿಗೆ

ಪಡೆದು ಹೆಂಡತಿ ಸತ್ತ ಗಂಡನನ್ನು ನೋಡಿ ವಿವಾಹ ಮಾಡುತ್ತಾರೆ. ಒಂದು ವೇಳೆ ಹಿರಿಯರಿಗೆ ತಿಳಿಸದೆ ಮದುವೆ ಮಾಡಿದರೆ ಪಂಚಾಯ್ತಿ ಕರೆದು ದಂಡ ವಿಧಿಸುತ್ತಾರೆ. ವಿಧಿಸಿದ ದಂಡವನ್ನು ಕಟ್ಟಿ ಹುಡುಗಿಯ ಕಡೆಯವರು ತಮ್ಮ ತಪ್ಪನ್ನು ಒಪ್ಪಿಕೊಂಡು ಎಲ್ಲರಿಗೂ ಮಾಂಸದ ಊಟವನ್ನು ಹಾಕಿ ಮದ್ಯವನ್ನು ಕೊಟ್ಟು ಎಲೆ, ಅಡಿಕೆ ಕೊಟ್ಟು ಅವರಿಗೆ ಬಂದು ಹೋಗುವ ಖರ್ಚುವೆಚ್ಚಗಳನ್ನು ಭರಿಸುವರು. ಹೀಗಾಗಿ ಹಿರಿಯರಿಗೆ ತಿಳಿಸದೆ ಮದುವೆ ಮಾಡುವುದಿಲ್ಲ. ಇಂತಹ ಕಟ್ಟುನಿಟ್ಟಿನ ಪದ್ಧತಿ ದಕ್ಕಲರ ಸಮುದಾಯಗಳಲ್ಲಿ ಈಗಲು ಇದೆ.

**ಬಹುಪತ್ನಿತ್ವ ಪದ್ಧತಿ**

ದಕ್ಕಲ ಸಮುದಾಯಗಳಲ್ಲಿ ಬಹುಪತ್ನಿತ್ವ ಪದ್ಧತಿಗೆ ಅವಕಾಶ ಇಲ್ಲ. ಗಂಡಸರು ಎರಡು ಮದುವೆಗಳನ್ನು ಮಾಡಿಕೊಳ್ಳುವ ಆಗಿಲ್ಲ. ಒಂದು ವೇಳೆ ಮತ್ತೊಂದು ಮದುವೆಯಾಗಬೇಕಾದರೆ ಹೆಂಡತಿ ಇರಬಾರದು ಹೆಂಡತಿ ಸತ್ತಿದ್ದರೆ ಆಗ ಹಿರಿಯರ ಒಪ್ಪಿಗೆ ಪಡೆದು ಪಂಚಾಯ್ತಿ ಕಟ್ಟೆಯ ಕಟ್ಟುನಿಟ್ಟಿನ ನಿಯಮಗಳನ್ನು ಪಾಲಿಸಿ ವಿವಾಹವಾಗಬೇಕು. ಈ ಸಮುದಾಯದ ಪುರುಷನ ಬಾಲ್ಯ ವಿವಾಹದಲ್ಲಿ ಹೆಂಡತಿ ಸತ್ತರೆ ಇವನು ಪ್ರಾಯಕ್ಕೆ ಬಂದಾಗ ಮತ್ತೊಂದು ಮದುವೆಗೆ ಅಪ್ಪಣೆ ಕೇಳಬೇಕಾಗುತ್ತದೆ. ಆಗ ನಿಶ್ಚಯ ಮಾಡಿ ಅವನಿಗೆ ಮದುವೆ ಮಾಡುತ್ತಾರೆ. ಈ ಮದುವೆಗೆ ಯಾವುದೇ ಶಾಸ್ತ್ರಗಳು ಇರುವುದಿಲ್ಲ. ಇನ್ನು ಗಂಡ ಮತ್ತು ಹೆಂಡತಿ ನಡುವೆ ಜಗಳ ಬಂದು ವಿಚ್ಛೇದನಪಡೆದರೆ ಹಿರಿಯರು ಬುದ್ದಿವಾದ ಹೇಳಿ ಇಬ್ಬರನ್ನು ಸೇರಿಸುತ್ತಾರೆ ಹೊರತು ಮತ್ತೊಂದು ಮದುವೆಗೆ ಅವಕಾಶ ಇಲ್ಲ ಒಂದು ವೇಳೆ ಇಬ್ಬರು ಒಪ್ಪಿಕೊಳ್ಳಲಿಲ್ಲ ಎಂದರೆ ಪಂಚಾಯ್ತಿ ಕಟ್ಟುನಿಟ್ಟಿನ ಪ್ರಕಾರ ದಂಡ ಕಟ್ಟಿ ಮಹಿಳೆ ತವರು ಮನೆಗೆ ಹೋಗಬೇಕು ಪುರುಷನು ದಂಡ ಕಟ್ಟಿ ಮುಂದಿನ ಕಾರ್ಯದಲ್ಲಿ ತೊಡಗಬೇಕು.

ಬಹುಪತ್ನಿತ್ವ ಹೊಂದಿರುವುದು ಬೆರಳೆಣಿಕೆಯಷ್ಟು ಮಾತ್ರ ಕೋಲಾರ ಪ್ರದೇಶಗಳಲ್ಲಿ ಕೇವಲ ಒಬ್ಬರು ಮಾತ್ರ ಬಹುಪತ್ನಿತ್ವ ಹೊಂದಿದ್ದಾರೆ. ಹಾಗೆ ಮಾವನ ಮನೆಯಲ್ಲಿ ನಾದಿನಿಯರು ಹೆಚ್ಚಾಗಿದ್ದು, ಗಂಡು ಸಿಗಲಿಲ್ಲ ಎಂದಾಗ ಮಗಳನ್ನು ಕೇಳಿ ಅವಳ ಒಪ್ಪಿಗೆ ಪಡೆದು ಹಿರಿಯರ ಒಪ್ಪಿಗೆ ಪಡೆಯಬೇಕಾಗುತ್ತದೆ. ಅವರ ಒಪ್ಪಿಗೆಯ ಮೇರೆಗೆ ಅಳಿಯನಿಗೆ ಮತ್ತೊಬ್ಬ ಮಗಳನ್ನು ಕೊಟ್ಟು ವಿವಾಹ ಮಾಡುತ್ತಾರೆ. ಪುರುಷ ಪತ್ನಿ ಮಕ್ಕಳು ಇದ್ದು ಮತ್ತೊಂದು ಮದುವೆಯಾದರೆ ಪಂಚಾಯ್ತಿ ಕಟ್ಟೆಯಲ್ಲಿ ದಂಡನೆಗೆ ಅರ್ಹನಾಗುತ್ತಾನೆ. ನಂತರ ಸಮುದಾಯದಿಂದ ದೂರವಿರಿಸುತ್ತಿದ್ದರು. ಆದರೆ ಈಗ ಇಂತಹ ಘಟನೆಗಳು ಸ್ವಲ್ಪ ಮಟ್ಟಿಗೆ ಬದಲಾಗಿವೆ. ಎಂದು ಈ ಸಮುದಾಯಗಳು ಹೇಳುತ್ತಾರೆ.

**ವಿಚ್ಛೇದನ**

ವಿಚ್ಛೇದನ ಎನ್ನುವುದು ಗಂಡ ಮತ್ತು ಹೆಂಡತಿಯ ವಿವಾಹವನ್ನು ರದ್ದು ಮಾಡುವುದು ಮದುವೆಯಾದ ನಂತರ ಗಂಡ ಹೆಂಡತಿ ನಡುವೆ ಸಂಸಾರವನ್ನು ಬಿರುಕು ಬಿಟ್ಟರೆ ಇಬ್ಬರ

ನಡುವೆ ಜಗಳಗಳು ಹೊಂದಾಣಿಕೆ ಇಲ್ಲದೆ ಇದ್ದಾಗ ವಿಚ್ಛೇದನ ಪಡೆಯುತ್ತಾರೆ. ದಕ್ಕಲರಲ್ಲಿ ವಿಚ್ಛೇದನ ತೆಗೆದುಕೊಳ್ಳುವುದು ಕೋರ್ಟ್‌ಗಳಿಗೆ ಹೋಗಿ ತೆಗೆದುಕೊಳ್ಳುವುದಿಲ್ಲ. ಅದಕ್ಕೆ ಈ ಸಮುದಾಯಗಳಲ್ಲಿ ಪ್ರತ್ಯೇಕವಾದ ವೇದಿಕೆ ಇದೆ. ಆ ವೇದಿಕೆಯೆ ಪಂಚಾಯ್ತಿ ಕಟ್ಟೆ ಈ ಸಮುದಾಯಗಳಲ್ಲಿ ಮದುವೆಯಾದ ನಂತರ ಗಂಡ ಮತ್ತು ಹೆಂಡತಿ ನಡುವೆ ಪರಸ್ಪರ ಹೊಂದಾಣಿಕೆ ಇಲ್ಲದೆ ಇದ್ದಾಗ ಇವರನ್ನು ಮತ್ತು ಮನೆಯವರನ್ನು ಪಂಚಾಯ್ತಿ ಕಟ್ಟೆಗೆ ಕರೆಯುತ್ತಾರೆ. ನಂತರ ಇಬ್ಬರ ನಡುವೆ ಹೊಂದಾಣಿಕೆ ಮಾಡುವುದನ್ನು ಪ್ರಯತ್ನಿಸುತ್ತಾರೆ. ನಂತರ ಬುದ್ಧಿ ಹೇಳಿ ಸಮಾಧಾನಿಸುತ್ತಾರೆ. ಒಂದು ವೇಳೆ ಇವರ ಮಾತಿಗೆ ಬೆಲೆ ಕೊಡಲಿಲ್ಲವೆಂದರೆ ಇಬ್ಬರಿಗೂ ಕಾಲಾವಕಾಶ ಕೊಟ್ಟು ಮತ್ತೆ ಹೊಂದಾಣಿಕೆಯಾಗಲಿಲ್ಲ ಎಂದರೆ ಯಾರಲ್ಲಿ ಹೆಚ್ಚು ತಪ್ಪಾಗಿದೆಯೋ ಅವರಿಗೆ ಹೆಚ್ಚಿನ ದಂಡ ವಿಧಿಸಿ ಮತ್ತೊಬ್ಬರಿಗೆ ದಂಡ ವಿಧಿಸಿ ಇಬ್ಬರಿಗೂ ವಿವಾಹ ರದ್ದು ಮಾಡುತ್ತಾರೆ. ಕೆಲವು ಸಂದರ್ಭಗಳಲ್ಲಿ ಸಮುದಾಯದಿಂದ ಬಹಿಷ್ಕರಿಸುತ್ತಾರೆ. ಗಂಡಿಗೆ ಹೆಂಡತಿಯ ಕಾಟ ತಡೆಯಲಾಗಲಿಲ್ಲ ಎಂದರೆ ಅತ್ತೆ ಮಾವನನ್ನು ಸರಿಯಾಗಿ ನೋಡಿಕೊಳ್ಳಲಿಲ್ಲ ಎಂದರೆ ಗಂಡ ಹೆಂಡತಿಗೆ ವಿಚ್ಛೇದನ ನೀಡಬೇಕು ಎಂದಾಗ ಹಿರಿಯರನ್ನು ಕರೆಸಿ ಬುದ್ಧಿವಾದ ಹೇಳುತ್ತಾರೆ. ಆದರು ಸರಿ ಹೋಗಲಿಲ್ಲ ಎಂದರೆ ಪಂಚಾಯ್ತಿಗೆ ಕರೆಯಿಸಿ ಶಿಕ್ಷೆ ವಿಧಿಸಿ ದಂಡವನ್ನು ಕಟ್ಟಿಸಿ ಗಂಡ ಹೆಂಡತಿಯ ಕತ್ತಿನಲ್ಲಿ ಕಟ್ಟಿದ ತಾಳಿಯನ್ನು ಬಿಚ್ಚಿ ಇನ್ನು ಮುಂದೆ ಇವಳಿಗೆ ನನಗೆ ಯಾವುದೇ ಸಂಬಂಧವಿಲ್ಲ ಎಂದು ಹೇಳಿ ವಿಚ್ಛೇದನ ತೆಗೆದುಕೊಂಡು ಮಹಿಳೆ ತವರಿಗೆ ಹೋಗಬೇಕಾಗಿತ್ತದೆ. ಇಲ್ಲವಾದರೆ ಪ್ರತ್ಯೇಕವಾಗಿ ಜೀವನ ನಡೆಸಬೇಕಾಗುತ್ತದೆ.

ಹೀಗೆ ಯವುದೇ ಸಮಸ್ಯೆ ಇದ್ದರು ಸುಪ್ರಿಂಕೋರ್ಟ್‌ನಂತಿರುವ ಪಂಚಾಯ್ತಿ ಕಟ್ಟೆಯೇ ಕೋರ್ಟಿನ ನಿಯಮಗಳ ಹಾಗೆ ದಂಡ ವಿಧಿಸುತ್ತದೆ ಇಲ್ಲಿನ ತೀರ್ಮಾನವೇ ಅಂತಿಮ ತೀರ್ಮಾನವಾಗಿರುತ್ತದೆ.

**ಋತುಮತಿಯ ಶಾಸ್ತ್ರ**

ಸಮಾಜದಲ್ಲಿ ಹೆಣ್ಣು ಮಕ್ಕಳಿಗೆ ವಿಶೇಷವಾಗಿ ನಡೆಸುವ ಶಾಸ್ತ್ರವಾಗಿದೆ. ಇತರೆ ಕುಲಗಳಲ್ಲಿ ನಡೆಸುವಂತೆ ಈ ಕುಲದವರು ಸಹ ಹೆಣ್ಣು ವಯ್ಸಸಿಗೆ ಬಂದಾಗ ಮೊದಲ ಬಾರಿಗೆ ಮುಟ್ಟಾಗುವುದನ್ನು ಋತುಮತಿ ಅಥವಾ ಪುಷ್ಪವತಿಯಾಗುವುದು ಎಂದು ಕರೆಯುತ್ತಾರೆ. ಋತುಮತಿಯಾಗುವುದು ಹೆಣ್ಣು ಮಗಳು ತನ್ನ ತಾಯಿಗೆ ಹೇಳುತ್ತಾಳೆ. ನಂತರ ತಾಯಿ ಮನೆಯ ಯಜಮಾನನಿಗೆ ತಿಳಿಸಿ ಅವರ ಸೋದರಮಾವನನ್ನು ಕರೆಸಿ ಮನೆಯ ಪಕ್ಕದಲ್ಲಿ ಗುಡಿಸಲು ಹಾಕುವುದಕ್ಕೆ ಸೂಚಿಸುತ್ತಾರೆ. ನಂತರ ಸೋದರ ಮಾವ ಹೊಂಗೆ ಮರದ ಕೊಂಬೆಗಳ ತಂದು ಗುಡಿಸಲು ಹಾಕುತ್ತಾನೆ. ಹೆಣ್ಣು ಮಗಳಿಗೆ ಸ್ನಾನ ಮಾಡಿಸಿ ಗುಡಿಸಲಿನಲ್ಲಿ ಇರಿಸುವರು. ಇವಳ ಪಕ್ಕದಲ್ಲಿ ಕುಡುಗೋಲು ಒಂದು ಚಪ್ಪಲಿಯನ್ನು ಕಾವಲು ಇಡುತ್ತಾರೆ., ದೆವ್ವ ಪಿಶಾಚಿಗಳು ಬರಬಾರದು ಎಂದು ಕಾವಲು ಇರಿಸುತ್ತಾರೆ. ಇವಳಿಗೆ ಪ್ರತ್ಯೇಕವಾದ ಸಿಹಿಯನ್ನು ಮಾಡಿ

ಇವಳಿಗೆ ಪ್ರತ್ಯೇಕ ಲೋಟ, ಊಟದ ತಟ್ಟೆ ಮಲಗುವುದಕ್ಕೆ ಚಾಪೆ ಹೊದಿಕೆಯನ್ನು ಕೊಟ್ಟು ಪ್ರತ್ಯೇಕವಾಗಿ ಇಡುತ್ತಾರೆ. ಅವಳಿಗೆ ಕೊಟ್ಟ ಪ್ರತ್ಯೇಕ ತಟ್ಟೆಯಲ್ಲಿ ಸಿಹಿಯನ್ನು ಬಡಿಸಿ ಊಟ ಮಾಡಿಸುತ್ತಾರೆ. ಆಗ ಪದಾರ್ಥಗಳನ್ನು ಇಡುವ ಹಾಗಿಲ್ಲ. ಒಂದು ವೇಳೆ ಖಾರದ ಪರ್ದಾರ್ಥಗಳು ತಿಂದರೆ ಮುಂದೆ ಶನಿಪಾತವಾಗುತ್ತದೆ ಎಂದು ಅವಳಿಗೆ ಖಾರವನ್ನು ತಿನ್ನಿಸುವುದಿಲ್ಲ. ಹೀಗೇ ೯ ದಿನಗಳವರೆಗೂ ಅವಳು ಗುಡಿಸಿಲಿನಲ್ಲಿ ಇರಬೇಕು ಹೊರಗೆ ಬರುವ ಆಗಿಲ್ಲ ಆ ೯ ದಿನಗಳು ತುಪ್ಪ, ಅನ್ನ, ಬೆಲ್ಲ, ಒಣಕೊಬ್ಬರಿ ಇದನ್ನು ಬಿಟ್ಟರೆ ಯಾವುದೇ ರೀತಿಯಾದ ಖಾರದ ಪದಾರ್ಥಗಳು ಸೇವಿಸುವ ಹಾಗಿಲ್ಲ. ಆ ರಾತ್ರಿ ಊಟದ ನಂತರ ಋತುಮತಿಗೆ ವಸಿಗೆ ಹಾಕುವರು ಐದು ಜನಮುತ್ತೈದೆಯರು ಅರಿಶಿಣ, ಕುಂಕುಮ ಇಟ್ಟು ಸೋಬಾನೆ ಪದಗಳನ್ನು ಹಾಡುತ್ತಾರೆ. ಆ ಶೋಭಾನೆ ಪದಗಳು.

ಹೀಗೆ ಹಲವಾರು ಸೋಬಾನ ಪದಗಳನ್ನು ಹಾಡಿ ಆರತಿಯನ್ನು ಎತ್ತಿ ಅದನ್ನು ಗುಡಿಸಲಿನ ಮುಂದೆ ಹಾಕುತ್ತಾರೆ. ಹೀಗೆ ಹೆಣ್ಣು ಮಗಳಿಗೆ ೯ ದಿನಗಳು ರಾತ್ರಿ ವಸಗೆಯನ್ನು ಹಾಕಿ ಒಣಕೊಬ್ಬರಿ ಕಳ್ಳೆಪಪ್ಪು ತುಪ್ಪವನ್ನು ಒಡಲು ತುಂಬುತ್ತಾರೆ, ಉಡಿ ತುಂಬುತ್ತಾರೆ. ಉಡಿ ತುಂಬಿದ ಪದಾರ್ಥಗಳು ಬೇರೆಯವರಿಗೆ ಕೊಡುವ ಹಾಗಿಲ್ಲ. ಅದನ್ನು ಅವರೇ ತಿಂದು ಮುಗಿಸಬೇಕು ಈ ಕಟ್ಟುನಿಟ್ಟು ಪದ್ಧತಿ ಆ ಸಮುದಾಯಗಳಲ್ಲಿ ಇದೆ.

ಕೊನೆಯ ದಿನ ತಮ್ಮ ಕುಲಬಂಧುಗಳನ್ನು ಆಹ್ವಾನಿಸಿ ಅವಳಿಗೆ ಬಿಸಿ ನೀರಿನಿಂದ ಸ್ನಾನ ಮಾಡಿಸಿ ಹೊಸಬಟ್ಟೆಯನ್ನು ಹಾಕಿಸಿ ಅಂದು ಸಿಹಿ ಪದಾರ್ಥಗಳನ್ನು ಮಾಡಿ ಆ ರಾತ್ರಿ ಬಂಧುಗಳು ಋತುಮತಿಗೆ ಸಿಂಗರಿಸಿ ವಸಿಗೆಯನ್ನು ಹಾಕಿ ಮುತ್ತೈದೆಯರು ಅರಿಶಿಣ, ಕುಂಕುಮ ಇಟ್ಟು ವಶಿಗೆ ಹಾಕಿದ ತಟ್ಟೆಗಳು ಮುಟ್ಟಿಸುವರು. ಮುತ್ತೈದೆಯರು ಆರತಿಯನ್ನು ಬೆಳಗಿಸಿ ಅದನ್ನು ಗುಡಿಸಲು ಮುಂದೆ ಹಾಕಿ ಬಂಧುಗಳು ತಮ್ಮ ಆರ್ಥಿಕ ಸ್ಥಿತಿಗೆ ತಕ್ಕಂತೆ ತಂದಿರುವ ಕಾಲಚೈನು ಸೀರೆ ಕುಪ್ಪಸವನ್ನು ಅವಳಿಗೆ ಮುಯ್ಯಿ ಮಾಡುವರು. ಕೊನೆಯಲ್ಲಿ ಸಿಹಿ ತಿನಿಸುಗಳು ಊಟವನ್ನು ಬಡಿಸಿ ಮನೆಯ ಒಳಗೆ ಕರೆಯುವಾಗ ಆರತಿಯನ್ನು ಮಾಡಿ ಒಳಗೆ ಸೇರಿಸಿಕೊಳ್ಳುವರು. ೯ನೇ ದಿನದ ಬೆಳಗ್ಗೆ ೪ ಗಂಟೆಗೆ ಸೋದರ ಮಾವ ಋತುಮತಿಗೆ ಹಾಕಿದ ಗುಡಿಸಲನ್ನು ತೆಗೆಯಬೇಕು. ಆ ಗುಡಿಸಲು ಯಾರಿಗೂ ಕಾಣದ ಹಾಗೆ ಹೊಂಗೆ ಸೊಪ್ಪು ಗುಡಿಸಲನ್ನು ತೆಗೆದು ಊರಿನ ಹೊರಗೆ ತಿಪ್ಪೆ ಗುಂಡಿಗೆ ಹಾಕುವರು. ತದನಂತರ ಸೋದರ ಮಾವನಿಗೆ ಸ್ನಾನ ಮಾಡಿಸಿ ಬಾಡೂಟವನ್ನು ಕೊಟ್ಟು ಕಳಿಸುತ್ತಾರೆ. ಅಲ್ಲಿ ತನಕ ಋತುಮತಿ ಹೆಣ್ಣು ೯ ದಿನಗಳವರೆಗೆ ಎಲ್ಲೂ ಹೋಗುವ ಹಾಗಿಲ್ಲ. ಯಾರ ಜೊತೆಯು ಮಾತನಾಡುವ ಹಾಗಿಲ್ಲ. ಮನೆಯ ಒಳಗೆ ಬರುವ ಹಾಗಿಲ್ಲ. ವಿಧಿ ವಿಧಾನಗಳು ಮುಗಿದ ಮೇಲೆ ಸೂತಕ ಕಳೆಯುತ್ತದೆ. ನಂತರ ಅವಳನ್ನು ಮನೆಯೊಳಗೆ ಆರತಿಯನ್ನು ಬೆಳಗಿಸಿ ಬಲಗಾಲನ್ನು ಒಳಗೆ ಇರಿಸಿ ಮನೆಯೊಳಗೆ ಕರೆಸಿಕೊಳ್ಳುತ್ತಾರೆ.

### ೫.೩. ದಕ್ಕಲರ ಅಂತ್ಯಕ್ರಿಯೆ ಆಚರಣೆಗಳು

ಸಮಾಜದ ಹಲವು ಜಾತಿ ಜನಾಂಗಗಳಲ್ಲಿ ಮರಣದ ವಿಧಿ–ವಿಧಾನಗಳು ಅವರ ಕುಲಕ್ಕೆ ಸಂಬಂಧಿಸಿದ ಹಾಗೆ ಪೂರ್ವಿಕರ ಆಚರಣೆಗಳ ವಿಧಿ–ವಿಧಾನಗಳ ಮಹತ್ವ ಹೊಂದಿದ್ದು, ಅದನ್ನು ಈಗಲೂ ಪಾಲಿಸಿಕೊಂಡು ಬರುತ್ತಿದ್ದಾರೆ. ದಕ್ಕಲ ಸಮುದಾಯದಲ್ಲಿ ಸಹ ಪ್ರತ್ಯೇಕವಾದ ವಿಧಿ–ವಿಧಾನಗಳು ಮಹತ್ವವನ್ನು ಪಡೆದುಕೊಂಡಿದ್ದು, ಈ ಕುಲಗಳಲ್ಲಿ ೧೨ ರೀತಿಯ ಜಾತಿ ಗುಂಪುಗಳಿವೆ. ಈ ಜಾತಿ ಗುಂಪುಗಳನ್ನು ಗೌತ್ರಗಳು ಎಂದು ಕರೆಯುತ್ತಾರೆ. ಆ ಗುಂಪುಗಳು ಪೆದ್ದರೆಡ್ಡಿಳೋ, ಚಿನ್ನರೆಡ್ಡಿಳೋ ರೇಣುಕುಂಟೋಳು, ಕಾಮಂಚೋಳ್ಳು, ಕರ್ನಳ್ಳೊ, ಪಟ್ಟಿಟೊಳ್ಳು, ಅಲ್ಲಮೊಳ್ಳು, ಅಂತನೊಳ್ಳು, ಪಿಶನೊಳ್ಳು, ಇರಿಗಿನೊಳ್ಳು, ಶಾರಕುಂಟ, ಜಗನ್ನಾಥೊಳ್ಳು ಎಂಬ ಕುಲಗಳು ಈ ಎರಡು ಜಾತಿಗಳನ್ನು ಎರಡು ಗುಂಪುಗಳಾಗಿ ವಿಂಗಡಿಸಿರುತ್ತಾರೆ. ಪೆದ್ದರೆಡ್ಡಿ ಮತ್ತು ಚಿನ್ನರೆಡ್ಡಿ ಇವರ ವಿಧಿ–ವಿಧಾನಗಳು ಒಂದು ರೀತಿಯಲ್ಲಿ ಶವಸಂಸ್ಕಾರ ಮಾಡಿದರೆ ಉಳಿದ ೧೦ ಬೆಡಗುಗಳು ಒಂದು ರೀತಿಯಲ್ಲಿ ಶವ ಸಂಸ್ಕಾರ ಮಾಡುತ್ತಾರೆ. ಈ ಸಮುದಾಯಗಳು ಎರಡು ರೀತಿಯ ಶವಸಂಸ್ಕಾರ ಮಾಡುತ್ತಾರೆ.

**೧. ಪೆದ್ದರೆಡ್ಡಿ ಮತ್ತು ಚಿನ್ನಾರೆಡ್ಡಿ:–** ಈ ಬೆಡಗುಗಳು ಶವವನ್ನು ಹಲಿಗೆಯ ಮೇಲೆ ಇಟ್ಟುಕೊಂಡು ಅದನ್ನು ನಾಲ್ಕು ಜನ ಹೊತ್ತುಕೊಂಡು ಹೋಗುವರು.

**೨. ಉಳಿದ ೧೦ ಬೆಡಗುಗಳು:–** ಈ ಬೆಡಗಿನವರು ಬಿದುರು ಕೋಲುಗಳನ್ನು ತಂದು ಅದರ ಮೇಲೆ ಹುಲ್ಲು ಹಾಕಿ ಕಟ್ಟಿ ಬಿಳಿ ಬಟ್ಟೆಯನ್ನು ಹಾಕಿ ಅರಿಶಿಣ, ಕುಂಕುಮ ಚಲ್ಲಿ ಅದರ ಮೇಲೆ ಶವವನ್ನು ಇಟ್ಟು ತೆಗೆದುಕೊಂಡು ಹೋಗಿ ಶವ ಸಂಸ್ಕಾರ ಮಾಡುವರು.

ಈ ರೀತಿ ಎರಡು ಗುಂಪುಗಳು ಶವವನ್ನು ಸ್ವಶಾನಕ್ಕೆ ತೆಗೆದುಕೊಂಡು ಹೋಗುವ ವಿಧಿ ವಿಧಾನ ಬೇರೆಯಾದರು ಶವವನ್ನು ಸಂಸ್ಕಾರ ಮಾಡುವ ಆಚರಣೆಗಳು ಮಾತ್ರ ಒಂದೇ ಆಗಿರುತ್ತದೆ. ಈ ಸಮುದಾಯಗಳಲ್ಲಿ ಸಾಯುವ ವ್ಯಕ್ತಿಯನ್ನು ಮನೆಯ ಪಡಸಾಲೆಯಲ್ಲಿ ಅಥವಾ ಮನೆಯ ಹೊರಗೆ ತಂದು ಮಲಗಿಸಿ ಆ ವ್ಯಕ್ತಿಯ ಬಂಧುಬಳಗದವರನ್ನು ಪ್ರೀತಿ ಪಾತ್ರರಾದವರನ್ನು ಕರೆಯಿಸಿ ಅವರ ಮುಖಾಂತರ ಹಾಲನ್ನು ಕುಡಿಸಿ, ತುಳಸಿ ನೀರನ್ನು ಬಾಯಿಗೆ ಬಿಡುತ್ತಾರೆ. ನಂತರ ಆ ವ್ಯಕ್ತಿಯು ಸತ್ತ ನಂತರ ಶವದ ಕೆಳಗೆ ಭತ್ತ ಹುಲ್ಲು ಹಾಕಿ ಅದರ ಮೇಲೆ ಮಲಗಿಸಿ ಪಕ್ಕದಲ್ಲಿ ದೀಪವನ್ನು ಇಟ್ಟು ಊದುಬತ್ತಿಯನ್ನು ಹಚ್ಚಿ ಮನೆ ಹೊರಗಡೆ ಬೆಂಕಿ ಹಾಕಿ ಇಡೀ ರಾತ್ರಿ, ಭಜನೆ ಮಾಡುತ್ತಾರೆ. ವ್ಯಕ್ತಿ ಸತ್ತ ಗಳಿಗೆಯಿಂದ ಶವಸಂಸ್ಕಾರವಾಗುವ ತನಕ ಆ ಸಮುದಾಯದಲ್ಲಿ ಯಾರು ಅಡುಗೆ ಮಾಡುವ ಹಾಗಿಲ್ಲ. ನಂತರ ಶವಸಂಸ್ಕಾರಕ್ಕೆ ತೆಗೆದುಕೊಂಡು ಹೋಗುವ ಸಂದರ್ಭದಲ್ಲಿ ಶವವನ್ನು ಶುಭ್ರವಾಗಿ ಮುಖವನ್ನು ತೊಳೆದು ಹಣೆಗೆ ಕುಂಕುಮ, ವಿಭೂತಿ ಇಟ್ಟು ಮೂಗಿಗೆ ಹತ್ತಿ ಇಟ್ಟು ಎರಡು ಕಿವಿಗಳಿಗೂ ಹತ್ತಿಯನ್ನು ಇಟ್ಟು ಉತ್ತರ ದಕ್ಷಿಣವಾಗಿ ಶವವನ್ನು ಮಲಗಿಸಿ ಎರಡು ಕೈಗಳನ್ನು ಹೊಟ್ಟೆಯ ಮೇಲೆ ಇಟ್ಟು ಅದಕ್ಕೆ ಕಪ್ಪು

ದಾರದಿಂದ ಕಟ್ಟಿ ಎರಡು ಕಾಲುಗಳನ್ನು ಒಂದೆಡೆ ಸೇರಿಸಿ ಎರಡು ಹೆಬ್ಬೆರಳುಗಳಿಗೂ ಕಪ್ಪುದಾರದಿಂದ ಕಟ್ಟುತ್ತಾರೆ. ಎಲೆ ಅಡಿಕೆಯನ್ನು ಕುಟ್ಟಿ ಬಾಯಿಗೆ ಇಡುತ್ತಾರೆ. ನಂತರ ಹಣೆಗೆ ವಿಭೂತಿ ಇಟ್ಟು ಮಧ್ಯ ಕುಂಕುಮವನ್ನು ಇಡುತ್ತಾರೆ. ಬೆಳಗ್ಗೆ ನೆಂಟರು ಎಲ್ಲ ಬಂದ ಮೇಲೆ ಶವಸಂಸ್ಕಾರಕ್ಕೆ ಅಣಿ ಮಾಡುತ್ತಾರೆ. ಶವ ಸಂಸ್ಕಾರಕ್ಕೆ ಬೇಕಾದ ಬಿಳಿಬಟ್ಟೆ ಎಲೆ ಅಡಿಕೆ ಅರಿಶಿಣ, ಕುಂಕುಮ ಚಿಲ್ಲರೆಕಾಸು ಬಿದುರಿನ ಕೋಲುಗಳನ್ನು ತಂದು ಈ ಕೋಲುಗಳಿಂದ ಚಟ್ಟವನ್ನು ಕಟ್ಟುತ್ತಾರೆ. ಚಟ್ಟದ ಮೇಲೆ ಒಣಹುಲ್ಲು ಹಾಕಿ ಅದರ ಮೇಲೆ ಬಿಳಿಬಟ್ಟೆಯನ್ನು ಹೊದಿಸಿ ಅದರ ಮೇಲೆ ಅರಿಶಿಣ, ಕುಂಕುಮ ಚೆಲ್ಲುತ್ತಾರೆ. ಶವವನ್ನು ತೊಳೆದು ಹಣೆಗೆ ವಿಭೂತಿಯನ್ನು ಇಟ್ಟು ಕುಂಕುಮವನ್ನು ಇಟ್ಟು ಚಟ್ಟದ ಮೇಲೆ ಮಲಗಿಸುತ್ತಾರೆ.

ಶವವನ್ನು ಚಟ್ಟದ ಮೇಲೆ ಮಲಗಿಸಿದ ನಂತರ ಬಂಧು ಬಳಗದವರು ತಂದ ಹೂವಿನ ಹಾರಗಳನ್ನು ಶವದ ಮೇಲೆ ಹಾಕುತ್ತಾರೆ. ಎಲ್ಲರೂ ಶವಕ್ಕೆ ಪೂಜೆ ಮಾಡಿ ನಮಸ್ಕರಿಸಿಕೊಳ್ಳುವರು ಪೂಜೆಯ ನಂತರ ದೇವರಿಗೆ ನಮಸ್ಕರಿಸಿ ನಾಲ್ಕು ಜನ ಚಟ್ಟವನ್ನು ಎತ್ತಿಕೊಳ್ಳುತ್ತಾರೆ. ಆದರೆ ಪೆದ್ದರೆಡ್ಡಿ ಮತ್ತು ಚಿನ್ನರೆಡ್ಡಿಯವರು ಚಟ್ಟವನ್ನು ಕಟ್ಟುವುದಿಲ್ಲ. ಶವವನ್ನು ಹಲಗೆಯ ಮೇಲೆ ಮಲಗಿಸಿ ಶವಕ್ಕೆ ಪೂಜೆ ಮಾಡಿ ನಂತರ ನಾಲ್ಕು ಜನ ಎತ್ತಿಕೊಳ್ಳುತ್ತಾರೆ. ಹೀಗೆ ಶವವನ್ನು ಎತ್ತಿಕೊಂಡು ದಾರಿ ಉದ್ದಕ್ಕೂ ಶವದ ಮೇಲೆ ಎಲೆ ಅಡಿಕೆ ಹೂವು ಚಿಲ್ಲರೆ ಕಾಸು ಚೆಲ್ಲುತ್ತಾರೆ. ಒಂದು ವೇಳೆ ಅಮಾವಾಸ್ಯೆ ದಿನ ಸತ್ತರೆ ಶವದ ಜೊತೆಗೆ ಒಂದು ಕೋಳಿ ಮರಿಯನ್ನು ಕಟ್ಟುತ್ತಾರೆ. ಯಾಕೆಂದರೆ ಅಮಾವಾಸ್ಯೆ ದಿನ ಸತ್ತಿರುವುದರಿಂದ ಮನೆಗೆ ಕೇಡು ಸಂಭವಿಸಬಹುದು ಎಂದು ಹಾಗೆ ಒಂಟಿ ಶವವನ್ನು ಸಂಸ್ಕಾರ ಮಾಡಿದರೆ ಮುಂದಿನ ದಿನಗಳಲ್ಲಿ ಆ ಸಮುದಾಯಗಳಲ್ಲಿ ಹೆಚ್ಚಿನ ಸಾವು ಆಗುತ್ತದೆ ಎಂದು ಕೋಳಿ ಮರಿಯನ್ನು ಜೊತೆಗೆ ಕಟ್ಟುತಾರೆ. ತಂದೆ ಸತ್ತರೆ ಮನೆಯ ಹಿರಿಯ ಮಗ ತಂದೆಗೆ ಕೊಳ್ಳಿಯಿಡಬೇಕು ತಾಯಿ ಸತ್ತರೆ ಕಿರಿಯ ಮಗ ಇಡಬೇಕು ಎಂಬ ನೀತಿ ನಿಯಮಗಳು ಈ ಸಮುದಾಯಗಳಲ್ಲಿ ಇದೆ. ಒಬ್ಬ ಮಗ ಇದ್ದರೆ ಇಬ್ಬರಿಗೂ ಇವನೆ ಇಡಬೇಕು. ನಂತರ ಶವವನ್ನು ಊರಿನ ಆಚೆ ದಿಂಪರು ದಿಣ್ಣೆಯಲ್ಲಿ ಇಳಿಸಿ ಅಲ್ಲಿ ಶಾಸ್ತ್ರಗಳನ್ನು ಮಾಡುತ್ತಾರೆ. ಮಗನ ಕೈಗೆ ಮಡಿಕೆಯಲ್ಲಿ ಮಾಡಿದ ಅನ್ನವನ್ನು ಹಿಂದಕ್ಕೆ ಕೈ ಇಟ್ಟು ಮಡಿಕೆಯನ್ನು ಹಿಡಿದು ಬಲಗೈಯಿಂದ ಅನ್ನವನ್ನು ಶವದ ಮೇಲೆ ಚಲ್ಲುತ್ತಾನೆ. ಹೀಗೆ ಮೂರು ಸುತ್ತು ಅನ್ನವನ್ನು ಚಲ್ಲಿ ಕೊನೆಯಲ್ಲಿ ಮಡಿಕೆಯನ್ನು ಶವದ ತಲೆಯ ಹತ್ತಿರ ಉತ್ತರ ದಿಕ್ಕಿಗೆ ನೋಡಿಕೊಂಡು ಹಿಂದಕ್ಕೆ ಮಡಿಕೆಯನ್ನು ಕೆಳಗೆ ಬೀಳಿಸಬೇಕು ನಂತರ ಎಲ್ಲರೂ ಪೂಜೆ ಮಾಡಿ ಮತ್ತೆ ಶವವನ್ನು ಸ್ಮಶಾನದ ಗುಳಿಯ ಹತ್ತಿರ ತೆಗೆದುಕೊಂಡು ಹೋಗುತ್ತಾರೆ. ಸತ್ತ ಸುದ್ದಿ ತಿಳಿದ ನಂತರ ಮಾದಿಗರನ್ನು ಕರೆಸಿ ಅವರ ಸ್ವಂತ ಜಮೀನು ಅಥವಾ ಸರ್ಕಾರಿ ಸ್ಮಶಾನದಲ್ಲಿ ೬ ಅಡಿ ಉದ್ದ ೩ ಅಡಿ ಅಗಲ ಗುಳಿಯನ್ನು ತೋಡಿಸುತ್ತಾರೆ. ಈ ಕಾರ್ಯ ತಮ್ಮ ಕುಲಬಂಧುಗಳಾದ ಮಾದಿಗರು ಮಾಡುತ್ತಾರೆ. ಶವ ಬರುವುದರ ವೇಳೆಗೆ ಗುಳಿ ತಯಾರಾಗಿರುತ್ತದೆ. ಶವವನ್ನು ಗುಳಿಯಪಕ್ಕದಲ್ಲಿ ಇಟ್ಟು ಶಾಸ್ತ್ರಗಳನ್ನು ಮಾಡಿ ಕೊಳ್ಳಿ ಇಡುವ

ಮಗನನ್ನು ಕರೆಸಿ ಅವನ ಕೈಯಿಂದ ಶಾಸ್ತ್ರವನ್ನು ಮಾಡಿ ಮಡಿಕೆಯಲ್ಲಿ ನೀರು ತುಂಬಿ ಒಂಭತ್ತು ಸುತ್ತು ಶವವನ್ನು ಸುತ್ತುತ್ತಾನೆ. ಸುತ್ತುವಾಗ ಒಂದೊಂದು ಸುತ್ತಿಗು ಮಡಿಕೆಗೆ ಒಂದು ತೂತು ಮಾಡುತ್ತಾರೆ. ಹೀಗೆ ಒಂಭತ್ತು ಸುತ್ತಿಗೂ ಒಂಭತ್ತು ತೂತುಗಳನ್ನು ಮಾಡಿ ಕೊನೆಯಲ್ಲಿ ಮಡಿಕೆಯನ್ನು ಹೊಡೆದು ಉಳಿದ ನೀರನ್ನು ಹಾಗೆ ಇಟ್ಟು ಶವದ ಬಾಯಿಗೆ ಹಾಕಿ ತಲೆಯ ಮುಂದೆ ಇಡುತ್ತಾರೆ. ಶವವನ್ನು ಗುಣಿಯಲ್ಲಿ ಇಟ್ಟು ನಂತರ ಚಟ್ಟದ ಎರಡು ಕೋಲುಗಳು ಪೂರ್ವಕ್ಕೆ ಒಂದು ಕೋಲು ಪಶ್ಚಿಮಕ್ಕೆ ಒಂದು ಕೋಲು ಎಸೆಯುತ್ತಾರೆ. ತಲೆಯ ಭಾಗದಲ್ಲಿ ಬಟ್ಟೆಯನ್ನು ಕಟ್ಟಿದ ಕಾಶಿ ಗಂಟನ್ನು ಬಿಚ್ಚಿ ಅದನ್ನು ಶವದ ಕಡೆ ಮುಖ ತಿರುಗಿಸಿ ಬೆನ್ನಿನ ಭಾಗದ ಕಡೆ ನೋಡದೆ ಹಿಂದೆ ಬಿಸಾಡಬೇಕು ಈ ಗಂಟನ್ನು ಬಿಸಾಡುವಾಗ ಆ ಭಾಗದಲ್ಲಿ ಯಾರೂ ಇರಬಾರದು. ಕೈಲಾಸ ಬಟ್ಟೆಯನ್ನು ತೆಗೆದು ಕುಲಬಂಧುಗಳಿಗೆ ಕೊನೆಯ ಬಾರಿ ಮುಖವನ್ನು ನೋಡಿಕೊಳ್ಳುವುದಕ್ಕೆ ಹೇಳಿ ಶವಕ್ಕೆ ಹಾಕಿದ ಬಟ್ಟೆಗಳನ್ನು ಹರಿದು ನಂತರ ಶವದ ಶರೀರದಲ್ಲಿ ಯಾವುದೇ ವಸ್ತು ಇಡುವುದಿಲ್ಲ. ಎಲ್ಲವನ್ನು ತೆಗೆದು ಬೆತ್ತಲೆಯಾಗಿ ಇಟ್ಟು ಎಲ್ಲರೂ ಮೂರು ಹಿಡಿ ಮಣ್ಣನ್ನು ಹಾಕಿ ಸಂಸ್ಕಾರ ಮಾಡುವರು ಮಣ್ಣಿನಿಂದ ಶವ ಸಂಸ್ಕಾರ ಮಾಡಿದ ಮೇಲೆ ಮಧ್ಯ ತುಳಸಿ ಗಿಡವನ್ನು ನೆಟ್ಟು ಹಿಂದೆ ಬರುವಾಗ ಕುಂಟೆಯಲ್ಲಿ ಕೈಕಾಲು ತೊಳೆದು ಊರು ಬಾಗಿಲಲ್ಲಿ ಎಕ್ಕದ ಗಿಡದ ಎಲೆಗಳು ಎರಡು ಕಡೆ ಇಟ್ಟು ಅದರ ಮೇಲೆ ಸಗಣಿ ಇಟ್ಟಿರುತ್ತಾರೆ. ಶವ ಸಂಸ್ಕಾರಕ್ಕೆ ಬಂದ ಎಲ್ಲಾ ಬಂಧುಗಳು ಸಗಣಿಯನ್ನು ತುಳಿದು ಮನೆಯಲ್ಲಿ ಶವ ಇಟ್ಟ ಜಾಗದಲ್ಲಿ ದೀಪ ಇಟ್ಟಿರುತ್ತಾರೆ. ಆ ದೀಪವನ್ನು ನೋಡಿ ನಮಸ್ಕಾರ ಮಾಡಿಕೊಂಡು ಹೋಗಬೇಕಾಗುತ್ತದೆ. ಶವವನ್ನು ಎತ್ತಿದ ನಾಲ್ಕು ಜನ ಮತ್ತು ತಲೆ ಕೊಳ್ಳಿ ಇಟ್ಟಿರುವ ಮಗನು ಮೂರು ದಿನ ಮನೆಯ ಒಳಗೆ ಬರುವ ಹಾಗಿಲ್ಲ. ಅವರು ಮನೆಯ ಹೊರಗೆ ಇದ್ದು ಅಲ್ಲೆ ಊಟ ನಿದ್ದೆಯಾಗಿರುತ್ತದೆ. ಶವ ಸಂಸ್ಕಾರದ ವಿಧಿ ವಿಧಾನದ ಮೇಲೆ ಮನೆಯನ್ನು ಶುಭ್ರವಾಗಿ ತೊಳೆದು ಪಾತ್ರೆಗಳನ್ನು ತೊಳೆದು ಮೂರು ದಿನದ ಕೂಳಿಗೆ ತಯಾರಿಯಾಗುತ್ತಾರೆ.

**ಮೂರು ದಿನದ ಕೂಳು ವಿಧಿವಿಧಾನಗಳು**

ಮನೆಯನ್ನು ಶುಭ್ರಗೊಳಿಸಿ ಪಾತ್ರೆಗಳನ್ನು ತೊಳೆದು ಎಲ್ಲರು ಸ್ನಾನ ಮಾಡಿ ಶವವನ್ನು ಹೊತ್ತಿರುವ ನಾಲ್ಕು ಜನ ಮತ್ತು ಕೊಳ್ಳಿ ಇಟ್ಟ ಮಗನು ಕುಂಬಾರನ ಮನೆಗೆ ಹೋಗಿ ಹೊಸ ಮಡಿಕೆಯನ್ನು ತೆಗೆದುಕೊಂಡು ಬಂದು ಕೊಳ್ಳಿ ಇಟ್ಟ ಮಗನಿಗೆ ತಲೆ ಕೂದಲು ತೆಗೆದು ಶವಸಂಸ್ಕಾರ ಮಾಡಿದ ಹತ್ತಿರ ಹೋಗಿ ಮಣ್ಣನ್ನು ನೀರಿನಿಂದ ಚೆನ್ನಾಗಿ ಹದ ಮಾಡಿ ತುಳಸಿ ಗಿಡವನ್ನು ನೆಡುತ್ತಾರೆ. ಐದು ಜನರನ್ನು ಮನೆಯ ಮುಂದೆ ಒನಕೆ ಮೇಲೆ ಕೂರಿಸಿ ಸ್ನಾನ ಮಾಡಿಸುತ್ತಾರೆ. ಶಾಸ್ತ್ರಗಳನ್ನು ಮಾಡಿ ನಂತರ ಹೊಸ ಮಡಿಕೆಗಳಲ್ಲಿ ಅನ್ನವನ್ನು ಮಾಡಿ ಇಟ್ಟುಕೊಂಡಿರುತ್ತಾರೆ. ತದ ನಂತರ ಎಲ್ಲರು ಬಂದ ಮೇಲೆ ಸತ್ತ ವ್ಯಕ್ತಿ ತಿನ್ನುತಿದ್ದ ಎಲ್ಲಾ ಪದಾರ್ಥಗಳನ್ನು ತಯಾರಿಸಿ ಒಂದು ವೇಳೆ ಪುರುಷ ಸತ್ತರೆ ಆತನಿಗೆ ಸಾರಾಯಿ ಕುಡಿಯುವ

ಅಥವಾ ಸಿಗರೇಟ್, ಬೀಡಿ ಸೇದುವ ಅಭ್ಯಾಸವಿದ್ದರೆ ಅವುಗಳನ್ನು ತರೆಸುತ್ತಾರೆ. ಒಂದು ವೇಳೆ ಮಹಿಳೆ ಸತ್ತರೆ ಮಹಿಳೆಗೆ ಇರುವ ಅಭ್ಯಾಸಗಳು ಎಲೆ ಅಡಿಕೆ ಕಡ್ಡಿಪುಡಿ ಎಲ್ಲವನ್ನು ತರಿಸುತ್ತಾರೆ.

ಹೀಗೆ ಆ ವ್ಯಕ್ತಿಯ ಇಷ್ಟದ ಪದಾರ್ಥಗಳನ್ನು ತಯಾರಿಸಿ ಮೊದಲು ಮನೆಯಲ್ಲಿ ಎಡೆಯನ್ನು ಹಾಕಿ ಎಲ್ಲಾ ಪದಾರ್ಥಗಳನ್ನು ತೆಗೆದುಕೊಂಡು ಎಡೆ ಇಟ್ಟು ಪೂಜೆ ಮಾಡಿ ನಂತರ ದಿಂಬುರು ದಿಣ್ಣೆಗಳು ಶವವನ್ನು ಇಟ್ಟ ಜಾಗದಲ್ಲಿ ಎಡೆ ಹಾಕುತ್ತಾರೆ. ಸತ್ತ ವ್ಯಕ್ತಿಯ ಇಷ್ಟವಾದ ಪದಾರ್ಥಗಳನ್ನು ಇಟ್ಟು ಅನ್ನವನ್ನು ಇಟ್ಟು ಪೂಜೆ ಮಾಡುತ್ತಾರೆ. ತದನಂತರ ಅಲ್ಲಿ ಒಬ್ಬರು ಕಾವಲು ಕಾಯುವಂತೆ ಹೇಳಿ ಶವ ಸಂಸ್ಕಾರದ ಬಳಿ ಅಂದರೆ ಸಮಾದಿ ಬಳಿ ಬಂದು ತಲೆ ಮತ್ತು ಪಾದಗಳ ಬಳಿ ಎಡೆಯನ್ನು ಹಾಕಿ ಇಷ್ಟ ಪದಾರ್ಥಗಳನ್ನು ಇಟ್ಟು ಪೂಜೆ ಮಾಡಿ ಎಲ್ಲರೂ ತುಳಸಿ ಗಿಡದ ಮೇಲೆ ಹಾಲು ಹಾಕುತ್ತಾರೆ. ಪೂಜೆ ಮುಗಿದ ಮೇಲೆ ಎಲ್ಲರೂ ಹಾಲು ಎರೆದ ಮೇಲೆ ದೂರ ಹೋಗಿ ಕೂರುತ್ತಾರೆ. ಪೂಜೆಗೆ ಇಟ್ಟ ಪದಾರ್ಥಗಳನ್ನು ಮೊದಲು ಕಾಗೆ ಮುಟ್ಟಬೇಕು ಆಗ ಸತ್ತ ವ್ಯಕ್ತಿಗೆ ಇಷ್ಟವಾದ ಪದಾರ್ಥಗಳು ಇಟ್ಟಿದ್ದೇವೆ ಎಂಬ ನಂಬಿಕೆ ಒಂದು ವೇಳೆ ಕಾಗೆ ಮುಟ್ಟಲಿಲ್ಲ ಎಂದರೆ ಪದಾರ್ಥಗಳಲ್ಲಿ ಕೊರತೆ ಇದೆ. ಆತ ಇಷ್ಟ ಪಟ್ಟಿರುವ ಪದಾರ್ಥ ಇಟ್ಟಿಲ್ಲ ಎಂಬ ನಂಬಿಕೆ ನಂತರ ಆ ಪದಾರ್ಥವನ್ನು ತರಿಸಿ ಇಡುತ್ತಾರೆ. ಕಾಗೆ ಎಡೆಯನ್ನು ಮುಟ್ಟಿದ ನಂತರ ಎಲ್ಲರು ಮನೆಗೆ ಹಿಂತಿರುಗುವರು ಮನೆಯಲ್ಲಿ ವಿಶೇಷ ಅಡಿಗೆಯನ್ನು ಮಾಡಿರುತ್ತಾರೆ. ಆ ಪದಾರ್ಥವನ್ನು ಎಲ್ಲರಿಗೂ ಬಡಿಸಿ ಮೂರು ದಿನದ ಕೂಳು ಮುಗಿಯುತ್ತದೆ. ೨೦ರ ದಶಕದ ಹಿಂದೆ ಮಾಂಸದ ಊಟ ಮಾಡುತ್ತಿದ್ದರು. ಅದರೆ ಈಗ ತಿಥಿ ಮುಗಿಯುವವರಿಗೂ ಮಾಂಸ ತಿನ್ನುವ ಹಾಗಿಲ್ಲ. ಎಂಬ ಕಟ್ಟುನಿಟ್ಟಿನ ಪದ್ಧತಿ ಇದೆ. ಸಮಾಜ ಬದಲಾದಂತೆ ಇವರಲ್ಲಿ ಬದಲಾವಣೆ ಆಗುತ್ತಿದ್ದು ಎಲ್ಲರ ಹಾಗೆ ಇವರು ಕಾರ್ಯಗಳನ್ನು ಶಿಸ್ತು ಬದ್ಧವಾಗಿ ಮಾಡುತ್ತಾರೆ.

**ಸೂತಕದ ಆಚರಣೆ**

ದಕ್ಕಲ ಸಮುದಾಯಗಳಲ್ಲಿ ಸೂತಕದ ಆಚರಣೆ ಎಲ್ಲಾ ಸಮುದಾಯಗಳಿಗಿಂತ ಸ್ವಲ್ಪ ಮಟ್ಟಿಗೆ ಭಿನ್ನವಾಗಿರುತ್ತದೆ. ಇವರು ಸೂತಕವನ್ನು ಮೂರು ರೀತಿಯಲ್ಲಿ ಮಾಡುತ್ತಾರೆ.

೧. ೧೧ನೇ ದಿನದ ತಿಥಿ, ೨. ತಿಂಗಳ ತಿಥಿ, ೩. ಮೂರು ವರ್ಷದ ತಿಥಿಯನ್ನು ಮಾಡುತ್ತಾರೆ, ೧೧ನೇ ದಿನದ ತಿಥಿ ಮತ್ತು ತಿಂಗಳ ತಿಥಿ ವಿಶೇಷವಾಗಿರುತ್ತದೆ. ೧೧ನೇ ದಿನದ ತಿಥಿಯಲ್ಲಿ ಮನೆಗೆ ಸುಣ್ಣವನ್ನು ಬಳಿದು ಮನೆಯಲ್ಲಿ ಇರುವ ಪಾತ್ರೆಗಳನ್ನು ತೊಳೆದು ಹಟ್ಟಿಯನ್ನು ಸಗಣಿಯಿಂದ ಸಾರಿಸಿ ೪ ದಿನದಂದು ಎಲ್ಲರು ಸ್ನಾನ ಮಾಡಿ ಸಂಪ್ರದಾಯಬದ್ಧವಾಗಿ ತಂದೆಗೆ ಕೊಳ್ಳಿ ಇಟ್ಟ ಮಗನಿಗೆ ಹೊಸ ಬಟ್ಟೆ ಅಥವಾ ಟವಲ್ ತಂದು ಇಡುವರು. ಕುಲಬಾಂಧವರು ತಂದ ಸಿಹಿ ತಿನಿಸುಗಳು ಹಣ್ಣುಗಳು ಹಂಪಲುಗಳು ಹಾಗೆ ತಿಥಿಗೆ ಮಾಡಿದ ಸಿಹಿ ಪದಾರ್ಥಗಳ ಶವಸಂಸ್ಕಾರ ಮಾಡಿದ ಸಮಾಧಿಯ ಬಳಿ ಇಡುವರು ಅಲ್ಲಿ ಕಾಗೆ ಇಟ್ಟ ಎಡೆಯನ್ನು ಮುಟ್ಟಿ ಹೋದ ನಂತರ ಸ್ವಲ್ಪ ಅಲ್ಲಿ ಇಟ್ಟು ಉಳಿದ ಎಲ್ಲವನ್ನು ತೆಗೆದುಕೊಳ್ಳುವರು.

ತಿಥಿಯ ಪುನೋಜನೆಯನ್ನು ಈ ದಕ್ಕಲ ಸಮುದಾಯದ ಹಿರಿಯರು ಪುರೋಹಿತರಾಗಿ ಪುನೋಜನೆಯನ್ನು ಮಾಡುತ್ತಾರೆ. ೨೦ರ ದಶಕದ ಹಿಂದೆ ಜಂಗಮ ಬ್ರಾಹ್ಮಣರು ಇವರು ಮೂಲತಃ ಆಂಧ್ರದ ವರಂಗಲ್ ಪ್ರದೇಶದವರು ಇವರನ್ನು ಅಹ್ವಾನಿಸಿ ಇವರ ಪೂರೋಹಿತ್ವದಲ್ಲಿ ತಮ್ಮ ಸೂತಕದ ಪೂಜೆಯನ್ನು ಮಾಡಿಸುತ್ತಿದ್ದರು. ಆದರೆ ಈಗ ಇವರ ಕುಲದಲ್ಲೆ ಒಬ್ಬ ವ್ಯಕ್ತಿ ಪುರೋಹಿತರಾಗಿ ಸೂತಕವನ್ನು ಕಳೆಯುವರು. ಹಾಗೆ ಮೊದಲು ತಿಥಿಗಳನ್ನು ಮಾಡುವ ಸಂದರ್ಭದಲ್ಲಿ ಮಾಂಸದ ಊಟವೇ ಹೆಚ್ಚು ಪ್ರಿಯವಾಗಿತ್ತು. ಎಡೆಗೂ ಮಾಂಸದ ಊಟವನ್ನು ಇಡುತ್ತಿದ್ದರು. ಆದರೆ ವರ್ತಮಾನದ ಬದಲಾವಣೆಯ ಗಾಳಿಗೆ ಈ ಸಮುದಾಯಗಳು ಚೇತರಿಸಿಕೊಂಡು ತಿಥಿ ಮುಗಿಯುವ ತನಕ ಮಾಂಸ ಮಾಡುವುದಿಲ್ಲ, ತಿಂಗಳ ತಿಥಿ ಮುಗಿದ ಮೇಲೆ ಮಾಂಸವನ್ನು ಮಾಡುತ್ತಾರೆ. ಅಂದು ಮನೆಯಲ್ಲಿ ಗೋಮಾಲವನ್ನು ಹಾಕಿ ನಂತರ ಸತ್ತ ವ್ಯಕ್ತಿಗೆ ಹೊಸ ಬಟ್ಟೆ ಹೊಸ ಮಡಿಕೆಯನ್ನು ಇಟ್ಟು ಪೂಜೆ ಪ್ರಾರಂಭಿಸುತ್ತಾರೆ. ಇವರು ಪೂಜೆಯನ್ನು ರಾತ್ರಿ ವೇಳೆಯಲ್ಲಿ ಮಾಡುವುದು ವಿಶೇಷವಾಗಿದೆ. ಏಕೆಂದರೆ ಈ ಕುಲದವರು ಬಂಧು ಬಳಗದವರು ದೂರ ದೂರದ ಊರುಗಳಿಂದ ಬರಬೇಕಾಗುತ್ತದೆ. ಹಾಗಾಗಿ ಎಲ್ಲರೂ ಸಂಜೆಯ ವೇಳೆಗೆ ಸೇರುವುದರಿಂದ ರಾತ್ರಿ ವೇಳೆಯಲ್ಲಿ ಈ ಕಾರ್ಯವನ್ನ ಮಾಡುತ್ತಾರೆ.

**ಹೂವಿನ ತೊಟ್ಟಿಲು**

ಈ ಸಮುದಾಯಗಳಲ್ಲಿ ವಿಶೇಷವೆಂದರೆ ಹೂವಿನ ತೊಟ್ಟಿಲು ಇದು ತಿಂಗಳ ತಿಥಿಯಲ್ಲಿ ಮಾಡುತ್ತಾರೆ. ಸೂತಕದ ಬೆಳಿಗ್ಗೆ ಪೂಜೆಮುಗಿದ ಮೇಲೆ ಸತ್ತ ವ್ಯಕ್ತಿಯ ಫೋಟೋವನ್ನು ಇಟ್ಟು ಅದರ ಸುತ್ತ ತೊಟ್ಟಿಲು ಮಾಡುತ್ತಾರೆ. ಆ ತೊಟ್ಟಿಲಿಗೆ ಬಳಸುವ ವಸ್ತು ಹೂವು ಹಾಗಾಗಿ ಇದನ್ನ ಹೂವಿನ ತೊಟ್ಟಿಲು ಎಂದು ಕರೆಯುತ್ತಾರೆ. ಇದನ್ನು ತಯಾರಿಸುವ ವಿಧಾನ ನಾಲ್ಕು ದಾರಗಳನ್ನು ನಾಲ್ಕು ಸೂಜಿಗಳಲ್ಲಿ ಸೇರಿಸಿ ಐದು ಗುಂಡು ಮೊಗ್ಗುಗಳನ್ನು ಹೆಣೆದು ನಂತರ ಒಂದು ವಿಳೆದೆಲೆಯನ್ನ ಹಾಕಿ ನಂತರ ಮೊಗ್ಗುಗಳನ್ನು ಹೆಣೆಯುತ್ತಾರೆ. ಹೀಗೆ ಐದು ರೀತಿಯಾಗಿ ಒಂದರ ಮೇಲೆ ಒಂದು ಹೆಣೆದು ನಂತರ ಆ ತೊಟ್ಟಿಲಲ್ಲಿ ಸತ್ತ ವ್ಯಕ್ತಿಯ ಫೋಟೋ ಇಟ್ಟು ಅವರಿಗೆ ತಂದ ಬಟ್ಟೆಯನ್ನು ಹೂವಿನ ತೊಟ್ಟಿಲಿನ ಮುಂದೆ ಇಟ್ಟು ಮಲ್ಲಿಗೆ ಮೊಗ್ಗಿನಿಂದ ಹೊಲೆದ ನಾಲ್ಕು ದಾಳಗಳನ್ನು ತೊಟ್ಟಿಲಿನ ಮುಂದೆ ಕಟ್ಟುತ್ತಾರೆ. ಅದರ ಕೆಳಗೆ ಕಂಚಿನ ಚಂಬೂ ಇಟ್ಟು ಅದಕ್ಕೆ ಅರಿಸಿನ ಇಟ್ಟು ಚಂಬಿನಲ್ಲಿ ನೀರು ತುಂಬಿ ಅದನ್ನು ಕೆಳಗೆ ಇಟ್ಟು ಒಂದು ಇಂಚಿನ ಮೇಲೆ ಮಲ್ಲಿಗೆ ಮೊಗ್ಗಿನ ದಾಳಗಳನ್ನು ನೇತು ಹಾಕುತ್ತಾರೆ. ಇದು ಕಂಚಿನ ಚಂಬಿನ ಮೇಲೆ ನೇತಾಡುತ್ತಿರಬೇಕು. ನಂತರ ಕುಲಬಾಂಧವರು ಎಲ್ಲಾ ಬಂದು ತೆಂಗಿನಕಾಯಿ ಒಡೆದು ಪೂಜೆ ಮಾಡಿ ಹೋಗುವರು. ಇದು ತಿಂಗಳ ತಿಥಿಯಲ್ಲಿ ಮಾಡುವ ಕಾರ್ಯವಾಗಿದೆ. ಹನ್ನೊಂದು ತಿಂಗಳ ತಿಥಿಯಲ್ಲಿ ರಾತ್ರಿ ಸಿಹಿತಿಂಡಿ ತಿನಿಸುಗಳನ್ನು ತಿಂದು ರಾತ್ರಿ ಇಡೀ ಭಜನೆಯ ಹಾಡುತ್ತಾರೆ. ಆದರೆ ತಿಂಗಳ ತಿಥಿಯಲ್ಲಿ ಬೆಳಿಗ್ಗೆ ಪೂಜೆ ಮುಗಿದ ಮೇಲೆ ಅಂದು ರಾತ್ರಿ ಮಾಂಸ ಅಡುಗೆ ತಯಾರಿಸುತ್ತಾರೆ. ಸಂಜೆ ವೇಳೆಗೆ ಸೂತಕ ಮುಗಿದಿರುತ್ತದೆ. ರಾತ್ರಿ

ಮಾಂಸದ ಊಟವನ್ನು ಮಾಡಿ ಜೊತೆಗೆ ಮದ್ಯಪಾನವನ್ನು ಸೇವಿಸಿ ಕುಣಿದು ಕುಪ್ಪಳಿಸುವರು ಇವರು ಮದ್ಯಪಾನ ಸೇವಿಸುವಾಗ ಹೀಗೆ ಹಾಡಿಕೊಂಡು ಕುಣಿಯುವರು.

ಹೀಗೆ ಸ್ತ್ರೀ ಮತ್ತು ಪುರುಷರು ಇಬ್ಬರು ಕುಡಿದು ಕುಣಿದು ಕುಪ್ಪಳಿಸುತ್ತಾರೆ. ಆ ದಿನ ರಾತ್ರಿ ಇಡಿ ಭಜನೆ ಮತ್ತು ಕುಣಿತ ಈ ಸಮುದಾಯಗಳ ಆಚರಣೆಯಾಗಿರುತ್ತದೆ. ಎಲ್ಲರಿಗೂ ಪೂಜೆ ಮಾಡುವಂತೆ ಕೂಗಿ ಹೇಳುತ್ತಾರೆ. ಹೀಗೆ ತಿಥಿಯನ್ನು ಮುಗಿಸಿ ನಂತರ ವರ್ಷದ ತಿಥಿಯ ತನಕ ಸತ್ತ ವ್ಯಕ್ತಿಗೆ ಕಾರ್ಯ ಇರುವುದಿಲ್ಲ, ವರ್ಷದ ತಿಥಿಯಲ್ಲಿ ಮಾಂಸದ ಅಡುಗೆ ಇರುತ್ತದೆ. ಹೆಚ್ಚಿನ ವಿಶೇಷತೆ ಇಲ್ಲದೆ ಇದ್ದರು. ಸಂಪ್ರದಾಯಿಕ ಪೂಜೆಯನ್ನು ಮಾಡಿ ಮಾಂಸವನ್ನು ಮಾಡುತ್ತಾರೆ. ಒಂದು ವೇಳೆ ಸತ್ತ ವ್ಯಕ್ತಿಯ ಮೇಲೆ ಹೆಚ್ಚು ಪ್ರೀತಿ ಇದ್ದು ಆ ವ್ಯಕ್ತಿ ಘನತೆ ಗೌರವದಿಂದ ಇಡೀ ಕುಟುಂಬದ ಮೇಲೆ ಬೆಲೆ ಇದ್ದು ಆ ವ್ಯಕ್ತಿಗೆ ಐದು ವರ್ಷ ಹತ್ತು ವರ್ಷದ ತಿಥಿಯನ್ನ ಆರ್ಥಿಕತೆಗೆ ತಕ್ಕಂತೆ ಮಾಡುತ್ತಾರೆ.

**೫.೪. ಆರ್ಥಿಕ ವ್ಯವಸ್ಥೆ**

ದಕ್ಕಲ ಸಮುದಾಯ ಸಾಮಾಜಿಕ ಧಾರ್ಮಿಕ ಸಾಂಸ್ಕೃತಿಕವಾಗಿ ಮುಂದುವರಿದರು ಆರ್ಥಿಕವಾಗಿ ತುಂಬ ಹಿಂದೆ ಉಳಿದಿದ್ದಾರೆ. ವಲಸೆ ಹೋಗುವ ಈ ಸಮುದಾಯಗಳು ಸತ್ತ ವ್ಯಕ್ತಿಯ ಕಾರ್ಯಕ್ಕೆ ಆರ್ಥಿಕತೆ ತುಂಬ ಅವಶ್ಯಕವಾಗಿದೆ. ಒಂದು ತುತ್ತಿನ ಊಟಕ್ಕೂ ಪರದಾಡುವ ಈ ಸಮುದಾಯಗಳು ತಿಥಿ ಕಾರ್ಯಗಳನ್ನು ವಿಜೃಂಭಣೆಯಿಂದ ಮಾಡುವುದಕ್ಕೆ ಎಲ್ಲಿಂದ ಸಾಧ್ಯವಾಗುತ್ತದೆ. ಆದರೂ ತಮ್ಮ ಸಂಪ್ರದಾಯವನ್ನು ಬಿಟ್ಟು ಕೊಡುವುದಕ್ಕೆ ವಿಧಿ ಇಲ್ಲದೆ ತಮ್ಮ ಕುಲಬಂಧುಗಳಾದ ಮಾದಿಗರ ಬಳಿ ಸಹಾಯ ಯಾಚಿಸುತ್ತಾರೆ. ಹಾಗೂ ಅವರು ಕೊಟ್ಟ ಭಿಕ್ಷೆ ಹಣದ ಜೊತೆಗೆ ತಾವು ಸಂಪಾದಿಸಿದ ಹಣದಲ್ಲಿ ತಿಥಿಯನ್ನ ಮಾಡುತ್ತಾರೆ. ತಮ್ಮ ಆರ್ಥಿಕತೆಗೆ ತಕ್ಕಂತೆ ಹಣಕಾಸನ್ನು ಖರ್ಚುಮಾಡುತ್ತಾರೆ. ಹೆಚ್ಚಾಗಿ ಮಾದಿಗರು ಸಹಾಯ ಹಸ್ತರಾಗಿರುತ್ತಾರೆ. ತಮ್ಮ ದಕ್ಕಲ ಮಕ್ಕಳಿಗೆ ಸಹಾಯ ಮಾಡಿದರೆ ನಮಗೆ ಒಳ್ಳೆಯದಾಗುತ್ತದೆ. ಹಾಗೂ ಅವರ ಋಣ ತೀರಿಸಿದಂತಾಗುತ್ತದೆ. ಒಂದು ವೇಳೆ ಕೊಡದೆ ಇದ್ದರೆ ದಕ್ಕಲ ಮಕ್ಕಳ ಶಾಪಕ್ಕೆ ಗುರಿಯಾಗಬೇಕಾಗುತ್ತದೆ ಎಂಬ ಕಾರಣದಿಂದ ತಮ್ಮ ದಕ್ಕಲ ಮಕ್ಕಳಿಗೆ ಭಿಕ್ಷೆ ನೀಡುತ್ತಾರೆ. ಹೀಗೆ ಭಿಕ್ಷೆ ಬೇಡಿ ತಂದಂತಹ ಹಣದಿಂದ ಮತ್ತು ತಾವು ಸಂಪಾದಿಸಿದ ಹಣದಿಂದ ಸೂತಕ ಕಾರ್ಯಗಳನ್ನು ಮಾಡುತ್ತಾರೆ.

**ಸಮಾಧಿಗಳು**

ಸಮುದಾಯಗಳಲ್ಲಿ ಸತ್ತ ವ್ಯಕ್ತಿಯನ್ನು ಶವಸಂಸ್ಕಾರ ಮಾಡಿದ ನಂತರ ಸಮಾಧಿಗೆ ಕಟ್ಟಡ ನಿರ್ಮಿಸಿದರೆ ಅದು ಕಾಲ ಕ್ರಮೇಣ ಸಮಾಧಿ ಬಿರುಕು ಬಿದ್ದು ಹಾಳುಗುತ್ತದೆ, ಸಮಾಧಿ

ಬಿರುಕು ಬಿದ್ದು ಮುರಿದರೆ ಅವರ ಕುಟುಂಬ ಮತ್ತು ಅವರ ವಂಶ ಬೆಳೆಯುವುದಿಲ್ಲ ಎಂಬ ನಂಬಿಕೆ ಸಮುದಾಯಗಳದ್ದಾಗಿದೆ.

ದಕ್ಕಲ ಸಮುದಾಯಗಳ ಸಮಾಧಿಗಳ ಸರ್ಕಾರಿ ಜಮೀನಿನಲ್ಲಿ ಅಥವಾ ಕಾಲುವೆಗಳಲ್ಲಿ ಊಳುತ್ತಾರೆ, ಇವರಿಗೆ ಆದಂತಹ ಪ್ರತ್ಯೇಕ ಸ್ಥಳವಿಲ್ಲ, ಹಾಗಾಗಿ ಸ್ವಂತ ಜಮೀನು ಇರುವ ಕುಟುಂಬಗಳು ತಮ್ಮ ಜಮೀನಿನಲ್ಲಿ ಹಾಕಿಕೊಂಡರೆ ಕೆಲವರು ಬೇರೆ ಸ್ಥಳಗಳಲ್ಲಿ ಹಾಕಿಕೊಳ್ಳುತ್ತಾರೆ. ಮಾದಿಗರ ಮತ್ತು ದಕ್ಕಲ ಸಮಾಧಿಗಳು ಒಂದೇ ಕಡೆ ಇರುವುದಿಲ್ಲ ಈ ಸಮುದಾಯಗಳಲ್ಲಿ ಇತ್ತೀಚೆಗೆ ಸಮಾಧಿಗಳನ್ನು ಕಟ್ಟುತ್ತಿದ್ದು, ಇದರ ಪೂರ್ತಿ ಖರ್ಚು ವೆಚ್ಚಗಳು ಸತ್ತ ವ್ಯಕ್ತಿಯ ಕುಟುಂಬದವರದ್ದೇ ಆಗಿರುತ್ತದೆ. ಒಂದು ವೇಳೆ ಸಮಾದಿ ಕಟ್ಟಬೇಕಾದರೆ ಸತ್ತ ವ್ಯಕ್ತಿ ತುಂಬ ಮುಖ್ಯವಾಗಿದ್ದರೆ ಮಾತ್ರ ಅವರಿಗೆ ಕುಟುಂಬದವರು ಚರ್ಚಿಸಿ ಸಮಾದಿಯನ್ನು ಕಟ್ಟುತ್ತಾರೆ.

**ವಿಧವೆಯ ಸಂಪ್ರದಾಯಗಳು**

ದಕ್ಕಲರಲ್ಲಿ ಗಂಡ ಸತ್ತರೆ ಅವಳಿಗೆ ಮುಂಡೆ, ವಿಧವೆ, ಅಮಂಗಳೆ ಎಂದು ಕರೆಯುತ್ತಾರೆ. ತನ್ನ ಗಂಡ ಸತ್ತಾಗ ಅವಳನ್ನು ತಲೆಯ ಭಾಗದಲ್ಲಿ ಕೂರಿಸಿ ಅವಳಿಗೆ ಅರಿಶಿನ ಕುಂಕುಮ ಇಟ್ಟು ಕೈತುಂಬ ಬಳೆಗಳನ್ನು ಹಾಕಿ ತಲೆ ತುಂಬ ಹೂವನ್ನು ಇಟ್ಟು ಗಂಡನ ಶವದ ಪಕ್ಕದಲ್ಲಿ ಕೂರಿಸಿರುತ್ತಾರೆ. ನಂತರ ಶವ ಸಂಸ್ಕಾರದ ಸಂದರ್ಭದಲ್ಲಿ ಎರಡು ಕೈಯಲ್ಲಿ ಎರಡು ಎರಡು ಬಳೆಗಳನ್ನು ಒಡೆಯುತ್ತಾರೆ. ಮೂರು ದಿನದವರೆಗೆ ಇವಳಿಗೆ ಪ್ರತ್ಯೇಕವಾಗಿ ತಟ್ಟೆ, ಲೋಟ, ಕೊಟ್ಟು ಪ್ರತ್ಯೇಕವಾಗಿ ಇರಿಸುತ್ತಾರೆ. ಮೂರು ದಿನದ ಕೂಳು ದಿನದಲ್ಲಿ ವಿಧವೆಗೆ ಕೈತುಂಬ ಬಳೆ ತೊಡಿಸಿ ತಲೆ ತುಂಬ ಹೂವನ್ನು ಇಟ್ಟು ಅರಿಶಿನ ಕುಂಕುಮ ಇಟ್ಟು ಸಮಾಧಿ ಬಳಿ ಎರಡು ಕೈಯಲ್ಲಿ ಇರುವ ಬಳೆಗಳನ್ನು ಒಡೆಯುತ್ತಾರೆ. ನಂತರ ತಲೆಯಲ್ಲಿ ಇರುವ ಹೂವನ್ನು ತೆಗೆದು ಸ್ನಾನ ಮಾಡಿಸಿ ತವರು ಮನೆಯಿಂದ ತಂದ ಬಿಳಿ ಸೀರೆಯನ್ನು ಉಡಿಸಿ ಶಾಸ್ತ್ರಗಳನ್ನು ಮಾಡಿ ಕಳಿಸಿಕೊಡುತ್ತಾರೆ. ಇವರು ಒಂದು ವರ್ಷ ಯಾರ ಮನೆಯ ಶುಭ ಕಾರ್ಯಗಳಿಗೆ ಹೋಗುವ ಆಗಿಲ್ಲ. ಹಾಗೇ ಇವರು ಶುಭಕಾರ್ಯಗಳಿಗೆ ಹೋಗುವಾಗ ಎದುರು ಬರುವ ಹಾಗಿಲ್ಲ, ಇದು ಈ ಸಮುದಾಯಗಳ ಕಟ್ಟುನಿಟ್ಟಿನ ಸಂಪ್ರದಾಯವಾಗಿದೆ.

**೫.೫. ಧಾರ್ಮಿಕ ಆಚರಣೆಗಳು**

ಅನಾದಿ ಕಾಲದಿಂದಲೂ ಹಾಸುಹೊಕ್ಕಾಗಿರುವ ಧಾರ್ಮಿಕ ಆಚರಣೆಗಳು ಅವರವರ ಬದುಕಿನ ಒಂದು ಭಾಗವಾಗಿದೆ. ಆದಿ ಮಾನವ ನಿಸರ್ಗದೊಂದಿಗೆ ಸಂಘರ್ಷಕ್ಕೆ ಒಳಪಟ್ಟಾಗ ಮಾಂತ್ರಿಕ, ಧಾರ್ಮಿಕ, ಆಚರಣೆಗಳು ಹುಟ್ಟುಕೊಂಡವು ಎಂದರೆ ತಪ್ಪಾಗಲಾರದು ಹೀಗೆ ಹುಟ್ಟಿಕೊಂಡಿದ್ದ ಧಾರ್ಮಿಕ ಆಚರಣೆಗಳು ಮಾನವ ಹುಟ್ಟಿದಾಗಿನಿಂದ ಪ್ರಾರಂಭವಾಗಿ ಅವನ ಜೀವನ ಕೊನೆಗಳಿಗೆಯಲ್ಲಿ ಸತ್ತ ನಂತರವು ಸಂಪ್ರದಾಯಗಳ ಮುಖೇನ ಮುಕ್ತಾಯವಾಗುತ್ತದೆ. ಮಾನವನನ್ನು ಬೆಂಬಿಡದ ಆಚರಣೆಗಳಾಗಿವೆ.

ಧಾರ್ಮಿಕ ಆಚರಣೆಗಳು ಆಯಾ ಪ್ರದೇಶಕ್ಕೆ ತಕ್ಕಂತೆ ರೂಪಿಸಿಕೊಂಡಿರುತ್ತಾರೆ. "ಈ ಬಿ ಟೇಯಲರ್ ಹೇಳುವ "ಬಿಲೀಫ್ ಇನ್‌ಸ್ಪೆಂಟ್ಯೂಯಲ್ ಬೀಯಿಂಗ್" ಅಂದರೆ ಆದ್ಯಾತ್ಮ ಜೀವಿಗಳ ನಂತರ ಮತ್ತು "ರಾಡನ್" ಅವರು ಹೇಳುವ ಭಯದ ಸಾಮಾಜಿಕ ವಿಧಿಗಳು ಅವರ ಶ್ರದ್ಧೆ ಮತ್ತು ಆಚರಣೆಗಳು ಎರಡು ಸೂಕ್ಷ್ಮ ವಿಚಾರಗಳ ಕಡೆಗೆ ಬೆರಳು ಮಾಡುತ್ತವೆ. ಒಂದು ಮಾನವ ಅಥವಾ ಮಾನವಾತೀತ ಸ್ವರೂಪದ ಮೂರ್ತ ಅದ್ಭುತ ದಿವ್ಯಶಕ್ತಿಯ ಪ್ರಭಾವ ಇನ್ನೊಂದು ಸಾಮಾಜಿಕ ನಡುವಳಿಕೆಯ ಮೇಲೆ ಹಿಡಿತ ಸಾಧಿಸುವ ವಿಧಿ, ನಿಷೇಧ, ಕಟ್ಟುಪಾಡುಗಳು ಭಯ ಮತ್ತು ವಿಧಿಗಳನ್ನು ಮೀರಿದರೆ ಉಂಟಾಗಬಹುದಾದ ಕೇಡುಗಳು ನಿವಾರಣೆಗೆ ಕೈಗೊಳ್ಳುವ ಆಚರಣೆಗಳು. ಹೀಗೆ ತಮ್ಮ ಪೂರ್ವಿಕರು ಇಟ್ಟಿರುವ ಸಂಪ್ರದಾಯಗಳನ್ನು ಪಾಲಿಸಿಕೊಂಡು ಬರುತ್ತಿದ್ದಾರೆ. ಹಾಗೆಯೇ ದಕ್ಕಲ ಸಮುದಾಯಗಳ ಜೀವನದ ದೈವಸಂಬಂಧಿ ಆಚರಣೆಗಳು ಜೀವನಾವರ್ತದಲ್ಲಿ ಹಲವಾರು ಆಚರಣೆಗಳನ್ನು ಗುರ್ತಿಸಬಹುದು.

ಕೋಲಾರ ಮತ್ತು ಚಿಕ್ಕಬಳ್ಳಾಪುರ ಕ್ಷೇತ್ರಗಳಿಗೆ ಸಂಬಂಧಿಸಿದ ದಕ್ಕಲ ಸಮುದಾಯಗಳು ಪ್ರತ್ಯೇಕವಾದ ಹಬ್ಬಗಳು ಹೆಚ್ಚಾಗಿ ಆಚರಿಸದೆ ಇರುವುದು ಕಂಡುಬರುತ್ತದೆ. ಈ ಪ್ರದೇಶಗಳ ದಕ್ಕಲರು ಹಿರಿಯರ ಹಬ್ಬ ಮಕ್ಕಳಿಗೆ ಕೂದಲುಕೊಡುವ ಶಾಸ್ತ್ರ ಗಂಗಜಾತ್ರೆ ಎಲ್ಲಾ ಸಮುದಾಯಗಳಲ್ಲಿ ಆಚರಿಸುವ ಹಾಗೆ ಗಣೇಶ ಚತುರ್ಥಿ, ದಸರಾ, ದೀಪಾವಳಿ, ಸಂಕ್ರಾಂತಿ, ಯುಗಾದಿ, ಶ್ರೀರಾಮನವಮಿ ಹಬ್ಬಗಳನ್ನು ಆಚರಿಸುತ್ತಾರೆ. ಆದರೆ ಜಾನಕಲ್ ರಾಜಣ್ಣನವರು ಅಧ್ಯಯನ ಮಾಡಿದ ಪ್ರದೇಶಗಳಾದ ಚಿತ್ರದುರ್ಗ, ಬಳ್ಳಾರಿ, ದಾವಣಗೆರೆ, ತುಮಕೂರು ಪ್ರದೇಶಗಳಿಗೆ ಸಂಬಂಧಿಸಿದ ದಕ್ಕಲ ಸಮುದಾಯಗಳು ಕೇರಿಯ ಹಬ್ಬ, ಮನೆಯ ಹಬ್ಬ, ಕರಿ ಹಬ್ಬ, ಬಸವ ಜಯಂತಿ, ಹಬ್ಬಗಳು ಬಲಿ ಆಚರಣೆಗಳು ಮತ್ತು ನೈವೇಧ್ಯಗಳ ಬಗ್ಗೆ ತಿಳಿಸಿರುವುದು ಕಂಡುಬರುತ್ತದೆ. ಆದರೆ ಈ ಪ್ರದೇಶಗಳಲ್ಲಿ ಕೆಲವು ಆಚರಣೆಗಳು ಬಿಟ್ಟರೆ ಬೇರೆ ಯಾವುದೇ ಆಚರಣೇ ಈ ಸಮುದಾಯಗಳು ಮಾಡುವುದಿಲ್ಲ ಇವರನ್ನು ಕೇಳಿದಾಗ ಅದರ ಬಗ್ಗೆ ಆಸಕ್ತಿಯು ಇಲ್ಲ ಹಾಗೂ ಮಾಡುವುದಕ್ಕೆ ಸಮಯವು ಇಲ್ಲ ನಮ್ಮ ಆರ್ಥಿಕತೆಗೆ ತಕ್ಕಂತೆ ಆಚರಣೆಗಳು ಮಾಡುತ್ತೇವೆ ಎಂದು ಹೇಳುತ್ತಾರೆ.

### ಗಂಗ ಜಾತ್ರೆ

ಈ ಸಮುದಾಯಗಳು ವರ್ಷದಲ್ಲಿ ಒಂದು ಸಾರಿ ಗಂಗ ಜಾತ್ರೆಯನ್ನು ಮಾಡುತ್ತಿದ್ದರು ದಕ್ಕಲ ಕೇರಿಯ ಪಕ್ಕದಲ್ಲಿ ಚಿಕ್ಕದಾಗಿ ಗುಡಿಸಲು ಕಟ್ಟಿ ಅದಕ್ಕೆ ತೆಂಗಿನ ಗರಿಗಳ ಹಾಗೂ ಹೊಂಗೆ ಸೊಪ್ಪನ್ನು ಹಾಕಿ ಗುಡಿಸಲು ತಯಾರಿಸಿ ಅದಕ್ಕೆ ಮಾವಿನ ತೋರಣಗಳನ್ನು ಕಟ್ಟಿ ಗುಡಿಸಲು ಒಳಗೆ ಸಗಣಿಯಿಂದ ಸಾರಿಸಿ ರಂಗೋಲಿಯನ್ನು ಬಿಡಿಸಿ ಹೂವಿನಿಂದ ಅಲಂಕರಿಸಿ ಗಂಗ ಮಾತೆಯನ್ನು ಇಟ್ಟು ದೇವರಿಗೆ ನೈವೇದ್ಯವನ್ನು ಮಾಡಿ ಶ್ರದ್ಧಾ ಭಕ್ತಿಯಿಂದ ಕುಂಕುಮ, ಅರಿಶಿಣ ಇಟ್ಟು ವಿಭೂತಿಯನ್ನು ಹಚ್ಚಿ ಹಣ್ಣು-ಹಂಪಲು ಇಟ್ಟು ತೆಂಗಿನಕಾಯಿ ಕರ್ಪೂರ

ಊದುಬತ್ತಿಯನ್ನು ಹಚ್ಚಿ ಭಕ್ತಿಯಿಂದ ಪೂಜಿಸುತ್ತಾರೆ. ಅಂದು ಬಂಧು ಬಳಗದವರು ಎಲ್ಲಾ ಉಪವಾಸವಿರುತ್ತಾರೆ. ದೇವರಿಗೆ ನೈವೇದ್ಯ ಮಾಡಿ, ಎಡೆ ಇಟ್ಟು ಬಲಿ ಕೊಡುವ ಪ್ರಾಣಿಯನ್ನು ತೊಳೆದು, ಅದಕ್ಕೆ ಪೂಜೆಯನ್ನು ಮಾಡಿ, ಕೋಣವನ್ನು ಗಂಗ ಮಾತೆಯ ಎದುರು ಬಲಿ ಕೊಡುವ ಕಂಬಕ್ಕೆ ಕೋಣ ತಲೆ ಇಟ್ಟು, ಪೂಜೆ ಮುಗಿದ ಮೇಲೆ ಕೋಣವನ್ನು ಬಲಿ ಕೊಡುತ್ತಾರೆ. ನಂತರ ಕುರಿ ಕೋಳಿಗಳನ್ನು ಬಲಿಕೊಟ್ಟು ಪೂಜೆ ಮುಗಿಸುವರು. ಬಲಿ ಕೊಟ್ಟ ಪ್ರಾಣಿಗಳ ಮಾಂಸವನ್ನು ಭಾಗ ಮಾಡಿ ಎಲ್ಲರೂ ಹಂಚಿಕೊಂಡು ಬಂಧುಬಳಗಕ್ಕೆಲ್ಲಾ ಮಾಂಸದ ಕೂಟವೇ ಏರ್ಪಾಡಾಗಿರುತ್ತದೆ. ಜೊತೆಗೆ ಮದ್ಯಪಾನ ಮಾಡಿ ಕುಣಿಯುವರು. ಈ ಗಂಗ ಜಾತ್ರೆ ತುಂಬ ಅದ್ದೂರಿಯಾಗಿ ಮಾಡುತ್ತಿದ್ದರು. ಆದರೆ ಈಗ ಅದರ ಬಗ್ಗೆ ಯಾರಿಗೂ ಆಸಕ್ತಿ ಇಲ್ಲ ನಮ್ಮ ಸಮುದಾಯಗಳು ತುಂಬ ದೂರ ಇರುವುದರಿಂದ ಕರೆದರೂ ಬರುವುದಿಲ್ಲ. ಹಾಗಾಗಿ ಗಂಗ ಜಾತ್ರೆಯನ್ನು ಬಿಟ್ಟಿದ್ದೇವೆ. ಆದರೆ ಕೆಲವು ವರ್ಷಗಳ ಹಿಂದೆ ಆಚರಿಸುತ್ತಿದ್ದೆವು ಇದು ನಮ್ಮ ಕೇರಿಯ ಹಬ್ಬವಾಗಿರುತ್ತಿತ್ತು ಎಂದು ಹೇಳುತ್ತಾರೆ.

**ಬಲಿ ಆಚರಣೆ**

ಈ ಸಮುದಾಯದಲ್ಲಿ ಮನೆ ದೇವರ ಹಬ್ಬದಲ್ಲಿ ಪ್ರತಿ ಕುಟುಂಬಗಳು ತಮ್ಮ ಕುಲದೇವತೆ ಹಾಗೂ ಮನೆ ದೇವರುಗಳಾದ ಮಾರಮ್ಮ, ಯಲ್ಲಮ್ಮ, ಚೌಡಮ್ಮ, ದುರ್ಗಮ್ಮ, ಹಾಗೂ ಮುನೇಶ್ವರನನ್ನು ಹೆಚ್ಚು ಪೂಜಿಸುತ್ತಿದ್ದರು. ಮುನೇಶ್ವರ ಈ ಸಮುದಾಯಗಳ ಮನೆ ದೇವರು ತಮ್ಮ ಮನೆ ದೇವರಿಗೆ ಹೆಚ್ಚು ಬಲಿ ಕೊಡುತ್ತಾರೆ. ಈ ಸಮುದಾಯಗಳಲ್ಲಿ ಆಂಜನೇಯನಿಗೆ ಬಿಟ್ಟು ಉಳಿದ ದೇವರುಗಳಿಗೆ ಬಲಿ ಕೊಡುವ ಸಂಪ್ರದಾಯವಿದೆ. ಹೆಚ್ಚಾಗಿ ಗಂಗಮ್ಮ, ಚೌಡಮ್ಮ, ಮುನೇಶ್ವರ ದೇವರುಗಳಿಗೆ ಹೆಚ್ಚು ಬಲಿ ಕೊಡುತ್ತಾರೆ. ಗಂಗ ಜಾತ್ರೆಯಲ್ಲಿ ಗಂಗಮ್ಮ ಹೆಚ್ಚು ಅಚ್ಚುಮೆಚ್ಚು ಅವಳಿಗೆ ಕೋಣ ಬಲಿಕೊಟ್ಟರೆ ಮುನೇಶ್ವರನಿಗೆ ಕುರಿ, ಮೇಕೆ, ಕೋಳಿಗಳನ್ನು ಬಲಿ ಕೊಡುತ್ತಾರೆ. ಈ ದೇವತೆಗಳಿಗೆ ಪ್ರತ್ಯೇಕ ಗುಡಿ ಅಥವಾ ದೇವಸ್ಥಾನಗಳು ಇರುವುದಿಲ್ಲ. ನಂತರ ಇವರದೆ ಆದಂತಹ ಸ್ವಂತ ದೇವಸ್ಥಾನ ಸಹ ಇರುವುದಿಲ್ಲ. ಯಾಕೆಂದರೆ ಅರೆ ಅಲೆಮಾರಿಗಳಾಗಿದ್ದು, ಎಲ್ಲಿ ವಾಸಿಸುತ್ತಾರೋ ಅಲ್ಲೇ ಚಿಕ್ಕದಾದ ಸೊಪ್ಪು ಸೊದೆಯಿಂದ ಗುಡಿಯನ್ನು ತಯಾರಿಸಿ ಪೂಜೆ ಮಾಡುತ್ತಾರೆ. ಆ ಗುಡಿಯಲ್ಲಿ ಚಿಕ್ಕದಾದ ಕಲ್ಲುಗಳನ್ನು ಇಟ್ಟು ಅದಕ್ಕೆ ಪೂಜೆ ಮಾಡಿ ಬಲಿಕೊಟ್ಟು ನಂತರ ಅದನ್ನು ಕಿತ್ತು ಎಸೆಯುತ್ತಾರೆ. ಹಾಗಾಗಿ ಸ್ವಂತದಾದ ದೇವಸ್ಥಾನಗಳು ಇಲ್ಲ ಹಾಗಾಗಿ ಗುಡಿಯನ್ನು ತಾವೇ ತಯಾರಿಸಿಕೊಂಡು ಪೂಜಿಸುತ್ತಾರೆ. ಅಷ್ಟೇ ಅಲ್ಲದೆ ದೇವತೆಗಳ ಮುಖ ಮುದ್ರಿಕೆಗಳನ್ನು ಇಟ್ಟುಕೊಳ್ಳುವುದಕ್ಕೆ ಮತ್ತೆ ಪೂಜಿಸುವುದಕ್ಕೆ ಚಿಕ್ಕಪೆಟ್ಟಿಗೆಗಳಾದ ಬಿದಿರು ಪೆಟ್ಟಿಗೆ ಮರದ ಹಲಗೆಯಿಂದ ತಯಾರಿಸಿದ ಪೆಟ್ಟಿಗೆಯನ್ನು ಇಟ್ಟುಕೊಂಡು ವಲಸೆ ಹೋಗುವಾಗ ಹೊತ್ತುಕೊಂಡು ಹೋಗುತ್ತಾರೆ. ಹೀಗಾಗಿ ಈ ಸಮುದಾಯಗಳಿಗೆ ನಿರ್ದಿಷ್ಟವಾದ ದೇವಸ್ಥಾನವಿಲ್ಲ. ಈ ಪೆಟ್ಟಿಗೆಯ ದೇವರೆ ನಮ್ಮ ಬೆಂಗಾವಲು ಎಂದು ನಂಬಿದ್ದಾರೆ. ದಕ್ಕಲರು ಜಾತ್ರೆ ಹಬ್ಬ

ಹರಿದಿನಗಳಲ್ಲಿ ಅಷ್ಟೆ ಬಲಿಕೊಡುವುದು ಒಂದು ವೇಳೆ ಮನೆಯಲ್ಲಿ ಯಾರಿಗಾದರೂ ತೊಂದರೆಯಾದರೆ ಖಾಯಿಲೆ ಬಂದರೆ ಮನೆಗೆ ತೊಂದರೆಯಾದರೆ ದೇವರಿಗೆ ಹರಕೆಯನ್ನು ಮಾಡಿಕೊಳ್ಳುತ್ತಾರೆ. ಕುರಿ ಅಥವಾ ಕೋಳಿಯನ್ನು ಬಲಿ ಕೊಡುತ್ತೇವೆ ಎಂದು ಹೇಳಿ ತಮ್ಮ ಬಯಕೆಗಳು ಈಡೇರಿದ ಮೇಲೆ ಶ್ರದ್ಧಾ ಭಕ್ತಿಯಿಂದ ಪ್ರಾಣಿಯನ್ನು ಬಲಿಕೊಟ್ಟು ಪೂಜೆ ಮಾಡುತ್ತಾರೆ. ನಂತರ ಯಾವುದೇ ಅಂಟುಗಳು ಮನೆಯೊಳಗೆ ಪ್ರವೇಶಿಸಬಾರದು ಎಂದು ಹಸುವಿನ ಗಂಜಲ ಬೇವಿನ ಸೊಪ್ಪು ಇಡುತ್ತಾರೆ. ಈ ಸಮುದಾಯಗಳಲ್ಲಿ ಹೆಚ್ಚು ಹರಕೆ ಮಾಡಿಕೊಳ್ಳುವುದು ಮುನೇಶ್ವರನಿಗೆ ಹರಕೆ ಹೊತ್ತಿರುವ ಕುರಿಯನ್ನು ಚೆನ್ನಾಗಿ ಮೇಯಿಸಿ ಅದಕ್ಕೆ ಯಾವುದೇ ರೀತಿಯಾಗಿ ತೊಂದರೆಬಾರದ ಹಾಗೆ ನೋಡಿಕೊಳ್ಳುತ್ತಾರೆ. ಅವರ ಸಮಸ್ಯೆ ಬಗೆಹರಿದ ನಂತರ ಒಂದು ವರ್ಷದಲ್ಲಿ ಆರ್ಥಿಕ ವ್ಯವಸ್ಥೆಯನ್ನು ನೋಡಿಕೊಂಡು ಹರಕೆಯನ್ನು ಸಲ್ಲಿಸುತ್ತಾರೆ. ಇಂತಹ ಸಂದರ್ಭದಲ್ಲಿ ಬಂಧುಬಳಗದವರಿಗೆಲ್ಲಾ ಹೇಳಿ ಒಂದು ಹಬ್ಬವಾಗಿ ಆಚರಿಸುತ್ತಾರೆ.

**ಕೇರಿಯ ಹಬ್ಬ**

ಈ ಹಬ್ಬವನ್ನು ಒಂದು ವಿಧದಲ್ಲಿ ಬಲಿದಾನದ ಹಬ್ಬದಂತೆ ಇದ್ದು ತಮ್ಮ ಕುಲಬಂಧುಗಳನ್ನು ಆಹ್ವಾನಿಸಿ ಈ ಹಬ್ಬವನ್ನು ಆಚರಿಸುತ್ತಾರೆ. ಇದರ ಬಗ್ಗೆ ಜಾನಕಲ್ ರಾಜಣ್ಣ ನವರ ದಕ್ಕಲಿಗ ಲೇಖನದಲ್ಲಿ ೪೯ರ ಪುಟದಲ್ಲಿ ಇರುವ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಈ ಸಮುದಾಯದವರು ತಮ್ಮ ಮನೆಯ ಉದ್ಧಾರಕ್ಕಾಗಿ ಮತ್ತು ತಮ್ಮ ಸಾಕು ಪ್ರಾಣಿಗಳ ರಕ್ಷಣೆಗಾಗಿ ಹಾಗೂ ಚಿಕ್ಕಪುಟ್ಟ ಮಕ್ಕಳಿಗೆ ತಗಲುವ ಮಾರಿ, ಕಾಲರ, ಪ್ಲೇಗು, ಅಮ್ಮ, ಸಿಡುಬು, ವಾಂತಿ, ಭೇದಿ ಇತ್ಯಾದಿ ರೋಗ–ರುಜಿನಗಳು ಬರಬಾರದೆಂಬ ಉದ್ದೇಶದಿಂದ ತಮ್ಮ ಮನೆ ದೇವರ ಹಬ್ಬಗಳನ್ನು ಆಚರಿಸುವರು. ಇದನ್ನು ಆಚರಿಸುವಾಗ ತಮ್ಮ ಸಂಬಂಧಿಕರೆಲ್ಲರನ್ನು ಆಹ್ವಾನಿಸಿ ಪ್ರತಿ ವರ್ಷ ಸೆಪ್ಟೆಂಬರ್ ತಿಂಗಳಿನಲ್ಲಿ ವಿಶೇಷವಾಗಿ ಮಂಗಳವಾರ ದಿನದಂದು ಹಬ್ಬಗಳನ್ನು ಆಚರಿಸುವರು. ಈ ಹಬ್ಬವು ಎಲ್ಲಾ ಭಾಗಗಳಲ್ಲಿಯೂ ಒಂದೇ ತೆರನಾಗಿರುತ್ತದೆ. ಈ ಹಬ್ಬಗಳು ತುಂಬಾ ಪ್ರಮುಖವಾಗಿದ್ದು, ಈ ಹಬ್ಬಕ್ಕೆ ಕುರಿ, ಕೋಳಿ, ಮೇಕೆ, ಹಂದಿಗಳನ್ನು ದೇವರಿಗೆ ಹರಕೆಯಾಗಿ ಬಿಡುವರು.

ಹೀಗೆ ಬಿಟ್ಟ ಪ್ರಾಣಿಗಳನ್ನು ತಮ್ಮ ಮನೆ ಅಥವಾ ಕೇರಿಗಳಿಂದ ಹೂವು, ಮಾವಿನಸೊಪ್ಪು, ಬೇವಿನಸೊಪ್ಪುಗಳನ್ನು ಅವುಗಳ ಕೊರಳಿಗೆ ಕಟ್ಟಿ ಊರಿನ ಹೊರಭಾಗದ ಕೆರೆ–ಹಳ್ಳದ ಸಾಲಿನಲ್ಲಿ ಹೋಗಿ ವಿಶಾಲವಾದ ಮರ–ಗಿಡಗಳು ಕೆಳಗೆ ತಮ್ಮ ಮನೆ ದೇವರುಗಳ ಮುದ್ರಿಕೆಗಳನ್ನು ಇಟ್ಟು ಇನ್ನು ವಿಧಿ–ವಿಧಾನಗಳಿಂದ ಪೂಜೆ–ಪುನಸ್ಕಾರಗಳನ್ನು ಮಾಡಿ ಪ್ರಾಣಿಗಳನ್ನು ಬಲಿ ಕೊಡುವರು. ಬಲಿ ಕೊಟ್ಟ ಪ್ರಾಣಿಯ ರಕ್ತವನ್ನು ಹೊಸ ಮಣ್ಣಿನ ಗಡಿಗೆಯಲ್ಲಿ ಹಾಕಿಕೊಂಡು ಇದರಲ್ಲಿ ತೀರ್ಥ, ಪ್ರಸಾದ, ಅರಿಶಿಣ, ಕುಂಕುಮ, ಹೂವುಗಳನ್ನು ಹಾಕಿ ಮಿಶ್ರ ಮಾಡಿಕೊಂಡು ಸಮುದಾಯದ ಮುಖ್ಯಸ್ಥರು ಮೂರ್‍ನಾಲ್ಕು ಜನರು ಕೇರಿಯ ಅಥವಾ ಮನೆ ಕಡೆ ಸಾಗಿ

ಕೇರಿಯ ಸುತ್ತ ಚರಗ ಚೆಲ್ಲುವರು ಉಳಿದ ರಕ್ತ ಮತ್ತು ಪ್ರಸಾದವನ್ನು ಕೇರಿಯ ಮಧ್ಯಭಾಗದಲ್ಲಿ ಕುಣಿಯನ್ನು ಅಗೆದು ಹೂಳುವರು. ನಂತರ ಹಿಂತಿರುಗಿ ಬಲಿ ಕೊಟ್ಟ ಸ್ಥಳಕ್ಕೆ ಹೋಗಿ ಅಲ್ಲಿ ಎಲ್ಲರೂ ಸೇರಿಕೊಂಡು ಅಡುಗೆ ಮಾಡಿ ಊಟ ಮಾಡಿದ ನಂತರ ತಮ್ಮ ಪಾತ್ರ ಪಗಡುಗಳನ್ನು ತೊಳೆದು ಸ್ವಚ್ಛ ಮಾಡಿಕೊಂಡು ಸಂಜೆ ವೇಳೆಗೆ ಮನೆಗಳಿಗೆ ಬರುವರು. ಹೀಗೆ ಮಾಡುವುದಕ್ಕೆ ಹೊರಬೀಡು ಮಾಡುವುದು ಅಥವಾ ಮನೆದೇವರಿಗೆ ಶಾಂತಿ ಮಾಡುವುದು ಎಂದು ಕರೆಯುವರು.[೨]

ಇನ್ನು ದಕ್ಕಲ ಅಲೆಮಾರಿಗಳು ಅಲ್ಲದೆ ಇನ್ನಿತರ ಅಲೆಮಾರಿಗಳು ಪ್ರಕೃತಿಯನ್ನೆ ದೈವವಾಗಿಸಿ ಆರಾಧಿಸುವುದುಂಟು ಇವರು ಸಹ ರಕ್ಷಣೆಕೊಡುವ ಯಾವುದೇ ವಸ್ತುವನ್ನು ದೈವವಾಗಿ ಸ್ವೀಕರಿಸಿ ಅವುಗಳಿಗೆ ಹರಕೆ ಹೊರುವುದುಂಟು ದೈವಗಳನ್ನು ಪ್ರತಿಷ್ಠಾಪಿಸಿದರೆ ಹಾವು ಚೇಳು ಬರುವುದಿಲ್ಲ ಎಂಬ ನಂಬಿಕೆ ಇದೆ. ನಂತರ ನಮಗೆ ರೋಗ-ರುಜಿನಗಳು ಬರಬಾರದು ಅವುಗಳಿಂದ ಕಾಪಾಡುತ್ತವೆ ಎಂಬ ನಂಬಿಕೆಯಿಂದ ಪ್ರಕೃತಿಯು ನಮ್ಮ ಮೇಲೆ ಮುನಿಸಿಕೊಳ್ಳಬಾರದು ಎಂದು ಪ್ರಕೃತಿಯನ್ನು ಆರಾಧಿಸುತ್ತಾರೆ. ಅರೆ-ಅಲೆಮಾರಿಗಳ ಅಸ್ತಿತ್ವಕ್ಕೆ ಮಾರ್ಗದರ್ಶನ ನೀಡುವ ದೈವಗಳು ಆಗಿರುತ್ತವೆ. ಈ ರೀತಿಯ ದೈವಗಳು ಸಮುದಾಯಗಳಲ್ಲಿ ನೆಲೆ ನಿಲ್ಲಲಿಲ್ಲ. ಕೇರಿಯ ಹಬ್ಬ ಬಲಿದಾನ ಮಾಡುವ ಹಬ್ಬ ಎಂಬ ಹೆಸರುಗಳನ್ನು ನಮೂದಿಸಿ ದೈವಗಳನ್ನು ತಮ್ಮೆಡೆ ಸೆಳೆದುಕೊಳ್ಳುವುದಕ್ಕೆ ಪ್ರಯತ್ನಿಸುತ್ತಾರೆ. ಅಲೆಮಾರಿ ಸಮುದಾಯಗಳೂ ಎಲ್ಲಿ ನೆಲೆ ನಿಲ್ಲಬೇಕು. ಜೀವನದ ರೂಪುರೇಷೆಗಳನ್ನು ಹೇಗೆ ಮಾಡಬೇಕು. ಹೀಗೆ ಹತ್ತು ಹಲವಾರು ವಿಷಯಗಳ ಬಗೆಗೆ ಮಾರ್ಗದರ್ಶನ ನೀಡುತ್ತಾರೆ. ಒಂದು ಕಾಲದಲ್ಲಿ ಅಲೆಮಾರಿಗಳಾಗಿದ್ದು ಈಗ ಶಾಶ್ವತವಾಗಿ ಒಂದು ಕಡೆ ನೆಲೆ ನಿಂತು ಬದುಕುತ್ತಿರುವ ಈ ಸಮುದಾಯ ತಮ್ಮ ದೈವ ಭಕ್ತಿಯ ಕೈಬಿಡದೆ ಪೂರ್ವಿಕರಷ್ಟೆ ದೈವ ಭಕ್ತಿ ಇಲ್ಲದೆ ಇದ್ದರು ಸ್ವಲ್ಪ ಮಟ್ಟಿಗೆ ಈ ಸಮುದಾಯ ದೈವ ಭಕ್ತಿಯನ್ನು ಉಳಿಸಿಕೊಂಡಿದ್ದಾರೆ.

**ಪಿತೃಪಕ್ಷಗಳು**

ದಕ್ಕಲ ಸಮುದಾಯಗಳಲ್ಲಿ ಸಹ ಮಾತಾಪಿತೃರನ್ನು ದೇವರ ಸಮಾನರಾಗಿ ಹಾಗೂ ಹಿರಿಯ ವ್ಯಕ್ತಿಗಳನ್ನು ದೇವರ ಸಮಾನರಾಗಿ ನೋಡುತ್ತಾರೆ. ಪಿತೃಪಕ್ಷಗಳು ಎಂದರೆ ತಮ್ಮ ರಕ್ತ ಸಂಬಂಧದಲ್ಲಿ ಸತ್ತ ಹಿರಿಯರ ಹೆಸರಿನಲ್ಲಿ ಪಿತೃಪಕ್ಷಗಳನ್ನು ಮಾಡುತ್ತಾರೆ. ಈ ಪದ್ಧತಿ ಎಲ್ಲಾ ಸಮುದಾಯಗಳಲ್ಲಿ ಕಾಣಬಹುದು ಹಿರಿಯರ ಆತ್ಮಕ್ಕೆ ಶಾಂತಿ ಸಿಗಲಿ ಹಾಗೂ ನೆಮ್ಮದಿ ಸಿಗಲಿ. ಹಿರಿಯರಿಗೆ ಯಾವುದೇ ತೊಂದರೆಯಾಗದೇ ಅವರ ಕಾರ್ಯಗಳಲ್ಲಿ ದೋಷವಿದ್ದರೆ ಪರಿಹಾರ ಸಿಗಲಿ ನಂತರ ಅವರ ಆತ್ಮಕ್ಕೆ ಶಾಂತಿ ಸಿಗಲಿ ಎಂದು ಪಿತೃಪಕ್ಷದ ಹಬ್ಬದ ಸಮಯದಲ್ಲಿ ಮನೆಯನ್ನು ಸ್ವಚ್ಛಗೊಳಿಸಿ ಮನೆಯಲ್ಲಿ ಎಲ್ಲರೂ ಸ್ನಾನ ಮಾಡಿ ಸತ್ತ ವ್ಯಕ್ತಿಗಳಿಗೆ ಜೀವನದಲ್ಲಿ ಏನು ಆಹಾರ ಸೇವಿಸುತ್ತಿದ್ದರು ಆ ಪದಾರ್ಥಗಳನ್ನು ಹಾಗೂ ಅದರ ಜೊತೆಗೆ ಮದ್ಯಪಾನ, ಬೀಡಿ, ಸಿಗರೇಟ್, ಎಲೆ, ಅಡಿಕೆ ಈ ವಸ್ತುಗಳನ್ನು ಉಪಯೋಗಿಸುತ್ತಿದ್ದರೆ ಮುಖ್ಯವಾಗಿ ಆ

ವಸ್ತುಗಳನ್ನು ತರಿಸಿಕೊಂಡು ಎಡೆಯನ್ನು ಇಡಬೇಕಾಗುತ್ತದೆ. ಶವಸಂಸ್ಕಾರ ಮಾಡಿದ ಸಮಾಧಿಯ ಹತ್ತಿರ ಎಲ್ಲಾ ಪದಾರ್ಥಗಳನ್ನು ಇಟ್ಟು ಪೂಜಿಸಬೇಕಾಗುತ್ತದೆ. ತದನಂತರ ಎಡೆಯನ್ನು ಕಾಗೆ ಮೊದಲು ಮುಟ್ಟಬೇಕು. ಎಡೆಯಲ್ಲಿ ಇರುವ ಯಾವುದೇ ವಸ್ತುವನ್ನು ತೆಗೆದುಕೊಂಡರೂ ನಾವು ಸತ್ತ ವ್ಯಕ್ತಿಯ ಆಸೆಯನ್ನು ಪೂರೈಸಿದ್ದೇವೆ ಎಂದು ಅರ್ಥ. ಇಲ್ಲವಾದರೆ ಆ ವಕ್ತಿ ಉಪಯೋಗಿಸುತ್ತಿದ್ದ ಯಾವುದೇ ಒಂದು ವಸ್ತುವನ್ನು ಇಡದಿದ್ದ ಕಾಗೆ ಮುಟ್ಟುವುದಿಲ್ಲ. ಆ ಸಂದರ್ಭದಲ್ಲಿ ಆ ವಸ್ತುಗಳನ್ನು ಇಡಬೇಕಾಗುತ್ತದೆ. ಹಿರಿಯರೇ ಕಾಗೆಯ ರೂಪದಲ್ಲಿ ಬಂದಿದ್ದಾರೆ ಎಂಡು ಭಾವಿಸಿ ಅದಕ್ಕೆ ಮೊದಲ ಆದ್ಯತೆ ನೀಡುತ್ತೇವೆ ಎಂದು ಹೇಳಿದರು. ಪಿತೃಪಕ್ಷಗಳು ಕೇವಲ ದಕ್ಕಲ ಸಮುದಾಯಗಳಿಗೆ ಅಲ್ಲದೆ ಇತರೆ ಎಲ್ಲಾ ಸಮುದಾಯಗಳಿಗೂ ಅನ್ವಯಿಸುತ್ತದೆ. ಎಲ್ಲಾ ಸಮುದಾಯಗಳು ಆಚರಿಸುತ್ತಾರೆ. ದಕ್ಕಲ ಸಮುದಾಯಗಳು ಪೂರ್ವಿಕರು ಯುಗಾದಿ ಹಬ್ಬದ ದಿನವೆ ಪಿತೃಪಕ್ಷ ಆಚರಿಸುತ್ತಿದ್ದರು. ಆದರೆ ಹೀಗ ಸಮಾಜದ ಬದಲಾವಣೆಯೊಂದಿಗೆ ಹೊಂದಿಕೊಂಡು ಎಲ್ಲರ ಹಾಗೆ ಇವರು ಪಿತೃಪಕ್ಷಗಳ ದಿನವೇ ಆಚರಿಸುತ್ತಾರೆ. ಸತ್ತ ವ್ಯಕ್ತಿಗಳು ಯಾವುದೆ ರೀತಿಯಾಗಿ ಕೇಡು ಬಯಸದೇ ಇರಲಿ ಎಂದು ಅವರ ಆತ್ಮ ತೃಪ್ತಿಗಾಗಿ ಅವರ ಇಷ್ಟಗಳನ್ನು ಪೂರೈಸುವುದಕ್ಕಾಗಿ ತಮ್ಮ ಕುಟುಂಬಗಳಿಗೆ ಯಾವುದೇ ಸಂಕಷ್ಟ ಬಾರದೆ ಇರಲಿ ಎಂದು ಸತ್ತ ಹಿರಿಯರ ಹೆಸರಿನಲ್ಲಿ ಈ ಹಬ್ಬವನ್ನು ಮಾಡುತ್ತಾರೆ.

**ಯುಗಾದಿ**

ವರ್ಷದ ಮೊದಲು ಬರುವ ಯುಗಾದಿ ಹೊಸ ಸಂವತ್ಸರದ ಹಳೇ ಬೇರನ್ನು ಕಳೆದು ಹೊಸ ಚಿಗುರನ್ನು ತರಿಸಿ ಹೊಸತನವನ್ನು ಹೊರಹೊಮ್ಮಿಸುವದಾಗಿದ್ದು, ಈ ಹಬ್ಬವು ಹೊಸ ಯುಗದ ನಡಗೆ ಸಾಗುವುದು ಎಂದು ಹಿರಿಯರ ನಂಬಿಕೆಯಾಗಿದೆ. ಅದನ್ನು ಈಗಲೂ ಪಾಲಿಸಿಕೊಂಡು ಬರುತ್ತಿದ್ದಾರೆ. ಯುಗಾದಿಯನ್ನು "ತಗಾದಿ" ಎಂಬ ಗಾದೆ ಇವರಲ್ಲಿದೆ. ಯುಗಾದಿ ಹಬ್ಬದ ದಿನ ನಡೆದ ಸಿಹಿಕಹಿ ಘಟನೆಗಳು ಇಡೀ ವರ್ಷ ಮುಂದುವರೆಯುತ್ತದೆ ಎಂಬ ಭಾವನೆಯಿಂದ ಅಂದು ಸಿಹಿ ಮತ್ತು ಕಹಿಯನ್ನು ಹಂಚುತ್ತಾರೆ. ಜಾನಪದಿಯ ನಂಬಿಕೆ ಈಗಲೂ ನೆಲೆಯೂರಿದೆ. ಈ ಹಬ್ಬದಲ್ಲಿ ಮೂರು ರೀತಿಯಾಗಿ ಆಚರಿಸುತ್ತಾರೆ. ಮೊದಲನೆಯದು ಬೇವುಬೆಲ್ಲ ಹಂಚುವುದು ಹಿರಿಯರ ಪೂಜೆ ಕರಿಹಬ್ಬ ಹೀಗೆ ಮೂರು ರೀತಿಯಲ್ಲಿ ಈ ಕೆಳಗಿನಂತೆ ಆಚರಿಸುತ್ತಾರೆ.

**ಬೇವು-ಬೆಲ್ಲ**

ಯುಗಾದಿ ಹಬ್ಬ ಮುಖ್ಯವಾಗಿ ಬೇವುಬೆಲ್ಲ ಹಂಚುವುದರಿಂದ ಪ್ರಾರಂಭವಾಗುತ್ತದೆ. ಯಾಕೆಂದರೆ ವರ್ಷದ ಇಡೀ ಸಿಹಿಕಹಿ ಘಟನೆಗಳು ಸಮಾನವಾಗಿ ಎಲ್ಲವನ್ನು ನಿಭಾಯಿಸಿಕೊಂಡು ಹೋಗಬೇಕು. ಇದರಲ್ಲಿ ಯಾವುದು ಹೆಚ್ಚೂ ಇಲ್ಲ, ಯಾವುದು ಕಡಿಮೆ ಇಲ್ಲ. ನಾವು ಎಷ್ಟು ದುಃಖ ಪಡುತ್ತೇವೆ, ಅಷ್ಟೇ ಕಷ್ಟ ಪಡಲೇಬೇಕು. ಆಗ ಜೀವನಕ್ಕೆ ಒಂದು ಅರ್ಥ ಸಿಗುತ್ತದೆ ಎಂಬ

ನಂಬಿಕೆ ಈ ಸಮುದಾಯಗಳಲ್ಲಿ ಇದೆ. ಇತರೆ ಜಾತಿ ಸಮುದಾಯಗಳಲ್ಲಿ ಇರುವಂತಹುದು. ಯುಗಾದಿ ಹೆಚ್ಚು ಮಹತ್ವ ನೀಡುವುದೇ ಬೇವು ಬೆಲ್ಲಕ್ಕೆ. ಮನೆಗಳನ್ನು ಶುಭ್ರವಾಗಿಸಿ, ಎಲ್ಲರೂ ಸ್ನಾನ ಮಾಡಿ ಮನೆ ಮುಂದೆ ರಂಗೋಲಿಯಿಂದ ಅಲಂಕರಿಸಿ ಮನೆಯ ಬಾಗಿಲಿಗೆ ಮಾವಿನ ತೋರಣಗಳನ್ನು ಕಟ್ಟಿ ಬೇವಿನಸೊಪ್ಪನ್ನು ಇಟ್ಟು ಪೂಜೆ ಮುಗಿಯುವ ತನಕ ಉಪವಾಸವಿದ್ದು ತದನಂತರ ದೇವಸ್ಥಾನದಲ್ಲಿ ಪೂಜೆ ಮಾಡಿ ದಾರಿಯಲ್ಲಿ ಬರುವ ವ್ಯಕ್ತಿಗಳಿಗೆ ಬೇವು ಬೆಲ್ಲ ಹಂಚಿ ಮನೆಯವರಿಗೆ ಎಲ್ಲಾ ಬೇವು ಬೆಲ್ಲ ಹಂಚಿ ವರ್ಷದ ಪ್ರಾರಂಭದಲ್ಲಿ ಕಹಿಯನ್ನು ಕಳೆದು ಸಿಹಿಯಾಗಿ ಜೀವನಸಾಗಲಿ ಎಂದು ಹಾರೈಸುತ್ತಾರೆ.

**ಹಿರಿಯರ ಹಬ್ಬ**

ಯುಗಾದಿ ಹಬ್ಬ ಸಮೀಪಿಸುತ್ತಿದ್ದಂತೆಯೇ ಮನೆಗಳಿಗೆ ಸುಣ್ಣವನ್ನು ಬಳಿದು ಮನೆಯ ಒಳಗೆ ಸಗಣಿಯಿಂದ ಸಾರಿಸಿ ರಂಗೋಲಿಯಿಂದ ಅಲಂಕರಿಸುತ್ತಾರೆ. ಈ ಸಮುದಾಯಗಳಲ್ಲಿ ಸಾಧ್ಯವಾದಷ್ಟು ಹೊಸ ಬಟ್ಟೆಯನ್ನು ತೆಗೆದುಕೊಳ್ಳುತ್ತಾರೆ. ಒಂದು ವೇಳೆ ಆರ್ಥಿಕ ತೊಂದರೆ ಇದ್ದರೆ ಹಳೇ ಬಟ್ಟೆಯನ್ನು ತೊಳೆದು ಹೊಸಬಟ್ಟೆ ಎಂದು ತಿಳಿದು ಅದನ್ನು ಹಾಕಿಕೊಳ್ಳುತ್ತಾರೆ. ಆ ದಿನ ಬೆಳಗ್ಗೆ ಪುರುಷರು ಸೇವಿಂಗ್ ಕ್ಷೌರ ಮಾಡಿಸಿಕೊಳುತ್ತಾರೆ. ಮೈತುಂಬ ಎಣ್ಣೆಯನ್ನು ಹಚ್ಚಿಕೊಳ್ಳುತ್ತಾರೆ. ಎಣ್ಣೆಯ ಜೊತೆಗೆ ನಿಂಬೆ ಹಣ್ಣನ್ನು ಹರಳೆಣ್ಣೆಯಲ್ಲಿ ಬೆರಸಿ ಮೈಕೈ ತಲೆಗೆ ಹಚ್ಚಿಕೊಂಡು ಅರ್ಧ ದಿನ ಆಗೆ ಇರುತ್ತಾರೆ. ನಂತರ ಸ್ನಾನ ಮಾಡಿ ಹಿರಿಯರ ಸಮಾಧಿಗಳಿಗೆ ತೆರಳಿ ಸಮಾಧಿಯನ್ನು ತೊಳೆದು ಹರಿಶಿಣ, ಕುಂಕುಮ ಇಟ್ಟು ತೆಂಗಿನಕಾಯಿ ಹೊಡೆದು ಪೂಜೆ ಮಾಡಿ ಎಡೆ ಇಡುತ್ತಾರೆ. ಪೂಜೆ ಮುಗಿದ ಮೇಲೆ ಮನೆಯಲ್ಲಿ ಫೋಟೋ ಇಟ್ಟು, ಅದರ ಮುಂದೆ ಜ್ಯೋತಿ ಬೆಳಗಿಸಿ ಪೂಜೆ ಮಾಡುತ್ತಾರೆ. ಮಹಿಳೆಯರು ವಿಧವೆಯಾಗಿದ್ದರೆ, ಅವರಿಗೆ ಹೊಸ ಬಟ್ಟೆಯನ್ನು ಖರೀದಿಸಿ ಕೊಡುವ ಪದ್ಧತಿ ಈ ಸಮುದಾಯಗಳಲ್ಲಿ ಇದೆ. ಸತ್ತ ಹಿರಿಯರಿಗೆ ಮನೆಯ ಮೇಲೆ ಎಡೆಯನ್ನು ಇಡುವುದುಂಟು. ಎಡೆಗೆ ಪಾಯಸ, ವಡೆ, ಹಪ್ಪಳ, ಪಲ್ಲೆ, ಹಣ್ಣು ಹಂಪಲುಗಳನ್ನು ಎಡೆಯಲ್ಲಿ ಇಟ್ಟು ಸತ್ತ ಹಿರಿಯರ ಭಾವಚಿತ್ರದ ಮುಂದೆ ಇಟ್ಟು ಪೂಜೆ ಮಾಡುತ್ತಾರೆ. ಪೂಜೆ ಮುಗಿಸುವ ತನಕ ಕುಟುಂಬದವರೆಲ್ಲಾ ಉಪವಾಸ ಇರುತ್ತಾರೆ. ಹೀಗೆ ಯುಗಾದಿ ಹಬ್ಬದಂದು ವಿಶಿಷ್ಟತೆಯಿಂದ ಹೊಸಸಂವತ್ಸರವನ್ನು ಆಚರಿಸುವ ಒಂದು ವಿಧಾನವಾಗಿದೆ.

**ಕೂದಲು ತೆಗೆಯುವ ಶಾಸ್ತ್ರ**

ಈ ಸಮುದಾಯಗಳು ಕೂದಲು ತೆಗೆಯುವ ಶಾಸ್ತ್ರವನ್ನು "ಮುಂದ್ಯಾವರ" ಎಂದು ತೆಲುಗು ಭಾಷೆಯಲ್ಲಿ ಕರೆಯುತ್ತಾರೆ. ಈ ಶಾಸ್ತ್ರ ಮಕ್ಕಳಿಗೆ ಸಂಬಂಧಿಸಿದಾಗಿದೆ ಮಗು ಹುಟ್ಟಿದ ಮೇಲೆ ಮೂರು ತಿಂಗಳಿಗೆ ಅಥವಾ ಒಂಭತ್ತು ತಿಂಗಳಲ್ಲಿ ಮಾಡುವ ಕಾರ್ಯ ಈ ಶಾಸ್ತ್ರವು ದಕ್ಕಲರಲ್ಲಿ ಅನುಭವವುಳ್ಳ ಒಬ್ಬ ಪುರೋಹಿತನಾಗಿರುತ್ತಾನೆ. ಆ ವ್ಯಕ್ತಿ ಎರಡು ಗುಡಿಗಳನ್ನು

ತಯಾರಿಸುತ್ತಾನೆ. ೧. ಮುನೇಶ್ವರನ ಗುಡಿ, ೨. ಅಕ್ಕಗಾರಿ ಗುಡಿ ಎಂದು ಈ ಎರಡು ಗುಡಿಗಳು ಒಂದೇ ಗುಡಿಯಲ್ಲಿ ಎರಡು ಭಾಗ ಮಾಡುತ್ತಾರೆ. ಈ ಗುಡಿಯನ್ನು ಹೊಂಗೆಸೊಪ್ಪಿನಿಂದ ಚಿಕ್ಕದಾಗಿ ತಯಾರಿಸಿ ಅದರ ಮುಂದೆ ಮುನೇಶ್ವರ ಚಿತ್ರವನ್ನು ಬಿಡಿಸುತ್ತಾರೆ. ಕೂದಲು ತೆಗೆಯುವ ಶಾಸ್ತ್ರಕ್ಕೆ ಸಂಬಂಧಿಸಿದಂತೆ ಸಂಬಂಧಿಕರೆಲ್ಲರಿಗೂ ಆಹ್ವಾನ ಮಾಡುತ್ತಾರೆ. ಇತ್ತೀಚೆಗೆ ನಡೆದ ಚಿಂತಾಮಣೀಯ ತಾಲ್ಲೂಕಿನ ಬಾಣಮಾರಿ ಗ್ರಾಮದಲ್ಲಿ ಕೂದಲು ತೆಗೆಯುವ ಶಾಸ್ತ್ರಕ್ಕೆ ಸಂಬಂಧಿಕರು ಎಲ್ಲ ಸೇರಿ ಒಂದು ಶುಭ ದಿನವನ್ನು ನಿಶ್ಚಯ ಮಾಡಿ ಈ ಶಾಸ್ತ್ರಕ್ಕೆ ಮನೆಯನ್ನು ಶುಭ್ರಗೊಳಿಸಿ ಪಾತ್ರೆಗಳನ್ನು ತೊಳೆದು ಶ್ರದ್ಧಾಭಕ್ತಿಯಿಂದ ಇದ್ದು ಅಂದು ಬೆಳಗ್ಗೆ ಎಲ್ಲರೂ ಸ್ನಾನ ಮಾಡಿ ಮತ್ತು ಮಗುವಿಗೆ ಸ್ನಾನ ಮಾಡಿಸಿ ಅಂದು ಮನೆಯಲ್ಲಿ ತುಂಬ ಸಂಭ್ರಮದಿಂದ ಕೂಡಿರುತ್ತದೆ. ಇಲ್ಲಿ ನಡೆದ ಶಾಸ್ತ್ರಕ್ಕೆ ಬಿ.ಎ. ಓದುತ್ತಿರುವ ವಿದ್ಯಾರ್ಥಿ ಹರೀಶ್ ಎಂಬ ಹುಡುಗ ಪುರೋಹಿತನಾಗಿದ್ದು ಇವರು ಗುಡಿಯನ್ನು ತಯಾರಿಸಿ ಆ ಗುಡಿಯ ಮುಂದೆ ಮುನೇಶ್ವರ ಚಿತ್ರವನ್ನು ಮಣ್ಣಿನಿಂದ ತಯಾರಿಸಿ ಗುಡಿಯಲ್ಲಿ ಸಗಣಿಯಿಂದ ಸಾರಿಸಿ ರಂಗೋಲಿ ಬಿಡಿಸಿ ಗುಡಿಗೆ ಮಾವಿನ ತೋರಣವನ್ನು ಕಟ್ಟಿ ಒಳಗೆ ಚಿಕ್ಕಚಿಕ್ಕ ಕಲ್ಲುಗಳನ್ನು ಇಟ್ಟು ಆ ಕಲ್ಲುಗಳನ್ನು ದೇವರಾಗಿ ಮಾಡಿ ಗುಡಿಯ ಸುತ್ತಲು ಸಗಣಿಯಿಂದ ಸಾರಿಸಿ ರಂಗೋಲಿಯನ್ನು ಹಾಕಿರುತ್ತಾರೆ. ಈ ಸಮುದಾಯಗಳ ಮನೆ ದೇವರು ಮುನೇಶ್ವರ ಆಗಿರುವುದರಿಂದ ಮಕ್ಕಳ ಕೂದಲನ್ನು ಈ ದೇವರಿಗೆ ಅರ್ಪಿಸುತ್ತಾರೆ. ನಂತರ ತಾಯಿ ಮತ್ತು ಮಗುವನ್ನು ಗುಡಿಯ ಮುಂದೆ ಕೂರಿಸಿ ಪೂಜೆಯನ್ನು ಮಾಡಿ ದೇವರ ಹಣೆಯ ಕುಂಕುಮವನ್ನು ಮಗು ಮತ್ತು ತಾಯಿಗೆ ಇಟ್ಟು ಇಬ್ಬರಿಂದ ದೇವರ ಪೂಜೆ ಮಾಡಿಸುತ್ತಾರೆ. ನಂತರ ಪುರೋಹಿತನ ಬಲಗೈನ ಎರಡು ಬೆರಳಿಗೆ ವಿಳೆದೆಲೆಯನ್ನು ಸುತ್ತಿ ಕತ್ತರಿಯಾಗಿಸಿ ಮಗುವನ್ನು ತಾಯಿಯ ತೊಡೆಯ ಮೇಲೆ ಕೂರಿಸಿ ಬಲಗಡೆ ತಲೆಯ ಹಿಂಭಾಗ ಎಡಭಾಗದಲ್ಲಿ ಕೂದಲನ್ನು ಕತ್ತರಿಸುವ ಹಾಗೇ ಎರಡು ಬೆರಳಿನಿಂದ ಗುರುತು ಮಾಡುತ್ತಾರೆ. ನಂತರ ಕತ್ತರಿಯಿಂದ ಮೂರು ಕಡೆ ಸ್ವಲ್ಪ ಕೂದಲನ್ನು ಕತ್ತರಿಸಿ ದೇವರಿಗೆ ನೈವೇದ್ಯ ಮಾಡಿ ಪೂಜೆ ಮಾಡುತ್ತಾರೆ. ಈ ಶಾಸ್ತ್ರಕ್ಕೆ ಮೇಕೆಯನ್ನು ಬಲಿ ಕೊಡುತ್ತಾರೆ. ಕೂದಲು ತೆಗೆಯುವ ಶಾಸ್ತ್ರದ ಕೊನೆಯಲ್ಲಿ ಮುನೇಶ್ವರನಿಗೆ ಮೇಕೆಯನ್ನು ಬಲಿ ಕೊಟ್ಟು ನೈವೇದ್ಯ ಮಾಡುತ್ತಾರೆ. ಅಲ್ಲಿಯ ತನಕ ಮಗುವಿನ ತಾಯಿ ಉಪವಾಸವಿದ್ದು, ಮೇಕೆ ರಕ್ತವನ್ನು ನೈವೇದ್ಯ ಸಮರ್ಪಿಸಿದ ನಂತರ ಕೊನೆಯಲ್ಲಿ ಪೂಜೆಯನ್ನು ಮಾಡಿ ಕರ್ಪೂರವನ್ನು ಬೆಳಗಿಸಿ ಮಗು ಮತ್ತು ತಾಯಿಗೆ ಆರತಿಯನ್ನು ಎತ್ತಿ ಮತ್ತು ನೀರನ್ನು ಗುಡಿಯಮುಂದೆ ಚೆಲ್ಲುತ್ತಾರೆ. ಮೇಕೆಯ ರಕ್ತವನ್ನು ಚಿತ್ರ ಬಿಡಿಸಿದ ಮುನೇಶ್ವರ ವಿಗ್ರಹದ ಮೇಲೆ ಚೆಲ್ಲುತ್ತಾರೆ. ನಂತರ ಮೇಕೆ ಕೋಳಿಗಳ್ನನು ಬಲಿಕೊಟ್ಟು ಮಹಾಮಂಗಳಾರತಿ ಮುಗಿದ ಮೇಲೆ ಪೂಜೆ ಮುಕ್ತಾಯವಾಗುತ್ತದೆ. ಬಲಿಕೊಟ್ಟ ಮಾಂಸವನ್ನು ಅಡುಗೆ ಮಾಡಿ ಸಂಬಂಧಿಕರೆಲ್ಲಾ ತಿಂದು ಮದ್ಯಪಾನ ಸೇವಿಸಿ ಈ ಕಾರ್ಯವನ್ನು ಮುಗಿಸುತ್ತಾರೆ.

**ಕರಿಹಬ್ಬ**

ಯುಗಾದಿ ಹಬ್ಬ ಮುಗಿದ ಮಾರನೆಯ ದಿನ ರುಚಿ ರುಚಿಯಾದ ಮಾಂಸದ ಅಡುಗೆಯನ್ನು ವಿಧವಿಧವಾಗಿ ತಯಾರಿಸಿಕೊಂಡು ಕುಟುಂಬ ವರ್ಗದವರು ಬಂಧು ಬಳಗದವರು ಹಾಗೂ ನೆರೆಹೊರೆಯವರು ಒಬ್ಬರಿಗೊಬ್ಬರು ನೀರನ್ನು ಎರಚಿಕೊಂಡು ಕುಣಿದುಕುಪ್ಪಳಿಸಿ ಆನಂದಿಸುವರು ತಿಥಿ, ಮದುವೆ, ಹಬ್ಬಗಳ ಸಂದರ್ಭದಲ್ಲಿ ಸ್ತ್ರೀಪುರುಷರು ಸಮಾನರಾಗಿ ಕುಣಿದು ಕುಪ್ಪಳಿಸಿ ಓಕಳಿ ಹಬ್ಬ ಆಚರಿಸುವರು.

ಉಳಿದ ಗಣೇಶ ಚತುರ್ಥಿ, ದಸರಾ ಹಬ್ಬಗಳು ಎಲ್ಲಾ ಜಾತಿ ಜನಾಂಗಗಳು ಮಾಡುವ ಹಾಗೆ ಈ ಸಮುದಾಯಗಳಲ್ಲಿ ಹಬ್ಬ ಆಚರಿಸುತ್ತಾರೆ. ವಿಶೇಷವಾಗಿ ಯಾವುದೆ ರೀತಿಯ ಆಚರಣೆ ಈ ಸಮುದಾಯಗಳಲ್ಲಿ ಕಂಡುಬಂದಿಲ್ಲ ಎಂದು ಈ ಪ್ರದೇಶಗಳು ದಕ್ಕಲರು ಹೇಳುವ ಮಾತಿನಲ್ಲಿ ತಿಳಿಯುತ್ತದೆ. ಗಣೇಶ ಚತುರ್ಥಿ ದಿನ ಮನೆಯನ್ನು ಸ್ವಚ್ಛ ಮಾಡಿ ಎಲ್ಲರೂ ಸ್ನಾನ ಮಾಡಿ, ನಂತರ ದೇವಸ್ಥಾನದಲ್ಲಿ ಪ್ರವೇಶವಿಲ್ಲದ ಕಾರಣ ಮನೆಯ ಹತ್ತಿರ ಗುಡಿಯನ್ನು ತಯಾರಿಸಿ, ಅಲ್ಲೇ ಪೂಜೆ ಮಾಡಿ ರಾತ್ರಿ ಕಡುಬು ಪಲ್ಯವನ್ನು ಮಾಡಿ ದೇವರಿಗೆ ಪೂಜಿಸುತ್ತಾರೆ. ಇತ್ತೀಚೆಗೆ ದೇವಸ್ಥಾನ ಒಳಗೆ ಪ್ರವೇಶವಿಲ್ಲದೇ ಇದ್ದರೂ ಹೊರಗಡೆ ಪೂಜೆ ಮಾಡಿಕೊಂಡು ಬರುತ್ತಾರೆ. ಹಾಗೆ ದಸರಾ ಹಬ್ಬವು ಅಷ್ಟು ಸಂಭ್ರಮದಿಂದ ಕೂಡಿಲ್ಲ. ಮನೆಯಲ್ಲಿ ಇರುವ ಆಯುಧಗಳನ್ನು, ಮಕ್ಕಳು ಓದುವ ಪುಸ್ತಕಗಳನ್ನು ಇಟ್ಟು ಪೂಜೆ ಮಾಡಿ ಜೀವನಕ್ಕೆ ಮೂಲಾಧಾರ ಈ ಆಯುಧಗಳು ಎಂದು ಪೂಜೆ ಮಾಡಿ ಪ್ರಾಣಿಯನ್ನು ಬಲಿ ಕೊಟ್ಟು ಅಂದು ಮಾಂಸದ ಅಡುಗೆಯನ್ನು ಮಾಡಿ ಸಂಭ್ರಮಿಸುತ್ತಾರೆ. ಕೆಲವು ಕುಟುಂಬಗಳು ಈಗಲೂ ಮಾದಿಗರ ಮನೆಯಲ್ಲಿ ಭಿಕ್ಷೆಯನ್ನು ಬೇಡಿ ತಂದು ಆ ಆಹಾರವನ್ನು ಸೇವಿಸುತ್ತಾರೆ.

**ಸಂಕ್ರಾಂತಿ ಹಬ್ಬ**

ದಕ್ಕಲ ಸಮುದಾಯಗಳು ಸಂಕ್ರಾಂತಿ ಹಬ್ಬವನ್ನು ವಿಶೇಷವಾಗಿ ಆಚರಿಸುತ್ತಾರೆ. ಹಾಗೆಯೇ ಈ ಹಬ್ಬಗಳಲ್ಲಿ ಕೆಲಸವು ಹೆಚ್ಚಿರುತ್ತದೆ. ಎತ್ತುಗಳಿಗೆ ಕೊಂಬುಗಳನ್ನು ಎರೆದು ಆ ಕೊಂಬುಗಳಿಗೆ ಬಣ್ಣದ ಲೇಪನವನ್ನು ಹಾಕಿ ಸಿಂಗರಿಸುವ ಕೆಲಸ ಹೆಚ್ಚಾಗಿದ್ದು, ಇದರಿಂದ ತಮ್ಮ ಆರ್ಥಿಕತೆಯನ್ನು ವೃದ್ದಿಸಿಕೊಳ್ಳುವರು ಹಾಗೆ ಜಾಂಬವಂತನನ್ನು ಪ್ರಾಣಿಗಳ ಅವತಾರ ಪುರುಷ ಎಂದು ಅವುಗಳನ್ನು ಹೆಚ್ಚಾಗಿ ಪ್ರೀತಿಸುತ್ತಾರೆ. ಹಾಗಾಗಿ ದನಕರು, ಎಮ್ಮೆ, ಹಸು, ಕುರಿ, ಮೇಕೆಗಳನ್ನು ತೊಳೆದು ಅವುಗಳ ಕೊಂಬುಗಳಿಗೆ ಬಣ್ಣಗಳಿಂದ ಚಿತ್ತಾರ ಮಾಡಿ ಬಣ್ಣದ ಪೇಪರನ್ನು ಹಚ್ಚುವರು ನಂತರ ಕೊಂಬುಗಳಿಗೆ ಬಲೂನುಗಳನ್ನು ಕಟ್ಟಿ ಅಲಂಕರಿಸುವರು ಎಮ್ಮೆಗಳ ಬಲಗಡೆಯ ಮೈಮೇಲೆ, ಬಲಕೊಂಬುಗೆ ಬಿಳಿಬಣ್ಣ ಹಾಗೂ ಎಡಗಡೆ ಮೈಗೆ ಎಡ ಕೊಂಬಿಗೆ ಕೆಂಮ್ಮಣ್ಣು ಹಚ್ಚುವರು. ಕೊರಳಿಗೆ ಮತ್ತು ಕಾಲುಗಳಿಗೆ ಹೂವುಗಳನ್ನು ಸುತ್ತಿ ಅಲಂಕರಿಸಿ ಅವುಗಳಿಗೆ ಹಾಕಿದ ಮೂಗುದಾರ

ಕೊರಳಿಗೆ ಹೂವಿನಹಾರ ಹಾಕಿ ಪೂಜೆ ಮಾಡುವರು. ಈ ಹಬ್ಬವು ಸಾಕಿರುವ ಪ್ರಾಣಿಗಳ ಶೃಂಗಾರಕ್ಕಾಗಿಯೇ ಮಾಡುವ ಹಬ್ಬವಾಗಿದೆ. ಎತ್ತು ಹಸುಗಳ ಊರಿನಲ್ಲಿ ಸುತ್ತಿಸಿ ಮುಸ್ಸಂಜೆಯಲ್ಲಿ ಎತ್ತು ಹಸುಗಳನ್ನು ಬೆಂಕಿಯಲ್ಲಿ ಹಾರಿಸುವರು. ಮನೆಯಲ್ಲಿ ಮಾಡಿದ ವಿಶೇಷ ಅಡಿಗೆಯನ್ನು ನೈವೇದ್ಯ ಮಾಡಿ ಅದನ್ನು ಹಸುಗಳ ಮುಂದು ಇಟ್ಟು ಪೂಜಿಸಿ ಆ ನೈವೇದ್ಯವನ್ನು ಪ್ರಾಣಿಗಳಿಗೆ ಇಡುತ್ತಾರೆ.

### ೫.೬. ಜಾನಪದ ನಂಬಿಕೆಗಳು

ಜಾನಪದ ನಂಬಿಕೆಗಳು ಸಾಂಪ್ರದಾಯಿಕವಾಗಿ ಅಂಗೀಕೃತವಾದ ಒಂದು ತಿಳುವಳಿಕೆ ಒಂದು ಹೇಳಿಕೆ ಅಥವಾ ವಸ್ತು ಸ್ಥಿತಿಯ ಬಗ್ಗೆ ಮಾನಸಿಕ ಒಪ್ಪಿಗೆಯನ್ನು ತೊರುವ ಪ್ರವೃತ್ತಿ. ಜನಪದ ನಂಬಿಕೆಗಳು ಜನತೆಯ ಮನೋಭಾವ ಹಾಗೂ ಅಧಿಮ ಸಂಸ್ಕೃತಿ ಮತ್ತು ಸಂಪ್ರದಾಯಗಳನ್ನು ಪರಿಚಯಿಸುವ ಪ್ರಮುಖ ಸಾಧನೆಗಳಾಗಿವೆ. ಜಾನಪದ ನಂಬಿಕೆಗಳು (Folk Beliefs) ಎಂದು ಮೂಢನಂಬಿಕೆಗಳನ್ನು (Supertitions) ಎಂದು ಕರೆಯುತ್ತಾರೆ.

ವ್ಯಕ್ತಿನಿಷ್ಠವಾದ ನಂಬಿಕೆಗಳು ಕಾರ್ಯಕರಣ ಸಂಬಂಧದ ಅರಿವಿಲ್ಲದಾಗ ಹುಟ್ಟಿಕೊಂಡಂತಹ ಹೇಳಿಕೆಗಳಾಗಿವೆ. ಹೀಗೆ ವ್ಯಕ್ತಿನಿಷ್ಠವಾಗಿ ಹುಟ್ಟಿಕೊಂಡ ನಂಬಿಕೆಗಳು ಸಾರ್ವತ್ರಿಕತೆಯನ್ನು ಪಡೆದುಕೊಂಡು ಪೂರ್ವಿಕರಿಂದ ಹಿಡಿದು ಇಂದಿಗೂ ಜಾನಪದ ನಂಬಿಕೆಗಳು ತಮ್ಮಲ್ಲಿ ಉಳಿಸಿಕೊಂಡಿರುವುದು ತಿಳಿಯುತ್ತದೆ. ಹಾಗೆ ಎಲ್ಲಾ ಜಾತಿ ಸಮುದಾಯಗಳಲ್ಲಿ ಇರುವಂತಹ ನಂಬಿಕೆಗಳು ದಕ್ಕಲ ಸಮುದಾಯಗಳಲ್ಲಿ ಜಾನಪದ ನಂಬಿಕೆಗಳು ನೆಲೆಯೂರಿವೆ. ಈ ಸಮುದಾಯಗಳಲ್ಲಿಯೂ ಶುಭ-ಅಶುಭ ನಂಬಿಕೆಗಳು, ಗಾದೆಗಳು ಒಗಟುಗಳು ಮುಂತಾದ ಜಾನಪದೀಯ ಅಂಶಗಳು ರೂಢಿಸಿಕೊಂಡಿರುವುದು ಕಂಡುಬರುತ್ತದೆ.[೩]

### ಶುಭ ಶಕುನಗಳು

ಮಾನವನ ಜೀವನದ ಉತ್ಸಾಹ ನಂಬಿಕೆಯನ್ನು ಹೆಚ್ಚಿಸಿ ಮುಂದಿನ ಜೀವನ ಉತ್ತಮವಾಗಿರಬೇಕು ಎಂದು ಹಾಗೂ ನಾವು ಹೋಗುವ ಕೆಲಸಗಳಿಗೆ ಫಲ ಸಿಕ್ಕಿ ಯಾವುದೇ ಅಡ್ಡಿ ಆತಂಕಗಳು ಬರಬಾರದು ಎಂಬ ನಂಬಿಕೆ ಇದ್ದು ತಮ್ಮ ಭವಿಷ್ಯವನ್ನು ರೂಪಿಸಿಕೊಳ್ಳುವ ವ್ಯಕ್ತಿನಿಷ್ಟ ನಂಬಿಕೆಯಾಗಿದೆ ಪೂರ್ವಿಕರು ಶುಭ ಶಕುನಗಳನ್ನು ತಮ್ಮಷ್ಟಕ್ಕೆ ತಾವೇ ಸೃಷ್ಟಿಸಿಕೊಂಡು ಜೀವನದ ಅಡ್ಡಿ-ಆತಂಕಗಳಿಗೆ ಒಂದು ಪರಿಹಾರವಾಗಿ ನಂಬಿಕೆಗಳನ್ನು ಸಾರ್ವತ್ರಿಕವಾಗಿ ರೂಪಿಸಿಕೊಂಡರು. ಈಗಲೂ ಅದರ ಆಧಾರದ ಮೇಲೆ ವ್ಯಕ್ತಿಗಳು ಜೀವನ ಸಾಗಿಸುತ್ತಿದ್ದಾರೆ. ಅಂತಹ ಶುಭ ಶಕುನಗಳು ಗಂಡು ಮಕ್ಕಳಿಗೆ ದೇಹದ ಬಲ ಭಾಗಕ್ಕೆ ಕಪ್ಪು ಚುಕ್ಕೆ ಇದ್ದರೆ ಅದೃಷ್ಟವಂತ, ಇದು ಶುಭಸೂಚಕ. ಅದೇ ರೀತಿಯಾಗಿ ಹೆಣ್ಣುಮಕ್ಕಳಿಗೆ ಎಡಭಾಗಕ್ಕೆ ಕಪ್ಪು ಚುಕ್ಕೆ ಇದ್ದರೆ ಅದು ಹೆಣ್ಣುಮಕ್ಕಳಿಗೆ ಶುಭ ಸೂಚಕ. ಒಬ್ಬ ವ್ಯಕ್ತಿ ಮತ್ತೊಬ್ಬರಿಗೆ ದಾನ ಮಾಡಿದರೆ ಅದು ಬಲಗೈಯಿಂದ ಕೊಡಬೇಕು ಅದು ಶುಭ ಸೂಚಕವಾಗಿರುತ್ತದೆ. ದಾನ

ಕೊಟ್ಟಾಗ ಮನೆಯ ಒಳಗೆ ಕರೆಸಬೇಕು ಅಥವಾ ನಾವೇ ಹೊರಗಡೆ ಬಂದು ದಾನ ಮಾಡಬೇಕು. ಮನೆಯಿಂದ ಹೊರಗೆ ದಾನ ಮಾಡಬಾರದು, ದಾನ ತೆಗೆದುಕೊಂಡ ವ್ಯಕ್ತಿಗೆ ಒಳ್ಳೆಯದಾಗುವುದಿಲ್ಲ ಎಂಬ ನಂಬಿಕೆ ಇದೆ.

ಈ ಸಮುದಾಯಗಳಲ್ಲಿ ಕನ್ಯೆಯನ್ನು ನೋಡುವ ಸಲುವಾಗಿ ಹಾಗೂ ಶುಭಕಾರ್ಯಗಳಿಗೆ ಹೊರಟಾಗ ಬಳೆಗಾರರು ಬಳೆ ಹೊತ್ತು ಎದುರಿಗೆ ಬಂದರೆ ಮುತ್ತೈದೆಯರು ನೀರು ತುಂಬಿದ ಕೊಡವನ್ನು ಹೊತ್ತು ಅಡ್ಡ ಬಂದರೆ ಶುಭಶಕುನ ಹೋದ ಕಾರ್ಯ ಸಫಲವಾಗುತ್ತದೆ. ಹೋಗುವ ದಾರಿಯಲ್ಲಿ ನರಿ ಅಡ್ಡ ಬಂದರೆ ಅದು ಶುಭ ಶಕುನವಾಗುತ್ತದೆ. ಬೆಳಗ್ಗೆ ನಿದ್ದೆಯಿಂದ ಏಳುವಾಗ ಬಲಗಡೆ ಎದ್ದು ದೇವರ ಫೋಟೋ ನೋಡಿದರೆ ಆ ದಿನ ಎಲ್ಲಾ ಕಾರ್ಯಗಳು ತೊಂದರೆ ಇಲ್ಲದೆ ನಡೆಯುತ್ತದೆ ಎಂಬ ನಂಬಿಕೆ ಇದೆ.

**ಪ್ರಾಣಿಗಳ ಶುಭ ಶಕುನ**

ಮನುಷ್ಯ ಪರಿಸರದಲ್ಲಿರುವ ಪ್ರಾಣಿಗಳಲ್ಲಿ ಕೆಲವು ಶುಭ ಶಕುನಗಳಾಗಿ ಭಾವಿಸಿಕೊಂಡು ತಮ್ಮ ಜೀವನದಲ್ಲಿ ಆಗುವ ಶುಭಕಾರ್ಯಗಳಿಗೆ ಪ್ರಾಣಿಗಳನ್ನು ಬಳಸಿಕೊಳ್ಳುತ್ತಾನೆ. ಪ್ರಯಾಣ ಹೋಗುವಾಗ ನರಿ ಅಡ್ಡ ಬಂದರೆ, ಹಾವು ಎಡದಿಂದ ಬಲಕ್ಕೆ ಹೋದರೆ ಒಂದು ವೇಳೆ ಹಾವು ಹೆಡೆ ಎತ್ತಿ ಆಶೀರ್ವದಿಸಿದರೆ ದೇವರೆ ನಮಗೆ ಆಶೀರ್ವಾದ ಮಾಡಿದ ಹಾಗೆ ಎಂಬ ನಂಬಿಕೆ ಇದೆ. ಕಾಗೆ ಮನೆಯ ಮೇಲೆ ಕುಳಿತು ಕೂಗಿದರೆ ನೆಂಟರು ಬರುವ ಸೂಚನೆ ಕೊಡುತ್ತದೆ. ನವಿಲು ಬಾತುಕೋಳಿ ಎಡದಿಂದ ಬಲಕ್ಕೆ ಹೋದರೆ ಅದು ಶುಭ ಶಕುನ. ಸತ್ತ ವ್ಯಕ್ತಿಗೆ ಎಡೆ ಇಟ್ಟಾಗ ಕಾಗೆ ಬಂದು ಮುಟ್ಟಿದರೆ ಸತ್ತ ವ್ಯಕ್ತಿ ಕಾಗೆ ರೂಪದಲ್ಲಿ ಬಂದಿದ್ದಾನೆ. ನಾವು ಮಾಡಿರುವ ಕೆಲಸಗಳು ಸರಿ ಇದೆ ಆ ವ್ಯಕ್ತಿಗೆ ತೃಪ್ತಿ ತಂದಿದೆ ಎಂಬ ಶುಭ ಸೂಚಕವಾಗಿದೆ. ಹೀಗೆ ದಕ್ಕಲ ಸಮುದಾಯಗಳನ್ನು ಸತ್ತ ವ್ಯಕ್ತಿಯನ್ನು ಕಾಗೆಯ ರೂಪದಲ್ಲಿ ಒಂದು ಎಡೆ ಮುಟ್ಟಿದ್ದಾನೆ ಎಂಬ ನಂಬಿಕೆ ಈಗಲೂ ಇದೆ. ಮನೆಯಲ್ಲಿ ಬೆಕ್ಕು ಮುಖ ತೊಳದರೆ ನಾವು ಮಾತನಾಡುವಾಗ ಹಲ್ಲಿ ಎರಡಕ್ಕಿಂತ ಹೆಚ್ಚು ಭಾರಿ ಲೊಚಗುಟ್ಟಿದರೆ ಅಂದುಕೊಂಡಿರುವ ಕೆಲಸ ನೆರವೇರುತ್ತದೆ. ನಂತರ ಹಲ್ಲಿ ಲೊಚಗುಟ್ಟಿದ್ದಾಗ ಕೃಷ್ಣ ಕೃಷ್ಣ ಎಂದು ಹೇಳಿದರೆ ಒಳ್ಳೆಯದು ಅದು ಶುಭ ಶಕುನವಾಗುತ್ತದೆ. ಮದುವೆಯಾದ ಹೆಣ್ಣು ಮಕ್ಕಳು ಬೆಳಗೆ ಎದ್ದು ಗಂಡನ ಪಾದಗಳಿಗೆ ನಮಸ್ಕರಿಸಿ ಕೆಲಸಗಳು ಪ್ರಾರಂಭಿಸಿದರೆ ಶುಭವಾಗುತ್ತದೆ. ಮನೆಯಿಂದ ಹೊರಗೆ ಪ್ರಯಾಣಿಸಿದರೆ ಹೆಂಡತಿ ಗಂಡನಿಗೆ ಎದುರು ಬಂದರೆ ಹೋಗುವ ಕೆಲಸ ಫಲಕಾರಿಯಾಗಿರುತ್ತದೆ. ಪ್ರಯಾಣ ಹೊರಟಾಗ ಹೋಗಿ ಬರುತ್ತೇನೆ ಎಂದು ಹೇಳಬೇಕು. ಅದು ಶುಭ ಸೂಚಕವಾಗುತ್ತದೆ. ಏಕೆಂದರೆ ಹೋದ ವ್ಯಕ್ತಿ ಮತ್ತೆ ಮನೆಗೆ ವಾಪಸ್ಸು ಬರುತ್ತಾನೆ ಎಂಬ ನಂಬಿಕೆ ಜನರಲ್ಲಿ ಇದೆ. ಹಿರಿಯರು ಇಂತಹ ನಡವಳಿಕೆಗಳನ್ನು ಮಕ್ಕಳಿಗೆ ಹೇಳಿ ಅದರ ಅರ್ಥಗರ್ಭಿತೆಯನ್ನು ತಿಳಿಸುತ್ತಾರೆ.

### ಅಶುಭ ಶಕುನಗಳು

ವ್ಯಕ್ತಿಗಳ ಜೀವನದಲ್ಲಿ ನಡೆಯುವ ಅವಘಡಗಳಿಗೆ ಅವು ಅಶುಭ ಶಕುನಗಳಿಂದ ಹಾಗಿವೆ ಎಂಬ ವ್ಯಕ್ತಿ ನಿಷ್ಠವಾದ ಅಪಶಕುನಗಳೆ ಕಾರಣ ಎಂದು ನಂಬಿ ಮನಸ್ಸಿನಲ್ಲಿ ಕಳವಳ ಮೂಡುತ್ತದೆ. ಬೆಳಗ್ಗೆ ಎದ್ದು ಯಾರ ಮುಖ ನೋಡಿದೆ ಎಂದು ಮನಸ್ಸಿನಲ್ಲಿ ಬೈದುಕೊಳ್ಳುತ್ತಾರೆ. ಹೀಗೆ ಹಲವು ಘಟನೆಗಳು ಅಶುಭ ಸೂಚಕವಾಗಿ ಭಾವಿಸಿ ನಮ್ಮ ಜೀವನವನ್ನು ನರಳುವಂತೆ ಮಾಡುತ್ತವೆ. ಗಂಡು ಮಗು ಹುಟ್ಟಿದಾಗ ಮಗುವಿಗೆ ಎಡಗಡೆ ಕಪ್ಪು ಮಚ್ಚೆ ಇದ್ದರೆ ಅದು ಅಪಶಕುನ ಹೆಣ್ಣು ಮಗುವಿಗೆ ಬಲಗಡೆ ಇದ್ದರೆ ಅದು ಅಪಶಕುನ ಗಂಡಸರಿಗೆ ಎಡಗಣ್ಣು ಹೊಡೆದುಕೊಂದರೆ ಅಪಶಕುನ ಮಹಿಳೆಯರಿಗೆ ಬಲಗಣ್ಣು ಹೊಡೆದುಕೊಂಡರೆ ಅದು ಅಪಶಕುನ ಎಂಬ ನಂಬಿಕೆ ಜಾನಪದದಲ್ಲಿ ಇದೆ. ಯಾವುದೆ ಕೆಲಸಕ್ಕೆ ಅಥವಾ ಶುಭ ಕಾರ್ಯಕ್ಕೆ ಹೋಗುವಾಗ ಎದುರುಗಡೆ ವಿಧವೆ ಬಂದರೆ ಹೋದ ಕೆಲಸ ಆಗುವುದಿಲ್ಲ ಎಂದು ಮತ್ತೆ ಮನೆಗೆ ವಾಪಸ್ಸು ಬರುತ್ತೇವೆ. ಹೊರ ಹೋಗುವಾಗ ಮನೆಯವರಿಗೆ ಹೋಗುತ್ತೇನೆ ಎಂದರೆ ಅದು ಅಪಶಕುನ. ಏಕೆಂದರೆ ಹೋಗುತ್ತೇನೆಂದರೆ ಆ ವ್ಯಕ್ತಿ ಮತ್ತೆ ವಾಪಸ್ಸು ಬರುವುದಿಲ್ಲ. ಯಾವುದೋ ಅಪಘಾತಕ್ಕೆ ಸಿಲುಕುತ್ತಾನೆ ಎಂಬ ನಂಬಿಕೆ ಜನರಲ್ಲಿದೆ. ವ್ಯಕ್ತಿ ಶುಭಕಾರ್ಯಕ್ಕೆ ಹೋಗುವಾಗ ಒಂಟಿ ಸೀನು ಹಾಕಿದರೆ ಹೋಗುವ ಕೆಲಸ ಶುಭದಾಯಕವಾಗಿರುವುದಿಲ್ಲ. ಖಾಲಿ ಕೊಡಗಳು ಹೊತ್ತು ತಂದರೆ ತುಂಬಿದ ಚಂಬು ಕೈ ಜಾರಿದರೆ ಸೌದೆ ಎತ್ತಿಕೊಂಡು ಅಡ್ಡ ಬಂದರೆ ಇವು ಅಪಶಕುನಗಳು ನಂತರ ದೀಪ ಆರಿದರೆ ಅಪಶಕುನ ಹೀಗೆ ಮನುಷ್ಯ ತನ್ನ ವ್ಯಕ್ತಿತ್ವ ಆಲೋಚನೆಗಳು ಚಂಚಲವಾಗಿದ್ದು, ಕೆಲವು ನಂಬಿಕೆಗಳಿಂದ ವ್ಯಕ್ತಿಯ ಜೀವನ ನೆಮ್ಮದಿಯನ್ನು ಕಳೆದುಕೊಂಡು ವಿನಾಶದತ್ತ ಸಾಗುತ್ತದೆ.

### ಪ್ರಾಣಿ ಪಕ್ಷಿಗಳಿಂದ ವ್ಯಕ್ತಿಗಳಿಗೆ ಆಗುವ ಅಪಶಕುನಗಳು

ನಂಬಿಕೆ ಎಂಬುವುದು ಕೇವಲ ವ್ಯಕ್ತಿ ಅಲ್ಲದೆ ಪ್ರಾಣಿ ಪಕ್ಷಿಗಳಿಂದಲೂ ಅಪಶಕುನ ವನ್ನು ಎದುರಿಸುತ್ತಾರೆ. ಒಳ್ಳೆ ಕೆಲಸಕ್ಕೆ ಹೋಗುವಾಗ ಬೆಕ್ಕು ಅಡ್ಡಬಂದರೆ ಅಥವಾ ಒಂದು ವೇಳೆ ಬಲದಿಂದ ಎಡಕ್ಕೆ ಹೋದರೆ ಅಪಶಕುನ ಎಂದು ಸ್ವಲ್ಪ ಹಿಂದಕ್ಕೆ ಬಂದು ಹತ್ತು ನಿಮಿಷ ಕೂತುಕೊಳ್ಳುತ್ತಾರೆ. ಹಾವು ಅಡ್ಡ ಬಂದರೆ ಅಪಶಕುನ ನಾಯಿ ಆಕಾಶಕ್ಕೆ ನೋಡಿ ಕೂಗಿದರೆ ಊರಿನಲ್ಲಿ ಯಾವುದೋ ವ್ಯಕ್ತಿ ಸಾಯುತ್ತಾನೆ ಎಂಬ ಅಶುಭ ಸೂಚನೆಯಾಗಿದೆ. ಕಾಗೆ ಕಾಲಲ್ಲಿ ಒದ್ದರೆ ಅಪಶಕುನ ಈ ಘಟನೆ ನಡೆದಾಗ ಶನಿಮಹಾತ್ಮನ ಗುಡಿಗೆ ಹೋಗಿ ಪೂಜೆ ಮಾಡಿಸಬೇಕು ಇಲ್ಲವಾದರೆ ಆ ವ್ಯಕ್ತಿಯ ಜೀವನದಲ್ಲಿ ಅನಾಹುತಗಳು ಹಾಗೂ ಆ ವ್ಯಕ್ತಿ ಬದುಕುವುದಿಲ್ಲ ಎಂಬ ನಂಬಿಕೆ ಇದೆ. ಗೂಬೆ ಮನೆಯನ್ನು ಪ್ರವೇಶಿಸಿದರೆ ಅಶುಭ. ಆ ಮನೆಯನ್ನು ಮೂರು ತಿಂಗಳೂ ಬಿಟ್ಟು ಮನೆಗೆ ಮುಳ್ಳು ಕೋಲುಗಳನ್ನು, ಕಲ್ಲುಗಳನ್ನು ಹಾಕಬೇಕು, ಇಲ್ಲವಾದರೆ ಮನೆಗೆ ದರಿದ್ರದಿಂದ ಕೂಡಿ ಸಂಸಾರವೇ ಹಾಳಾಗುತ್ತದೆ. ಕಾಗೆ ಮನೆಯ ಒಳಗೆ ಪ್ರವೇಶಿಸುವುದಿಲ್ಲ, ಮೊಲಗಳನ್ನು ಮನೆಯಲ್ಲಿ ಬೆಳೆಸುವ ಹಾಗಿಲ್ಲ. ಮೊಲ

ಸಾಕಿದರೆ ಆ ಮನೆ ಉದ್ಧಾರ ಆಗುವುದಿಲ್ಲ. ಹಲ್ಲಿ ಮೈಮೇಲೆ ಬಿದ್ದರೆ ಅಪಶಕುನ. ಹಾವುಗಳ ಮಿಲನ ನೋಡಿದರೆ ನಾಗದೋಷವಾಗುತ್ತದೆ. ಇಂತಹ ಹಲವಾರು ಘಟನೆಗಳು ಜೀವನದಲ್ಲಿ ನಡೆದರೆ ಅಶುಭಶಕುನ ಎಂದು ಇತರ ಸಮುದಾಯಗಳಲ್ಲಿ ಇರುವಂತೆ ಸಮುದಾಯಗಳಲ್ಲಿಯೂ ಕಂಡು ಬರುತ್ತದೆ. ಅಪಶಕುನ ಎಂಬುವುದು ಕೇವಲ ಮನುಷ್ಯರಿಗೆ ಅಲ್ಲದೆ ದೇವರಿಗೂ ತಪ್ಪಿದ್ದಲ್ಲ ಎಂಬುವುದು ದಕ್ಕಲ ಮುನಿಶಾಮಪ್ಪ ಕಥೆಯ ಮೂಲಕ ವಿವರಿಸುತ್ತಾರೆ. ಆಕಾಶ ಮಾರ್ಗವಾಗಿ ವಾಯು ದೇವರು ಹೋಗುವಾಗ ಲಕ್ಷ್ಮೀದೇವಿ ಬರುತ್ತಿರುತ್ತಾಳೆ. ಆಗ ವಾಯುದೇವ ತೂ ದರಿದ್ರ ಲಕ್ಷ್ಮೀ ಅಡ್ಡ ಬರುತ್ತಿದ್ದಾಳೆ ಎಂದು ಶಪಿಸುತ್ತಾನೆ. ಆಗ ಲಕ್ಷ್ಮೀದೇವಿಯು ವಾಯು ದೇವನನ್ನು ಶಪಿಸುತ್ತಾಳೆ ಇಬ್ಬರು ಈ ದೂರನ್ನು ಸೂರ್ಯನ ಬಳಿ ಹೇಳುತ್ತಾರೆ. ಆಗ ವಾಯುದೇವ ಸಾಕ್ಷಿಗಾಗಿ ಹಿಂದೆ ತಿರುಗುತ್ತಾನೆ ಅಲ್ಲೆ ಲಕ್ಷ್ಮೀದೇವಿಯು ಇರುತ್ತಾಳೆ ನೋಡಿ ದರಿದ್ರ ಲಕ್ಷ್ಮೀ ಇಲ್ಲಿಗೂ ಬಂದಿದ್ದಾಳೆ ಎಂದು ಸೂರ್ಯನಿಗೆ ಸಾಕ್ಷಿ ತೋರಿಸುತ್ತಾನೆ. ಆಗ ಲಕ್ಷ್ಮೀದೇವಿ ಏನು ತಪ್ಪು ಮಾಡಿದ್ದಾಳೆ ಎಂದಾಗ ವಾಯು ದೇವ ಲಕ್ಷ್ಮೀ ಕೇವಲ ಶ್ರೀಮಂತರ ಮನೆಯಲ್ಲಿ ಆಚಾರಿಯ ಮನೆಯಲ್ಲಿ ಕೊಮೀಟಿಗರ ಮನೆಯಲ್ಲಿ ಇರುತ್ತಾಳೆ ಬಡವರ ಮನೆಯಲ್ಲಿ ಇರುವುದಿಲ್ಲ ಇವಳದು ತಪ್ಪು ಇದೆಯಾ ಇಲ್ಲವಾ ಹೇಳಿ ಎಂದಾಗ ಲಕ್ಷ್ಮೀಯು ಹೌದು ನನ್ನದು ತಪ್ಪು ಎಂದು ತಲೆ ತಗ್ಗಿಸುತ್ತಾಳೆ ಹಾಗೆ ಲಕ್ಷ್ಮೀಯು ಸೂರ್ಯನಿಗೆ ವಾಯು ದೇವರ ಮೇಲೆ ದೂರು ನೀಡುತ್ತಾಳೆ ಆಗ ಸೂರ್ಯದೇವ ವಾಯು ದೇವನ ತಪ್ಪೇನು ಎಂದಾಗ ವಾಯುದೇವ ಅಣ್ಣನ ಹೊಲದಲ್ಲಿ ಬಿದ್ದರೆ ತಮ್ಮನ ಹೊಲದಲ್ಲಿ ಬೀಳುವುದಿಲ್ಲ ತಮ್ಮ ಹೊಲದಲ್ಲಿ ಬಿದ್ದರೆ ಅಣ್ಣನ ಹೊಲದಲ್ಲಿ ಬೀಳುವುದಿಲ್ಲ. ಇವನದು ತಪ್ಪು ಇದೆಯಾ ಇಲ್ಲವಾ ಕೇಳು ಎಂದಾಗ ವಾಯುದೇವ ಹೌದು ನನ್ನದು ತಪ್ಪು ಎಲ್ಲಾ ಕಡೆ ಒಂದೇ ಸಾರಿ ಬೀಳುವುದಕ್ಕೆ ಸಾಧ್ಯವಿಲ್ಲ ಎಂದು ಒಪ್ಪಿಕೊಳ್ಳುತ್ತಾನೆ. ನಂತರ ಅಲ್ಲಿ ಇದ್ದ ಅಗ್ನಿ ದೇವರದ್ದು ತಪ್ಪು ಇಲ್ಲ ಎಂದರೆ ನಾವು ಶರಣಾಗುತ್ತೇವೆ ಎಂದಾಗ ಅಗ್ನಿದೇವ ಎಲ್ಲರಮನೆಯಲ್ಲಿ ಬೆಂಕಿ ನಂದಿಸುತ್ತಾನೆ. ಎಲ್ಲರನ್ನು ಸಮನಾಗಿ ಕಾಣುತ್ತಾನೆ ಎಂದಾಗ ಅಲ್ಲಿಗೆ ಅಗ್ನಿದೇವರದು ಯಾವುದು ತಪ್ಪಿಲ್ಲ ಎಂದು ತಿಳಿಯುತ್ತದೆ. ಹೀಗೇ ದೇವರಲ್ಲೂ ಸಹ ಅಪಶಕುನದ ನಂಬಿಕೆಗಳು ಇರುವುದು ಇದರಲ್ಲಿ ತಿಳಿಯುತ್ತದೆ.

### ೫.೭. ದಕ್ಕಲರ ವೈದ್ಯ ಪದ್ಧತಿ

ಭಾರತೀಯ ಆರ್ಯುರ್ವೇದ ವೈದ್ಯ ಪದ್ಧತಿಯಲ್ಲಿ ಜಾನಪದ ವೈದ್ಯ ಪದ್ಧತಿ ಹೆಚ್ಚು ಪ್ರಸಿದ್ಧಿ ಪಡೆದ ಚಿಕಿತ್ಸೆಯಾಗಿದೆ. ಜಾನಪದ ವೈದ್ಯ ಸಾವಿರಾರು ವರ್ಷಗಳಿಂದ ನಂಬಿಕೊಂಡು ಬಂದಂತಹ ಜಾನಪದ ವೈದ್ಯ ಪದ್ಧತಿಯಾಗಿದೆ. ದಕ್ಕಲ ಸಮುದಾಯಗಳಲ್ಲಿ ಜಾನಪದ ವೈದ್ಯ ಪದ್ಧತಿಯಲ್ಲಿ ಪೂರ್ವಿಕರು ಹೆಚ್ಚು ಪ್ರಭಾವಶಾಲಿಗಳಾಗಿದ್ದರು. ಈ ಸಮುದಾಯಗಳಲ್ಲಿ ಮನುಷ್ಯನಿಗೆ ಬರುವ ಯವುದೇ ಕಾಯಿಲೆ ಗಾಯಗಳಿರಲಿ ಮನೆಮದ್ದನ್ನು ತಯಾರಿಸಿ ಕೊಡುತ್ತಿದ್ದರು. ಪ್ರಕೃತಿಯೇ ಈ ಸಮುದಾಯಗಳ ಆಸ್ಪತ್ರೆಗೆ ಹೋಗಿ ಔಷಧಾಲಯಗಳಿಗೆ ಹಣವನ್ನು ಖರ್ಚು

ಮಾಡಿ ವಾಸಿ ಮಾಡಿಸಿಕೊಳ್ಳುವಷ್ಟು ಸಾಮರ್ಥ್ಯ ಆರ್ಥಿಕತೆ ಇವರಲ್ಲಿಲ್ಲ. ಹಾಗಾಗಿ ಪರಿಸರದಲ್ಲಿ ಸಿಗುವ ಔಷಧಿ ಸಸ್ಯಗಳಾದ ಬೇವು, ನಿಂಬೆ ತುಳಸಿ, ವಿಳ್ಳೆದೆಲೆ, ಏಲಕ್ಕಿ, ಈರುಳ್ಳಿ, ಬೆಳ್ಳುಳ್ಳಿ, ಲವಂಗ, ಜೀರಿಗೆ, ಮೆಣಸು, ಅರಿಶಿನ ಪುಡಿ ಹಾಗೂ ಬೇಲಿಗಳಲ್ಲಿ ಸಿಗುವ ಬಳ್ಳಿಗಳನ್ನು ಬಳಸಿ ಕೆಮ್ಮು, ನೆಗಡಿ, ಜ್ವರ, ತಲೆನೋವು, ಕಿವಿಯಲ್ಲಿ ಸೋರುವುದು, ಕಿವಿನೋವು, ಕೈಕಾಲು ಹಿಡಿದುಕೊಳ್ಳುವುದು, ಶರೀರಕ್ಕೆ ಅಗುವ ಗಾಯಗಳನ್ನು ವಾಸಿ ಮಾಡಲು ನಾಟಿ ವೈದ್ಯವನ್ನು ಮಾಡುತ್ತಾರೆ. ಕೆಮ್ಮಿಗೆ ದೊಡ್ಡಪತ್ರೆ ಎಲೆಯನ್ನು ತೊಳೆದು ಉಪ್ಪನ್ನು ಹಾಕಿಕೊಂಡು ಸೇವಿಸಿದರೆ ಕೆಮ್ಮು ವಾಸಿಯಾಗುತ್ತದೆ. ಹಾಗೆ ಕಿವಿನೋವು, ಕಿವಿ ಸೋರುವಿಕೆ ಮತ್ತು ಕಿವಿನೋವು ಕಡಿಮೆಯಾಗುತ್ತದೆ. ನೆಗಡಿ ಬಂದರೆ ಶುಂಠಿ ಕಷಾಯ ಮಾಡಿ ಕುಡಿದರೆ ನೆಗಡಿ ವಾಸಿಯಾಗುತ್ತದೆ. ಹಾಗೆ ತಲೆನೋವಿಗೆ ಬಿಳಿ ಬಟ್ಟೆಗೆ ಕೆಮ್ಮಣ್ಣು ನೀರಿನಲ್ಲಿ ಹಾಕಿ ಬಟ್ಟೆಯನ್ನು ನೆನೆಸಿ ಹಣೆಗೆ ಹಾಕಿ ಸ್ವಲ್ಪ ವಿಶ್ರಾಂತಿ ತೆಗೆದುಕೊಂದರೆ ತಲೆ ನೋವು ಕಡಿಮೆಯಾಗುತ್ತದೆ. ಒಂಟಿ ತಲೆ ನೋವಿಗೆ ಯಳಚೆಗಿಡದ ಎಲೆಗಳು ಎಣ್ಣೆಯನ್ನು ಕಾಯಿಸಿ ಅದರಲ್ಲಿ ನೆನೆಸಿ ಒಂಟಿ ತಲೆ ನೋವಿನ ಜಾಗದಲ್ಲಿ ಹಚ್ಚಿದರೆ ತಲೆನೋವು ಕಡಿಮೆಯಾಗುತ್ತದೆ. ಕಾಲಿಗೆ ಗಾಯವಾದರೆ ಅರಿಶಿಣಪುಡಿ ಅಥವಾ ಕಾಫಿಪುಡಿ ಹಾಕಿದರೆ ತಕ್ಷಣ ರಕ್ತ ನಿಲ್ಲುತ್ತದೆ. ನಂತರ ಬೇಲಿಯ ಬಳ್ಳಿಗಳನ್ನು ತಂದು ಅರಿಶಿಣಪುಡಿ ಉಪ್ಪು ಹಾಕಿ ಅರೆದು ಗಾಯಕ್ಕೆ ಕಟ್ಟಿದರೆ ಗಾಯವಾಸಿಯಾಗುತ್ತದೆ. ಇಂತಹ ಗಾಯಗಳನ್ನು ಜಾನಪದ ವೈದ್ಯದಿಂದಲೇ ವಾಸಿ ಮಾಡಿಕೊಳ್ಳುತ್ತಾರೆ ಹೊರತು ಆಸ್ಪತ್ರೆಗಳಿಗೆ ಹೋಗುವುದಿಲ್ಲ ಈ ಸಮುದಾಯಗಳು ಊರಿಂದ ಊರಿಗೆ ಅಲೆಯುವಾಗ ಪರಿಸರವನ್ನೇ ಔಷಧಿಗಳಾಗಿಸಿ ತಮ್ಮ ಸಮುದಾಯಗಳಿಗೆ ತಾವೇ ವೈದ್ಯರಾಗಿಸಿರುತ್ತಾರೆ. ನಂತರ ಆಸ್ಪತ್ರೆಗೆ ಹೋಗಿ ತೋರಿಸಿಕೊಂಡು ವಾಸಿ ಮಾಡಿಕೊಳ್ಳುವುದಕ್ಕೆ ಆರ್ಥಿಕತೆ ದುರ್ಬಲತೆ ಒಂದು ಕಾರಣವಾಗಿ ಪರಿಣಮಿಸಿದೆ.

ಕೇವಲ ಮನುಷ್ಯರಿಗಲ್ಲದೆ ಪ್ರಾಣಿಗಳಿಗೂ ಸಹ ಈ ಸಮುದಾಯ ವೈದ್ಯ ಮಾಡುತ್ತಿದ್ದರು. ಇವರು ಸಾಕುವ ಹಂದಿ ಕುರಿ, ಕತ್ತೆ ಎತ್ತುಗಳಿಗೆ ಕೋಳಿಗಳಿಗೆ ಗಾಯಗಳಾದರೆ ನಾಟಿ ವೈದ್ಯ ಮಾಡುತ್ತಾರೆ. ಕಾಲುಬಾಯಿರೋಗ ಬಂದರೆ ಕರಿಮೀನು ಒಣಮೆಣಸಿನಕಾಯಿ ಅರಿಶಿಣಪುಡಿಯನ್ನು ಬಟ್ಟೆಯಲ್ಲಿ ಹಾಕಿ ಬಿಳಿ ಬಟ್ಟೆಗೆ ಅರಿಶಿಣ ನೀರು ಬಟ್ಟೆ ಮಾಡಿ ಕತ್ತೆಯ ಲದ್ದಿಯನ್ನು ಹಾಕಿ ಕಟ್ಟಿ ಅದಕ್ಕೆ ಸಾಮ್ರಾಣಿ ಮಾಡಿ ಪ್ರಾಣಿಯ ಕತ್ತಿಗೆ ಕಟ್ಟುತಾರೆ. ಕಾಲುಗಳು ಹುಣ್ಣು ಆಗಿದ್ದರೆ ಕೆಸರು ಗದ್ದೆಯಲ್ಲಿ ತುಳಿಸುತ್ತಾರೆ. ಹೊಟ್ಟೆ ಊತ ಬಂದರೆ ಮೇವು ತಿನ್ನದಿದ್ದರೆ ಹಿಂಗುವ ವಿಳ್ಳೆದೇಲೆ ತಿನ್ನಿಸುತ್ತಾರೆ. ನಂತರ ಸಗಣಿ ಹೊಟ್ಟೆಗೆ ಹಚ್ಚುತ್ತಾರೆ. ಕಾಲುಗಳಿಗೆ ಹೆಚ್ಚು ಗಾಯ ಆಗಿ ಊತ ಬಂದರೆ ಕೆಮ್ಮಣ್ಣಿನಿಂದ ಬಟ್ಟೆಯನ್ನು ನೆನೆಸಿ ಅದನ್ನು ಗಟ್ಟಿಯಾಗಿ ಕಾಲಿಗೆ ಸುತ್ತುತ್ತಾರೆ. ಪ್ರಾಣಿಗಳು ಕರು ಹಾಕಿದ ನಂತರ ಮಾಯ ಹಾಕಿಲ್ಲವೆಂದರೆ ಬಿದುರಿನ ಎಲೆಗಳು ತಿನ್ನಿಸಿ ಬಿಸಿ ನೀರು ಕುಡಿಸುತ್ತಾರೆ. ಪ್ರಾಣಿಗಳಿಗೆ ಹುಣ್ಣು ಎದ್ದರೆ ನಾಯಿಯ ಸಂಡಾಸು ಹೊಂಗೆ ಎಣ್ಣೆ ಕಾಯಿಸಿ ಗಾಯಕ್ಕೆ ಹಚ್ಚುತ್ತಾರೆ. ಪ್ರಾಣಿಗಳಿಗೆ ಸುಗದಮ್ಮ ಬಂದರೆ ಆ ಪ್ರಾಣಿಯ

ಕಿವಿಯನ್ನು ಕೊಯ್ದು ಅದರ ರಕ್ತವನ್ನು ಕಣ್ಣಿಗೆ ಬಿಡುತ್ತಾರೆ. ಹೀಗೆ ಹತ್ತು ಹಲವಾರು ಕಾಯಿಲೆಗಳಿಂದ ನಾಟಿ ವೈದ್ಯದಿಂದ ಪಾರು ಮಾಡಿ ಪ್ರಾಣಿಗಳನ್ನು ಉಳಿಸಿಕೊಳ್ಳುತ್ತಾರೆ.

**ಮಾಟ–ಮಂತ್ರ**

ಜಾನಪದ ವೈದ್ಯಕೀಯ ಪದ್ಧತಿಯಲ್ಲಿ ಮಾಟ–ಮಂತ್ರಗಳು ಪ್ರಸಿದ್ಧಿಯಾಗಿದೆ. ಜಾನಪದ ವೈದ್ಯಕೀಯದಲ್ಲಿ ಮಾಟಮಂತ್ರಗಳು ಒಂದು ಭಾಗವಾಗಿದೆ ಮಾಟಗಳಿಂದ ಅನೇಕ ವ್ಯಕ್ತಿಗಳ ಜೀವನವನ್ನು ಅಲ್ಲೋಲ–ಕಲ್ಲೋಲ ಮಾಡಿದರೆ ಕೆಲವು ವ್ಯಕ್ತಿಗಳ ಜೀವನವನ್ನು ಸುಧಾರಿಸಿ ವ್ಯಕ್ತಿಗಳ ಬದುಕನ್ನು ಹಸನಾಗಿಸುತ್ತವೆ. ಮಾಟಗಳು ಒಂದು ವಿಧವಾದರೆ ಮಂತ್ರಗಳು ಒಂದು ವಿಧದ ಪರಿಹಾರಗಳಾಗಿವೆ. ಇಂತಹ ಜನಪದ ವೈದ್ಯ ಮಾಟ–ಮಂತ್ರಗಳು ದಕ್ಕಲ ಸಮುದಾಯಗಳಲ್ಲಿ ಹೆಚ್ಚು ಪ್ರಸಿದ್ಧವಾಗಿದೆ. ಇವರು ಹಾಕುವ ಮಂತ್ರಗಳ ಭಾಷೆ ತೆಲುಗು, ತಮಿಳು, ಮಲಯಾಳಿ, ಹಿಂದಿ, ಕನ್ನಡ ಭಾಷೆಗಳಲ್ಲಿ ಮಂತ್ರಗಳು ಹಾಕುತ್ತಾರೆ. ಇವರು ಹೆಚ್ಚು ತೆಲುಗು, ತಮಿಳು ಮಂತ್ರಗಳು ಹೇಳುತ್ತಾರೆ. ಮಕ್ಕಳು ಭಯ ಭೀತರಾದಾಗ ಹಾಗೂ ಈ ಸಮುದಾಯಗಳ ಮಂತ್ರಗಳು ಮಕ್ಕಳ ಸಣ್ಣಪುಟ್ಟ ಕಾಯಿಲೆಗಳಿಗೆ ಮಂತ್ರಗಳಿಂದಲೆ ವಾಸಿ ಮಾಡುತ್ತಾರೆ ಇವರು ಹಾಕುವ ಮಂತ್ರಗಳು ಬಾಲಗ್ರಹ, ಭೀತಿಗ್ರಹ, ಚಂಡಿಗ್ರಹ, ಮಂಡಿಗ್ರಹ, ಭೂಮಿಗ್ರಹ ಉಚ್ಚಮಾದವ, ಊದು ಮಾದವ, ಸರಗುಮಾದವ, ಈ ಮಂತ್ರಗಳು ಉಪಯೋಗಿಸಿ ಮಕ್ಕಳಲ್ಲಿ ಇರುವ ಭಯ, ಕಾಯಿಲೆಗಳನ್ನು ಹೋಗಲಾಡಿಸುತ್ತಾರೆ. ಉದಾ:– ಬಾಲಗ್ರಹ, ಮಕ್ಕಳಿಗೆ ದೃಷ್ಟಿಯಾಗಿದ್ದರೆ ಈ ಮಂತ್ರವನ್ನು ಹಾಕುತ್ತಾರೆ.

"ಅಗಲ್ ಮಾರ್ ಬಂದ ಮಾರ್
ಜ್ಯೋತಿ ಮಾರ ಶಪಲ್ ಮಾರ್
ಹಾಕಿ ಜೋಕಿ ಉಟೋಜಾವ"

ಈ ಮಂತ್ರ ಹಿಂದಿ ಭಾಷೆಯ ಮಂತ್ರವಾಗಿದ್ದು, ಈ ಮಂತ್ರದ ಮೂಲಕ ಮಕ್ಕಳಿಗೆ ಭಯ ಹೋಗಲಾಡಿಸುತ್ತಾರೆ. ದೃಷ್ಟಿಯನ್ನು ಹೋಗಲಾಡಿಸುತ್ತಾರೆ. ನಂತರ ಯಂತ್ರವನ್ನು ಕಟ್ಟಿ ಕುಂಕುಮ ಇಟ್ಟುಕಳಿಸುತ್ತಾರೆ. ದೊಡ್ಡವರಿಗೂ ಸಹ ಮಂತ್ರಗಳ ಮೂಲಕ ದೃಷ್ಟಿಯನ್ನು ಹೋಗಲಾಡಿಸುತ್ತಾರೆ. ಭಯಪಟ್ಟಿದ್ದರೆ ಅವುಗಳನ್ನು ಹೋಗಲಾಡಿಸುತ್ತಾರೆ ದೊಡ್ಡವರಿಗೆ ಆದಿಪರಾಶಕ್ತಿಯ ಮಂತ್ರ ಗುರುದತ್ತಾತ್ರೇಯ ಮಂತ್ರ, ಪ್ರಾಣ ಪ್ರತಿಷ್ಠೆ ಮಂತ್ರ ಜ್ವರ ಗುಣಪಡಿಸುವ ಮಂತ್ರಗಳು ಹಾಕುತ್ತಾರೆ. ಈ ಮಂತ್ರಗಳು ತಮಿಳು ಭಾಷೆಯಲ್ಲಿ ಇದ್ದು ಈ ಭಾಷೆಯನ್ನು ಬಳಸಿ ಅವರ ಸಮಸ್ಯೆಯನ್ನು ಬಗೆಹರಿಸಿಸುತ್ತಾರೆ. ದಕ್ಕಲ ನಾರಾಯಣಪ್ಪ ಮತ್ತು ಮುನಿಸ್ವಾಮಿ ಅವರು ಮಾಟ–ಮಂತ್ರಗಳಲ್ಲಿ ಪ್ರಾವಿಣ್ಯತೆಯನ್ನು ಪಡೆದಿರುತ್ತಾರೆ. ಇವರು ಅವರ ಅಜ್ಜಿ ತಾತನ ಬಳಿ ಕುಳಿತು ಕಲಿತಿರುವುದಾಗಿ ಹೇಳುತ್ತಾರೆ.

**ವಶೀಕರಣ ಮಂತ್ರ**

ಕೇವಲ ಗುಣಪಡಿಸುವ ಮಂತ್ರಗಳೆ ಅಲ್ಲದೆ ಜನರನ್ನು ವಶೀಕರಣ ಮಾಡಿಕೊಳ್ಳುವ ಮಾಟದ ಮಂತ್ರಗಳು ಹಾಕುತ್ತಾರೆ, ಈ ವಿದ್ಯೆ ದಕ್ಕಲ ನಾರಾಯಣಸ್ವಾಮಿ ತಮ್ಮ ತಾತನ ಬಳಿ ಕಲಿತಿರುವುದನ್ನು ತಿಳಿಸುತ್ತಾರೆ.

ಉದಾ:- ಓಂ ಅರಿಸಿನಿ ವಾಲೆವ
ದಾಡಲ್ ರೋಲ್
ಮಹರಾಜ್ ತಂಡಾಲ್ ಕೋಲ್
ಏನ್ ವಾಶ್ ಹಾಂಗ್ ಶೇಂದಿ. ಕೇರಬಿಂಬ ಬರ್‌ವಾಲು

ಈ ಮಂತ್ರವನ್ನು ಹಾಕಿ ವ್ಯಕ್ತಿಯನ್ನು ತಮ್ಮ ವಶದಲ್ಲಿ ಇರಿಸಿಕೊಂಡು ತಮಗೆ ಬಂದ ಹಾಗೆ ಕುಣಿಸುತ್ತಾರೆ, ಈ ಮಂತ್ರ ಮೂರು ಭಾಷೆಗಳ ಮಿಶ್ರಣವನ್ನು ಹೊಂದಿದೆ.

**ನಂತರ ಕಟ್ಟು ಮಂತ್ರ:-**

ಉದಾ:- ಓಂ ರಡಿ ಗಡಿ ಜಾತ್ ಕಟ್ಟು
ಪರಮಾತ್ಮ ಕಟ್ ವಿಷ್ಣು ಬ್ರಹ್ಮಕಟ್ಟು
ನಾರಾಯಣ ಕಟ್ ಕಾಡು ಕಟ್ಟು
ಸುಡುಗಾಡು ಕಟ್ಟು ಊರು ತೀರುಗೋ ಸನ್ಯಾಸಿ ಕಟ್ಟು
ನೋಡೋ ಕಣ್ಣೂ ಕಟ್ಟು
ಹಾಡೋ ನಾಲಿಗೆ ಕಟ್ಟು
ಹೀರೆ ಎಂಭತ್ತು ಕೋಟಿ ಜೀವರಾಶಿಗಳ ಕಟ್ಟು
ಸರ್ಕಾರ ಜೆರ್ ಬಂದ್ ಕಟ್ಟು
ತೋಟಿ ತಲವಾರ ಕಟ್ಟು
ಗೌಡನ ಕಟ್ಟು
ಓಂ ಬರನಿ ಮಹಕಾಳಿ
ನಿನ್ನಿ ಪಾದರಾಶಿ ಓಂ ಕಟ್ಟು
ನಿನ್ನ ಪಾದದಾಶೆ ಓಂ ಕಟ್ಟು ಸ್ವಾಹ.

ಎಂದು ಕಟ್ಟು ಮಂತ್ರ ಹಾಕಿ ಕೈ ಕಾಲು ಹಿಡಿದು ಕೊಂಡಿದ್ದರೆ ಮಂತ್ರಗಳನ್ನು ಹಾಕಿ ವಾಸಿ ಮಾಡುತ್ತಾರೆ. ನಂತರ ವ್ಯಕ್ತಿಗಳಿಗೆ ಅಲ್ಲದೆ ಪ್ರಾಣಿಗಳಿಗೆ ಬಾವು ಆದರೆ ಪ್ರಾಣಿಗಳಿಗೂ ಹಾಕುವ ಮಂತ್ರ

ಉದಾ:- ಇಲಕು ಇಲುಕು ಪುಲರ್ ಪುಲರ್
ಗಾಲಿಗಿಂದಿ ದೂರ ಬೋಗು ಬ್ರಹ್ಮಪಟ್ಟು ಸ್ವಾಹಾ
ಅಲ್ಲಾಕುದಾಸಿಕಿ ಉತ್ತರ ಜಾವ ಓಂ ಬ್ರಂ ಪಟ್ಟು ಸ್ವಾಹಾ
ಅಗ ಅಗಂ ಬಂ ಕಾರಬಂ ಅಲ್ಕೋಟಿ ಸತ್ತಿಸ ಕೋಟಿ ಗುರುವಿಗೆ ಸ್ವಾಹಾ
ಬಾಲಗ್ರಹ ಗುರುವಿಗೆ ಅನುದತ್ ಓಂ ಚಲೋ ಪಟ್ಟು ಸ್ವಾಹಾ.

ಇಷ್ಟೇ ಅಲ್ಲದೆ ಮಾಟ ಮಂತ್ರಗಳಲ್ಲಿ ದೆವ್ವಗಳನ್ನು ಬಿಡಿಸುವರು ಅನೇಕ ರೀತಿಯ ಜಾನಪದ ವೈದ್ಯಗಳು ಈ ಸಮುದಾಯಗಳಲ್ಲಿ ಇಂದಿಗೂ ಜೀವಂತವಾಗಿರುವುದು ಕ್ಷೇತ್ರಕಾರ್ಯ ಅಧ್ಯಯನದಲ್ಲಿ ತಿಳಿದು ಬರುತ್ತದೆ.

**೫.೮. ಧಾರ್ಮಿಕ ವ್ಯವಸ್ಥೆ**

**ಆರುಂಧತಿ ದೇವಸ್ಥಾನ**

ಮಾದಿಗರು ಮತ್ತು ಈ ಸಮುದಾಯಗಳ ಉಪಜಾತಿಗಳಾದ ದಕ್ಕಲರು, ಮಾಸ್ತೀಕರು, ಸಿಂದ್ ಮಾದಿಗರು ಈ ಕುಟುಂಬಗಳ ಮೂಲ ಆದಿ ಜಾಂಬವ ಪುರಾಣ ಇದರಲ್ಲಿ ಮೂಲ ವ್ಯಕ್ತಿಯಾದ ಆದಿ ಜಾಂಬವನ ಮಗಳು ಅರುಂಧತಿ. ಬ್ರಾಹ್ಮಣ ಕುಟುಂಬದಲ್ಲಿ ಜನಿಸಿದ ವಶಿಷ್ಠನನ್ನು ವಿವಾಹವಾಗಿ ಮಾದಿಗ ಸಮುದಾಯಗಳಿಂದ ದೂರ ಉಳಿಯುತ್ತಾಳೆ. ಅವಳು ಪಾತಿವ್ರತೆ ನಿಷ್ಠೆ ಸತ್ಯ ಪ್ರತಿಕವಾಗಿದ್ದಾಳೆ. ಹಾಗಾಗಿ ಈ ಸಮುದಾಯಗಳ ದೇವತೆಯಾಗಿ ಪೂಜಿಸುತ್ತಾರೆ. ಕೋಲಾರ, ಚಿಕ್ಕಬಳ್ಳಾಪುರ ಪ್ರದೇಶದ ಸುಗಟೂರು ಗ್ರಾಮಕ್ಕೆ ಮೂರು ಕಿ.ಮೀ ದೂರದಲ್ಲಿ ಅರುಂಧತಿ ದೇವಸ್ಥಾನ ಸ್ಥಾಪಿಸಿದ್ದಾರೆ. ಈ ದೇವಸ್ಥಾನ ಸ್ಥಾಪಿಸಲು ಒಂದು ಕನಸಿನ ಕಥೆ ಇದೆ. ಸುಗಟೂರಿನ ಮಾದಿಗರ ನಾರಾಯಣ ಸ್ವಾಮಿಯವರ ಕನಸ್ಸಿನಲ್ಲಿ ಅರುಂಧತಿ ಬಂದು ನನಗೆ ಒಂದು ದೇವಸ್ಥಾನವನ್ನು ಕಟ್ಟಿಸಿ ನನ್ನ ವಿಗ್ರಹವನ್ನು ಪ್ರತಿಷ್ಠಾಪಿಸಿ ಪ್ರತಿ ದಿನ ಪೂಜೆಯನ್ನು ಮಾಡಿ ದೀಪವನ್ನು ಬೆಳಗಿಸಬೇಕು ತದ ನಂತರ ಒಂದು ಅಕ್ಷಯ ಪಾತ್ರೆಯನ್ನು ಇಟ್ಟು, ಅದಕ್ಕೆ ಪೂಜೆ ಮಾಡಿ ಕರ್ಪೂರ ಬೆಳಗಿಸಿ ಭಕ್ತಿಯಿಂದ ನಮಸ್ಕರಿಸಿ ಅದರಲ್ಲಿ ಕಾಣಿಕೆಯನ್ನು ಹಾಕಿ ಅದನ್ನು ತಲೆಯ ಮೇಲೆ ಇಟ್ಟುಕೊಂಡು ಕಣ್ಣು ಮುಚ್ಚಿ ಬೇಡಿಕೆಗಳನ್ನು ಮನಸ್ಸಿನಲ್ಲಿ ಬೇಡಿಕೊಂಡರೆ ಆ ಬೇಡಿಕೆಗಳು ಈಡೇರುತ್ತವೆ. ಆ ಕಾರ್ಯನೆರವೇರುವುದು ನಿಜವಾದರೆ ಅಕ್ಷಯಪಾತ್ರೆ ತಲೆಯ ಮೇಲೆ ತಿರುಗುತ್ತದೆ ಅವರ ಕಷ್ಟಗಳು ನೇರವೇರುತ್ತವೆ. ಎಂದು ಹಾವಿನ ರೂಪದಲ್ಲಿ ಬಂದು ಹೇಳಿತು. ಹಾಗಾಗಿ ದೇವಸ್ಥಾನವನ್ನು ಕಟ್ಟಿ ಪ್ರತಿ ದಿನ ಪೂಜೆ ಮಾಡುತ್ತಾರೆ.

ಹೀಗೆ ಕನಸ್ಸಿನಲ್ಲಿ ಬಂದು ಹೇಳಿದ ಮೇಲೆ ನಾರಾಯಣಸ್ವಾಮಿಯವರು ಅವರ ಇವರ ಹತ್ತಿರ ಬೇಡಿ ತಾನೂ ದುಡಿದ ದುಡ್ಡಿನಿಂದ ಅರುಂಧತಿ ದೇವಸ್ಥಾನ ಕಟ್ಟಿಸಿದ್ದಾರೆ, ಹೀಗೆ ಯಾರೆ ತಮಗೆ ಕಷ್ಟಗಳು ಇವೆ ಎಂದರೆ ನಾರಾಯಣಸ್ವಾಮಿಯವರು ಪೂಜೆ ಮಾಡಿ ಅಕ್ಷೆಯ ಪಾತ್ರೆಯನ್ನು ಅವರ ತಲೆಯ ಮೇಲೆ ಇಟ್ಟು ಭಕ್ತಿಯಿಂದ ಅರುಂಧತಿಯನ್ನು ನೆನೆದು ಕಷ್ಟ ನಿವಾರಿಸು ಹಾಗೂ ಮುಂದೆ ಜೀವನದಲ್ಲಿ ಏನಾಗಬೇಕು ಎಂದು ಬೇಡಿಕೊಳ್ಳಿ ಎಂದು ಹೇಳುತ್ತಾರೆ. ಅವರ ಕಷ್ಟಗಳು ಈಡೇರುವುದಾದರೆ ಅಕ್ಷ್ಯಯ ಪಾತ್ರೆ ತಲೆಯ ಮೇಲೆ ತಿರುಗುತ್ತದೆ. ಹೀಗೆ ಬಂದ ಭಕ್ತರಿಗೆ ಪೂಜೆ ಮಾಡಿ ಅವಳ ಮಹಿಮೆಯನ್ನು ಹೇಳುತ್ತಾರೆ. ಹೀಗೆ ಈ ಸಮುದಾಯಗಳು ಅರುಂಧತಿಯನ್ನು ನಮ್ಮ ಮನೆ ಮಗಳು ಎಂದು ಪೂಜಿಸುತ್ತಾರೆ.

ಆದಿಜಾಂಬವಂತನ ವಿಗ್ರಹವನ್ನು ಮಾಡಿ ಪ್ರತಿಷ್ಠಾಪಿಸಬೇಕು ಎಂದು ಮಾದಿಗ ನಾರಾಯಣ ಸ್ವಾಮಿ ತಮ್ಮ ಕುಲದ ಹಿರಿಯ ತಾತನನ್ನು ಪ್ರತಿಷ್ಠಾಪಿಸಿ ದೇವಸ್ಥಾನದಲ್ಲಿ ಹಿಂದಿಗೂ ಜೀವಂತವಾಗಿ ಇರಿಸಿ ಮುಂದಿನ ಪೀಳಿಗೆಗೂ ತಮ್ಮ ಸಮುದಾಯಗಳು ಮೂಲವನ್ನು ತಿಳಿಯುವುದಕ್ಕೆ

ಅನುಕೂಲವಾಗುತ್ತದೆ ಎಂದು ಈಗ ವಿಗ್ರಹವನ್ನು ದೇವಸ್ಥಾನದಲ್ಲಿ ಪ್ರತಿಷ್ಠಾಪಿಸುವ ಕೆಲಸ ನಡೆಯುತ್ತದೆ.

**ಆದಿ ಜಾಂಬವಂತನ ದೇವಸ್ಥಾನ**

ಮಾದಿಗರ ಮೂಲ ಪುರುಷ ಈ ಸಮುದಾಯಗಳ ಹುಟ್ಟಿಗೆ ಮೂಲ ಕಾರಣ ಪುರುಷ ಭೂಮಿಯು ಹುಟ್ಟುವುದಕ್ಕೆ ಆರು ತಿಂಗಳ ಮೊದಲೇ ಹುಟ್ಟಿ ಜಲಮಾಯವಾಗಿದ್ದ, ಇಡೀ ಭೂಮಿಯನ್ನು ಗಟ್ಟಿ ಮಾಡಿ ಇಡೀ ಜೀವ ಸಂಕುಲಗಳು ಬದುಕಿ ಉಳಿಯಲು ಒಂದು ನೆಲೆ ಮಾಡಿದ ಆದಿಜಾಂಬವ ಮಾದಿಗರ ಮತ್ತು ಉಪಕುಲಗಳ ತಾತ ಆದಿಜಾಂಬವನ ದೇವಸ್ಥಾನವನ್ನು ಕೋಲಾರ ಜಿಲ್ಲೆಯ ಆವಣಿ ಗ್ರಾಮದ ಆವಣಿ ಬೆಟ್ಟದಲ್ಲಿ ಸ್ಥಾಪಿಸಿದ್ದಾರೆ. ಇದು ಇತಿಹಾಸ ಪ್ರಸಿದ್ಧವಾದ ಬೆಟ್ಟವಾಗಿದೆ. ತ್ರೇತಯುಗದಲ್ಲಿ ಈ ಪ್ರದೇಶ ಕಾಡಿನಿಂದ ಕೂಡಿತ್ತು, ವಾಲ್ಮೀಕಿಯ ಆಶ್ರಮ ಈ ಬೆಟ್ಟದಲ್ಲಿ ಇತ್ತು ಎಂಬ ಕುರುಹುಗಳು ಈಗಲೂ ಜೀವಂತವಾಗಿದೆ. ರಾಮನು ಅಗಸನ ಮಾತಿನಿಂದ ನೊಂದು ತನ್ನ ಹೆಂಡತಿಯಾದ ಸೀತಾಮಾತೆಯನ್ನು ಕಾಡಿಗೆ ಕಳಿಸುತ್ತಾನೆ, ಆಗ ಲಕ್ಷ್ಮಣ ಸೀತೆಯನ್ನು ಕಾಡಿನಲ್ಲಿ ಬಿಟ್ಟಾಗ ವಾಲ್ಮೀಕಿ ಈ ಕಾಡಿನಲ್ಲಿ ಆಶ್ರಮವನ್ನು ಸ್ಥಾಪಿಸಿ ಸೀತೆಯನ್ನು ತಮ್ಮ ಆಶ್ರಮಕ್ಕೆ ಕರೆತರುತ್ತಾರೆ. ಆಶ್ರಮವಿರುವುದು ಆವಣಿ ಬೆಟ್ಟವಾಗಿದೆ. ಆಗ ಸೀತೆ ಅಡುಗೆ ಮಾಡುವಾಗ ಕಾರ ಅರಿಯುವುದಕ್ಕೆ ಬಳಸುತ್ತಿದ್ದ ವರಳು ಕಲ್ಲು ಈಗಲೂ ಇದೆ. ರಾಮನು ಅಶ್ವಮೇಧ ಕುದುರೆಯನ್ನು ಬಿಟ್ಟಾಗ ಲವಕುಶರು ಕುದುರೆಯನ್ನು ಕಟ್ಟಿಹಾಕಿದ ಸ್ಥಳದ ಕುರುಹು ಕುದುರೆ ಕಲ್ಲು ತಿಂದಿರುವ ಗುರುತುಗಳು ಈಗಲೂ ಆವಣಿ ಬೆಟ್ಟದಲ್ಲಿ ಇದೆ. ಈ ಬೆಟ್ಟದಲ್ಲಿ ಆದಿಜಾಂಬವಂತನ ವಿಗ್ರಹವನ್ನು ಪ್ರತಿಷ್ಠಾಪಿಸಿ ದೇವಸ್ಥಾನವನ್ನು ಕಟ್ಟಿಸಿದ್ದಾರೆ. ಎಲ್ಲಾ ಮಾದಿಗ ಸಮುದಾಯಗಳು ವರ್ಷಕ್ಕೆ ಒಂದು ಸಾರಿ ನಡೆಯುವ ಜಾತ್ರೆಯಲ್ಲಿ ಆದಿಜಾಂಬವನಿಗೂ ಪೂಜೆ ದೀಪೋತ್ಸವಗಳನ್ನು ಮಾಡಿ ತಮ್ಮ ಕುಲದೇವರನ್ನು ಆರಾಧಿಸುತ್ತಾರೆ.

**ಕೊನೆ ಟಿಪ್ಪಣಿಗಳು**

೧. ಜಾನಕಲ್‌ರಾಜಣ್ಣ, **ದಕ್ಕಲಿಗ,** ಪು. ೫೭, ೫೮.

೨. ಡಾ. ಚಲುವರಾಜು, **ದಕ್ಕಲಿಗ ಸಂಸ್ಕೃತಿ,** ಪು. ೨೯, ೩೧.

೩. ಡಾ. ಹಾ.ಮಾ. ನಾಯಕ, **ಜಾನಪದ ಸ್ವರೂಪ,** ಪು. ೮, ೯.



ಅಧ್ಯಾಯ : ಆರು

# ದಕ್ಕಲರ ಸಾಮಾಜಿಕ, ಆರ್ಥಿಕ, ಶೈಕ್ಷಣೆ ಮತ್ತು ರಾಜಕೀಯ ಸ್ಥಿತಿಗತಿಗಳು

೬.೧. ಸಾಮಾಜಿಕ ಸ್ಥಿತಿ

೬.೨. ಆರ್ಥಿಕ ಸ್ಥಿತಿ

೬.೩. ಶೈಕ್ಷಣಿಕ ಸ್ಥಿತಿ

೬.೪. ರಾಜಕೀಯ ಸ್ಥಿತಿ

ಅಧ್ಯಾಯ : ಆರು

# ದಕ್ಕಲರ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಮತ್ತು ರಾಜಕೀಯ ಸ್ಥಿತಿ

## ೬.೧. ದಕ್ಕಲ ಸಮುದಾಯದ ಸಾಮಾಜಿಕತೆ

ದಕ್ಕಲರ ಸಾಮಾಜಿಕ ಸ್ಥಿತಿ ಇಂದಿನ ಹಲವು ಸಮುದಾಯಗಳಿಗಿಂತ ಕೆಳಸ್ಥರದಲ್ಲಿರುವುದು ಕಂಡುಬರುತ್ತದೆ. ಮಾದಿಗರ ಉಪಜಾತಿಗಳಲ್ಲಿ ದಕ್ಕಲರು ಅಲೆಮಾರಿ ಜನಾಂಗಕ್ಕೆ ಸೇರಿದವರಾಗಿದ್ದಾರೆ. ಏಕೆಂದರೆ ಇವರು ಸಹ ಒಂದು ಕಡೆ ನೆಲೆನಿಲ್ಲದೆ ಊರಿಂದ ಊರಿಗೆ ವಲಸೆ ಹೋಗಿ ತಮ್ಮ ಜೀವನವನ್ನು ಸಾಗಿಸುತ್ತಿದ್ದಾರೆ. ಈ ಹೊತ್ತಿನ ಸಂದರ್ಭದಲ್ಲಿಯೂ ಬದಲಾವಣೆ ಕಂಡು ಕೊಂಡಿಲ್ಲವೆಂದರೆ ಅತಿಶಯೋಕ್ತಿಯಲ್ಲ. ಇಂತಹ ಭಾರತೀಯ ಸಮಾಜದಲ್ಲಿ ಅತ್ಯಂತ ಕೆಳಸ್ಥರದಲ್ಲಿರುವ ಸಮುದಾಯಗಳು ಭೌತಿಕ ಕಗ್ಗತ್ತಲಲ್ಲೇ ಗುರುತಿಸುವ ಹಾಗೆ ಕಂಡುಬರುತ್ತದೆ. ಅಭಿವೃದ್ಧಿಯ ಕಡೆ ಸಾಗುತ್ತಿದ್ದರೂ ಈ ಕುಟುಂಬಗಳು ಮಾತ್ರ ವಲಸಿಗರಾಗಿ ಉಳಿದುಕೊಂಡಿರುವುದು ತಿಳಿಯುತ್ತದೆ. ಯಾವುದೇ ಒಂದು ಸಮುದಾಯ ಅಭಿವೃದ್ದಿ ಪಥದತ್ತ ಸಾಗಬೇಕಾದರೆ ಆ ಕುಟುಂಬಕ್ಕೆ ಪ್ರಾಕೃತಿಕ ಮೂಲ ಸೌಲಭ್ಯಗಳಾದ ಸಾಮಾಜಿಕ ಭದ್ರತೆ ಶಿಕ್ಷಣ ಆರ್ಥಿಕತೆ ಅವಲಂಭನೆ ಬೇಕಾಗುತ್ತದೆ. ಒಂದು ವೇಳೆ ಇವು ಇಲ್ಲದ ಪಕ್ಷದಲ್ಲಿ ಈ ಕುಟುಂಬಗಳು ವಲಸಿಗರಾಗಿಯೇ ಕಂಡು ಬರುತ್ತಾರೆ. ಇಂತಹ ವಲಸಿಗರು, ಅಲೆಮಾರಿ ಜನಾಂಗಗಳು ನಮ್ಮಲ್ಲಿ ಕಂಡು ಬರುತ್ತಾರೆ.[೧]

ಈ ಅಧ್ಯಯನದಲ್ಲಿ ಗಮನಿಸುವ ಹಾಗೆ ಸಾಮಾಜಿಕ ಅಸ್ಪೃಶ್ಯ ವರ್ಗಗಳಲ್ಲಿ ಬಹಿಷ್ಕೃತವಾಗಿ ಹೊರದೂಡಲ್ಪಟ್ಟು ಅದರಲ್ಲಿ ಮುಖ್ಯವಾಗಿ ಎಡಗೈ ಬಲಗೈ ಬಣಗಳಾದ ಹೊಲಯ ಮತ್ತು ಮಾದಿಗ ಸಮುದಾಯಗಳು ಸಮಾಜದ ಮೂಲೆ ಮೂಲೆಯಲ್ಲಿ ಹರಡಿರುವ ಸಮುದಾಯಗಳಾಗಿವೆ. ಈ ಗುಂಪುಗಳ ನಡುವೆ ಸಾಮಾಜಿಕವಾದ ಭಿನ್ನತೆಗಳಿದ್ದು, ಎಡಗೈ ಸಮುದಾಯವಾದ ಮಾದಿಗ ಕುಲಬಳ್ಳಿಗೆ ಸೇರಿದ ದಕ್ಕಲರು ಮಾದಿಗರ ಕೇರಿಗಳ ನೆರೆಹೊರೆಯಲ್ಲಿ ವಸತಿಗಾಗಿ ಆಶ್ರಯಿಸಿರುವುದು ಕಂಡುಬರುತ್ತದೆ. ಪಟ್ಟಣ ಪ್ರದೇಶದಲ್ಲಿಯೂ ಸಹ ಈ ಸಮುದಾಯಗಳು ಹೊರವಲಯದಲ್ಲಿ ಬಿಡಾರ ಹೂಡಿರುವುದು ಕಂಡುಬರುತ್ತದೆ. ಇವರ ಕುಲಕಸುಬು ಈಚಲ ಚಾಪೆ ಹೆಣೆಯುವುದು, ಬುಟ್ಟಿಗಳನ್ನು ಹೆಣೆಯುವುದು, ಭಿಕ್ಷೆ ಬೇಡುವುದು, ಈ ಕಸುಬುಗಳನ್ನು ಗಮನಿಸಿದಾಗ ಜಾನಪದ

ಕಲೆಗಳ ರೂಪವಾಗಿದ್ದು, ಈ ಕಲೆಗಳು ಆಧುನಿಕತೆಯ ಪ್ರಭಾವದಿಂದ ಮೂಲೆ ಗುಂಪಾಗಿರುವುದು ಕಂಡುಬರುತ್ತದೆ.

ಈಗ ಕೂಲಿ ಕೆಲಸಗಳಿಗೆ ಹೋಗುವುದರಿಂದ ತಮ್ಮ ಕುಲಕಸುಬುಗಳ ಮೇಲೆ ಬರೆ ಎಳೆದಂತಾಗಿದೆ. ಅನಕ್ಷರಸ್ಥರು ತೋರಿಸುವ ಕಲೆಗಳು ಅಲಕ್ಷ್ಯಕ್ಕೆ ಗುರಿಯಾಗಿ ತಮ್ಮ ಮೂಲ ಬದುಕನ್ನೇ ಕಸಿದುಕೊಂಡಿದೆ. ಆಧುನಿಕತೆ ಬದಲಾವಣೆಗಳಿಂದ ನಮ್ಮ ಬದುಕು ಹೇಗಾಗಿದೆ ಎಂದು ನಮ್ಮ ಕ್ಷೇತ್ರ ಕಾರ್ಯದಲ್ಲಿ ಈ ಸಮುದಾಯಗಳ ಜನರು ಹೇಳಿಕೊಂಡ ಸಂದರ್ಭವಾಗಿದೆ.

ಭಾರತೀಯ ಸಮುದಾಯದ ಜನಗಣತಿಯ ಪ್ರಕಾರ ಬಡತನರೇಖೆಗಿಂತಲೂ ಅತಿ ಕೆಳಸ್ಥರದಲ್ಲಿ ಜೀವನ ಸಾಗಿಸುತ್ತಿರುವ ದಕ್ಕಲರು ಈಗ ಗ್ರಾಮೀಣ ಪ್ರದೇಶಗಳಲ್ಲಿ ಕೃಷಿಯ ಕೂಲಿಯನ್ನು ಅವಲಂಬಿಸಿದ್ದಾರೆ. ಒಬ್ಬ ವ್ಯಕ್ತಿಗೆ ಮೂಲಭೂತವಾಗಿ ಬೇಕಾಗಿರುವುದು ಒಂದು ಹೊತ್ತಿನ ಊಟ ಹಾಗೂ ತನ್ನ ಮಾನ ರಕ್ಷಣೆಗೆ ಬೇಕಾಗಿರುವ ಬಟ್ಟೆ ತಾನು ವಾಸಿಸುವುದಕ್ಕೆ ಬೇಕಾಗುವ ಸೂರು ಈ ಮೂಲ ವಸ್ತುಗಳು ಇದ್ದಾಗ ಮಾತ್ರ ಅವನು ಒಂದು ಕಡೆ ಸ್ಥಿರವಾಗಿ ನೆಲೆನಿಲ್ಲಲು ಸಾಧ್ಯವಾಗುತ್ತದೆ. ಈ ಮೂಲ ಸೌಕರ್ಯಗಳು ಇಲ್ಲದೇ ಇದ್ದ ಪಕ್ಷದಲ್ಲಿ ಅವನು ಒಂದು ಕಡೆ ನೆಲೆನಿಲ್ಲಲು ಸಾಧ್ಯವಾಗುವುದಿಲ್ಲ. ಇಂತಹ ಸ್ಥಿತಿಯಲ್ಲಿ ಕೃಷಿಯಲ್ಲಿ ಆಧುನಿಕ ಯಂತ್ರೋಪಕರಣಗಳು ಬಳಕೆಗೆ ಬಂದು ದುಡಿಯುವ ಕೈಗಳಿಗೆ ಕೆಲಸವಿಲ್ಲದೆ ಅಲೆದಾಡುವಂತಾಗಿದೆ. ಕೃಷಿ ಕೂಲಿಯನ್ನು ನಂಬಿದ್ದ ಈ ಸಮುದಾಯಗಳು ಈಗ ನಗರ ಪ್ರದೇಶಗಳಿಗೆ ವಲಸೆ ಹೋಗಿ ಅಲ್ಲಿ ತನ್ನ ನೆಲೆಯನ್ನು ಕಾಣುವುದಕ್ಕೆ ಪ್ರಾರಂಭಿಸಿರುವುದರಿಂದ ಗ್ರಾಮೀಣ ಪ್ರದೇಶಗಳಲ್ಲಿ ಬೆರಳೆಣಿಕೆಯಷ್ಟು ಮಾತ್ರ ಈ ಸಮುದಾಯಗಳು ಸಿಗುತ್ತಾರೆ. ಇವರು ನಗರಪ್ರದೇಶಗಳನ್ನು ಹೆಚ್ಚು ಅವಲಂಬಿಸಿ ಖಾಸಗಿ ಕಂಪನಿಗಳಲ್ಲಿ ಕೆಲಸಕ್ಕೆ ತೊಡಗಿದ್ದಾರೆ. ಹಾಗೂ ಗಾರೆ ಕೆಲಸ ನಗದು ವ್ಯಾಪಾರ ಸಾಮಾಜಿಕ ಕೀಳರಿಮೆಯಿಂದ ದೂರವಾಗಿ ಸ್ವತಂತ್ರವಾಗಿ ಬದುಕುತ್ತಿರುವುದು ಕಂಡುಬರುತ್ತದೆ. ದಕ್ಕಲ ಸಮುದಾಯ ಇಂದಿಗೂ ಸಹ ತಮ್ಮ ಮಾದಿಗ ಸಮುದಾಯಗಳ ಕೇರೆಗಳ ಪಕ್ಕದಲ್ಲಿ ಅವರಿಗಿಂತ ಸ್ವಲ್ಪ ದೂರವಾಗಿ ತಮ್ಮ ಗುಂಪಿನೊಡನೆ ನೆಲೆಸಲು ಬಯಸುತ್ತಾರೆ. ಯಾರ ಜೊತೆಯಲ್ಲೂ ಬೆರೆಯದೆ ತಮ್ಮ ಕುಲಗಳೊಂದಿಗೆ ಹೊಂದಿಕೊಂಡು ಪರಕೀಯತೆಯ ಹೆದರಿಕೆಯಿಂದ ಜನಸಾಮಾನ್ಯರ ಜೊತೆ ಬೆರೆಯಲು ಇಷ್ಟಪಡದೆ ಈ ಜನರು ಸಮಾಜದಲ್ಲಿ ತಮ್ಮ ಸ್ಥಾನಮಾನಗಳಿಸಿಕೊಳ್ಳಲಾಗದೆ ಪ್ರತ್ಯೇಕವಾಗಿ ಜೀವಿಸುತ್ತಿರುವುದು ತಮ್ಮ ಕುಲಬಂಧುಗಳ ನೆರೆಯಲ್ಲಿ ಜೀವಿಸುತ್ತಿರುವುದಕ್ಕೆ ಕಾರಣವಾಗಿದೆ. ಈ ಪ್ರದೇಶದ ಕೆಲವು ಭಾಗಗಳಲ್ಲಿ ಈಗಲು ತಮ್ಮ ಮನೆಗಳ ಹತ್ತಿರ ಸೇರಿಸಿಕೊಳ್ಳುವುದಿಲ್ಲ. ಉದಾಹರಣೆಗೆ ಮಾದವ ಗುರ್ಜೇನಹಳ್ಳಿಯ ಬಯಲು ಸೀಮೆ ಪ್ರದೇಶದಲ್ಲಿ ಮಾದಿಗರ ಕುಟುಂಬಗಳೇ ಹೆಚ್ಚಾಗಿದ್ದು, ಅದರಲ್ಲಿ ೪ ಕುಟುಂಬಗಳು ದಕ್ಕಲ ಕುಟುಂಬಗಳು ವಾಸವಾಗಿದ್ದು, ಇಲ್ಲಿ ಜಾತಿ ಜನಾಂಗಗಳಿಗಿಂತ ಮಾದಿಗರೇ ಈ ಕುಟುಂಬಗಳು ದೂರವಿರಿಸಿರುವುದು ಕಂಡು ಬರುತ್ತದೆ. ಇಲ್ಲಿ ನೆಲೆಸಿರುವ ಇತರೇ ಜಾತಿ

ಜನಾಂಗಗಳಾದ ವಕ್ಕಲಿಗರು ಬಣಜಿಗರು ಬ್ರಾಹ್ಮಣರು ಭೋವಿ ಜನಾಂಗದವರು ದಕ್ಕಲರನ್ನು ಯಾವುದೇ ರೀತಿಯ ಭೇದಭಾವವಿಲ್ಲದೆ ತಮ್ಮ ಮನೆಗಳ ಹತ್ತಿರ ಸೇರಿಸಿಕೊಂಡು ಅವರ ಕಷ್ಟ-ಸುಖಗಳಲ್ಲಿ ಬಾಗಿಯಾಗುತ್ತಾರೆ. ಆದರೆ ಮಾದಿಗರು ತಮ್ಮ ಮನೆಗಳ ಹತ್ತಿರ ಸೇರಿಸಿಕೊಳ್ಳುವುದಿಲ್ಲ. ಏಕೆಂದರೆ ಇವರು ನಮ್ಮ ದೊಕ್ಕೆಯಿಂದ ಹುಟ್ಟಿರುವ ಮಕ್ಕಳು ನಮಗಿಂತ ಕೆಳಜಾತಿಯವರು ಎಂಬ ಬೇದಭಾವ ಇವರಲ್ಲಿದೆ ಹಾಗೂ ಇವರ ಕೊಡುವ ಭಿಕ್ಷೆಯಲ್ಲಿ ಬದುಕುವ ಈ ಸಮುದಾಯಗಳು ನಮ್ಮನ್ನು ಅವಲಂಬಿಸಿ ಬದುಕುತ್ತಿದ್ದಾರೆ ಎಂಬ ಅಹಂ ಇವರಲ್ಲಿರುವುದರಿಂದ ಈಸಮುದಾಯಗಳನ್ನು ಕೀಳಾಗಿ ಕಾಣುವುದಕ್ಕೆ ಕಾರಣವಾಗಿದೆ. ಈಗ ಇವರ ಹುಟ್ಟು ಇವರ ಕುಲ ಕಸುಬು ಇವರನ್ನು ಸಮಾಜದಿಂದ ದೂರವಾಗಿ ಬದುಕುವುದಕ್ಕೆ ಮಾರ್ಗವಾಗಿದೆ ಎಂಬ ಅಂಶ ಈ ಸಮುದಾಯಗಳ ಧ್ವನಿಯಲ್ಲೇ ಕೇಳಬಹುದು. ಈ ಬಯಲು ಪ್ರದೇಶಗಳಲ್ಲಿ ಕೆಲವು ದಕ್ಕಲ ಕುಟುಂಬಗಳಿಗೆ ಸ್ವತಃ ದುಡಿದು ತಿನ್ನುವುದಕ್ಕೆ ಜಮೀನು ಇಲ್ಲದೆ ಭೂಮಾಲೀಕರ ತೋಟಗಳಲ್ಲಿ ಕೂಲಿಕೆಲಸಗಳನ್ನು ಮಾಡಿಕೊಂಡು ಅದರ ಜೊತೆಯಲ್ಲಿ ಜೀವನಕ್ಕಾಗಿ ಕುರಿ, ಮೇಕೆ ಕೋಳಿಗಳನ್ನು ಪೋಷಿಸಿಕೊಂಡು ಬಿಡುವಿನ ಸಂದರ್ಭದಲ್ಲಿ ಆರ್ಥಿಕತೆಗಾಗಿ ಬುಟ್ಟಿ ಹೆಣೆದು ಅದನ್ನು ಮಾರಾಟ ಮಾಡಿ ಹಾಗೂ ಗಾರೆ ಕೆಲಸಗಳಿಗೆ ಹೋಗಿ ಆರ್ಥಿಕತೆಯನ್ನು ಕ್ರೋಡೀಕರಿಸುವುದಕ್ಕೆ ಹೆಣಗಾಡುತ್ತಿದ್ದಾರೆ ಇನ್ನು ಅಲ್ಪಸ್ವಲ್ಪ ಜಮೀನು ಇರುವ ಸಮುದಾಯಗಳು ಜಮೀನುಗಳಲ್ಲಿ ಅದು ಅರ್ಧ ಎಕರೆ ಒಂದು ಎಕರೆ ಇರುವ ಭೂಮಿಯಲ್ಲಿ ರಾಗಿ ಅವರೆ ಜೋಳ ಹಾಕಿ ತಮ್ಮ ಜೀವನಕ್ಕೆ ಬೇಕಾಗುವಷ್ಟು ಬೆಳೆಗಳನ್ನು ಬೆಳೆಯುತ್ತಾರೆ. ಈ ಬೆಳೆಗಳು ಸಹ ಮಳೆಗಾಗಿ ಕಾಯುವ ಪರಿಸ್ಥಿತಿ ಇದೆ ಒಂದು ವೇಳೆ ಮಳೆ ಕೈಕೊಟ್ಟರೆ ಇದಕ್ಕೂ ಸಹ ಕಡಿವಾಣವಾಗುತ್ತದೆ. ಹೀಗಾಗಿ ಇದರ ಮೇಲೆ ಹೆಚ್ಚು ಅವಲಂಭಿಸದೆ ಕೂಲಿಕೆಲಸಗಳಿಗೆ ಹೋಗಿ ಆರ್ಥಿಕತೆಯನ್ನು ಒದಗಿಸಿಕೊಂಡು ತಮ್ಮ ಮಕ್ಕಳನ್ನು ಸಹ ಕೆಲಸಗಳಿಗೆ ಬಳಸಿಕೊಳ್ಳುವುದುಂಟು ಹೆಚ್ಚಿನ ಸಂಖ್ಯೆಯಲ್ಲಿ ದಕ್ಕಲರ ಸ್ವಂತ ಭೂಮಿಯ ಕನಸು ಕನಸಾಗಿರುವುದು ತಮ್ಮ ಮಕ್ಕಳ ಮುಂದಿನ ಭವಿಷ್ಯಕ್ಕೆ ದೊಡ್ಡತೊಡಕಾಗುತ್ತದೆ ಎಂದು ಇಲ್ಲಿನ ಸಮುದಾಯಗಳು ತಮ್ಮ ನೆಲೆಯನ್ನು ಗಟ್ಟಿಮಾಡಿಕೊಳ್ಳಲು ಕೆಲವು ಹೋರಾಟಗಳಲ್ಲಿ ಭಾಗಿಯಾಗಿರುವುದು ಕಂಡುಬರುತ್ತದೆ.

ಕೋಲಾರ ಜಿಲ್ಲೆಗೆ ಸಂಬಂಧಿಸಿದ ದಕ್ಕಲ ಸಮುದಾಯಗಳಿಗೆ ಸರ್ಕಾರದಿಂದ ಸಿಗುವ ಸೌಲಭ್ಯಗಳು ಪಡೆಯುವಲ್ಲಿ ವಿಫಲರಾಗಿರುವುದು ಜಾತಿಯತೆಯ ದೊಡ್ಡ ದುರಂತವಾಗಿದೆ. ಏಕೆಂದರೆ ಸಮಾಜದ ದೃಷ್ಟಿಯಲ್ಲಿ ಈ ಸಮುದಾಯಗಳು ಅತ್ಯಂತ ಕೆಳಸ್ತರ ಜಾತಿ ದಕ್ಕಲಿಗರು ಎಂದು ಗುರುತಿಸಿಕೊಂಡಿದ್ದರಿಂದ ಸಮಾಜದಿಂದ ದೂರವಿರಿಸಿದ್ದಾರೆ. ಆದರೆ ಸರ್ಕಾರದ ದೃಷ್ಟಿಯಲ್ಲಿ ಇವರು ದಕ್ಕಲಿಗ ಸಮುದಾಯಕ್ಕೆ ಸೇರಿದವರಲ್ಲ. ಇವರು ಭೋವಿ ಜನಾಂಗ ಅಥವಾ ಮಾದಿಗ ಜನಾಂಗಕ್ಕೆ ಸೇರಿದವರು ಎಂದು ಜಾತಿ ಪ್ರಮಾಣಪತ್ರದಲ್ಲಿ ನಮೂದಿಸಿರುವುದು ಈ ಸಮುದಾಯಗಳ ದುರಂತವಾಗಿದೆ. ಇದರ ಹಿನ್ನೆಲೆ ಇಲ್ಲದ ಸಮುದಾಯಗಳು ಸರ್ಕಾರದ ವಿರುದ್ಧ ಹೋರಾಟ ಮಾಡಿದರು ಅನೇಕ ಸಲ ಮನವಿ ಮಾಡಿದರು ಯಾವುದೇ ಪ್ರಯೋಜನವಿಲ್ಲದೆ ತಮ್ಮ ಮಕ್ಕಳ

ಮುಂದಿನ ಭವಿಷ್ಯದಲ್ಲಾದರೂ ಸಿಗಲಿ ಎಂದು ಹೋರಾಟ ಮಾಡಿದರು. ಯಾವುದೇ ರೀತಿಯಲ್ಲಿ ನಮಗೆ ನ್ಯಾಯ ಸಿಗುತ್ತಿಲ್ಲ. ಹೀಗಾಗಿ ನಮ್ಮ ಆರ್ಥಿಕತೆಗೆ ಹಾಗೂ ಶೈಕ್ಷಣಿಕತೆಗೆ ದೊಡ್ಡ ಸವಾಲಾಗಿದೆ. ಆದರೆ ಕರ್ನಾಟಕದ ಕೋಲಾರ ಮತ್ತು ಚಿಕ್ಕಬಳ್ಳಾಪುರ ಬಿಟ್ಟು ಬೇರೆ ಜಿಲ್ಲೆಗಳಲ್ಲಿ ಜಾತಿ ಪ್ರಮಾಣ ಪತ್ರದಲ್ಲಿ ದಕ್ಕಲ ಸಮುದಾಯ ಎಂದು ನಮೂದಾಗಿದೆ. ಅವರಿಗೆ ಸರ್ಕಾರದಿಂದ ಸಿಗುವ ಸೌಲಭ್ಯಗಳು ದೊರೆಯುತ್ತಿವೆ. ಹೀಗಾಗಿ ನಮಗೆ ಕನಿಷ್ಠ ಸೌಲಭ್ಯಗಳು ದೊರೆತರೆ ಸಾಕು ಎಂದು ಜಾತಕ ಪಕ್ಷಿಗಳಂತೆ ಕಾಯುತ್ತಿದ್ದಾರೆ. ಹೀಗಾಗಿ ತಮ್ಮ ಮಕ್ಕಳ ಭವಿಷ್ಯಕೆ ತೊಡಕಾಗಬಾರದು ಎಂಬುದು ನಮ್ಮ ಆಶಯವಾಗಿದೆ.

ಈ ಸಮುದಾಯಗಳನ್ನು ಅಧ್ಯಯನಕ್ಕೆ ಒಳಪಡಿಸಿದಾಗ ಹಿರಿಯ ತಲೆಗಳು ಹೇಳುವ ಮಾತುಗಳಲ್ಲಿ ಇವರ ನಿಯಮಗಳು ಮಾತ್ರ ತುಂಬಾ ಕಟ್ಟುನಿಟ್ಟಾಗಿದೆ. ಏಕೆಂದರೆ ಯಾವುದೇ ಸಮುದಾಯ ಏನನ್ನು ಬಯಸದಿರುವಂತಹ ವಿಶಿಷ್ಟವಾದ ಮತ್ತು ಉಪೇಕ್ಷಿತ ಸಮುದಾಯವಾಗಿದ್ದು, ಬೇರೆ ಸಮುದಾಯಗಳ ಹತ್ತಿರ ತಮ್ಮ ಕೈಯನ್ನು ಚಾಚದೆ ಕೇವಲ ತಮ್ಮ ಕುಲಬಳ್ಳಿಯಲ್ಲಿ ಮಾತ್ರ ಕೈಚಾಚುತ್ತಾರೆ. ಈ ಸಮುದಾಯಗಳು ವಲಸೆ ಸಂದರ್ಭದಲ್ಲಿ ಅವರ ಗುಡಿಸಲು ಗುಡಾರಗಳಲ್ಲಿ ಬೆಂಕಿ ಹಾಕುತ್ತಿರಲಿಲ್ಲ. ಅಂದರೆ ಅಡುಗೆ ಮಾಡುತ್ತಿರಲಿಲ್ಲ "ಹೊಗೆ ಇಲ್ಲದ ಊಟ" ಎಂಬ ನಾಣ್ಣುಡಿಯಂತೆ ಮಾದಿಗರ ಮನೆಗಳನ್ನು ಅವಲಂಬಿಸಿದಾಗ ತಮ್ಮ ಸಮುದಾಯದ ಅಡುಗೆ ಕೋಣೆ ಒಲೆ ಹಚ್ಚುತ್ತಿರಲಿಲ್ಲ, ಹಾಗೆ ಅಡುಗೆಯ ಸಂಪ್ರದಾಯವಿರರಲಿಲ್ಲ. ಏಕೆಂದರೆ ಅಂದಿನ ಜಾಂಬವ ತಾತನ ಮಾತಿಗೆ ಕಟ್ಟುಬಿದ್ದು ಈ ದಕ್ಕಲ ಸಮುದಾಯಗಳು ಒಲೆ ಹಚ್ಚಿ ಅಡುಗೆ ಬೇಯಿಸುವ ಗೋಜಿಗೆ ಹೋಗುತ್ತಿರಲಿಲ್ಲ. ವಲಸೆಯ ಸಂದರ್ಭದಲ್ಲಿ ಮಾದಿಗರಿಂದ ದೂರವಿದ್ದರೂ ಸಹ ಮಾದಿಗರನ್ನು ನೆನೆಸಿಕೊಂಡು ತಿನ್ನುತ್ತಿದ್ದರು. ಇದು ತಲೆತಲೆಮಾರುಗಳಿಂದ ಬಂದ ಸಾಂಸ್ಕೃತಿಕವಾದ ಸಂಪ್ರದಾಯವಾಗಿದೆ. ಒಂದು ಬೊಗಸೆ ನೀರು ಕುಡಿದರೂ ಮಾದಿಗರನ್ನು ನೆನೆಸಿ ಸ್ವಾಮಿ ಎಂದು ಹೇಳುತ್ತಾರೆ. ಈ ಸಮುದಾಯಗಳಲ್ಲಿ ಎಂತಹ ಕಟುಬದ್ದ ಸಂಪ್ರದಾಯವೆಂದರೆ ಒಂದು ವೇಳೆ ಮಾದಿಗರು ಭಿಕ್ಷೆ ನೀಡದೆ ಕುಡಿಯುವುದಕ್ಕೆ ನೀರು ಕೊಡದೆ ಇದ್ದ ಪಕ್ಷದಲ್ಲಿ ಹಸಿವಿನಿಂದ ಬಾಯಾರಿಕೆಯಿಂದ ಮಾದಿಗರನ್ನು ನೆನೆಸಿಕೊಂಡು ಸಾಯುತ್ತೇವೆ ಹೊರತು ಬೇರೆಯವರಿಂದ ಏನನ್ನು ಸಹ ನಾವು ಬಯಸುವುದಿಲ್ಲ ಒಂದು ವೇಳೆ ಕೊಟ್ಟರೂ ನಾವು ಸ್ವೀಕರಿಸುವುದಿಲ್ಲ ಎಂಬುದು ಈ ಸಮುದಾಯಗಳ ಮಾತು.

ಇಂತಹ ಕಟ್ಟುನಿಟ್ಟಿನ ಪದ್ಧತಿಗಳನ್ನು ಪಾಲಿಸಿಕೊಂಡು ಬಂದಿರುವ ಈ ಸಮುದಾಯಗಳು ಸಾಂಸ್ಕೃತಿಕ ಹಾಗೂ ಧಾರ್ಮಿಕ ಶ್ರದ್ಧಾಭಕ್ತಿಗಳೆಂದೆ ಹೇಳಬಹುದು. ಧಾರ್ಮಿಕವಾಗಿ ಶ್ರದ್ಧಾ ಭಕ್ತಿಗಳಾದರು ಸಾಂಸ್ಕೃತಿಕವಾಗಿ ಧರ್ಮದ ಆಡಂಬರಗಳಿಗೆ ಒಳಪಟ್ಟಿಲ್ಲವೆಂದು ಹೇಳಬಹುದು. ಇವರ ದಂತ ಪುರಾಣದ ಪ್ರಕಾರ ಜಾಂಬವಂತನಿಗೆ ಶಿವನ ವರಪ್ರಸಾದದಿಂದ ಜನಿಸಿದ ದಕ್ಕಲರು ಶಿವನ ಮೂಲದವರೆಂದು ಈ ಸಮುದಾಯಗಳ ನಂಬಿಕೆಯಾಗಿದೆ ಹೀಗಾಗಿ ಈ ಸಮುದಾಯಗಳು ಪುರಾಣದ ಹಿನ್ನೆಲೆಯಲ್ಲಿ ಹಾಗೂ ಧಾರ್ಮಿಕತೆಯಲ್ಲಿ ಎಲ್ಲಾ ಸಮುದಾಯಗಳಿಗಿಂತ

ಶ್ರೀಮಂತವಾಗಿದ್ದರು ಸಾಂಸ್ಕೃಕ ಆಡಂಬರಗಳಿಗೆ ದೂರವಾಗಿರುವುದು. ಇವರಲ್ಲಿನ ಆರ್ಥಿಕ ಸ್ಥಿತಿ ತುಂಬ ದುರ್ಬಲತೆವಾಗಿದೆ ಹಾಗೂ ಸಾಮಾಜಿಕ ಅಸಮಾನತೆಯಿಂದ ಹಬ್ಬಗಳ ಆಚರಣೆಗಳಲ್ಲಿ ಮತ್ತು ದೇವರ ಉತ್ಸವಗಳಿಂದ ದೂರವಾಗಿರುವುದು ಈ ಪ್ರದೇಶಗಳಲ್ಲಿ ತಿಳಿಯುತ್ತದೆ. ಶಿವನ ವರ ಪುತ್ರರಾಗಿರುವುದು ಇವರ ಸಂಕಥನಗಳಿಂದ ತಿಳಿದಿದ್ದರು ಆಡಂಬರಗಳಿಂದ ದೂರವಾಗಿರುವುದು ಈ ಸಮುದಾಯಗಳ ಸಾಂಸ್ಕೃತಿಕ ದುಸ್ಥಿತಿಗೆ ಕಾರಣವಾಗಿದೆ. ಎಷ್ಟೇ ಧಾರ್ಮಿಕ ನಂಬಿಕೆ ಉಳ್ಳವರಾಗಿದ್ದರು ತಮಗಾಗಿ ದೇವಾಲಯಗಳನ್ನು ನಿರ್ಮಿಸಿ ಸಾಂಸ್ಕೃತಿಕ ನಂಬಿಕೆಗಳನ್ನು ಉಳಿಸಿಕೊಳ್ಳುವ ಶಕ್ತಿ ಇವರಿಗೆ ಇಲ್ಲವಾಗಿದೆ. ಅಷ್ಟೇ ಅಲ್ಲದೆ ಅಲೆಮಾರಿಗಳಾದ ಇವರಿಗೆ ದೇವಾಲಯ ಕಟ್ಟುವ ಮನಸ್ಥಿತಿ ಎಲ್ಲಿಂದ ಬರುವುದಕ್ಕೆ ಸಾಧ್ಯವಾಗುತ್ತದೆ. ಹಾಗೂ ಕಟ್ಟಿಸುವ ಶಕ್ತಿ ಈ ಸಮುದಾಯಗಳಲ್ಲಿಲ್ಲ. ಹೀಗಾಗಿ ಈ ಊರಿನ ದೇವಾಲಯಗಳಿಗಿಂತ ತಮ್ಮ ಮನೆಯನ್ನು ದೇವಾಲಯವಾಗಿಸಿ ದೇವರಪೋಟೋ ಜೊತೆಗೆ ಜಾಂಬವಂತನ ಪೋಟೋವನ್ನು ಇಟ್ಟು ಪೂಜಿಸುವುದು ನನ್ನ ಕ್ಷೇತ್ರಕಾರ್ಯದಲ್ಲಿ ಅವರ ಮನೆಯ ಒಳಗೆ ಹೋಗಿ ನೋಡಿದಾಗ ತಿಳಿದುಬಂದಿದೆ.

**ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿ ದಕ್ಕಲರ ಸಾಮಾಜಿಕ ಸ್ಥಿತಿ:–** ೧೯ರ ದಶಕದಲ್ಲಿ ದಕ್ಕಲರು ಒಂದು ಕಡೆ ನೆಲೆ ನಿಲ್ಲದೆ ಇಂದಿನ ಸ್ಥಿತಿಗಿಂತಲು ತುಂಬ ಕಠಿಣವಾದ ಜೀವನವಾಗಿತ್ತು ಇಂದಿನ ಸಂದರ್ಭದಲ್ಲಿ ಈ ಸಮುದಾಯಗಳು ಒಂದು ಕಡೆ ನೆಲೆನಿಂತು ಸ್ವಲ್ಪಮಟ್ಟಿಗಾದರೂ ಜೀವನವನ್ನು ಸುಧಾರಿಸಿಕೊಳ್ಳುತ್ತಿದ್ದಾರೆ. ಆದರೆ ಆ ಸಂದರ್ಭದಲ್ಲಿ ಒಂದು ಕಡೆ ನೆಲೆ ನಿಲ್ಲುವುದಕ್ಕೆ ಬಿಡದೆ ವಲಸಿಗರಾಗಿ ಊರಿಂದ ಊರಿಗೆ ಅಲೆಯುತ್ತಿದ್ದರು. ಇಂತಹ ಸ್ಥಿತಿಯಲ್ಲಿ ಬ್ರಿಟಿಷರ ದಬ್ಬಾಳಿಕೆ ಈ ಅರೆ ಅಲೆಮಾರಿಗಳ ಮೇಲೆಯು ಪ್ರಭಾವ ಬೀರಿದ್ದು. ಇವರನ್ನು ಜೀತದಾಳುಗಳಾಗಿ ಗುಲಾಮರಾಗಿ ತಮ್ಮ ಸೇವೆಗೆ ಸೀಮಿತವಾಗಿಸಿದ್ದರು. ನಂತರ ಈ ಸಮುದಾಯಗಳು ಗುಲಾಮಗಿರಿ ಮಾಡದ ಪಕ್ಷದಲ್ಲಿ ಬೂಟುಕಾಲಿನಿಂದ ಒದೆಯುತ್ತಿದ್ದರು ಎಂದು ಮಾಧವ ಗುರ್ಜನಹಳ್ಳಿಯವರ ಅಧ್ಯಯನದಲ್ಲಿ ದಕ್ಕಲ ಗೋವಿಂದಪ್ಪ ತಮ್ಮ ಮಕ್ಕಳಿಗೆ ಹೇಳಿರುವುದು ಈ ಕ್ಷೇತ್ರ ಕಾರ್ಯದಲ್ಲಿ ತಿಳಿಸಿದರು. ಅಷ್ಟೇ ಅಲ್ಲದೆ ಬ್ರಿಟಿಷರನ್ನು ಪರಂಗಿಯರು ಎಂದು ಗುರುತಿಸುತ್ತಾರೆ. ಪರಂಗಿಯರು ಬಂದರೆ ತಮ್ಮ ಸಮುದಾಯಗಳ ಗಂಡಸರು ಸ್ತ್ರೀಯರನ್ನು ಗುಡಿಸಲುಗಳಿಂದ ಹೊರ ಬರುವುದಕ್ಕೆ ಬಿಡುತ್ತಿರಲಿಲ್ಲ ಏಕೆಂದರೆ ಬ್ರಿಟೀಷರು ಸಾಮಾನ್ಯ ಸ್ತ್ರೀಯರ ಮೇಲೆ ಅಲ್ಲದೆ ಅರೆ ಅಲೆಮಾರಿಗಳ ಸ್ತ್ರೀಯರ ಮೇಲೆಯು ಶೋಷಣೆ ಅತ್ಯಾಚಾರಗಳನ್ನು ಮಾಡುತ್ತಿದ್ದರು. ಇದಕ್ಕೆ ಹೆದರಿ ದಕ್ಕಲರು ಸ್ತ್ರೀಯರನ್ನು ಹೊರಗೆ ಬಿಡುತ್ತಿರಲಿಲ್ಲ ಅಂದಿನ ಸಂದರ್ಭದಲ್ಲಿ ಸಾಮಾಜಿಕ ಭದ್ರತೆಯಿಂದ ದೂರವಾಗಿದ್ದರು ಸಮಾಜದಿಂದ ದೂರವಾಗಿ ಬದುಕುತ್ತಿದ್ದರು. ಈ ಸಮುದಾಯಗಳನ್ನು ಬಿಡದೆ ತಮ್ಮ ತೆಕ್ಕೆಗೆ ಒಳಪಡಿಸಿ ಗುಲಾಮರಾಗಿಸಿದ್ದರು. ನಮ್ಮ ಮೇಲೆಯು ಶೋಷಣೆ ಮಾಡಿ ಶಿಕ್ಷಣಕ್ಕೂ ಸಹ ದೊಡ್ಡ ತೊಡಕಾದರು. ಹಾಗಾಗಿ ನಮ್ಮ ಸಮುದಾಯಗಳು ಆ ಸಂದರ್ಭದಲ್ಲಿ ಶಿಕ್ಷಣದಿಂದ ದೂರವಾಗಿ ಅನಕ್ಷರಸ್ಥರಾದರು. ಸಮಾಜದಲ್ಲಿ ತಿಳುವಳಿಕೆ ಇಲ್ಲದೆ ಗುಲಾಮರಾಗಿ ವಲಸೆ ಹೋಗಿ

ಭಿಕ್ಷೆ ಬೇಡಿ ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದೆವು. ಹಾಗೆ ಸ್ವಾತಂತ್ರ್ಯಕ್ಕೆ ಗಾಂಧೀಜೀಯಂತಹ ಮಹಾನ್ ವ್ಯಕ್ತಿಗಳಿಂದ ನಮಗೆ ಸ್ವಾತಂತ್ರ್ಯ ಬಂದಿದ್ದು ಅವರ ಹೋರಾಟಗಳು ಈಗಲೂ ಕಣ್ಣುಮುಂದೆ ಕಾಣುತ್ತಿವೆ ಎಂದು ದಕ್ಕಲ ಗೋವಿಂದಪ್ಪ ತಮ್ಮ ಮಕ್ಕಳಿಗೆ ಹೇಳಿರುವುದು ತಿಳಿಯುತ್ತದೆ.

**ಊರಿನಲ್ಲಿ ಇವರ ಸ್ಥಾನಮಾನ:–** ಅಲೆಮಾರಿ ಸಮುದಾಯಗಳು ಎಂದರೆ ಒಂದು ಕಡೆ ನೆಲೆನಿಲ್ಲದೆ ಊರಿಂದ ಊರಿಗೆ ಅಲೆದಾಡುತ್ತಾ ಊರ ಹೊರಗೆ ಮಾದಿಗರ ಕೇರಿಗಳಿಗೆ ಕನಿಷ್ಠ ದೂರದಲ್ಲಿ ಬದುಕುತ್ತಿರುವ ಈ ಸಮುದಾಯಗಳು ಕಿಂಚಿತ್ತೂ ಗೌರವ ಇಲ್ಲದೆ ಇರುವುದಕ್ಕೆ ಕಾರಣ ಇವರ ವಲಸುತನ ಹಾಗೂ ಅವರ ಕುಲ ವೃತ್ತಿಯ ಮೂಲ ಕಾರಣವಾಗಿದೆ. ಹಾಗಾಗಿ ಈ ಸಮುದಾಯಗಳು ಕೆಲವು ದಿನಗಳ ಮಟ್ಟಿಗಷ್ಟೆ ಊರುಗಳಲ್ಲಿ ಗುಡಿಸಲುಗಳನ್ನು ಹಾಕಿಕೊಂಡು ಜೀವಿಸುತ್ತಾರೆ. ನಂತರ ಮತ್ತೊಂದು ಊರಿಗೆ ವಲಸೆ ಹೋಗುತ್ತಾರೆ. ಹೀಗಾಗಿ ಮೇಲು ವರ್ಗದ ಸಮುದಾಯಗಳು ದಕ್ಕಲ ಸಮುದಾಯಗಳನ್ನು ದೂರವಾಗಿ ಇರಿಸಿ ಅವರನ್ನು ಅತ್ಯಂತ ಕೀಳಾಗಿ ಕಾಣುವ ಸನ್ನಿವೇಶಗಳು ಇಂದಿಗೂ ಬಿಟ್ಟಿಲ್ಲ. ಸಮಾಜ ಎಷ್ಟೇ ಮುಂದುವರಿದರು ತಮ್ಮಲ್ಲಿರುವ ಜಾತಿ ಮುಖ್ಯ ಕಾರಣವಾಗಿದೆ ಹಾಗೆ ಬೀದಿಗಳಲ್ಲಿ ಓಡಾಡುವುದಕ್ಕೆ ಬಿಡುವುದಿಲ್ಲ ಹಾಗೂ ದಾರಿಯಲ್ಲಿ ಹೋಗುವಾಗ ಊರಿನ ಹಿರಿಯ ವ್ಯಕ್ತಿಗಳು ಬಂದರೆ ಈ ಸಮುದಾಯಗಳ ವ್ಯಕ್ತಿಗಳು ಅವರ ಎದುರಾಗಿ ಹೋಗುವ ಹಾಗಿಲ್ಲ. ಒಂದು ವೇಳೆ ಹೋದರೆ ತಲೆಯನ್ನು ಬಗ್ಗಿಸಿ ದೂರವಾಗಿ ಹೋಗಬೇಕಾಗುತ್ತದೆ. ಇಂತಹ ಸ್ಥಿತಿ ಈಗಲೂ ಕೆಲವು ಊರುಗಳಲ್ಲಿ ಕಾಣುತ್ತೇವೆ. ನಂತರ ಸಮುದಾಯಗಳಿಗಿಂತ ದಕ್ಕಲ ಕುಲ ಬಂಧುಗಳಾದ ಮಾದಿಗ ಸಮುದಾಯಗಳೇ ಅತ್ಯಂತ ಕೀಳಾಗಿ ಕಾಣುವುದನ್ನು ಕೋಲಾರ ಜಿಲ್ಲೆಗೆ ಸೇರಿದ ಕೆಲವು ಹಳ್ಳಿಗಳಲ್ಲಿ ಕಾಣುತ್ತೇವೆ. ಕುಡಿಯುವ ನೀರಿಗೂ ಸಹ ಮೇಲ್ ಸಮುದಾಯಗಳನ್ನು ಆಶ್ರಯಿಸಬೇಕು. ಏಕೆಂದರೆ ಈ ಸಮುದಾಯಗಳು ಬೋರುವೆಲ್ ಬಳಿ ಕೊಡವನ್ನು ಇಟ್ಟು ನೀರು ತುಂಬಿಸುವ ಹಾಗಿಲ್ಲ. ಹಾಗಾಗಿ ಮೇಲ್ಜಾತಿಯ ಜನರು ತಮ್ಮಕೊಡದಲ್ಲಿ ನೀರು ಹಿಡಿದು ಇವರ ಕೊಡಗಳಿಗೆ ತುಂಬಿಸುತ್ತಾರೆ. ಇಂತಹ ಸ್ಥಿತಿ ಈಗಲೂ ಕೆಲವು ಪ್ರದೇಶಗಳಲ್ಲಿ ಕಂಡುಬರುತ್ತದೆ.

ಸಂವಿಧಾನ ಹಕ್ಕುಗಳಲ್ಲಿ ಸಮಾನತೆ ಹಕ್ಕು ಸಮಾಜದಲ್ಲಿ ಎಲ್ಲರೂ ಸಮಾನರು ಮೇಲು ಕೀಳು ಎಂಬ ಭೇದಭಾವ ಇದೆ ಎಂದು ಹೇಳುತ್ತದೆ. ಆದರೆ ಹಿಂದಿನ ಆಧುನಿಕತೆಯಲ್ಲಿ ಸಮಾನತೆ ಕಾಣದೇ ಈಗಲೂ ಮೇಲು ಕೀಳು ಎಂಬ ಭೇಧ ಭಾವ ಇರುವುದು ಸಮಾಜದ ದೊಡ್ಡ ದುರಂತವಾಗಿದೆ. ಇನ್ನು ಕೆಲವು ಪ್ರದೇಶಗಳಲ್ಲಿ ಸ್ವಲ್ಪಮಟ್ಟಿಗೆ ಈ ಸಮುದಾಯಗಳಿಗೆ ಗೌರವಗಳನ್ನು ನೀಡುವುದು ಈ ಅಧ್ಯಯನದ ವೇಳೆ ತಿಳಿದು ಬಂದಿದೆ. ಏಕೆಂದರೆ ಈ ಸಮುದಾಯಗಳು ತಮ್ಮ ಮೂಲ ಕಸುಬುಗಳನ್ನು ಬಿಟ್ಟು ಸಮಾಜಕ್ಕೆ ಹೊಂದಿಕೊಂಡು ಬದುಕಬೇಕು ಎಂಬ ತಮ್ಮ ತಲೆಮಾರುಗಳ ಮೂಲ ಕಸುಬುಗಳಿಗೆ ಬರೆ ಎಳೆದು ಇತರೆ ಕೆಲಸಗಳಲ್ಲಿ ತೊಡಗಿಸಿಕೊಂಡ ತಮ್ಮ ಕೇರಿಗಳನ್ನು ಸ್ವಚ್ಛವಾಗಿಟ್ಟುಕೊಂಡು ತಾವು ಸಹ ಸ್ವಲ್ಪಮಟ್ಟಿಗೆ

ಬದಲಾವಣೆಗಳನ್ನು ಕಂಡುಕೊಂಡಿರುವುದು ಹಾಗೂ ಎಲ್ಲಾ ಸಮುದಾಯಗಳ ಜೊತೆ ಬೆರೆತು ಕೆಲಸಗಳನ್ನು ಮಾಡುತ್ತಿದ್ದಾರೆ. ತಮ್ಮ ಬೀದಿಗಳಲ್ಲಿ ಸಹ ಸೇರಿಸಿಕೊಳ್ಳುತ್ತಿದ್ದಾರೆ. ಆದರೆ ಕುಲಬಂಧುಗಳಾದ ಮಾದಿಗರು ಮಾತ್ರ ತಮ್ಮ ಕೇರಿಗಳಿಗೆ ಸೇರಿಸಿಕೊಳ್ಳುವುದಿಲ್ಲ ಎಂದು ಮಾದವ ಗುರ್ಜೇನಹಳ್ಳಿಯ ದಕ್ಕಲ ಸಮುದಾಯಗಳು ಹೇಳುವ ಮಾತು.

ಈ ಬಯಲು ಸೀಮೆ ಕೆಲವು ಪ್ರದೇಶಗಳಲ್ಲಿ ದಕ್ಕಲಿಗರು ತಮ್ಮ ಜಾತಿಯ ಬಗ್ಗೆ ಹೇಳಿಕೊಳ್ಳದೇ ಭೋವಿ ಜನಾಂಗಕ್ಕೆ ಸೇರಿದವರು ಎಂದು ಹೇಳಿಕೊಳ್ಳುತ್ತಾರೆ. ತಮ್ಮ ಜಾತಿಯ ಬಗ್ಗೆ ತಿಳಿಸಿದರೆ ಕನಿಷ್ಠ ಗೌರವ ಸಿಗುವುದಿಲ್ಲ ಹಾಗೂ ಕೂಲಿಕೆಲಸಗಳಿಗೆ ಕರೆಯುವುದಿಲ್ಲ ಎಂಬ ಭಯದಿಂದ ನಂತರ ಒಂದು ವೇಳೆ ಕೂಲಿಗೆ ಹೋದರೆ ನಮ್ಮನ್ನು ಕಡೆಗಣಿಸುತ್ತಾರೆ ಮತ್ತು ದೂರದಿಂದ ಆಹಾರವನ್ನು ನೀಡುತ್ತಾರೆ ಎಂಬ ಭಯದಿಂದ ನಾವು ದಕ್ಕಲಿಗರು ಎಂದು ಹೇಳಿಕೊಳ್ಳುವುದಿಲ್ಲ ಇಂತಹ ಸ್ಥಿತಿ ಶಿಡ್ಲಘಟ್ಟ ತಾಲ್ಲೂಕಿನ ಹೆಚ್.ಕ್ರಾಸ್ ಎಂಬ ಹಳ್ಳಿಯಲ್ಲಿ ದಕ್ಕಲ ಸಮುದಾಯಗಳಲ್ಲಿ ಕಂಡುಬರುತ್ತದೆ. ಅಷ್ಟೇ ಅಲ್ಲದೆ ಜಾತಿಯ ಪ್ರಮಾಣ ಪತ್ರದಲ್ಲಿ ಆದಿ ಕರ್ನಾಟಕ ಸಮುದಾಯವಿದ್ದು ಭೋವಿಜನಾಂಗಕ್ಕೆ ಸೇರಿದವರು ಎಂದು ನಮೂದಾಗಿರುವುದರಿಂದ ನಾವು ಭೋವಿ ಜನಾಂಗಕ್ಕೆ ಸೇರಿದವರು ಎಂದು ಈ ಸಮುದಾಯಗಳು ಹೇಳಿಕೊಳ್ಳುತ್ತಾರೆ. ಇನ್ನು ಶ್ರೀನಿವಾಸಪುರದ ಪಟ್ಟಣ ಪ್ರದೇಶಗಳಲ್ಲಿ ಸರ್ಕಾರದ ಕೆರೆಯಲ್ಲಿ ಗುಡಿಸಲು ಹಾಕಿಕೊಂಡು ಜೀವಿಸುತ್ತಿರುವ ಇವರು ಅಲ್ಲಿನ ರಾಜಕಾರಣಿಗಳು ಈ ಪ್ರದೇಶದಲ್ಲಿ ವಾಸಿಸುವುದಕ್ಕೆ ಬಿಡದೆ ಇವರನ್ನು ಕಾಡು ಪ್ರದೇಶಕ್ಕೆ ಕಳಿಸುವುದಕ್ಕೆ ಮುಂದಾಗಿದ್ದಾರೆ. ಇವರು ವಾಸಿಸುವ ಸ್ಥಳದಲ್ಲಿ ಅಪಾರ್ಟ್‌ಮೆಂಟ್ ಕಟ್ಟಬೇಕು ಎಂದು ಹೇಳಿರುವುದುಂಟು ಹೀಗೆ ಈ ಸಮುದಾಯಗಳು ಊರುಗಳಲ್ಲಿ ಮೂಲ ನೆಲೆಯನ್ನು ಕಾಣದೆ ಪರದಾಡುವಂತಾಗಿದೆ. ನಂತರ ಈ ಸಮುದಾಯಗಳು ಶುಭ ಸಮಾರಂಭಗಳಿಗೆ ಹೋಗುವುದಿಲ್ಲ. ನಮಗೆ ತಕ್ಕ ಗೌರವ ಸಿಗುವುದಿಲ್ಲ ಎಂದು ಊರಿನ ಯಾವುದೇ ಶುಭ ಸಮಾರಂಭಗಳಲ್ಲಿ ಭಾಗವಹಿಸುವುದಿಲ್ಲ. ಸಮಾಜದಲ್ಲಿ ನಾಗರಿಕತೆ ಬೆಳೆದಂತೆಲ್ಲಾ ಕೆಳವರ್ಗಗಳ ಜಾತಿಯತೆ ಎಂಬ ಅಂಟುರೋಗ ಈ ಸಮುದಾಯಗಳನ್ನು ವಿಚಲಿತಗೊಳಿಸುವುದು ಮಾತ್ರ ಖಚಿತವಾಗುತ್ತದೆ. ಇತರ ಭೇದಭಾವಗಳಿಂದ ಬುಡುಕಟ್ಟು ಸಮುದಾಯಗಳ ಜೀವಕ್ಕೆ ಕುತ್ತು ತಂದಂತಾಗುತ್ತದೆ.

ಈ ಸಮುದಾಯಗಳಿಗೆ ಊರಿನ ಶುಭ ಸಮಾರಂಭಗಳಿಗೆ ಭಾಗವಹಿಸಲು ಅನುಮತಿ ನೀಡದೇ ಇದ್ದರು ಈ ಸಮುದಾಯಗಳಲ್ಲಿ ಮಾಡಿದ ಅಡುಗೆ ಎಲ್ಲರು ತಿಂದ ಮೇಲೆ ಉಳಿದ ಅಡುಗೆಯನ್ನು ಸಮಾರಂಭದ ನಂತರ ಕೆಳಸಮುದಾಯಗಳನ್ನು ಕರೆಸಿ ಅವರಿಗೆ ಭಿಕ್ಷೆಯ ರೂಪದಲ್ಲಿ ನೀಡುವುದುಂಟು. ಹೀಗೆ ಮಾದಿಗರು ತಮ್ಮ ಉಪಕುಲವಾದ ದಕ್ಕಲರು ಸಹ ಮನೆಯ ಹತ್ತಿರ ಕರೆಸಿಕೊಡುವುದಿಲ್ಲ. ಮಾದಿಗರ ಕೆರೆಯಲ್ಲಿ ಮಂಟಪ ನಿರ್ಮಿಸಿರುತ್ತಾರೆ. ಆ ಮಂಟಪದಲ್ಲಿ ದಕ್ಕಲ ಮಕ್ಕಳು ಬಂದು ಕುಳಿತು ಭಿಕ್ಷೆ ನೀಡಿ ಎಂದು ಮಾದಿಗರನ್ನು ಕೇಳಿದಾಗ

ಮಾದಿಗರಲ್ಲಿ ಒಬ್ಬ ಮುಖ್ಯಸ್ಥ ತಮ್ಮ ದಕ್ಕಲ ಮಗ ಬಂದಿದ್ದಾನೆ ಎಂದು ಎಲ್ಲರೂ ಮನೆಯಲ್ಲಿ ಭಿಕ್ಷೆಯನ್ನು ಸಂಗ್ರಹಿಸಿ ತಂದು ದಕ್ಕಲ ಮಕ್ಕಳಿಗೆ ನೀಡುತ್ತಾರೆ. ಈ ಸಮುದಾಯಗಳಲ್ಲಿ ಸ್ತ್ರೀಯರು ಭಿಕ್ಷೆ ಹಾಕುವ ಹಾಗಿಲ್ಲ ಹಾಗೂ ದಕ್ಕಲರಲ್ಲಿ ಸ್ತ್ರೀಯರು ಭಿಕ್ಷೆ ಬೇಡುವ ಹಾಗಿಲ್ಲ ಎಂಬ ಪದ್ಧತಿಗಳು ಇವೆ. ನಂತರ ತಮ್ಮ ಕುಲದ ಶಾಪವು ಇದಕ್ಕೆ ಕಾರಣವಾಗಿದೆ. ಮಾದಿಗರ ಕೇರಿಗಳು ಬಿಟ್ಟು ಬೇರೆ ಸಮುದಾಯಗಳಲ್ಲಿ ಭಿಕ್ಷೆ ಬೇಡಿದರೆ ನಿಮ್ಮ ತಲೆ ೧೬ ಭಾಗಗಳಾಗಿ ಒಡೆಯುತ್ತದೆ ಎಂಬ ವಿಶ್ವಕರ್ಮನ ಶಾಪದಿಂದ ಈ ಸಮುದಾಯಗಳು ಬೇರೆಯವರಲ್ಲಿ ಕೈ ಚಾಚುವುದಿಲ್ಲ. ಏನೇ ಮಾಡಿದರು ಕುಲಬಂಧುಗಳನ್ನು ನೆನೆಯುತ್ತಾರೆ. ಹೀಗಾಗಿ ಈ ಸಮುದಾಯಗಳು ಬೇರೆ ಜನಾಂಗದ ಜನರೊಂದಿಗೆ ಬೇರೆಯದ ಈ ದಕ್ಕಲರು ಇತ್ತೀಚೆಗೆ ಸ್ವಲ್ಪ ಮಟ್ಟಿನ ಬದಲಾವಣೆಗಳಿಂದ ಎಲ್ಲಾರ ಜೊತೆ ಬೇರೆಯುವುದಕ್ಕೆ ಮುಂದಾಗಿದ್ದಾರೆ.

**ಊರಿನ ಜಾತ್ರೆ:–** ಹಳ್ಳಿಗಳಲ್ಲಿ ಸಾಮಾನ್ಯವಾಗಿ ಜಾತ್ರೆಗಳು ಎಂದರೆ ಸಂಭ್ರಮದ ಸಡಗರವೇ ಹೆಚ್ಚಾಗಿರುತ್ತದೆ. ಎಲ್ಲಾ ಸಮುದಾಯದವರು ತಮ್ಮ ನೆಂಟರುಗಳನ್ನುಆಹ್ವಾನಿಸಿ ಜಾತ್ರೆಗಳಲ್ಲಿ ಭಾಗವಹಿಸುತ್ತಾರೆ. ಈ ಜಾತ್ರೆಗಳಲ್ಲಿ ದಕ್ಕಲ ಸಮುದಾಯಗಳು ಮಾತ್ರ ಸಂಭ್ರಮ ಸಡಗರವಿಲ್ಲದೆ ತಮ್ಮ ವಲಸೆಯನ್ನು ಮುಂದುವರಿಸುತ್ತಾರೆ. ಒಂದು ಹಳ್ಳಿಯಲ್ಲಿ ತಮ್ಮ ಸ್ವಂತಿಕೆ ನೆಲೆ ಇಲ್ಲದೆ ಆ ಹಳ್ಳಿ ಜಾತ್ರೆಯಲ್ಲಿ ಭಾಗವಹಿಸಲು ಎಷ್ಟರಮಟ್ಟಿಗೆ ಸಾಧ್ಯವಾಗುತ್ತದೆ? ಎಂಬ ಪ್ರಶ್ನೆ ಎದುರಾಗುತ್ತದೆ. ನಂತರ ಇವರು ಗುಡಿಸಲುಗಳಲ್ಲಿ ವಾಸಿಸುವರು ಇವರ ವೃತ್ತಿ ಹಾಗೂ ಸ್ವಚ್ಛತೆ ಇಲ್ಲದವರು ಎಲ್ಲಾ ಜಾತಿಗಳಿಗಿಂತ ಕಡೆಗಣಿಸಿರುವವರು ಎಂದು ಈಗಲೂ ಕೆಲವು ಹಳ್ಳಿಗಳಲ್ಲಿ ಊರಿನ ಜಾತ್ರೆಗಳಿಂದ ದೂರವಿರಿಸಿದ್ದಾರೆ.

**ದೇವರ ಪೂಜೆ:–** ಹಳ್ಳಿಗಳಲ್ಲಿ ಜಾತ್ರೆಯನ್ನು ಮಾಡುವುದೇ ದೇವರನ್ನು ಒಲಿಸಿಕೊಳ್ಳುವುದು. ಅದಕ್ಕೆ ಪೂಜೆಗಳ ಸಂಭ್ರಮವೇ ಹೆಚ್ಚಾಗಿರುತ್ತದೆ. ಈ ಸಂದರ್ಭದಲ್ಲಿ ಊರಿನ ಎಲ್ಲಾ ದೇವರಿಗೂ ಪೂಜೆಗಳನ್ನು ನೆರವೇರಿಸುತ್ತಾರೆ. ಎಲ್ಲಾ ಸಮುದಾಯಗಳು ಪೂಜೆ ಮಾಡಿದ ನಂತರ ಕೆಳವರ್ಗದ ಸಮುದಾಯಗಳು ಪೂಜೆ ಮಾಡಬೇಕಾಗುತ್ತದೆ. ನಂತರ ಈ ಜಾತ್ರೆಗಳಲ್ಲಿ ಪ್ರಾಣಿಗಳನ್ನು ಬಲಿಕೊಡುವಾಗಲು ಸಹ ಮೇಲುಜಾತಿಯ ಸಮುದಾಯಗಳು ಮೊದಲು ಕೋಳಿ ಕುರಿಯನ್ನು ಬಲಿಕೊಟ್ಟ ಮೇಲೆ ಕೆಳವರ್ಗಗಳು ಪ್ರಾಣಿ ಬಲಿಯನ್ನು ಕೊಡಬೇಕು. ಈ ಸಮುದಾಯಗಳು ವಿಶೇಷವಾಗಿ ಕೋಣವನ್ನು ಬಲಿ ಕೊಡುತ್ತಾರೆ. ಹೀಗಾಗಿ ಹಬ್ಬ ಜಾತ್ರೆಗಳಲ್ಲಿ ಈ ಸಮುದಾಯಗಳನ್ನು ದೂರವಿರಿಸುತ್ತಾರೆ ಹೊರತು ತಮಗೆ ಹತ್ತಿರ ಸೇರಿಸಿಕೊಳ್ಳುವುದಿಲ್ಲ. ಆದ್ದರಿಂದ ಕೆಳ ಸಮುದಾಯಗಳು ಊರಿನ ಜಾತ್ರೆ ಸಮಾರಂಭಗಳಿಗೆ ಹೆಚ್ಚಾಗಿ ಭಾಗವಹಿಸುವುದಿಲ್ಲ. ನಂತರ ತಮ್ಮ ಕುಲಸ್ಥರನ್ನು ಸಹ ಆಹ್ವಾನಿಸುವುದಿಲ್ಲ.

ಈ ಸಮುದಾಯಗಳು ಹೆಚ್ಚಾಗಿ ಗಾಳಮ್ಮ, ಮುನೇಶ್ವರ, ಯಲ್ಲಮ್ಮ, ಚೌಡಮ್ಮ, ದುರ್ಗಮ್ಮ ಇವರ ಆರಾಧಕರಾಗಿದ್ದು ಜಾತ್ರೆಗಳಲ್ಲಿ ಈ ದೇವರುಗಳಿಗೆ ಪ್ರಾಣಿ ಬಲಿಯನ್ನು ಮಾಡುತ್ತಾರೆ.

ಈ ಸಮುದಾಯಗಳು ಹೆಚ್ಚಾಗಿ ಮುನೇಶ್ವರನನ್ನು ಆರಾಧಿಸುತ್ತಾರೆ ಹಾಗೂ ಮಕ್ಕಳ ರೂದಲು ತೆಗೆಯುವ ಶಾಸ್ತ್ರವು ಸಹ ಮುನೇಶ್ವರ ಸಮಕ್ಷಮದಲ್ಲಿ ಶಾಸ್ತ್ರಗಳನ್ನು ಮಾಡಿ ಕೂದಲನ್ನು ತೆಗೆಯುತ್ತಾರೆ. ಊರಿನ ಜಾತ್ರೆಯ ಸಂದರ್ಭದಲ್ಲಿ ದೇವರ ಮೆರವಣಿಗೆ ಬಂದಾಗ ಕೆಳವರ್ಗಗಳು ದೂರದಿಂದ ನಿಂತು ನೋಡಬೇಕು ದೇವರ ಪೂಜೆಗೆ ಕೊಡುವ ಹಾಗಿಲ್ಲ. ಆದರೆ ದೇವರ ಮೆರವಣಿಗೆ ಉತ್ಸವದಲ್ಲಿ ಕೆಳವರ್ಗಗಳು ಮಾತ್ರ ತಮಟೆ ಹಲಗೆ ಬಾರಿಸುವುದಕ್ಕೆ ಮಾತ್ರ ಸೀಮಿತವಾಗಿದ್ದಾರೆ. ಆದರೆ ದೇವರ ಪೂಜೆ ಮಾಡಿಸುವುದಕ್ಕೆ ಮಾತ್ರ ಹತ್ತಿರ ಬರುವ ಹಾಗಿಲ್ಲ. ಇಂತಹ ಸನ್ನಿವೇಶಗಳು ಈಗಲೂ ಹಳ್ಳಿಗಳಲ್ಲಿ ಕಂಡುಬರುತ್ತದೆ.

**ಹೋಟೇಲ್‌ಗಳಲ್ಲಿ ನಡೆಸಿಕೊಳ್ಳುವ ರೀತಿ:-** ನಾಗರಿಕ ಸಮಾಜದಲ್ಲಿ ಮೇಲು ಜಾತಿ ಕೀಳು ಜಾತಿಗಳ ನಡುವಿನ ಸಂಘರ್ಷಗಳು ಪುರಾತನ ಕಾಲದಿಂದಲೂ ಕೆಲವರ್ಗದವರನ್ನು ಕೀಳಾಗಿ ಕಾಣುತ್ತಿದ್ದಾರೆ. ಹಾಗೆಯೇ ಅವರ ನಾಗರೀಕತೆ ಇಲ್ಲದವರು ಎಲ್ಲಾ ಜಾತಿ ಜನಾಂಗಗಳಿಗಿಂತ ಅತ್ಯಂತ ಕೇಳಸ್ಥರ ಜಾತಿಗಳು ಇಂತಹ ಜಾತಿಗಳು ನಮ್ಮಲ್ಲಿ ಸೇರಿಸಿಕೊಂಡರೆ ಮೈಲಿಗೆಯಾಗುತ್ತದೆ ಎಂಬ ಭಾವನೆಗಳು ಸಮಾಜದಲ್ಲಿ ಮುಡುಗಟ್ಟಿದ ಪದ್ಧತಿಯಾಗಿದೆ. ಇದೇ ರೀತಿಯಾಗಿ ೨೦ರ ದಶಕದ ಹಿಂದೆ ಈ ಬುಡುಕಟ್ಟು ಕುಟುಂಬಗಳನ್ನು ತಮ್ಮಿಂದ ದೂರವಾಗಿ ಇಡುತ್ತಿದ್ದರು. ಹೋಟೇಲ್‌ಗಳಲ್ಲಿ ಊಟಕ್ಕೆ ಹೋದರೆ ಅವರಿಗೆ ಪ್ರತ್ಯೇಕವಾದ ತಟ್ಟೆ ಲೋಟವನ್ನು ಇಡುತ್ತಿದ್ದರು. ನಂತರ ಒಳಗಡೆ ಸೇರಿಸದೆ ಹೋಟೇಲ್‌ಗಳ ಹೊರಗೆ ಕುಳಿತು ತಿನ್ನಬೇಕಾಗಿತ್ತು. ನಂತರ ಊಟ ಮಾಡಿದ ಬಳಿಕ ತಟ್ಟೆಯನ್ನು ಇವರೇ ತೊಳೆದು ಇಡಬೇಕು. ಹೀಗೆ ಹೋಟೇಲ್‌ಗಳಲ್ಲಿ ಕೆಳವರ್ಗಗಳನ್ನು ಅತ್ಯಂತ ಕೀಳಾಗಿ ಕಾಣುತ್ತಿದ್ದರು. ಇಲ್ಲಿ ಊಟಕ್ಕೆ ಕೂಡುವ ಬೆಲೆ ಮಾತ್ರ ಎಲ್ಲರಿಗೂ ಸಮನಾಗಿ ಇರುತ್ತಿತ್ತು. ಆದರೆ ನೋಡುವ ವಿಧಾನ ಮಾತ್ರ ಬೇರೆಯಾಗಿತ್ತು.

ಸಮಾಜ ಪರಿವರ್ತನೆಯಾದಂತೆ ಕೆಳವರ್ಗಗಳ ಜನರಲ್ಲಿ ಚೇತರಿಕೆ ಕಂಡುಕೊಂಡು ತಮ್ಮ ಸಮುದಾಯಗಳಲ್ಲಿ ವ್ಯಕ್ತಿ ನಡುವಳಿಕೆಗಳಲ್ಲಿ ಸ್ವಲ್ಪಮಟ್ಟಿಗೆ ಬದಲಾವಣೆಗಳು ಮಾಡಿಕೊಂಡರು ಹಾಗೂ ತಮ್ಮ ಜಾತಿಜನಾಂಗಗಳ ಬಗ್ಗೆ ಹೊರ ಸಮಾಜಕ್ಕೆ ತೋರ್ಪಡಿಸಲಿಲ್ಲ. ಇಂತಹ ಸಂದರ್ಭದಲ್ಲಿ ಈ ಸಮುದಾಯಗಳು ನಾಗರಿಕ ಸಮುದಾಯದಲ್ಲಿ ಬೆರೆಯುವುದಕ್ಕೆ ಮುಂದಾದರು ಹೋಟೇಲ್‌ಗಳಲ್ಲಿ ಎಲ್ಲರ ಸಮನಾಗಿ ಊಟ ಮಾಡುವುದಕ್ಕೆ ಮುಂದಾದರೆ, ಯಾವುದೇ ಜಾತಿ ಜನಾಂಗದ ನಡುವಿನ ಭೇದ ಭಾವಗಳನ್ನು ಹೊಂದದೆ ಹೋಟೇಲ್‌ಗಳಲ್ಲಿ ಎಲ್ಲರನ್ನು ಸಮನಾಗಿ ಕಾಣುತ್ತಾರೆ. ಎಲ್ಲರ ಹಾಗೆ ನಾವು ಊಟ ಮಾಡುತ್ತೇವೆ. ಈಗಲೂ ಸ್ವಲ್ಪಮಟ್ಟಿಗೆ ಹಳ್ಳಿಗಳಲ್ಲಿ ಜಾತಿಯತೆ ಇದೆ. ಆದರೆ ನಮ್ಮ ತಾತ ಮುತ್ತಾತರ ಕಾಲದಲ್ಲಿ ನಡೆದುಕೊಳ್ಳುತ್ತಿದ್ದ ಹಾಗೆ ಇಲ್ಲ. ಈಗ ಸ್ವಲ್ಪಮಟ್ಟಿಗೆ ನಮ್ಮನ್ನು ಮನುಷ್ಯರಂತೆ ಕಾಣುತ್ತಾರೆ. ಎಲ್ಲಾ ಜಾತಿಯ ಜನಾಂಗಗಳ ನಡುವೆ ಸ್ನೇಹವನ್ನು ಬೆಳೆಸಿಕೊಂಡಿದ್ದೇವೆ ಎಂದು ಈ ಸಮುದಾಯಗಳು ಹೇಳುತ್ತಾರೆ.

**ಸಾಮಾಜಿಕ ಪರಿವರ್ತನೆಯಲ್ಲಿ ದಕ್ಕಲರು**

ಬದುಕಿನ ರೂಪವನ್ನು ಬದಲಾಯಿಸುವ ಶಕ್ತಿ ಕಾಲ ಚಕ್ರದ ಪರಿವರ್ತನೆಗೆ ಇದೆ. ಜಾಗತೀಕರಣದ ಹಿನ್ನೆಲೆಯಲ್ಲಿ ಹೊಸಗಾಳಿ ಹೊಸ ಹುರುಪು ಎನ್ನುವಾಗೆ ಸಮಾಜದಲ್ಲಿ ಹಲವು ಬದಲಾವಣೆಗಳು ಕಂಡುಕೊಂಡವು. ಇದರ ಹಿನ್ನೆಲೆಯಲ್ಲಿ ಕೆಳ ಸಮುದಾಯಗಳು ಸಹ ಆಧುನಿಕ ಸಮಾಜಕ್ಕೆ ಹೊಂದಿಕೊಳ್ಳುವುದಕ್ಕೆ ತಮ್ಮ ಕುಲ ಕಸುಬುಗಳನ್ನು ಕೈಬಿಡಬೇಕಾದ ಸ್ಥಿತಿ ಎದುರಾಯಿತು. ಹಾಗಾಗಿ ಈ ಸಮುದಾಯಗಳ ಕಸುಬು ಹಂದಿ ಸಾಕಾಣಿಕೆ. ಕತ್ತೆಗಳನ್ನು ಸಾಕುತ್ತಿದ್ದ ದಿನಗಳು ದೂರವಾಗಿ ಬದಲಾಗುತ್ತಿರುವ ಸಮಾಜಕ್ಕೆ ಹತ್ತಿರವಾಗುತ್ತಿದ್ದಾರೆ. ನಾವು ನಂಬಿರುವ ಕ್ರೂರ ಆಚರಣೆಗಳಿಂದ ನಂಬಿಕೆಗಳಿಂದ ಸಂಪ್ರದಾಯಗಳಿಂದ ದೂರ ಸರಿದು ಇವುಗಳಿಂದ ಯಾವ ಪ್ರಯೋಜನವಿಲ್ಲವೆಂಬ ನಿಲುವು ಇವರಲ್ಲಿ ಮೂಡಿದೆ. ಇಂದಿನ ಪೀಳಿಗೆಗೆ ಧಕ್ಕೆಯಾಗದಂತೆ ಹಿಂದಿನ ವ್ಯವಸ್ಥೆಯನ್ನು ಮೂಲೆಗೆ ಸರಿದು ಯುವಜನಾಂಗಕ್ಕೆ ಸಮಾಜದಲ್ಲಿ ಎಲ್ಲರ ಹಾಗೆ ಬದುಕುವುದಕ್ಕೆ ಹಾಗೂ ಅವರ ಆಲೋಚನೆ ಆಸೆ–ಆಕಾಂಕ್ಷೆಗಳಿಗೆ ಮಸಿ ಬಳಿಯದಂತೆ ದಕ್ಕಲ ಸಮುದಾಯಗಳ ತಂದೆ ತಾಯಿಯರು ಸಹಕರಿಸುತ್ತಿದ್ದಾರೆ. ೨೦ ವರ್ಷಗಳ ಹಿಂದಿನ ಕಟ್ಟುಪಾಡಿನ ಸ್ಥಿತಿಗತಿಗಳು ಮುಂದಿನ ಪೀಳಿಗೆಗೆ ಬರಬಾರದು ಎಂದು ಶ್ರಮಿಸುತ್ತಿದ್ದಾರೆ. ಸಂಪೂರ್ಣವಾಗಿ ಬದಲಾಗದಿದ್ದರೂ ಸ್ವಲ್ಪಮಟ್ಟಿಗಾದರೂ ಬದಲಾಗುವುದು ಇವರ ನಿಲುವಾಗಿದೆ.[೨]

ಹೀಗಾಗಿ ಆಧುನಿಕತೆಯ ಕೈಗಾರಿಕರಣ, ಕಂಪ್ಯೂಟರ್, ಸಮೂಹ ಮಾಧ್ಯಮಗಳಾಗಲೀ ಈ ಸಮುದಾಯಗಳ ಮೇಲೆ ಪ್ರಭಾವ ಬೀರಿ ಸಮಾಜದ ಪರಿವರ್ತನೆಗೆ ಒಳಪಡುತ್ತಿರುವ ಇತರೆ ಸಮುದಾಯಗಳಂತೆ ಈ ಸಮುದಾಯಗಳು ಪರಿವರ್ತನೆಗೊಳ್ಳುತ್ತಿವೆ. ಈ ಪರಿವರ್ತನೆಗೆ ಯುವ ಜನಾಂಗಗಳು ಹೆಚ್ಚು ಪ್ರಭಾವಿತರಾಗಿ ತಮ್ಮ ಬದುಕನ್ನು ಕಟ್ಟಿಕೊಳ್ಳುವುದಕ್ಕೆ ಮುಂದಾಗಿ ಆಚಾರ ವಿಚಾರಗಳು ಹಿಂದಿನ ಸಂಪ್ರದಾಯಗಳ ಬಗ್ಗೆ ಆಸಕ್ತಿ ಇವರಲ್ಲಿ ಉಳಿದಿಲ್ಲ. ತಾತ, ಅಜ್ಜಿ, ತಂದೆ ತಾಯಿಯರು ಮಾಡುತ್ತಿದ್ದ ಭಿಕ್ಷಾಟನೆ ಅವರಲ್ಲಿ ಅಂತ್ಯವಾಗಿ ಸ್ವಾಭಿಮಾನದಿಂದ ಬದುಕುವುದಕ್ಕೆ ಇಚ್ಛಿದ್ದಾರೆ. ಒಬ್ಬರಲ್ಲಿ ಬೇಡಿ ತಿನ್ನುವ ಹಾಗೂ ತಮ್ಮ ಹಿರಿಯರ ಜೊತೆ ಅನುಭವಿಸಿದ ಸಾಮಾಜಿಕ ಅವಮಾನಗಳನ್ನು ಮೆಲುಕು ಹಾಕುತ್ತಾ ಇಂತಹ ಅವಮಾನಗಳು ನಮಗೆ ಬೇಡವೆಂದು ನಮ್ಮ ಬದುಕನ್ನು ನಾವೇ ಕಟ್ಟಿಕೊಂಡು ಬದುಕುತ್ತೇವೆ ಎಂಬ ಆಶಾಭಾವನೆ ಇವರದ್ದಾಗಿದೆ.

ಆದರೂ ದಕ್ಕಲ ಸಮುದಾಯಗಳಲ್ಲಿನ ನಂಬಿಕೆಗಳು ಆಧುನಿಕತೆ ಕಿತ್ತುಕೊಂಡು ತಲೆ ತಲೆಮಾರುಗಳಿಂದ ಬಂದ ನಂಬಿಕೆಗಳು ಅಗ್ನಿಪರೀಕ್ಷೆಗೆ ದೂಡಿರುವುದು ಮೂಲ ಪದ್ಧತಿಗಳಿಗೆ ದೊಡ್ಡ ಪೆಟ್ಟಾಗಿದೆ ಹಾಗೂ ಮೂಢನಂಬಿಕೆಗಳಿಂದ ದೂರ ಉಳಿದು ಸಾಮಾನ್ಯರಂತೆ ಬದುಕುತ್ತಿದ್ದಾರೆ. ಬುಡಕಟ್ಟು ಸಮುದಾಯಗಳಲ್ಲಿ ಮಾತೃಮೂರ್ತಿಯ ಆರಾಧನೆ ಮಾಡುವುದು ಹೆಚ್ಚು, ಹಾಗೆ ದಕ್ಕಲಿಗರು ಜಾಂಬವಂತನನ್ನು ಹೆಚ್ಚು ಆರಾಧಿಸುತ್ತಾರೆ. ಆದರೆ ಸಮಕಾಲೀನ ಸಮಾಜದ

ಪ್ರಭಾವದಿಂದ ವೈದಿಕ ಸಂಸ್ಕೃತಿಯ ದೇವರುಗಳನ್ನು ಆರಾಧಿಸುವುದುಂಟು ನಂತರ ಈ ಸಮುದಾಯಗಳ ನಂಬಿಕೆಯ ಬೇರುಗಳು ಪರಿಶಿಷ್ಟ ಸಂಸ್ಕೃತಿಯಲ್ಲೇ ಹುದುಗಿದ್ದರು. ಈ ಎರಡು ಸಂಸ್ಕೃತಿಯ ನಡುವಿನ ವೈರುಧ್ಯಗಳು ಎಲ್ಲಾ ಸಂಘರ್ಷಕ್ಕೆ ಒಳಪಡುತ್ತಿಲ್ಲವೆಂದು ತಿಳಿಯುತ್ತವೆ.

ಈ ಭಾಗದ ಸಮುದಾಯಗಳಲ್ಲಿ ಹೆಚ್ಚು ಅನಕ್ಷರಸ್ಥರಿಂದ ಕೂಡಿದ್ದು ತಿಳುವಳಿಕೆ ಇಲ್ಲದೆ ತಮ್ಮ ಮಾತಿನ ಶೈಲಿಯು ಸಹ ಚಡಪಡಿಸುವುದು ಈ ಮುಗ್ಧ ಜನರಲ್ಲಿ ಕಾಣುತ್ತೇವೆ. ಇಲ್ಲಿ ಮುನಿಸ್ವಾಮಿ ಎಂಬ ವ್ಯಕ್ತಿಯು ಆದಿಜಾಂಬಪುರಾಣ ನಮ್ಮ ಜನಾಂಗದಲ್ಲಿ ಯಾರಿಗೂ ತಿಳಿದಿಲ್ಲ ನನಗೆ ಮಾತ್ರ ಅಜ್ಜ ಹೇಳಿಕೊಟ್ಟಿರುವುದು ನನಗೆ ಒಬ್ಬನಿಗೆ ಮಾತ್ರ ತಿಳಿದಿರುವುದು ಎಂದು ಹೆಮ್ಮೆಯಿಂದ ಹೇಳುತ್ತಾನೆ. ಗಂಗಾಭಾರತವಲ್ಲ ಅದು ಜಾಂಬವ ಪುರಾಣ ನಮ್ಮ ಭಾಗಗಳಲ್ಲಿ ಇದುವರೆವಿಗೂ ಯಾರು ಗಂಗಾಭಾರತ ಹೇಳಿಲ್ಲ. ಯಾರಿಗೂ ಬರುವುದಿಲ್ಲ ಎಂದು ಆ ವ್ಯಕ್ತಿ ನಾನೊಬ್ಬನೆ ಜಾಂಬವ ಪುರಾಣವನ್ನು ಹೇಳುವುದು. ನಂತರ ಮಾದಿಗರ ಕೇರಿಗಳಲ್ಲಿ ನಾನು ಈಗಲೂ ಭಿಕ್ಷೆಯನ್ನು ಬೇಡುತ್ತೇನೆ ನಮ್ಮ ಕುಲಗಳಲ್ಲಿ ಯಾರೂ ಭಿಕ್ಷೆ ಬೇಡುವುದಿಲ್ಲ. ಸಮಾಜ ಬದಲಾಗುತ್ತಿರುವುದರಿಂದ ಸ್ವಾಭಿಮಾನದಿಂದ ಬದುಕುವ ಶ್ರಮಿಕತೆ ಇವರಲ್ಲಿ ಕಾಣುತ್ತೇವೆ. ಸರ್ಕಾರದಿಂದ ಸಿಗುವ ಮೂಲ ಸೌಲಭ್ಯಗಳಿಂದ ಸಿಗದೆ ಅದರಿಂದ ವಂಚಿತರಾಗಿದ್ದಾರೆ. ಹಿಂದಿನ ಸಮುದಾಯಗಳು ಅದನ್ನು ಪಡೆಯಲು ಯುವ ಶಕ್ತಿಗಳು ಸರ್ಕಾರದ ನಡುವೆ ಕಸರತ್ತು ನಡೆಸುತ್ತಿದ್ದಾರೆ. ಈ ಸಮುದಾಯಗಳಲ್ಲಿ ಅಧ್ಯಯನಕ್ಕಾಗಿ ಹೋದ ಸಂದರ್ಭದಲ್ಲಿ ಇವರು ಕೊಟ್ಟ ಗೌರವ ವಿನಯತೆ ಇಂದಿಗೂ ಅವರಲ್ಲಿ ಆತ್ಮವಿಶ್ವಾಸ ಸ್ಥೈರ್ಯದ ದೃಢಕಲ್ಪನೆ ಹಾಗೂ ಇವರು ತಮ್ಮ ಬಗ್ಗೆ ಇಟ್ಟುಕೊಂಡ ನಂಬಿಕೆ ತಮ್ಮ ಸ್ಥಿತಿಗತಿಗಳ ಬಗ್ಗೆ ಸ್ವಲ್ಪವು ಸಂಕೋಚಿಸದೆ ಎಲ್ಲವನ್ನು ವಿವರಿಸಿದ್ದಾರೆ. ಈ ಸಮುದಾಯಗಳಲ್ಲಿ ಶಿಕ್ಷಣಕ್ಕಿಂತ ಕೂಲಿ ಕೆಲಸಗಳೇ ಬದುಕಿಗೆ ಆಧಾರವಾಗಿವೆ ಎಂದು ಇವರ ವಿಶ್ವಾಸವಾಗಿದೆ ಓದಿ ಮುಂದೆ ಹೋದರು ಸರ್ಕಾರದ ಕೆಲಸಗಳು ಸಿಗುವುದಿಲ್ಲ ನಂತರ ಸರ್ಕಾರಿ ಕೆಲಸಗಳು ಸಿಕ್ಕರು ಕಡಿಮೆ ಸಂಬಳ ಹೊಂದಿರುತ್ತೇವೆ ಅಲ್ಲಿಯ ತನಕ ನಮ್ಮ ಜಿವನಕ್ಕೆ ಏನು ಮಾಡಬೇಕು ಎಂದು ಈ ಕುಟುಂಬಗಳ ಯುವಕರ ಮನೋಭಾವವಾಗಿದೆ. ತಮ್ಮ ಕುಲಕಸುಬುಗಳಿಗಿಂತ ಕೂಲಿಕೆಲಸಗಳೇ ನಮ್ಮ ಜೀವನಕ್ಕೆ ಆಧಾರವಾಗಿದೆ. ಏಕೆಂದರೆ ಬುಟ್ಟಿ ಹೆಣೆಯಲು ಅದಕ್ಕೆ ಬೇಕಾದ ಸಾಮಗ್ರಿಗಳು ಕಾಡುಗಳಲ್ಲಿ ಸಿಗುತ್ತವೆ. ಕಾಡಿಗೆ ಹೋಗಿ ಸಾಮಗ್ರಿಗಳನ್ನು ತಂದು ಬುಟ್ಟಿಯನ್ನು ಹೆಣೆದು ಮಾರಾಟ ಮಾಡಿದರೆ ಅದಕ್ಕೆ ನಾಲ್ಕು ಕಾಸು ಬರುವುದಿಲ್ಲ. ಆದರೆ ಒಂದು ದಿನ ಕೂಲಿಗೆ ಹೋದರೆ ೩೦೦ ರೂಪಾಯಿ ಕೊಡುತ್ತಾರೆ. ಕೂಲಿ ಕೆಲಸಗಳೇ ನಮ್ಮ ಜೀವನಕ್ಕೆ ಆಧಾರವಾಗಿದೆ ನಮ್ಮ ಸಂಸ್ಕೃತಿಯಿಂದ ನಮಗೆ ಜೀವನವಿಲ್ಲ. ಹಾಗಾಗಿ ನಮ್ಮ ಮೂಲ ಕಸುಬುಗಳನ್ನು ಬಿಟ್ಟು ಹೊರ ಬಂದಿದ್ದೇವೆ ಎಷ್ಟೇ ಸಂಸ್ಕೃತಿಯನ್ನು ದೂರವಿರಿಸಿದ್ದರು ತಮ್ಮ ಕುಲಬಳ್ಳಿಗಳು ಬಂದಾಗ ಮಾತ್ರ ತಮ್ಮ ಅಭ್ಯಾಸದ ಬಲದಿಂದ ಅವರನ್ನು ಕರೆಯುವ ರೀತಿಯೇ ಬೇರೆಯಾಗಿರುತ್ತದೆ ಸ್ವಾಮಿ ಎಂಬ ಅಂತರಂಗದ ನಿಜವನ್ನು ಹೊರಗಿಡುತ್ತಾರೆ.

ಹೀಗೆ ಈ ಸಮುದಾಯಗಳಲ್ಲಿ ಸ್ವಲ್ಪಮಟ್ಟಿಗೆ ಸಾಮಾಜಿಕ ಆರ್ಥಿಕತೆಯಲ್ಲಿ ಹಾಗೂ ಶೈಕ್ಷಣಿಕತೆಯಲ್ಲಿ ಸುಧಾರಿಸಿಕೊಳ್ಳುತ್ತಿದ್ದು ಮುಂದಿನ ಪೀಳಿಗೆಗಳ ಬದುಕು ಸಮಾಜದಲ್ಲಿ ತಲೆ ಎತ್ತಿ ಬದುಕುವಂತಾಗಲಿ ಎಂಬ ಈ ಕುಟುಂಬಗಳ ಆಶಯ ಮತ್ತು ಅವರ ಕನಸಾಗಿದೆ. ನಂತರ ನಮ್ಮ ಸಮುದಾಯಗಳ ಮೂಲನೆಲೆಗೆ ನಮ್ಮಲ್ಲಿ ಈಗ ಭಿಕ್ಷೆ ಬೇಡುವುದಕ್ಕೆ ನಾಚುತ್ತಾರೆ. ಆದರೆ ನಾನು ನಮ್ಮ ಕುಲಕಸುಬನ್ನು ಬಿಡುವುದಿಲ್ಲ ಎಂದು ಅವರ ಕುಲ ವೃತ್ತಿಯ ಬಗ್ಗೆ ಮತ್ತು ನಂಬಿಕೆ ಆಚಾರಗಳನ್ನು ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ. ದುರಂತವೆಂದರೆ ಕುಲ ವೃತ್ತಿಯನ್ನು ನಂಬಿರುವ ಹಾಗೂ ಭಿಕ್ಷೆಯನ್ನು ಬೇಡುವ ಪದ್ಧತಿಯನ್ನು ಮುಂದುವರಿಸಿರುವ ಇವರಿಗೆ ತನ್ನ ಕುಟುಂಬವನ್ನು ಪೋಷಿಸುವುದಕ್ಕೆ ಸ್ವಂತವಾದ ಸೂರಿಲ್ಲ. ಪಾಳು ಬಿದ್ದಿರುವ ಕಲ್ಲಿನ ಕಟ್ಟಡದಿಂದ ಕಟ್ಟಿರುವ ಮನೆ ಅದು ಯಾವಾಗ ಬೀಳುತ್ತದೆ ಎಂದು ಹೇಳಲು ಸಾಧ್ಯವಿಲ್ಲ. ಈ ಮನೆಗೆ ೨೦೦ ರೂಪಾಯಿ ಬಾಡಿಗೆ ಕೊಟ್ಟು ಜೀವಿಸುತ್ತಿರುವುದು ದುರಂತದ ಸಂಗತಿಯಾಗಿದೆ. ಸಮಾಜ ಎಷ್ಟೇ ಪರಿವರ್ತನೆಯಾದರು ಸರ್ಕಾರದಿಂದ ಇದುವರೆಗೆ ಯಾವುದೇ ಸೌಲಭ್ಯಗಳು ದೊರೆತಿಲ್ಲ ಹಾಗೂ ಅದನ್ನು ಪಡೆದುಕೊಳ್ಳುವುದಕ್ಕೆ ಸಾಮಾಜಿಕ ತಿಳುವಳಿಕೆ ಇಲ್ಲದೆ ಇರುವುದು ಸರ್ಕಾರದಿಂದ ಬಂದ ಅವಕಾಶಗಳನ್ನು ಕೈಚಲ್ಲಿ ಭಿಕ್ಷುಕರಾಗಿಯೇ ಮುಂದುವರೆದಿದ್ದಾರೆ. ಇಂತಹ ಪರಿಸ್ಥಿತಿಯಲ್ಲಿ ಇವರು ಬೇರೆ ಜನಾಂಗದವರು ತನ್ನತ್ತ ನೋಡಿದಾಗ ಅವರಿಗೆ ನಮ್ಮ ಸಂಸ್ಕೃತಿಯೊಂದಿಗೆ ತಾವು ನೆಮ್ಮದಿಯಿಂದ ಬದುಕಬಲ್ಲೆವೆಂಬ ಆತ್ಮವಿಶ್ವಾಸ ಸಹ ಮೂಡುವುದಿಲ್ಲ. ಇಂತಹ ಸ್ಥಿತಿಯಲ್ಲಿ ತನ್ನಲ್ಲಿ ಲೀನವಾದವರನ್ನಷ್ಟೆ ಮುಂದೊಯ್ಯುತ್ತದೇ ಹೊರತು ಉಳಿದವರನ್ನು ಹಿಂದುಳಿಸಿ ಬಿಡುತ್ತದೆ. ಸಮಾಜದ ಪರಿವರ್ತನೆಯು ತನ್ನ ಮಟ್ಟಿನ ಪ್ರಭಾವವು ಕೂಡ ದಕ್ಕಲ ಸಮುದಾಯಗಳಲ್ಲಿ ಪರಿವರ್ತಿಸಿಕೊಳ್ಳುವುದಕ್ಕೆ ಸಾಧ್ಯವಾಗುತ್ತಿಲ್ಲ.

ಇಂತಹ ಸಂದರ್ಭದಲ್ಲಿ ಪರಿವರ್ತನೆಯ ಹಾದಿಯತ್ತ ಯುವ ಜನಾಂಗಗಳು ಮುಂದಾಗಿ ಇತ್ತೀಚೆಗೆ ಶಾಲೆಗಳಿಗೆ ಹೋಗಿ ವಿದ್ಯಾಭ್ಯಾಸ ಮಾಡುತ್ತಿರುವುದು ನಂತರ ಪದವಿ ಮುಗಿಸಿ ಉತ್ತಮ ಉದ್ಯೋಗಗಳಲ್ಲಿ ತೊಡಗಿಸಿಕೊಂಡು ತಮ್ಮ ವಿದ್ಯಾಭ್ಯಾಸಕ್ಕೆ ತಕ್ಕಂತೆ ಕೆಲಸಗಳಲ್ಲಿ ತೊಡಗಿಸಿ ತಮ್ಮ ಕುಟುಂಬಗಳನ್ನು ಪೋಷಿಸುವುದಕ್ಕೆ ಮುಂದಾಗಿದ್ದಾರೆ. ಇನ್ನು ಕೆಲವು ಯುವ ಜನಾಂಗಗಳು ಅರ್ಧಕ್ಕೆ ಶಾಲೆ ಬಿಟ್ಟರು ಟೈಲರಿಂಗ್, ಗಾರೆ ಕೆಲಸ, ಕೂಲಿ ಕೆಲಸಗಳಿಗೆ ಹೋಗಿ ದುಡಿದು ಅದರ ದ್ವಂದ್ವಗಳು ಕಲ್ಪನೆಯು ಸಹ ಮುಂದಿನ ಜನಾಂಗಗಕ್ಕೆ ನೀಡುವುದಿಲ್ಲ. ನಮ್ಮ ನೋವು ಅವಮಾನಗಳು ನಮಗಷ್ಟೆ ಸೀಮಿತವಾಗಲಿ ನಮ್ಮ ಮಕ್ಕಳು ಸಮಾಜದಲ್ಲಿ ಅವಮಾನಕ್ಕೆ ಈಡಾಗದೆ ಎಲ್ಲರಂತೆ ಬದುಕಬೇಕು ಎನ್ನುವುದು ನಮ್ಮ ಆಸೆಯಾಗಿದೆ ಎಂದು ಈ ಸಮುದಾಯಗಳು ಹೇಳುತ್ತಾರೆ.

ಒಟ್ಟಾರೆಯಾಗಿ ಸಮಕಾಲೀನ ಸಮಾಜ ಎಷ್ಟು ಮುಂದುವರಿದರು ಈ ಸಮುದಾಯಗಳಲ್ಲಿ ಜಾತಿಯತೆ ಎಂಬ ಅಣುಕು ಇವರಲ್ಲಿ ಮರೆಮಾಚದ ಹಾಗೆ ಉಳಿದಿರುವುದು ಕಂಡುಬರುತ್ತದೆ. ಸಂಸ್ಕೃತಿಯ ವ್ಯಕ್ತಿಯೊಬ್ಬನ ಅಂತರಿಕ ವ್ಯಕ್ತಿತ್ವದ ಬಹುಮುಖ್ಯ ಶಕ್ತಿ. ಅಂತಹ ಸಂಸ್ಕೃತಿಯು

ಒಂದಲ್ಲಾ ಒಂದು ವೇಳೆ ತಮ್ಮ ವ್ಯಕ್ತಿತ್ವದಲ್ಲಿ ತೋರ್ಪಡಿಸುತ್ತದೆ. ಇಂತಹ ಸಂಸ್ಕೃತಿಯ ಶಕ್ತಿಯನ್ನು ಅರಿಯುವ ಪರಿಸರವೊಂದು ಅತ್ಯಗತ್ಯ. ಹೀಗೆ ಸಾಂಸ್ಕೃತಿಕ ಶಕ್ತಿಯನ್ನು ಅರಿತಾಗಲಷ್ಟೆ ಅತಿ ಹೆಚ್ಚು ಅರ್ಥಪೂರ್ಣ ಬದುಕು ನಡೆಸಲು ಹಾಗೂ ಸಮಾಜದಲ್ಲಿ ಹೊಸ ನೆಲೆಯಲ್ಲಿ ನಿಂತು ಸಮಾಜದೊಂದಿಗೆ ಸಂವಾದಿಸಲು ಸಾಧ್ಯವಾಗುತ್ತದೆ. ಎಲ್ಲರ ಮನೋಭಾವ ಒಂದೇ ಆದಾಗ ಮಾತ್ರ ಎಲ್ಲಾ ಸಮುದಾಯಗಳು ಸಹಬಾಳ್ವೆಯನ್ನು ಮಾಡುವುದಕ್ಕೆ ಸಾಧ್ಯ ಸಮಾಜದ ಬದಲಾವಣೆಯ ಸಂಸ್ಕೃತಿಗಳು ನೆಲೆಯಲ್ಲಿ ಇಂತಹ ಸಮುದಾಯಗಳು ನದಿಯ ನೀರಿನಲ್ಲಿ ಕಸಕಡ್ಡಿಗಳು ಕೊಚ್ಚಿಕೊಂಡು ಹೋಗದ ಹಾಗೆ ಈ ಸಮುದಾಯಗಳು ಸಮಾಜದಲ್ಲಿ ನದಿಯಲ್ಲಿ ಹೋಗದಿರಲಿ ಹಾಗೂ ಸಮಾಜದಲ್ಲಿ ಇವರಿಗೂ ಒಂದು ನೆಲೆಯನ್ನು ಕಲ್ಪಿಸುವುದು ನಮ್ಮವರ ಕರ್ತವ್ಯವಾಗಿದೆ.

**ಸಮುದಾಯಗಳ ತುಲನೆ**

ಪರಿಶಿಷ್ಟ ಸಮಾಜದಲ್ಲಿ ದಕ್ಕಲಿಗರು ಸ್ಥಾನವನ್ನು ಗುರುತಿಸಿಕೊಂಡಿರುವುದು ಮುಖ್ಯವಾದ ಪುರಾಣದ ಕಲ್ಪನೆಯಿಂದ ಇವರ ಸಮುದಾಯದ ಉತ್ಪತ್ತಿ ಪುರಾಣದ ಕಲ್ಪನೆಯನ್ನು ಕೊಡಲು ಸಾಧ್ಯವಾಗುತ್ತದೆ. ಇದರ ಹಿನ್ನೆಲೆಯಲ್ಲಿ ಸಮಾಜದ ಇತರ ಸಮುದಾಯಗಳಿಗಿಂತ ಮೇಲು ಮುಖವಾಗಿದ್ದರು ಹಲವು ಸಂಸ್ಕೃತಿಗಳಿಗೆ ಹೋಲಿಸಿದರೆ ಇವರು ಅತ್ಯಂತ ಕೆಳಸ್ಥರವಾಗಿ ಕಾಣುವುದು ದ್ವಂದ್ವವಲ್ಲದೆ ವಿಚಿತ್ರವಾಗಿರುವುದು ಕಂಡುಬರುತ್ತದೆ. ಏಕೆಂದರೆ ಇವರ ದಂತ ಕಥೆಯನ್ನು ಆಧರಿಸಿ ಭೂಮಿಯ ಹುಟ್ಟಿಗೆ ಮೂಲ ಈ ದಕ್ಕಲ ಸಮುದಾಯಗಳು. ಆದರೆ ಸಮಕಾಲೀನ ಸಮಾಜದಲ ಮಾತ್ರ ಈ ಸಮುದಾಯಗಳ ಮೂಲ ನೆಲೆ ಕಂಡುಕೊಳ್ಳುವುದಕ್ಕೆ ಸಾಧ್ಯವಾಗದೆ ಭೂಮಿಯಿಂದ ಹಾಗೂ ಸಮಾಜದಿಂದ ದೂರವಿರುವುದು ಒಂದು ರೋಚಕವಾಗಿದೆ.

ಪರಿಶಿಷ್ಟರಲ್ಲಿನ ಶ್ರೇಣೀಕೃತ ಜಾತಿಯಲ್ಲಿ ಅತ್ಯಂತ ಕೆಳಸ್ಥರದವರು ದಕ್ಕಲರೆ ನಿಜವಾದ ಅಂತ್ಯಜರು ಇವರೊಂದಿಗೆ ಯಾವ ಜಾತಿ ಜನಾಂಗಗಳು ಸಮನಾಗಿ ಕಾಣುವ ಹಾಗಿಲ್ಲ. ಮಾದಿಗರಲ್ಲಿ ಹಲವು ಉಪಜಾತಿಗಳು ಸಿಂಧು, ಮಾದಿಗರು, ಮಾಸ್ತೀಕರು ಸಹ ಇವರಿಗೆ ಸಮನಾಗಿ ನಿಲ್ಲುವರಲ್ಲ. ಈ ಎರಡು ಉಪಜಾತಿಗಳಿಗಿಂತ ಕೆಳಸ್ಥರದವರು. ಹಾಗಾಗಿ ಸಮಾಜದ ಅತ್ಯಂತ ಕೆಳವರ್ಗ ಶ್ರೇಣೀಕೃತಿಯಲ್ಲಿ ಈ ಸಮುದಾಯಗಳು ನೆಲೆ ನಿಲ್ಲುತ್ತವೆ. ಈ ದಕ್ಕಲಿಗರು ದಲಿತರ ಕೇರಿಯೊಳಗೆ ಪ್ರವೇಶಿಸುವಂತಿಲ್ಲ. ಈ ಸಮುದಾಯಗಳು ಮಾದಿಗರ ಕೇರಿಗಳಿಗಿಂತ ಗರಿಷ್ಠ ದೂರದಲ್ಲಿ ಗುಡಿಸಲುಗಳನ್ನು ಹಾಕಿಕೊಂಡು ಮಾದಿಗರ ಕೇರಿಯಲ್ಲಿ ಒಂದು ಮಂಟಪದಲ್ಲಿ ಕೂತು ಹಸಿವು ಎಂದು ಕೂಗಿದಾಗ ಮಾದಿಗರಲ್ಲಿನ ಒಬ್ಬ ಮುಖ್ಯಸ್ಥನು ಮಾದಿಗರ ಸಮುದಾಯಗಳ ಮನೆಗಳಲ್ಲಿ ಅನ್ನ ಮುದ್ದೆ ಸಾರು ಅಕ್ಕಿಯನ್ನು ಸಂಗ್ರಹಿಸಿ ತಂದು ತಮ್ಮ ದಕ್ಕಲ ಮಕ್ಕಳಿಗೆ ನೀಡುತ್ತಾರೆ. ನಂತರ ಈ ಸಮುದಾಯಗಳ ಮಾದಿಗರ ಕೇರಿಗಳ ಕೊಳವೆಬಾವಿಗಳಲ್ಲಿ ನೀರು ಸೇದುವುದು ನಿಷಿದ್ಧವಾಗಿದೆ ಏಕೆಂದರೆ ನಮ್ಮ ಧಕ್ಕೆಯಿಂದ ಹುಟ್ಟಿದ ಮಕ್ಕಳು ನಮಗಿಂತ ಕೆಳಸ್ಥರದವರು ಎಂಬ ಭಾವನೆ ಅವರಲ್ಲಿ ಇರುವುದರಿಂದ ಇವರು ಎಲ್ಲರ ದೃಷ್ಟಿಯಲ್ಲಿ

ಅಸ್ಪೃಶ್ಯರಲ್ಲೆ ಅಸ್ಪೃಶ್ಯರಾಗಿದ್ದಾರೆ. ಅದರೆ ಮಾದಿಗರ ಕುಟುಂಬಗಳು ಇವರ ಅಸ್ತಿತ್ವದ ಮಹತ್ವ ತಮಗಿಂತ ಮೇಲುವರ್ಗದ್ದು ಎಂದು ತಿಳಿಯಲಾಗಲಿಲ್ಲ. ಪುರಾಣದ ಚಾರಿತ್ರಿಕ ಹಿನ್ನೆಲೆಯಲ್ಲಿ ನಿಂತು ತುಲನೆ ಮಾಡಿದಾಗ ಬೆಪ್ಪುಮುನಿ ಮತ್ತು ಹೀರಮುನಿಯ ಆದಿಜಾಂಬವಂತನ ಮಾನಸ ಪುತ್ರರಾಗಿದ್ದಾರೆ. ಇಂತಹ ಅಸ್ತಿತ್ವವುಳ್ಳ ಈ ಸಮುದಾಯಗಳು ಮಾದಿಗ ಸಮುದಾಯಗಳಿಗಿಂತ ದಟ್ಟವಾದ ಸಾಂಸ್ಕೃತಿಕ ಹಿನ್ನೆಲೆಯನ್ನು ಹೊಂದಿದ್ದಾರೆ. ಈ ಸಮುದಾಯಗಳು ಸಾಮಾಜಿಕವಾಗಿ ಹಿಂದುಳಿದಿರಬಹುದು. ಆದರೆ ಸಾಂಸ್ಕೃತಿಕವಾಗಿ ಮಾದಿಗ ಮತ್ತು ಹೊಲೆಯರಿಗಿಂತ ಮುಂದಿರುವುದು ತಿಳಿಯುತ್ತದೆ. ಮಾದಿಗರ ಮನೆಯಲ್ಲಿ ಸತ್ತ ಹೆಣವನ್ನು ಹೂಳಬೇಕಾದರೆ ದಕ್ಕಲರು ಶವ ಸಂಸ್ಕಾರಕ್ಕೆ ಬರಬೇಕಾಗುತ್ತದೆ. ಸತ್ತ ವ್ಯಕ್ತಿಯ ಹೆಸರಿನಲ್ಲಿ ೧೦೧ ರೂಪಾಯಿ ಮತ್ತು ಆ ವ್ಯಕ್ತಿ ತಿನ್ನುತ್ತಿದ್ದ ತಟ್ಟೆ ಲೋಟ ಮತ್ತು ಶವ ಸಂಸ್ಕಾರಕ್ಕೆ ತಂದ ಕೈಲಾಸ ಬಟ್ಟೆ (ಬಿಳಿ ಬಟ್ಟೆ) ಅರ್ಧ ಬಟ್ಟೆ ದಕ್ಕಲರ ಸಮುದಾಯದ ವ್ಯಕ್ತಿಯ ಮೇಲೆ ಹಾಕಬೇಕು ನಂತರ ಮಾದಿಗರು ಶವ ಸಂಸ್ಕಾರ ಮಾಡಬೇಕಾಗುತ್ತದೆ. ಒಂದು ವೇಳೆ ಕಾಣಿಕೆ ನೀಡದ ಪಕ್ಷದಲ್ಲಿ ಆ ಕುಟುಂಬಕ್ಕೆ ಶಾಪಕೊಟ್ಟು ಶವವನ್ನು ತೆಗೆದುಕೊಂಡು ಹೋಗುವ ದಾರಿಗೆ ಕಪ್ಪುಹಗ್ಗವನ್ನು ಹಾಕುತ್ತಾರೆ. ನಂತರ ಬಾವಿಯ ಸುತ್ತ ಹಗ್ಗವನ್ನು ಹಾಕುತ್ತಾರೆ. ಮಾದಿಗರು ದಕ್ಕಲರು ಹಾಕಿದ ಹಗ್ಗವನ್ನು ದಾಟುವ ಹಾಗಿಲ್ಲ. ಒಂದು ವೇಳೆ ಮುಂದೆ ಹೋಗಬೇಕಾದರೆ ಅವರು ಭಿಕ್ಷೆಯನ್ನು ನೀಡಿ ಕಾಣಿಕೆಯನ್ನು ನೀಡಿ ಅವರಿಂದ ಒಳ್ಳೆಯವರು ಎಂದು ಅನಿಸಿಕೊಂಡ ಮೇಲೆ ದಕ್ಕಲರು ಹಾಕಿದ ಹಗ್ಗವನ್ನು ತೆಗೆಯುತ್ತಾರೆ. ನಂತರ ಮಾದಿಗರು ಶಾಪದಿಂದ ವಿಮುಕ್ತಿ ಹೊಂದಿ ಮುಂದೆ ಸಾಗುತ್ತಾರೆ. ಹೀಗೆ ದಕ್ಕಲರು ಹಾಕಿರುವ ಕೋಲನ್ನು ಸಹ ಮಾದಿಗರು ದಾಟುವ ಹಾಗಿಲ್ಲ. ಇಂತಹ ಸಾಂಸ್ಕೃತಿಕ ಶ್ರೀಮಂತಿಕೆಯನ್ನು ಹೊಂದಿದವರು ಇಷ್ಟೆಲ್ಲಾ ಸಾಂಸ್ಕೃತಿಕ ಹಿನ್ನಲೆ ಹೊಂದಿರುವ ಈ ಸಮುದಾಯಗಳು ಮಾದಿಗರ ಸಮುದಾಯಗಳಿಗಿಂತ ದೂರವಾಗಿ ಜೀವಿಸುತ್ತಿದ್ದಾರೆ.

ಮಾಸ್ಪೀಕರು ಮತ್ತು ದಕ್ಕಲರು ಒಂದೇ ಧಕ್ಕೆಯಿಂದ ಹುಟ್ಟಿದರೂ ದಕ್ಕಲಿಗರಿಗಿಂತ ಮಾಸ್ಪೀಕರು ಮೇಲು ವರ್ಗದವರು. ಇವರಿಗಿಂತ ಕೆಲಸ್ಥರವೇ ಆದರೂ ಸ್ವಲ್ಪಮಟ್ಟಿನ ಹತ್ತಿರ ನಿಲ್ಲಬಲ್ಲವರು ಈ ಎರಡು ಸಮುದಾಯಗಳಾಗಿವೆ. ಆದಿ ಜಾಂಬವಂತನ ಮಗಳು ಅರುಧಂತಿಯು ಮಾದಿಗರ ಹೆಣ್ಣು ಮಗಳು. ಬ್ರಾಹ್ಮಣ ಸಮುದಾಯದ ವಶಿಷ್ಠ ಮುನಿಯು ಮದುವೆಯಾಗುತ್ತಾನೆ. ಬ್ರಾಹ್ಮಣನ ಸೊಸೆ ನಮ್ಮ ಮನೆ ಹೆಣ್ಣು ಮಗಳು ಎಂದು ಮಾದಿಗರು ದಕ್ಕಲಿಗರು ಮಾಸ್ಪೀಕರು ಮತ್ತು ಸಿಂಧ್ ಮಾದಿಗರು ಹೇಳುತ್ತಾರೆ ಹಾಗೂ ನಮ್ಮ ಮನೆ ಮಗಳು ಎಂದು ಪೂಜಿಸುತ್ತಾರೆ.

ಈ ಎಲ್ಲಾ ಕುಲಗಳಿಗೂ ಆದಿ ಜಾಂಬವ ಪುರಾಣ ಮೂಲ ಎಂದು ಈ ಎಲ್ಲಾ ಸಮುದಾಯಗಳು ಹೇಳುತ್ತವೆ. ತಂಗಡಿ ಗಿಡದ ದ್ಯಾವರವು ದಕ್ಕಲರಲ್ಲಿ ಇಲ್ಲದೆ ಇದ್ದರು ಸಹ ಅದರ ಆಚರಣೆಗಳ ಬಗ್ಗೆ ಪೂರ್ತಿಯಾಗಿ ಈ ಸಮುದಾಯಗಳಿಗೆ ತಿಳಿದಿದೆ. ಏಕೆಂದರೆ ಈ ಕುಲ ಉಪಕುಲಗಳು ಜಾಂಬವ ಕುಲ ಮೂಲದವರು. ಎಲ್ಲರು ಒಂದೇ ಅಂತರದಲ್ಲಿ ನಿಂತರು

ದಕ್ಕಲರು ಮತ್ತು ಮಾಸ್ಟೀಕರು ಮಾತ್ರ ಮಾದಿಗರಿಗೆ ಸಮನಾಗಿ ನಿಲ್ಲಲಾರರು. ಅವರ ಮನೆಗಳಲ್ಲಿ ಭಿಕ್ಷೆಯನ್ನು ಬೇಡಿ ಜೀವಿಸುವವರು ನಂತರ ದಕ್ಕಲರಿಗೆ ನವಿಲು ಕಿನ್ನರಿ ಪ್ರಧಾನ ಸಂಗೀತ ಉಪಕರಣವಾಗಿದೆ. ಮಾಸ್ಟೀಕರಿಗೆ ನಗಾರಿ ಮತ್ತು ಕೃಷ್ಣ ಕಿನ್ನರಿ ಸಂಗೀತ ಉಪಕರಣವಾಗಿದೆ. ಇವರ ಇಬ್ಬರ ಮೂಲ ಕಂಚಿಯ ಸಮೀಪದ ಗಂಗಸ್ಥಲ ಇವರ ಇಬ್ಬರಲ್ಲೂ ಜಗತ್ತು ಸೃಷ್ಟಿಯ ಕಥೆಯಿದೆ ಎಂದು ಮಾಸ್ಟೀಕರ ಸಂಸ್ಕೃತಿಯ ಅಧ್ಯಯನದಲ್ಲಿ ಲಕ್ಷ್ಮೀಪತಿ ಕೋಲಾರ ಅವರ ಅಧ್ಯಯನದಲ್ಲಿ ತಿಳಿದು ಬರುತ್ತದೆ. ಇಬ್ಬರೂ ಶೈವ ಮೂಲದವರಂತೆ ಕಂಡು ಬರುತ್ತಾರೆ. ಸಮಕಾಲಿನ ಹೊಸ ಗಾಳಿಗೆ ಸಿಲುಕಿ ವಲಸೆಯಿಂದ ದೂರ ಸರಿದು ಈಚಲು ಚಾಪೆ ಈಚಲು ಪೊರಕೆ ತಯಾರಿಸುವುದು ಮತ್ತು ಬೇಟೆಯಾಡುವುದು ಈ ರೀತಿಯ ಉಪಕಸುಬುಗಳಿಂದ ಹೊಟ್ಟೆ ಹೊರೆದುಕೊಳ್ಳುತ್ತಿದ್ದಾರೆ.

ಮಾಸ್ಟೀಕರು ಮತ್ತು ದಕ್ಕಲಿಗರು ಸ್ವಲ್ಪಮಟ್ಟಿನ ಸಮನಾಗಿ ನಿಲ್ಲಬಲ್ಲವರಾದರು. ಈ ಸಮುದಾಯಗಳಲ್ಲಿ ಉಪಕುಲಗಳು ಇರುವುದು ಕಂಡುಬರುತ್ತದೆ ದಕ್ಕಲಿಗರಲ್ಲಿ ೧೨ ಕುಲಗಳು ಇದ್ದು ಅವರ ದಕ್ಕಲ ಸಮುದಾಯಗಳ ಸಂಬಂಧಗಳನ್ನು ಬೆರೆಸುವುದಕ್ಕೆ ಯಾವುದೇ ಅಡ್ಡಿಯಿಲ್ಲ. ಆ ಕುಲಗಳು ಪೆದ್ದರೆಡ್ಡಿ, ಚಿನ್ನರೆಡ್ಡಿ ರೇಣೂಕುಂಟೋಳು, ಕರ್ನ್ನೋ, ಅಲ್ಲಮೋಳೂ, ಪಿಶಿನೋಳೂ, ಅಂತನೋಳೂ, ಶಾರಕುಂಟ ಜಗನ್ನಾಥೋಳೂ ಈ ಕುಲಗಳಲ್ಲಿ ಶಾರಕುಂಟ ಜಗನ್ನಾಥೋಳೂ ಮಾತ್ರ ಪ್ರತ್ಯೇಕವಾಗಿ ನಿಲ್ಲುತ್ತಾರೆ. ಆಚಾರ ವಿಚಾರಗಳು ಇಬ್ಬರ ನಡುವೆ ಒಂದೇ ಆದರೂ ವಿವಾಹ ಪ್ರಸ್ತಾಪದಲ್ಲಿ ಮಾತ್ರ ಇವರಿಂದ ದೂರವಿರುತ್ತಾರೆ. ಇವರಲ್ಲಿ ಸಂಬಂಧ ಕಲ್ಪಿಸುವುದಕ್ಕೆ ಮುಂದಾಗುವುದಿಲ್ಲ. ನಂತರ ಈ ಕುಲವು ತಮ್ಮ ರಕ್ತ ಸಂಬಂಧಲ್ಲಿಯೇ ಹೆಣ್ಣನ್ನು ನೋಡಿ ವಿವಾಹವಾಗಬೇಕು ಇನ್ನು ಉಳಿದ ಕುಲಗಳು ಸಂಬಂಧಗಳು ಬೆರೆಸುವುದಕ್ಕೆ ಯಾವುದೇ ಅಡ್ಡಿ ಆತಂಕಗಳೂ ಇಲ್ಲ. ಆದರೆ ಈ ಕುಲಗಳಿಗಿಂತ ಸ್ವಲ್ಪ ಕೆಳಸ್ಥರದಲ್ಲಿ ಇದ್ದರೂ ಮರಣದ ಸಂದರ್ಭದಲ್ಲಿ ಹಬ್ಬ-ಹರಿದಿನಗಳಲ್ಲಿ ಇಬ್ಬರೂ ಬೆರೆತು ಆಚರಣೆಗಳನ್ನು ಮಾಡುತ್ತಾರೆ. ಇವು ದಕ್ಕಲಿಗರ ಉಪಕುಲಗಳಾಗಿವೆ ಇನ್ನು ಉಳಿದ ಮಾಸ್ಟೀಕರ ಮತ್ತು ದಕ್ಕಲಿಗರು ೯ ಪಣಕಟ್ಟುನವರೆ ಇವರ ಸಮೀಪ ಸಿಂಧ್ ಮಾದಿಗರು ಮಾತ್ರ ಸ್ವಲ್ಪಮಟ್ಟಿಗೆ ಒಂದಾಗುತ್ತಾರೆ. ಇವರ ಸಾಂಸ್ಕೃತಿಕ ನೆಲೆಗಳು ಒಂದೇ ಆದರೂ ಕೆಲವು ಪದ್ಧತಿಗಳು ಬೇರೆಯಾಗಿ ಕಂಡು ಬರುತ್ತವೆ.

ಈ ಸಮುದಾಯಗಳು ಅಧ್ಯಯನದ ವೇಳೆಯಲ್ಲಿ ಎಲ್ಲಾ ಕುಲಗಳನ್ನು ತುಲನೆ ಮಾಡಿದಾಗ ಈ ಸಮುದಾಯಗಳ ಮೂಲ ಕಥೆಯಲ್ಲಿ ಬರುವ ವಿಶ್ವಕರ್ಮ, ವಶಿಷ್ಟ, ಇವರು ಮೇಲು ವರ್ಗದ ಜಾತಿಗೆ ಸಂಬಂಧಿಸಿದ್ದಾರೆ. ವಿಶೇಷವೆಂದರೆ ಬ್ರಾಹ್ಮಣರು ಕೋಮಿಟಿಗರು, ಪಾಂಚಾಲರು ಇವರು ಜಾಂಬವ ಪುರಾಣದಲ್ಲಿ ಶಿವ-ಪಾರ್ವತಿಯರ ವಿವಾಹದಲ್ಲಿ ಭಾಗಿದಾರರಾಗಿದ್ದಾರೆ. ಹಾಗೂ ಈ ಕುಲಗಳಿಗೆ ಸಾಂಸ್ಕೃತಿಕವಾಗಿ ಹತ್ತಿರದವರು ಪಾಂಚಾಲ ಕುಲಗಳಾದ ಅಕ್ಕಸಾಲಿಗ, ಕಮ್ಮಾರರು, ಕಲ್ಲುಕುಟಿಗ, ಕಂಚುಗಾರ ಮತ್ತು ಬಡಗಿಗಳು ಇವರು ಜಾಂಬವಂತನ ಅಪ್ಪಣೆಯ ಮೇರೆಗೆ ಶಿವ-ಪಾರ್ವತಿಯ ವಿವಾಹಕ್ಕೆ ಆಭರಣಗಳನ್ನು ತಯಾರಿಸುವುದಕ್ಕೆ ವಿಶ್ವಕರ್ಮನೊಂದಿಗೆ ಸಹಾಯ

ಮಾಡಿದರು ಎಂದು ಗಂಗಭಾರತದ ಪುರಾಣಗಳೇ ಸಾಕ್ಷಿಯಾಗಿದೆ ವಶಿಷ್ಠ ಬ್ರಾಹ್ಮಣನಾದರು ಮದುವೆಯಾಗುವುದು ಮಾದಿಗರ ಹೆಣ್ಣು ಮಗಳನ್ನು ಹೀಗಾಗಿ ಇವರ ನಡುವೆ ನೆಂಟಸ್ಥಿಕೆ ಇದೆ ಎಂಬುವುದು ಈ ಜಾಂಬವಂತನ ಕುಲಗಳು ಹೇಳುತ್ತಾರೆ ಹೊರತು ಈ ಮೇಲ್ಜಾತಿಯಲ್ಲಿ ಯಾರು ಸಹ ಅದರ ಪ್ರಸ್ಥಾಪವಾಗಲಿ ಅದರ ದಂತ ಕಥೆಗಳಾಗಲಿ ತಿಳಿದಿಲ್ಲ. ಆದರೆ ಈ ಮೂರು ಜನಾಂಗದವರು ಜಾಂಬ ಕುಲಗಳ ಕಾಲಿಮಂತು ನೀರನ್ನು ಅವರ ಮನೆಯ ಬೆಂಕಿಯನ್ನು ಮತ್ತು ಕೆಲವು ರಹಸ್ಯ ಆಚರಣೆಗಳನ್ನು ಕದ್ದು ಮುಚ್ಚಿ ಅನುಸರಿಸುವುದನ್ನು ಮಾಸ್ಪೀಕರ ಅಧ್ಯಯನದಲ್ಲಿ ತಿಳಿಸಿದ್ದಾರೆ. ಹೀಗಾಗಿ ಈ ಎಲ್ಲಾ ಕುಲಗಳು ಇವರೆಲ್ಲರೊಂದಿಗೆ ಅಂಟಿದ ನಂಟು ಎಂದು ಅನಿಸುವುದು ಖಚಿತವಾಗಿದೆ.

**೬.೨. ಆರ್ಥಿಕ ಸ್ಥಿತಿಗತಿ**

ಸಮಾಜದ ಪ್ರತಿ ಸಮುದಾಯಗಳು ಜಾತೀಯತೆ ಎಂಬ ಹಣೆಪಟ್ಟಿಯಿಂದ ಪ್ರತಿಯೊಂದು ಜಾತಿಯು ತಮ್ಮ ಚೌಕಟ್ಟಿನೊಳಗೆ ಆರ್ಥಿಕತೆಯನ್ನು ಸೃಷ್ಟಿಸಿಕೊಂಡ ತಮ್ಮ ಬದುಕಿಗೆ ಮೂಲಾಧಾರವಾಗಿಸಿದ್ದಾರೆ ಹಾಗೆ ದಕ್ಕಲ ಸಮುದಾಯ ತನ್ನ ಅರೆ ಅಲೆಮಾರಿತನದಿಂದ ಎತ್ತುವಳಿ ಮಾಡಿಕೊಂಡು ಬದುಕುತ್ತಿದ್ದಾರೆ. ಸಾಮಾಜಿಕ ಸ್ಥಾನಮಾನಗಳ ಅಸಮಾನತೆಯಿಂದ ಪೋಷಿಸಲಾಗಿದೆ ಪರಾಧೀನಗೊಂಡಿರುವ ಆರ್ಥಿಕ ಉತ್ಪನ್ನಗಳು ಕೆಳಜಾತಿಗಳಿಗೆ ಸ್ವಾತಂತ್ರ್ಯವಿಲ್ಲದಂತೆ ಮಾಡಿದ ಆರ್ಥಿಕ ಶ್ರೇಣೀಕರಣದಡಿಯಲ್ಲಿ ಸಿಕ್ಕಿ ಕೊಂದ ತಳಸಮುದಾಯಗಳು ಅಧಿಕಾರ ಶಾಹಿಯರ ಅಧೀನದಲ್ಲಿ ಜೀವಿಸುವಂತಹ ತಬ್ಬಲಿಗಳಾಗಿ ಬದುಕುತ್ತಿದ್ದಾರೆ. ಈ ವರ್ಗಗಳ ನಡುವೆ ಅಸ್ಪೃಶ್ಯರಿಗೆ ಆಸ್ತಿಯ ಒಡೆತನ ನಿಷ್ಠಿವಾಗಿದ್ದುದಲ್ಲದೆ ಇಂದಿನ ಸಂದರ್ಭದಲ್ಲಿ ಅದರಿಂದ ವಿಮೋಚನೆಗೊಳ್ಳಲಾಗಿದೆ. ಅಸಹಾಯಕ ಸ್ಥಿತಿಯಲ್ಲಿದ್ದಾರೆ ಊಳಿಗಮಾನ್ಯ ವ್ಯವಸ್ಥೆಯಲ್ಲಿ ಪಶು ಸಮಾನರಾಗಿ ದುಡಿದು ಸಮುದಾಯಗಳು ಜೀತಪದ್ದತಿ ಊಳಿಗಮಾನ್ಯ ಪದ್ಧತಿಗಳನ್ನು ಕೃಷಿಕ ಸಮಾಜಕ್ಕೆ ಬೇಕಾದ ಅಗತ್ಯಗಳನ್ನು ಪೂರೈಸಿಕೊಡುವಲ್ಲಿ ಪರ್ಯಾಸನಗೊಂಡಿದೆ.

ಜಮೀನ್ದಾರಿ ಪದ್ಧತಿಗಳು ಕಾನೂನಿಗೆ ಒಳಪಟ್ಟು ಅವಲಂಬಿತ ಸಮುದಾಯಗಳು ಆರ್ಥಿಕ ಪೋಷಣೆ ತಪ್ಪಿ ಹೋಗಿ ಹಲವು ಸಮುದಾಯಗಳು ಛಿದ್ರಗೊಂಡವು. ಆಗ ಭಿಕ್ಷಾಟನೆ ಕರಕುಶಲ ಕೆಲಸಗಳು ಪಶುಸಂಗೋಪನೆ ಬೀದಿ ಪ್ರದರ್ಶನಗಳಲ್ಲಿ ಅನ್ಯಮಾರ್ಗಗಳು ಹಿಡಿದು ತಮ್ಮ ಹೊಟ್ಟೆ ತುಂಬಿಸಿಕೊಂಡು ಸ್ವಲ್ಪಮಟ್ಟಿನ ಆರ್ಥಿಕ ಸುಧಾರಣೆಗೆ ಮುಂದಾಗಿದ್ದಾರೆ. ಪಾರಂಪರಿಕ ಕೃಷಿ ವ್ಯವಸ್ಥೆಯಲ್ಲಿನ ಸಂಬಂಧಗಳು ತಮಗಿದ್ದ ಆರ್ಥಿಕ ಮೂಲಗಳಿಂದ ಹಿಂದುಳಿಯ ಬೇಕಾಯಿತು ಅಂದಿನ ಅಧಿಕಾರಿ ವರ್ಗಗಳ ನಡುವೆಯು ಕುಶಲ ಕರ್ಮಿಗಳ ಮನೋರಂಜನೆಯನ್ನೊದಗಿಸುವ ವೃತ್ತಿ ಕಲಾವಿದರು ಮತ್ತು ಊಳಿಗದವರನ್ನು ಘೋಷಿಸಿಕೊಂಡು ಬರುತ್ತಿದ್ದಾರೆ. ನಂತರ ತಮ್ಮ ಕುಲ ವೃತ್ತಿಯಾದ ಭಿಕ್ಷಾಟನೆಗೂ ಯಾವುದೇ ತೊಡಕುಗಳಿಗೆ ಸಿಲುಕದ ಹಾಗೆ ಕಾಪಾಡಿಕೊಂಡು ಬರುತ್ತಿದ್ದಾರೆ. ಇದು ತಮ್ಮ ಮೂಲ ಕಸುಬಾಗಿಯು ಸ್ವೀಕೃತಗೊಳಿಸಿಕೊಂಡು ಜೀವನ ಸಾಗಿಸುತ್ತಿದ್ದ ಸಮುದಾಯಗಳಾಗಿವೆ.

ಕೇವಲ ಭಿಕ್ಷಾಟನೆಯನ್ನು ನಂಬಿ ಜೀವನ ಸಾಗಿಸುವುದು ಅಸಾಧ್ಯವಾಗದೆ ಕರಕುಲಗಳಿಗೆ ಕೈಹಾಕಿ ತಮ್ಮ ಮೂಲ ಕಸುಬುಗಳಾದ ಈಚಲು ಮರಗಳ ಗರಿಗಳನ್ನು ತಂದು ಬುಟ್ಟಿಗಳನ್ನು ಹೆಣೆದು ಹಾಗೇ ಬಿದುರು ದಬ್ಬೆಗಳಿಂದ ಬುಟ್ಟಿಗಳನ್ನು ಮತ್ತು ಪೊರಕೆಗಳನ್ನು ತಯಾರಿಸಿ ಅವುಗಳನ್ನು ಮಾರಾಟ ಮಾಡಿ ಸ್ವಲ್ಪಮಟ್ಟಿನ ಆರ್ಥಿಕ ಸುಧಾರಣೆಯನ್ನು ಮಾಡಿಕೊಳ್ಳುತ್ತಿದ್ದರು. ಈ ಸಮುದಾಯಗಳ ಸಾಂಸ್ಕೃತಿಕ ಬದುಕು ಕಣ್ಣಿಗೆ ಕಾಣದ ಬದುಕಾಗಿದೆ. ಹೀಗೆ ತಮ್ಮ ಪಾರಂಪರಿಕ ಕಸುಬುಗಳಿಗೆ ಹೊಂದಿಕೊಂಡು ಜೀವನದ ಬದುಕೆಲ್ಲಾ ದೇಹದಿಂದ ಶ್ರಮವಹಿಸಿ ಅದನ್ನು ಜೀವನಕ್ಕೆ ಆಶ್ರಯಿಸಿಕೊಂಡರು. ಬದಲಾಗುತ್ತಿರುವ ವರ್ತಮಾನದಲ್ಲಿ ಇವು ಯಾವುವು ಅವರ ಕೈಹಿಡಿಯದೆ ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲ ಎಂಬ ಗಾದೆಯ ಹಾಗೆ ಇವರ ಕುಲ ವೃತ್ತಿಗಳನ್ನು ಈ ಸಮುದಾಯಗಳು ಕೈಹಿಡಿಯಲಿಲ್ಲ ಪ್ಲಾಸ್ಟಿಕ್, ಪೇಪರ್, ಗುಜರಿ ವಸ್ತುಗಳು ಸಾರಾಯಿ ಬಾಟಲ್‌ಗಳು ಸಂಗ್ರಹಿಸಿ ಮಾರಾಟ ಮಾಡುವುದು ಇದರ ಜೊತೆಯಲ್ಲಿ ಆಧುನಿಕದ ಚಿಲ್ಲರೆ ವಸ್ತುಗಳು ಮತ್ತು ಆಟಿಕೆಗಳನ್ನು ಮಾರಾಟ ಮಾಡುವುದು ಕೃಷಿ ಮಾಲೀಕರ ಹೊಲಗಳಲ್ಲಿ ಕೂಲಿಕೆಲಸಗಳಿಗೆ ಹೋಗಿ ಶ್ರಮವಹಿಸಿ ದುಡಿಯುತ್ತಿದ್ದಾರೆ.

ಈ ಸಮುದಾಯಗಳಿಗೆ ಕೂಲಿ ಹಾಗೂ ಉಪಕಸುಬುಗಳನ್ನು ಹೊರತುಪಡಿಸದಂತೆ ಇವರಿಗೆ ಇನ್ನಿತರೆ ಕಸುಬುಗಳ ಪರಿಚಯ ಹೆಚ್ಚಿದಂತೆಲ್ಲಾ ವರ್ತಮಾನದ ಬದುಕಿನ ದಾರಿಗಳಲ್ಲಿ ಕೊನೆಗೊಂಡಂತಾಗಿರುವಾಗ ಮೊದಲ ಬಾರಿಗೆ ದಕ್ಕಲರು ಹಾಗೂ ಮಾಸ್ಪೀಕರು ತಮ್ಮನ್ನು ಆರ್ಥಿಕ ದುಃಸ್ಥಿತಿಗೆ ತಂದು ನಿಲ್ಲಿಸಿರುವ ಪೂರ್ವಜರ ಬಗ್ಗೆ ಅಸಮಾಧಾನವಿದ್ದರೂ ಇವರ ಸಾಂಸ್ಕೃತಿಕತೆ ಹಿನ್ನೆಲೆಗೆ ಹೆಚ್ಚಿನ ಗೌರವವು ಇವರಿಗಿದೆ ಹಿಡಿ ಭೂಮಿಯ ಸೃಷ್ಟಿಗೆ ತಾವೆ ಮೂಲ ಕಾರಣ ಪುರುಷರು ಎಂಬ ಹೆಮ್ಮೆ ಇವರ ಮುಖದಲ್ಲಿ ಕಾಣುತ್ತದೆ. ಇಂತಹ ಸಾಂಸ್ಕೃತಿಕ ಸೃಷ್ಟಿ ಇರುವ ಈ ಸಮುದಾಯಗಳಲ್ಲಿ ಯುವ ಪೀಳಿಗೆಯಿಂದ ನೆಲೆಹೀನವಾಗಿದೆ ಹಾಗಂತ ಇವರು ಸಂಪೂರ್ಣವಾಗಿ ನೆಲೆ ಸಮಾದಿಯಲ್ಲೆ ಅತಂತ್ರ ಆರ್ಥಿಕ ಸ್ಥಿತಿಯೊಂದಿಗೆ ಈ ಜನಾಂಗದ ಯುವ ಪೀಳಿಗೆ ಸಾಂಸ್ಕೃತಿಕ ವ್ಯಕ್ತಿತ್ವದ ತೀವ್ರ ಬಿಕ್ಕಟನ್ನು ಎದುರಿಸುತ್ತಿದೆ ಅದು ತನ್ನ ಪರಿಸರದ ತನ್ನ ಸಂಪರ್ಕಕ್ಕೆ ಸಿಗುವ ಇನ್ನಿತರ ಜಾತಿಗಳ ಜೀವನಶೈಲಿಯನ್ನು ಅನುಕರಿಸುತ್ತಿದೆ.

ತಮ್ಮ ಸಾಂಪ್ರದಾಯಿಕ ಆರ್ಥಿಕ ಮೂಲಗಳನ್ನು ಉಳಿಸಿಕೊಂಡು ಬಂದವರೆಂದರೆ ಅರೆ ಅಲೆಮಾರಿ ಸಮುದಾಯಗಳಲ್ಲಿ ದಕ್ಕಲಿಗ ಸಮುದಾಯವು ಒಂದಾಗಿದೆ. ತಮ್ಮ ಆರ್ಥಿಕ ಮೂಲಗಳನ್ನು ಚಾರಿತ್ರಿಕವಾಗಿ ಅವಶೇಷಗಳ ಮಾದರಿಯಲ್ಲಿ ದಕ್ಕಲರು ಉಳಿಸಿ ಬೆಳೆಸಿಕೊಂಡರು ಭಾರತವೆಂಬ ಸಂಪ್ರದಾಯಶೀಲ ಸಮಾಜದಲ್ಲಿ ಯಾವತ್ತೂ ಬಹುದೊಡ್ಡ ಆರ್ಥಿಕ ಉತ್ಕ್ರಾಂತಿ ಸಂಭವಿಸದೇ ಹೋದದ್ದು ಈ ಕಾರಣದಿಂದಾಗಿ. ಸಾಮಾಜಿಕ ಅಸಮಾನತೆಯು ತನ್ನ ಅತ್ಯಂತ ಹೇಯ ಆಯಾಮಗಳನ್ನು ವಿಕಸಿಸಿಕೊಳುತ್ತಲೇ ಹೋಯಿತು. ಹೀಗಾಗಿ ಸಮಾಜದಲ್ಲಿ ಅಲೆಮಾರಿಗಳು ಸಹ ಶ್ರೇಣೀಕೃತ ಸಮಾಜದ ಒಂದು ಭಾಗವಾಗಿಯೇ ರೂಪುಗೊಂಡಿದ್ದಾರೆ. ಇಂತಹ ಸಮುದಾಯಗಳು ಮೂಲಪುರುಷನ ಹುಟ್ಟು ಒಂದು ಶಾಪವಾಗಿ ಸಂಭವಿಸುತ್ತದೆ. ತಮ್ಮ ಪುರಾಣಗಳ ವಿಲಕ್ಷಣ

ಚಾರಿತ್ರಿಕ ಅಥವಾ ಪೌರಾಣಿಕ ಹಿನ್ನೆಲೆಯಲ್ಲಿ ಜನಿಸುತ್ತಾರೆ. ಒಂದು ಸಮುದಾಯದ ಮೂಲ ಪುರುಷ ಶಾಪಗ್ರಸ್ಥನಾಗಿಯೇ ಹುಟ್ಟುತ್ತಾನೆ. ಹಾಗೆಯೇ ದಕ್ಕಲರ ಮೂಲ ಪುರುಷನು ಹುಟ್ಟಿದ್ದು ದಕ್ಕೆಯಿಂದ ಅದು ಒಂದು ಶಾಪಗ್ರಸ್ಥವಾಗಿಯೇ. ಏಕೆಂದರೆ ದಕ್ಕೆಯಿಂದ ಹುಟ್ಟಿದ ಮಗುವನ್ನು ಜಾಂಬವಂತ ಮುಟ್ಟಿದಾಗ ಅವನ ಬಟ್ಟೆಗಳು ಸುಡುತ್ತವೆ. ಹೀಗಾಗಿ ಇವರ ಹುಟ್ಟು ಒಂದು ಶಾಪವಾಗಿಯೇ ಇದೆ ಶಾಪವೇ ತನ್ನ ಸಮುದಾಯಗಳ ಬೆಳವಣಿಗೆಯು ಶಾಪವಾಗಿ ಪರಿಣಮಿಸಿ, ಅವರ ಆರ್ಥಿಕ ಚಟುವಟಿಕೆಗಳನ್ನು ಪ್ರತಿನಿಧಿಸುತ್ತದೆ. ಈ ಸೃಷ್ಟಿ ಪುರಾಣಗಳು ಸಮಾಜದ ಒಳಗೆ ತಳ ಸಮುದಾಯಗಳ ಆರ್ಥಿಕ ಚಟುವಟಿಕೆಗೆ ದೊಡ್ಡ ಪೆಟ್ಟುಬೀಳುವ ಸ್ಥಿತಿಯಲ್ಲೇ ದಾಖಲಾಗಿವೆ. ಈ ಸಮುದಾಯಗಳ ಇಂದಿನ ಆರ್ಥಿಕ ಸ್ಥಿತಿಗೆ ಇವರ ಮೌಖಿಕ ಪುರಾಣಗಳಲ್ಲಿನ ತಮ್ಮ ಸಮುದಾಯದ ಹುಟ್ಟಿನ ಮೂಲಗಳಿಗೂ ಸಂಬಂಧವಿರುವುದು ತಿಳಿಯುತ್ತದೆ.

ಹೀಗೆ ದಕ್ಕಲರು ತಮ್ಮ ಮೌಖಿಕಪುರಾಣಗಳಲ್ಲಿ ಬರುವ ಜಗತ್ತು ಸೃಷ್ಟಿಯ ಕಾರ್ಯ ಹಾಗೂ ಮತ್ತೊಬ್ಬ ಸಂತೋಷಕ್ಕಾಗಿ ತಮ್ಮ ದೇಹಗಳನ್ನು ದಾನ ಮಾಡಿ ಅವರ ಸಂತೋಷಗಳಿಗೆ ಶಾಪವಾಗಿ ಪರಿಣಮಿಸಿ ತಮ್ಮ ಮೂಲಗಳು ಕಳೆದುಕೊಳ್ಳುವುದಕ್ಕೆ ಮೂಲ ಕಾರಣವಾಗಿದೆ. ಇಂತಹ ಸ್ಥಿತಿಯಲ್ಲಿ ಕೇವಲ ಈ ಸಮುದಾಯಗಳಿಗೆ ಅಲ್ಲದೆ ಇತರ ತಳಸಮುದಾಯಗಳಲ್ಲಿ ಅವರ ಸೃಷ್ಟಿ ಪುರಾಣಗಳು ಮೂಲಕವೇ ಶಾಪಗ್ರಸ್ಥದಿಂದ ಆರ್ಥಿಕ ಸ್ಥಿತಿಯನ್ನು ತೊಂದರೆ ಅನುಭವಿಸುತ್ತಿದ್ದಾರೆ. ಈ ಕ್ವಚಿತ್ ಉಲ್ಲೇಖಗಳ ಮೂಲಕ ಆಯಾ ಕಾಲಘಟ್ಟದ ಅಲೆಮಾರಿಗಳ ಆರ್ಥಿಕ ಮೂಲಗಳೂ ಕಳೆದುಕೊಳ್ಳುವುದಕ್ಕೆ ಮೂಲ ಕಾರಣವಾಗಿದೆ ಇಂತಹ ಸ್ಥಿತಿಯು ಕೇವಲ ಈ ಸಮುದಾಯಗಳಿಗೆ ಅಲ್ಲದೆ ಇತರ ತಳಸಮುದಾಯಗಳಲ್ಲಿ ಅವರ ಸೃಷ್ಟಿ ಪುರಣಾಗಳ ಮೂಲಕವೇ ಶಾಪಗ್ತಸ್ಥದಿಂದ ಆರ್ಥಿಕ ಸ್ಥಿಯಿಂದ ತೊಂದರೆ ಅನುಭವಿಸುತ್ತಿದ್ದಾರೆ ಎಂಬ ಅಂಶ ತಿಳಿಯುತ್ತದೆ. ಈ ಕ್ವಚಿತ್ ಉಲ್ಲೇಖಗಳ ಮೂಲಕ ಆಯಾಕಾಲಘಟದ ಅಲೆಮಾರಿಗಳ ಆರ್ಥಿಕ ಚಟುವಟಿಕೆಗಳನ್ನು ವಿವರಿಸಿಕೊಳ್ಳಬಹುದಾಗಿದೆ. ಅದಕ್ಕೆ ಉದಾಹರಣೆಯಾಗಿ ದಕ್ಕಲ ಸಮುದಾಯಗಳೆ ಆಗಿದೆ. ಹೀಗೆ ಈ ಸಮುದಾಯಗಳ ಮೌಖಿಕ ಪುರಾಣದ ಮೂಲಕ ದೊರಕದೆ ಇರುವುದಕ್ಕೆ ಕಾರಣವಾಗಿದೆ. ಪ್ರತಿಯೊಂದು ಅನುದಾನವು ದೊರಕಿಸಿಕೊಳ್ಳುವುದಕ್ಕೆ ಈ ಸಮುದಾಯಗಳಿಗೆ ದಾರಿಗೆ ಬಿದ್ದ ಮುಳ್ಳಿನಂತಾಗಿದೆ.

**ಆರ್ಥಿಕ ಪ್ರದರ್ಶನ ಕಲೆಗಳು**

ದಕ್ಕಲ ಸಮುದಾಯಗಳಲ್ಲಿ ಪ್ರದರ್ಶನಾತ್ಮ ಕಲೆಗಳು ಹೆಚ್ಚಾಗಿ ಕಂಡು ಬರದಿದ್ದರು ಇವರಲ್ಲಿ ಕಿನ್ನರಿ ಮೇಳ ಹಾಗೂ ನವಿಲು ಕುಣಿತಗಳ ಕಲೆಗಳು ಮಾತ್ರ ಇಂದಿಗೂ ಜೀವಂತವಾಗಿದೆ. ಈ ಸಮುದಾಯಗಳು ತಮ್ಮ ಪಾರಂಪರಿಕ ಸರಂಜಾಮುಗಳನ್ನು ಬಳಸಿಯೇ ಮಾದಿಗ ಸಮುದಾಯಗಳ ಕೇರಿಗಳಲ್ಲಿ ರಂಜಿಸಿ ಭಿಕ್ಷೆ ಬೇಡುವುದು ಇವರ ಕಸುಬುಗಳೆ ಮನರಂಜನೆಯ ಪ್ರದರ್ಶನದ ಕಲೆ ಎಂದರೆ ತಪ್ಪಾಗಲಾರದು ಆಧುನಿಕ ಮನರಂಜಾನ ಮಾಧ್ಯಮಗಳು ವಿಧಿಸುವ ನಿಶ್ಚಿತ ಶುಲ್ಕ

ಇಲ್ಲವೆ ನಿಯಮಗಳು ಇವರಲ್ಲಿ ಇಲ್ಲ. ಈ ಸಮುದಾಯಗಳು ಊರೂರು ಅಲೆಯುವಾಗ ತಮ್ಮ ಕುಲಬಳ್ಳಿಗಳಾದ ಮಾದಿಗ ಕೇರಿಗಳಲ್ಲಿ ಇಡೀ ರಾತ್ರಿ ಕಿನ್ನರಿಮೇಳ ಹಾಗೂ ನವಿಲು ಕುಣಿತವಾದ ಜಾಂಬವ ಪುರಾಣವನ್ನು ಹಾಡಿ ಮಾದಿಗ ಸಮುದಾಯಗಳಿಗೆ ಮನರಂಜಿಸಿ ಅವರಿಂದ ಉಪಚರಿಸಿಕೊಳ್ಳುತ್ತಾರೆ. ಇವರು ತಮ್ಮ ಕುಣಿತಗಳಿಗೆ ಮಾದಿಗರನ್ನು ಮನಸೋಲುವಂತೆ ಮಾಡುತ್ತಾರೆ. ಇವರ ಕಲೆಗಳನ್ನು ಕೇವಲ ಮಾದಿಗರಲ್ಲದೆ ಇತರೆ ಸಮುದಾಯಗಳು ಸಹ ಬಂದು ನೋಡುತ್ತಾರೆ. ಇವರು ಹೆಚ್ಚಾಗಿ ಜಾಂಬವ ಪುರಾಣವನ್ನು ಹಾಡುತ್ತಾರೆ. ಈ ಪುರಾಣದಲ್ಲಿ ಬರುವ ಜಾಂಬವಂತನ ಜನನ, ಭೂಸೃಷ್ಟಿ, ಆದಿಶಕ್ತಿಯ ಜನನ, ಅರುಂಧತಿ ಕಲ್ಯಾಣ ಇದು ಗಂಗಭಾರತದ ವಸ್ತು ಪ್ರಕಾರವಾಗಿದ್ದು, ಈ ಪುರಾಣಗಳನ್ನು ಹೇಳುತ್ತಾ ಮಾದಿಗ ಮತ್ತು ದಕ್ಕಲರ ನಡುವಿನ ಸಂಬಂಧದಲ್ಲಿ ದೊರೆತ ಶಾಪವೋ, ವರವೋ ಭಿಕ್ಷಾಟನೆ ಮಾಡುವುದು ಎಂದು ಎಡ್ಗರ್ ಥರಸ್ಟನ್ ಅವರು ದಕ್ಷಿಣ ಭಾರತದ ಜಾತಿ ಜನಾಂಗಗಳ ಅಧ್ಯಯನದಲ್ಲಿ ತಿಳಿಸಿರುವುದು ಗಮನಿಸಬಹುದು. ಒಟ್ಟಿನಲ್ಲಿ ಈ ಸಮುದಾಯಗಳು ನಿಶ್ಚಿತ ಆದಾಯ ಮೂಲವಿಲ್ಲದೆ ತಮ್ಮ ವೃತ್ತಿಯಿಂದಾಗಿ ಸ್ಥಳೀಯ ಮಾದಿಗರ ವರ್ಗಗಳನ್ನು ಆಶ್ರಯಿಸಿಯೇ ಬದುಕಬೇಕಾಗುತ್ತದೆ. ಅಷ್ಟೇ ಅಲ್ಲದೆ ಆರ್ಥಿಕ ಮೂಲಗಳು ಮತ್ತು ಅವರು ಬೆಳೆದು ಬರಲು ಕಾರಣವಾದ ಚಾರಿತ್ರಿಕ ಅನಿವಾರ್ಯತೆಗಳನ್ನು ಗಮನಿಸಬಹುದಾಗಿದೆ. ಇಂತಹ ಸಮುದಾಯಗಳು ಎತ್ತುವಳಿಯ ಭಿಕ್ಷೆಯನ್ನು ಅವಲಂಬಿಸಿದ ಈ ಸಮುದಾಯಗಳಿಗೆ ಸಾಮಾಜಿಕ ಜ್ಞಾನವಿಲ್ಲದೆ ಜನಸಾಮಾನ್ಯರ ಸಂಪರ್ಕವಿಲ್ಲದೆ ಶೈಕ್ಷಣಿಕ ಅರಿವಿಲ್ಲದೆ ಬೆಳಕಿದ್ದು ಕತ್ತಲಲ್ಲೇ ಬದುಕುತ್ತಿರುವ ದಕ್ಕಲರಿಗೆ ಸರ್ಕಾರದಿಂದ ಅನೇಕ ಯೋಜನೆಗಳು ತಂದರೂ ಆ ಯೋಜನೆಗಳು ಕನಿಷ್ಠ ಸೌಲಭ್ಯಗಳು ದೊರಕದೆ ಇರುವುದು ಅಧಿಕಾರಿಗಳ ನಿರ್ಲಕ್ಷ್ಯವಾಗಿದೆ. ಇದು ಈ ಸಮುದಾಯಗಳು ಮಾಡಿಕೊಂಡ ದೌರ್ಭಾಗ್ಯ ಎಂಬುದು ತಿಳಿಯದಾಗಿದೆ. ಇಂತಹ ವರ್ತಮಾನದ ಸಮಾಜದಲ್ಲಿ ಈ ಸಮುದಾಯಗಳ ಬೆಳಕಿಗೆ ಬರದೆ ಕತ್ತಲಲ್ಲೇ ಜೀವಿಸುತ್ತಿರುವುದು ಈ ಪ್ರದೇಶಗಳಲ್ಲಿ ಕಾಣಬಹುದು ಇಷ್ಟು ನಷ್ಟದಲ್ಲಿಯು ಅಧಿಕಾರಿಗಳು ಸ್ಪಂದಿಸದೆ ಇರುವುದರಿಂದ ಪರಿಶಿಷ್ಟ ಪಂಗಡ ಮೀಸಲಾತಿಯು ಪರಿಶಿಷ್ಟ ಜಾತಿಯ ಪಾಲಾಗುತ್ತಿರುವುದು ಹಾಗೂ ಮಧ್ಯವರ್ತಿಗಳ ಪಾಲಾಗುತ್ತಿರುವುದು ಈ ಸಮುದಾಯಗಳ ಆರ್ಥಿಕವಾಗಿ ಹಿಂದುಳಿಯುತ್ತಿರುವುದಕ್ಕೆ ಮೂಲ ಕಾರಣವಾಗಿದೆ. ಸರ್ಕಾರದಿಂದ ನೀಡಿರುವ ಜಾತಿ ಪ್ರಮಾಣಪತ್ರವು ಪರಿಶಿಷ್ಟ ಜಾತಿ ಎಂದು ನಮೂದಾಗಿದ್ದು, ಹೀಗಾಗಿ ಸರ್ಕಾರದಿಂದ ದಕ್ಕಲ ಸಮುದಾಯಗಳಿಗೆ ನಿಯೋಜಿಸಿರುವ ಯೋಜನೆಗಳು ಬೆಸೆದು ಅರ್ಥೈಸುವಂತೆ ಮಾಡಿ ಅದ್ಭುತವಾಗಿ ವರ್ಣಿಸುತ್ತಾ ಹಾಡುತ್ತಾರೆ.[೩]

ಡಾ. ಚಲುವರಾಜು ಅವರ ದಕ್ಕಲ ಸಂಸ್ಕೃತಿಯಲ್ಲಿ ದಕ್ಕಲ ಸಮುದಾಯಗಳಲ್ಲಿ ಬಸವ ಪುರಾಣವನ್ನು ಹೆಚ್ಚಾಗಿ ಹಾಡುತ್ತಿದ್ದರು ಹಾಗೂ ಬಟ್ಟೆಗಳಿಂದ ಮಾಡಿದ ಬಣ್ಣದ ನವಿಲುಗಳ ಕುಣಿತಗಳ ಬಗ್ಗೆ ವಿವರಿಸಿದ್ದಾರೆ. ಆದರೆ ಕೋಲಾರ ಚಿಕ್ಕಬಳ್ಳಾಪುರ ಕ್ಷೇತ್ರಗಳಲ್ಲಿ ಇತ್ತೀಚಿಗೆ

ಇಂತಹ ಪ್ರದರ್ಶನ ಕಲೆಗಳು ಕಂಡು ಬಂದಿಲ್ಲ. ಈ ಸಮುದಾಯಗಳು ಹೇಳುವ ಹಾಗೆ ಎರಡು ತಲೆಮಾರುಗಳ ಹಿಂದೆ ಇತ್ತು ಆದರೆ ಈಗ ಅದು ನಮ್ಮ ಸಮುದಾಯಗಳು ಪ್ರದರ್ಶಿಸುತ್ತಿಲ್ಲ ಅದರ ಅರಿವೆ ನಮಗೆ ಇಲ್ಲ ನಾವು ಕೇವಲ ಜಾಂಬವ ಪುರಾಣ ಮಾತ್ರ ಹಾಡುತ್ತೇವೆ ಎಂದು ಹೇಳುತ್ತಾರೆ. ನವಿಲು ಕುಣಿತ ಬಸವಪುರಾಣಗಳು ತುಮಕೂರು ಬಳ್ಳಾರಿ ದಾವಣಗೆರೆ ವರಂಗಲ್ ಜಿಲ್ಲೆಗಳಲ್ಲಿ ಮಾತ್ರ ಪ್ರದರ್ಶಿಸುತ್ತಾರೆ. ಎಂಬ ಮಾಹಿತಿ ನೀಡಿದರು. ಹೀಗೆ ಹಲವಾರು ಕಥೆ ಪುರಾಣಗಳು ದಕ್ಕಲ ಮುನಿ, ದಕ್ಕಲರ ಹುಟ್ಟು, ಅವರ ಮೂಲ ಪುರುಷ ಕಾಮಧೇನು ಕಥೆ ಆರುಂಧತಿ ಕಲ್ಯಾಣ, ಕಾಳಿಯ ಹುಟ್ಟು ಈ ಕಥೆಗಳಿಗೆ ತಕ್ಕಂತೆ ಹಾಗೂ ಅವರ ವಿಷಯವನ್ನು ತೆಗೆದುಕೊಂಡು ಕ್ರಮಬದ್ಧವಾಗಿ ಹಾಡಿ ಕುಣಿಯುತ್ತಾರೆ. ಕಿನ್ನರಿ ಕಲೆಯು ದಕ್ಕಲರ ಅದ್ಭುತ ಕಲಾಪ್ರದರ್ಶನವಾಗಿದೆ.[೪]

**ಧಾರ್ಮಿಕ ಸಂಬಂಧಿ ವ್ಯಕ್ತಿಯ ಆರ್ಥಿಕತೆ**

ಸಾಮಾನ್ಯವಾಗಿ ಈ ಸಮುದಾಯಗಳಲ್ಲಿ ಸಾಮಾಜಿಕವಾಗಿ ಹಿಂದುಳಿದರು ಸಾಂಸ್ಕೃತಿಕವಾಗಿ ಹೊಂದಿರುವ ಸಮುದಾಯಗಳಾಗಿವೆ. ಇವರು ತಮ್ಮ ಆದಿ ಜಾಂಬವನ ಧಾರ್ಮಿಕತೆಯನ್ನು ನಂಬಿ ತಮ್ಮ ಕುಲವೃತ್ತಿಯನ್ನು ಮುಂದುವರಿಸುತ್ತ ಸ್ವಲ್ಪಮಟ್ಟಿನ ಆರ್ಥಿಕತೆಯಾಗಿಸಿದ್ದಾರೆ. ಅರೆ ಅಲೆಮಾರಿ ಸಮುದಾಯಗಳಾದ ಗೊರವರು, ಮಾಸ್ಟಿಕರು, ಸಿಂಧ್ ಮಾದಿಗರು, ಸುಡುಗಾಡು ಸಿದ್ಧರು ಇನ್ನು ಮುಂತಾದ ಅಲೆಮಾರಿಗಳು ತಮ್ಮ ಅನುಭವಗಳ ಕಾವ್ಯಗಳನ್ನು ತತ್ವ ಪದಗಳಾಗಿ ಹಾಡುತ್ತ ಊರೂರು ಅಲೆಯುತ್ತಾ ಭಿಕ್ಷೇ ಬೇಡುತ್ತಾ ತಮ್ಮ ಜೀವನವನ್ನು ಸಾಗಿಸುವ ಹಾಗೆ ದಕ್ಕಲರು ತಮ್ಮ ಮೌಖಿಕ ಪುರಾಣವನ್ನು ಆರ್ಥಿಕಯುತವಾಗಿಸಿಕೊಂಡು ಮಾದಿಗರ ಕೇರಿಗಳಲ್ಲಿ ಭಿಕ್ಷಾಟನೆ ಮಾಡಿ ತಮ್ಮ ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದಾರೆ. ಈ ಧಾರ್ಮಿಕ ಮೂಲಪುರಾಣಗಳಿಂದ ಆರ್ಥಿಕತೆ ಪೂರ್ತಿಯಾಗಿ ಒದಗಿಸದೆ ಇದ್ದರು ತಕ್ಕಮಟ್ಟಿಗೆ ಜೀವನ ನಡೆಸುತ್ತಿದ್ದೇವೆ ಎಂಬ ಆಶಾಭಾವನೆ ಈ ಸಮುದಾಯಗಳಲ್ಲಿ ಎದ್ದು ಕಾಣುತ್ತದೆ. ಇಂದಿಗೂ ತಮ್ಮ ಧಾರ್ಮಿಕ ಕಥೆಯನ್ನು ಬಿಟ್ಟುಕೊಡದೆ ಸಂಪ್ರದಾಯ ಬದ್ಧವಾಗಿ ಸಾಂಸ್ಕೃತಿಕತೆಗೆ ಧಕ್ಕೆ ತರದ ಹಾಗೆ ತಮ್ಮ ನಿಯಮಗಳನ್ನು ಪಾಲಿಸಿಕೊಂಡು ಬರುತ್ತಿರುವುದು ಈ ಪ್ರದೇಶಗಳಲ್ಲಿ ಕಾಣಬಹುದು.

**ಪಾರಂಪರಿಕ ಮೂಲ ವ್ಯಕ್ತಿಗಳಲ್ಲಿ ಆರ್ಥಿಕತೆ ಹೊಂದುತ್ತಿರುವ ಸಮುದಾಯಗಳು**

ತಳಸಮುದಾಯಗಳು ಆರ್ಥಿಕವಾಗಿ ಸಮಾಜದ ಪ್ರಬಲ ಸಮುದಾಯಗಳನ್ನು ಪಾರಂಪರಿಕವಾಗಿ ಅವಲಂಬಿಸಿರುವವರು ಅವರಲ್ಲಿ ಹೆಳವರು, ದಕ್ಕಲರು, ಮಾಸ್ಪೀಕರು, ಸಿಂಧ್ ಮಾದಿಗರು ಈ ಸಮುದಾಯಗಳು ಅಧಿಕಾರದ ಅಧೀನದಲ್ಲಿ ಇದ್ದು, ಪಾಳೇಗಾರರು ಅಧಿಕಾರಶಾಹಿ ಸಮುದಾಯಗಳು ತಳಸಮುದಾಯಗಳನ್ನು ಮನೆ ಮಕ್ಕಳಾಗಿ ಸೇವೆ ಸಲ್ಲಿಸಬೇಕಾಗಿತ್ತು ಭಿಕ್ಷಾಟನೆಯಿಂದ ಯಾವಾಗ ಹೊಟ್ಟೆ ತುಂಬಿಸಿಕೊಳ್ಳಲು ಈ ಸಮುದಾಯಗಳಿಗೆ ಕಷ್ಟಕರವಾಗಿ ಪರಿಣಮಿಸಿತ್ತು. ಆಗ ಮೇಲುವರ್ಗಗಳು ಕೂಲಿ ಕೆಲಸಗಳಿಗಾಗಿ ಪಾಳೇಗಾರರ ಕೈಹಿಡಿಯಬೇಕಾಯಿತು. ಇಂತಹ

ಸಂದರ್ಭದಲ್ಲಿ ಪಾಳೇಗಾರರು ತಳಸಮುದಾಯಗಳನ್ನು ತಮ್ಮ ತೆಕ್ಕೆಗೆ ಒಳಪಡಿಸಿ, ಕಡಿಮೆ ಕೂಲಿಯನ್ನು ಕೊಟ್ಟು ಹೆಚ್ಚು ದುಡಿಮೆ ಮಾಡಿಸಿಕೊಳ್ಳುತ್ತಿದ್ದರು. ಹೀಗೆ ಕಡಿಮೆ ಕೂಲಿಯಲ್ಲಿ ತಮ್ಮ ಆಥಿಕತೆಯನ್ನು ವೃದ್ಧಿಸಿಕೊಳ್ಳುವುದಕ್ಕೆ ಎಣೆಗಾಡುತ್ತಿದ್ದರು.

**ಪಾರಂಪರಿಕ ಕಸುಬುಗಳಲ್ಲಿ ಆರ್ಥಿಕ ವ್ಯವಸ್ಥೆ**

ಆರ್ಥಿಕತೆಯನ್ನು ವೃದ್ಧಿಸಿಕೊಳ್ಳುವಲ್ಲಿ ಎಲ್ಲಾ ಸಮುದಾಯಗಳು ಹಲವು ಕಸುಬುಗಳಿಗೆ ಕೈಹಾಕುತ್ತ ಸಮಾಜದಲ್ಲಿ ಒಂದು ಉತ್ತಮ ನೆಲೆ ಕಾಣಲು ಶ್ರಮವಹಿಸಿ ತಮ್ಮ ಆರ್ಥಿಕತೆಯನ್ನು ವೃದ್ಧಿಸಿಕೊಳ್ಳಲು ಹೆಣಗಾಡುತ್ತಾ ಹಾಗೆ ಸಾಂಸ್ಕೃತಿಕ ಕಟ್ಟುಪಾಡುಗಳಲ್ಲಿ ಸಿಲುಕಿಕೊಂಡು ಪಾರಂಪರಿಕ ಕಸುಬುಗಳಲ್ಲೆ ತೊಡಗಿಸಿಕೊಂಡು ದಕ್ಕಲರು ತಮ್ಮ ಸಮುದಾಯಗಳು ಆರ್ಥಿಕವಾಗಿ ಮೇಲೆ ಬರಲು ಸಾಧ್ಯವಾಗಲಿಲ್ಲ. ಹೀಗೆ ಪರಂಪರಾಗತವಾದ ಕಸುಬುದಾರಿಕೆಯೆಂಬುದು ಒಂದಾಗಿಲ್ಲ ಹಲವು ರೀತಿಯ ಕಸುಬುಗಳನ್ನು ಮಾಡುತ್ತಿದ್ದರು. ಉತ್ಪಾದನಾ ಕಸುಬುದಾರಿಕೆ ಇವರಲ್ಲಿ ಯಾವುದೂ ಕಾಣುವುದಿಲ್ಲ. ಹೀಗಾಗಿ ಈ ಸಮುದಾಯಗಳ ಉತ್ಪಾದನಾ ಕಸುಬುಗಳು ಕಣ್ಣಿಗೆ ಕಾಣದೆ ಕತ್ತಲಲ್ಲೇ ಕರಗುವಂತಾಯಿತು. ಇಂತಹ ದಕ್ಕಲ ಸಮುದಾಯಗಳು ಮಾದಿಗರ ಕೇರಿಗಳಲ್ಲಿ ಭಿಕ್ಷಾಟನೆ ಮಾಡುವುದು ಒಂದು ಕಡೆಯಾದರೆ ಇವರು ವಾಸಿಸುವ ಬಯಲು ಪ್ರದೇಶ ಸುತ್ತಲು ಇರುವ ಕಾಡುಗಳಲ್ಲಿ ಮರಗಳನ್ನು ಬಳಸಿಕೊಂಡು ಈಚಲು ಮರದ ಗರಿಗಳು ಬಿದುರು ಮರಗಳ ದಬ್ಬೆಗಳನ್ನು ಬಳಸಿಕೊಂಡು ಅವುಗಳಿಂದ ಬುಟ್ಟಿಗಳು ಚಾಪೆಗಳನ್ನು ಹೆಣೆದು ಅವುಗಳನ್ನು ಮಾರಾಟ ಮಾಡಿ ಆರ್ಥಿಕತೆಯನ್ನು ವೃದ್ಧಿಸಿಕೊಳ್ಳುವುದಕ್ಕೆ ಪ್ರಯತ್ನಿಸುತ್ತಿದ್ದರು. ನಂತರ ಕುರುಚಲು ಕಾಡುಗಳಲ್ಲಿ ಬಗೆ ಬಗೆ ಪ್ರಾಣಿಗಳನ್ನು ಬೇಟೆಯಾಡುವ ಕಸುಬನ್ನು ಮೈಗೂಡಿಸಿಕೊಂಡು ಅವುಗಳ ಮಾಂಸವನ್ನು ಆಹಾರವಾಗಿ ಬಳಸಿಕೊಂಡು ಉಳಿದ ಮಾಂಸವನ್ನು ಮಾರಾಟ ಮಾಡಿಕೊಂಡು ಉಪಜೀವನವಾಗಿ ಮಾಡಿಕೊಂಡಿದ್ದರು. ವಸತಿಗಾಗಿ ಕಾಡುಗಳಲ್ಲಿ ಸೊಪ್ಪು ಸೊದೆ ಬಳ್ಳಿಗಳು ಮರಗಳನ್ನು ಗುಡಿಸಲುಗಳನ್ನಾಗಿಸಿ ಅದರ ಮೇಲೆ ಒದಗಿಸಿಕೊಳ್ಳುವುದಕ್ಕೆ ಬಳಸುತ್ತಿದ್ದಾರೆ ಹಾಗೂ ಅಡಿಗೆ ಮಾಡಲು ಬೇಕಾದ ಪಾತ್ರೆಗಳನ್ನು ಕೆಲವು ಮರಗಳನ್ನು ಬಳಸಿಕೊಳ್ಳುತ್ತಿದ್ದರು. ಮರದ ಸೌಟುಗಾಗಿ ತೆಂಗಿನ ಚಿಪ್ಪು ಪೊರಕೆ ಕಡ್ಡಿಗಾಗಿ ಈಚಲು ಗರಿ ಬುಟ್ಟಿಗಳನ್ನು ತಯಾರಿಸಿಕೊಳ್ಳುತ್ತಿದ್ದರು. ಇವುಗಳ ಬಳಕೆಯಿಂದ ಆರ್ಥಿಕತೆ ಸ್ವಲ್ಪಮಟ್ಟಿಗೆ ಕಡಿತಗೊಳಿಸುತ್ತಿದ್ದರು ಬಂದ ಹಣವನ್ನು ಬೇರೆ ಕೆಲಸಗಳಿಗೆ ಉಪಯೋಗಿಸಿಕೊಳ್ಳುತ್ತಿದ್ದರು. ಈ ಸಮುದಾಯಗಳ ಗಂಡಸರು ಎತ್ತುಗಳ ಕೊಂಬುಗಳನ್ನು ಹೆರೆದು ಅವುಗಳ ಸೌಂದರ್ಯ ಹೆಚ್ಚಿಸುವಂತೆ ಮಾಡಿ ಇವುಗಳಿಂದ ಆರ್ಥಿಕತೆ ವೃದ್ದಿಸಿಕೊಳ್ಳುವುದಕ್ಕೆ ಪ್ರಯತ್ನಿಸುತ್ತಿದ್ದರು. ಇಂದಿನ ಯುವ ಜನತೆ ಗಾರೆ ಕೆಲಸಗಳ ಫ್ಯಾಕ್ಟರಿಗಳಿಗೆ ಹೋಗಿ ದುಡಿಯುವುದು ರಸ್ತೆ ಕಾಮಗಾರಿಗೆ ಟೈಲರಿಂಗ್ ಮುಂತಾದ ಕೆಲಸಗಳಿಂದ ಆರ್ಥಿಕತೆಯನ್ನು ವೃದ್ಧಿಸಿಕೊಳ್ಳುತ್ತಿದ್ದಾರೆ. ವರ್ತಮಾನದ ಪ್ಲಾಸ್ಟಿಕ್ ವಸ್ತುಗಳ ಬಳಕೆಯಿಂದ ತಮ್ಮ ಕುಲಕಸುಬುಗಳಿಗೆ ಆರ್ಥಿಕ ವೃದ್ಧಿ ಕಡಿಮೆಯಾದರೂ ಕೂಲಿಕೆಲಸಗಳಿಂದ ಹೆಚ್ಚಿಸಿಕೊಳ್ಳುವುದಕ್ಕೆ ಪ್ರಯತ್ನಿಸುತ್ತಿದ್ದಾರೆ.

**ಸಮಕಾಲೀನತೆಯ ಪ್ರಭಾವ**

ವರ್ತಮಾನದ ವಿದ್ಯಮಾನಗಳ ಪ್ರಭಾವದಿಂದ ದಕ್ಕಲ ಸಾಂಸ್ಕೃತಿಕ ಚಟುವಟಿಕೆಗಳ ಮೇಲೆ ತೀವ್ರ ಅಭಾವವುಂಟಾಗಿ ಪಾರಂಪರಿಕ ಕಸುಬುಗಳು ಮರೆಯಾಗುತ್ತವೆ. ಇಷ್ಟು ದಿನಗಳು ದಕ್ಕಲರನ್ನು ಪ್ರಭಾವಿಸುತ್ತಿದ್ದದ್ದು ನಂಬಿಕೆ ಮತ್ತು ಅವರ ಪುರಾಣಗಳೇ ಆಗಿತ್ತು. ಇಂತಹ ನಂಬಿಕೆ ಪುರಾಣಗಳು ನೆಲೆಕೆಚ್ಚುವ ಸಂದರ್ಭದಲ್ಲಿ ಪುರಾಣಗಳು ನೆಲೆ ಇಲ್ಲದಂತಾಗಿ ತಮ್ಮ ಹೊಸ ಚೈತನ್ಯ ಹುರುಪು ರೂಢಿಸಿಕೊಳ್ಳಲು ತಮ್ಮ ಸಮಾಜದ ಹಲವು ಹೊಸ ದಾರಿಗಳು ಕವಲೊಡೆದಂತೆ ಕಂಡು ಅವುಗಳತ್ತ ನೋಡುವುದು ಅನಿವಾರ್ಯವಾಯಿತು. ಯಾವುದೇ ಸಮುದಾಯಗಳಾಗಲೀ ಕಾಲಕ್ಕೆ ತಕ್ಕಂತೆ ಬದಲಾಗಿ ಹೊಸಮುಖಗಳ ಕಡೆ ನೋಡಬೇಕೆಂಬ ಹಂಬಲವಿರುತ್ತದೆ ಹೊರತು ತಮ್ಮ ಜಡ ಸಂಸ್ಕೃತಿಯೊಂದಿಗೆ ತಾವು ನೆಮ್ಮದಿಯಿಂದ ಬದುಕುತ್ತೇವೆ ಎಂಬ ಆತ್ಮವಿಶ್ವಾಸ ಯಾರಿಗೂ ಇರುವುದಿಲ್ಲ. ಅಷ್ಟೇ ಅಲ್ಲದೇ ತನ್ನಲ್ಲಿ ಲೀನವಾದವರನ್ನಷ್ಟೇ ಮುಂದೊಯ್ಯುತ್ತ ಉಳಿದೆಲ್ಲವನ್ನು ಹಿಂದುಳಿಸಿಬಿಡುತ್ತದೆ. ತಮ್ಮ ಮೂಲ ಸಂಸ್ಕೃತಿಯ ಕಸುಬುಗಳು ಬಿಟ್ಟು ಸಮಕಾಲೀನತೆಗೆ ಹೊಂದಿಕೊಂಡು ಕನಿಷ್ಠ ಮಟ್ಟಿನ ಆರ್ಥಿಕತೆ ಪಡೆಯುವ ಹಂಬಲ ಈ ಸಮುದಾಯಗಳದ್ದಾಗಿದೆ. ಒಟ್ಟಾರೆಯಾಗಿ ಆರ್ಥಿಕವಾಗಿ ಕೊಂಚ ಕೊಂಚವೇ ಸುಧಾರಿಸಿಕೊಳ್ಳುತ್ತಿರುವ ದಕ್ಕಲರು ತಮ್ಮ ಸಂಸ್ಕೃತಿಯ ಕೇಂದ್ರ ನೆಲೆಯಿಂದ ಚದುರದಂತೆ ಹಾಗೂ ಆದಿ ಮೂಲ ಸಂಸ್ಕೃತಿಯ ಕೇಂದ್ರ ನೆಲೆಯಿಂದ ಕದಲದೆ ದಕ್ಕಲರು ಆರ್ಥಿಕವಾಗಿ ತೀರಾ ಹಿಂದುಳಿದಿದ್ದಾರೆ. ಆಧುನಿಕತೆಯಿಂದ ದಕ್ಕಲರ ಕುಶಲಕಲೆಗಳ ಅವರ ಸಾಂಸ್ಕೃತಿಕತೆ ಅಗ್ನಿಪರೀಕ್ಷೆಯಾಗಿ ಪರಿಣಮಿಸಿ ಹೀಗೆ ಆರ್ಥಿಕತೆ ಎಂಬುವುದು ಒಂದು ದೊಡ್ಡ ಮೂಲವಾಗಿ ಪರಿಣಮಿಸಿದೆ. ಇದರ ಆಚಾರ ವಿಚಾರಗಳ ಪದ್ದತಿಗಳು ದೊಡ್ಡ ಮಾರಕವಾಗಿದೆ. ಆದರೂ ಎಷ್ಟೇ ಆಧುನಿಕತೆ ಹೊಂದಿದ್ದರೂ ತಮ್ಮ ನಂಬಿಕೆಯಲ್ಲಿ ಬೇರುಗಳಿಗೆ ಧಕ್ಕೆಯಾಗದಂತೆ ಅದರ ಅಡಿಯಲ್ಲೇ ಹೊಂದಿಕೊಂಡಿವೆ.

**೬.೩. ಶೈಕ್ಷಣಿಕ ಸ್ಥಿತಿ**

ಸಮಾಜದಲ್ಲಿ ವ್ಯಕ್ತಿಯ ಬಹುಮುಖ ಪಾತ್ರಗಳಲ್ಲಿ ಶಿಕ್ಷಣ ಪಾತ್ರ ಬಹಳ ಮಹತ್ವವಾಗಿದೆ. ಭಾರತೀಯ ಸಮಾಜದ ಅವಸ್ಥೆಯಲ್ಲಿ ಬಹುಮುಖ್ಯವಾಗಿ ಶಿಕ್ಷಣ ಬೇಕಾಗುತ್ತದೆ. ಸಮಾಜದ ಹಲವು ವರ್ಗಗಳಲ್ಲಿ ವ್ಯವಹರಿಸಿ ತಮ್ಮ ಜೀವನ ಮಟ್ಟವನ್ನು ಸುಧಾರಿಸಿಕೊಂಡು ಸಮಾಜದಲ್ಲಿ ಒಂದು ಉನ್ನತ ಸ್ಥಾನಕ್ಕೆ ಕೊಂಡೊಯ್ಯುವುದು ಶಿಕ್ಷಣದ ಮೂಲಕವೇ ಎಂಬ ಅಂಶ ಸತ್ಯವಾಗಿದೆ. ಇಂತಹ ಮುಂದುವರೆಯುತ್ತಿರುವ ಸಮಾಜದಲ್ಲಿ ತಳಸಮುದಾಯಗಳು ಶಿಕ್ಷಣದಿಂದ ವಂಚಿತರಾಗುತ್ತಿರುವುದು ತಿಳಿಯುತ್ತದೆ. ಕಾರಣ ಒಂದೆಡೆ ನೆಲೆನಿಲ್ಲದ ಅಲೆಮಾರಿಗಳಾಗಿ ವಲಸೆ ಹೋಗುವುದರಿಂದ ಈ ಸಮುದಾಯಗಳಲ್ಲಿ ಅಕ್ಷರಸ್ಥರ ಸಂಖ್ಯೆ ಇವರಲ್ಲಿ ತೀರಾ ಕಡಿಮೆ ಇರುವುದು ತಿಳಿದುಬರುತ್ತದೆ. ಕನಿಷ್ಠ ಮಟ್ಟದ ಸೌಲಭ್ಯಗಳು ಇಲ್ಲದ ಪಕ್ಷದಲ್ಲಿ ಶೈಕ್ಷಣಿಕ ಸ್ಥಿತಿ ಹೇಗೆ ಸಾಧ್ಯವಾಗುತ್ತದೆ ಎಂಬ ಪ್ರಶ್ನೆ ಈ ಸಮುದಾಯದ್ದಾಗಿದೆ. ಹೀಗಾಗಿ ದಕ್ಕಲರಲ್ಲಿ ನಿರೀಕ್ಷಿತ ಪ್ರಮಾಣದಲ್ಲಿ ಅಭಿವೃದ್ಧಿಯಾಗದೇ ಇರುವುದಕ್ಕೆ ಕಾರಣವಾಗಿದೆ. ಅಲೆಮಾರಿ ಸಮುದಾಯಗಳ

ಸಾಕ್ಷರತೆಯು ನಿರೀಕ್ಷಿತ ಮಟ್ಟಕ್ಕೆ ಏರದೆ ಅನುಪಾತದಲ್ಲಿ ಕೆಳಮುಖವಾಗಿದೆ. ಈ ಸಮುದಾಯಗಳ ಶೈಕ್ಷಣಿಕ ಸ್ಥಿತಿ ಆಶಾದಾಯವಾಗಿಲ್ಲ.

ದಕ್ಕಲ ಸಮುದಾಯಗಳು ಸಾಮಾಜಿಕವಾಗಿ ಹಾಗೂ ಶೈಕ್ಷಣಿಕವಾಗಿ ಹಿಂದುಳಿಯಲು ಮೂಲ ಕಾರಣ ಆರ್ಥಿಕತೆ. ಇದರಿಂದ ಸಮಾಜದ ಪ್ರತಿಯೊಬ್ಬ ವ್ಯಕ್ತಿಯು ಸವಾಲಾಗಿ ನಿಲ್ಲುತ್ತಾನೆ. ಹಲವು ಸಮುದಾಯಗಳ ವ್ಯಕ್ತಿಗಳ ನಡುವೆ ನಿಂತು ಸವಾಲನ್ನು ಸ್ವೀಕರಿಸುವ ಧೈರ್ಯ ಈ ದಕ್ಕಲ ಸಮುದಾಯಗಳಲ್ಲಿ ಇಲ್ಲವಾಗಿದೆ. ಏಕೆಂದರೆ ಆರ್ಥಿಕವೃದ್ದಿ ಮಾಡಿಕೊಳ್ಳಲು ಶೈಕ್ಷಣಿಕ ಅತ್ಯಗತ್ಯ ಶಿಕ್ಷಣ ವೃದ್ಧಿ ಮಾಡಿಕೊಳ್ಳಲು ಆರ್ಥಿಕತೆಯ ಪ್ರಮುಖ ಅಸ್ತ್ರವಾದ್ದರಿಂದ ಈ ಎರಡನ್ನು ಪಡೆಯದೆ ಸಮಾಜದಲ್ಲಿ ದಕ್ಕಲ ಸಮುದಾಯಗಳು ಅನಾಥವಾಗಿ ಜೀವಿಸುತ್ತಿದೆ. ಸಾಮಾಜಿಕವಾಗಿ ಆರ್ಥಿಕ ಶೈಕ್ಷಣಿಕತೆಗಳ ಸ್ಪರ್ದೆಗಳಲ್ಲಿ ನಿಶ್ಚಲವಾಗಿವೆ. ಶೈಕ್ಷಣಿಕತೆಯ ಬಗ್ಗೆ ಯಾವುದೇ ಅರಿವು ಇಲ್ಲದಿರುವುದರಿಂದ ಬಡತನವು ಸಹ ಶಿಕ್ಷಣ ಪಡೆಯುವುದಕ್ಕೆ ಮಾರಕ ಅಸ್ತ್ರವಾಗಿದೆ. ಅಷ್ಟೇ ಅಲ್ಲದೆ ಈ ಸಮುದಾಯಗಳಲ್ಲಿ ಹಿರಿಯರಿಗೆ ಅಕ್ಷರ ಜ್ಞಾನ ಇಲ್ಲದೆ ತಮ್ಮ ಮಕ್ಕಳನ್ನು ಶಾಲೆಗೆ ಕಳಿಸಿ ಅವರನ್ನು ವಿದ್ಯಾವಂತರನ್ನಾಗಿ ಮಾಡುವಷ್ಟು ಬೌದ್ಧಿಕತೆ ಇಲ್ಲದೆ ಇರುವುದು. ಹೀಗಾಗಿ ದಕ್ಕಲ ಸಮುದಾಯಗಳಲ್ಲಿ ಹೆಚ್ಚು ಅನಕ್ಷರಸ್ಥರಿಂದ ಕೂಡಿದ್ದು, ಸಮಾಜದಲ್ಲಿ ಅತ್ಯಂತ ಕಡಿಮೆ ಸಮುದಾಯವಾಗಿ ಉಳಿದುಕೊಂಡಿದ್ದಾರೆ.[೫]

ಕ್ಷೇತ್ರಕಾರ್ಯದ ಅಧ್ಯಯನದ ಸಂದಭದಲ್ಲಿ ಮಾದವ ಗುರ್ಚೇನಹಳ್ಳಿಯ ದಕ್ಕಲ ಗೋವಿಂದಪ್ಪ ಮಗಳು ಗಂಗಮ್ಮ ತಮ್ಮ ತಂದೆ ಮತ್ತು ಅಜ್ಜಂದಿರು ಸ್ವಾತಂತ್ರ್ಯದ ಸಂದರ್ಭದಲ್ಲಿ ಅಕ್ಷರ ಜ್ಞಾನವನ್ನು ಕಲಿಯಲು ಮರಳಿನ ಮೊರೆ ಹೋಗುತ್ತಿದ್ದರು ಆ ಸಂದರ್ಭದಲ್ಲಿ ಶಾಲೆಗಳಲ್ಲಿ ಈ ಸಮುದಾಯಗಳಿಗೆ ಕಡೆಗಣಿಸಿ ಮಕ್ಕಳಿಂದ ದೂರವಿರಿಸುತ್ತಿದ್ದರು ಅಷ್ಟೇ ಅಲ್ಲದೆ ಹೆಚ್ಚಾಗಿ ವಲಸೆ ಹೋಗುವುದರಿಂದ ಶಾಲೆಗೆ ಗೈರು ಹಾಜರಾಗುತ್ತಿದ್ದರು. ಹೀಗಾಗಿ ಶಾಲೆಗೆ ಸೇರಿಸುತ್ತಿರಲಿಲ್ಲ ಇಂತಹ ಸಂದರ್ಭ ತಮ್ಮ ವಿದ್ಯಾಭ್ಯಾಸಕ್ಕಾಗಿ ಮರಳನ್ನು ಬಳಸಿ ಮರಳಿನ ಮೇಲೆ ಅಕ್ಷರಭ್ಯಾಸವನ್ನು ಕಲಿಯುತ್ತಿದ್ದರು. ತದನಂತರ ನಾಮಪಲಕ ಮತ್ತು ಬಳಪವನ್ನು ತೆಗೆದುಕೊಳ್ಳುವಷ್ಟು ಆರ್ಥಿಕತೆ ಇಲ್ಲದೆ ಇರುವುದರಿಂದ ಮರಳನ್ನು ಬಳಸುತ್ತಿದ್ದರು. ದಕ್ಕಲ ಗೋವಿಂದಪ್ಪ ೬ನೇ ತರಗತಿಯ ತನಕ ಓದಿ ವಲಸೆಯಿಂದ ಆ ಶಿಕ್ಷಣವನ್ನು ದೂರವಾಗಿಸಿದರು. ತಮ್ಮ ಕುಲ ವೃತ್ತಿಯನ್ನು ಮುಂದುವರೆಸಿಕೊಂಡು ಈ ಪ್ರದೇಶದಲ್ಲಿ ಖಾಯಂ ಆಗಿ ಉಳಿದುಕೊಂಡರು. ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿ ಬ್ರಿಟಿಷರ ಅಧಿಕಾರದಲ್ಲಿ ತಳಸಮುದಾಯಗಳಿಗೆ ಶಿಕ್ಷಣದಿಂದ ದೂರವಿರಿಸಿ, ಇವರಲ್ಲಿ ಭಯ ಹುಟ್ಟಿಸಿ ಗುಲಾಮರನ್ನಾಗಿ ತಮ್ಮ ಸೇವೆಯಲ್ಲಿ ತೊಡಗಿಸಿಕೊಂಡರು ಎಂದು ಗಂಗಮ್ಮ ತಮ್ಮ ತಂದೆ ಹೇಳಿದ ಮಾತುಗಳನ್ನು ತಿಳಿಸಿದರು.

ಹೀಗೆ ಈ ಸಮುದಾಯಗಳ ಶೈಕ್ಷಣಿಕ ಸ್ಥಿತಿಯು ತೀರ ಕೆಳಸ್ಥರವಾಗಿರುವುದರಿಂದ ಸಮಾಜದಲ್ಲಿ ನೆಲೆ ಕಾಣಲು ಸಾಧ್ಯವಾಗುತ್ತಿಲ್ಲ. ಸಮಕಾಲಿನ ಸಂದರ್ಭದಲ್ಲಿ ಸ್ವಲ್ಪಮಟ್ಟಿನಲ್ಲಿ ಚೇತರಿಸಿಕೊಂಡರೂ

ಸರಿಯಾದ ಮಾರ್ಗದರ್ಶನವಿಲ್ಲದೆ ತಮ್ಮ ಶಿಕ್ಷಣವನ್ನು ಅರ್ಧದಲ್ಲಿ ಬಿಟ್ಟು ಕೂಲಿ ಕೆಲಸಗಳಲ್ಲಿ ತೊಡಗಿದ್ದು, ತಮ್ಮ ಆರ್ಥಿಕತೆಯ ಕಡೆ ಮುಖ ಮಾಡಿದ್ದಾರೆ. ಸರಿಯಾದ ಮಾರ್ಗದರ್ಶನವಿಲ್ಲದೆ ಹಾಗೂ ಮನೆಯಲ್ಲಿ ಹಿರಿಯರ ಸಹಕಾರವಿಲ್ಲದೆ ೧೦ನೇ ತರಗತಿಯಲ್ಲಿ ಅನುತ್ತೀರ್ಣರಾಗಿರುವುದು ಹೆಚ್ಚಿನ ಸಂಖ್ಯೆಯಲ್ಲಿರುವುದು ಈ ಕುಟುಂಬಗಳಲ್ಲಿ ಕಂಡುಬರುತ್ತದೆ. ಈ ದಕ್ಕಲರ ಮಕ್ಕಳಲ್ಲಿ ಶಿಕ್ಷಣಕ್ಕಿಂತ ಹೆಚ್ಚಿನ ಆಸಕ್ತಿ ಕೂಲಿ ಕೆಲಸಗಳಲ್ಲಿ ಕಂಡುಬರುತ್ತದೆ. ದಿನಕ್ಕೆ ಎರಡು ಹೊತ್ತಿನ ಊಟ ಹಾಗೂ ಮುನ್ನೂರು ರೂಪಾಯಿ ಕೂಲಿ ಸಿಗುತ್ತದೆ ಶಾಲೆಗೆ ಹೋದರೆ ಏನೂ ಸಿಗುವುದಿಲ್ಲ, ನಂತರ ಓದಿದರು ಬೇಗ ಕೆಲಸಗಳು ಸಿಗುವುದಿಲ್ಲ ಎಂಬ ನಂಬಿಕೆ ಈ ಮಕ್ಕಳಲ್ಲಿ ಸ್ಪಷ್ಟವಾಗಿ ಗೋಚರಿಸುತ್ತದೆ. ಹೀಗಾಗಿ ಶಿಕ್ಷಣವಿಲ್ಲದ ಈ ಸಮುದಾಯಗಳು ಅನಕ್ಷರಸ್ಥರಾಗಿ ಕೂಲಿ ಕೆಲಸಗಳಿಗೆ ಕಾಯುವಂತಹ ಸ್ಥಿತಿ ಒದಗಿದೆ. ಇದರಿಂದ ಒಂದು ಹೊತ್ತಿನ ಊಟಕ್ಕೂ ಪರಿತಪಿಸುವಂತಹ ಸ್ಥಿತಿ ಒದಗಿದೆ. ದಕ್ಕಲರ ಶೈಕ್ಷಣಿಕ ಸ್ಥಿತಿ ಪ್ರಗತಿಯಾಗದೆ ಸಾಮಾಜಿಕ ಎಚ್ಚರ ಇನ್ನೂ ಈ ಜನರಲ್ಲಿ ಮೂಡಿಲ್ಲ. ಈ ಅವಸ್ಥೆಯಲ್ಲಿ ಈ ಸಮುದಾಯಗಳಿಗೆ ಸರ್ಕಾರದಿಂದ ಮೂಲಸೌಲಭ್ಯಗಳ ಜೊತೆಗೆ ಶಿಕ್ಷಣ ಮಂಡಳಿಯಿಂದ ಹೆಚ್ಚಿನ ಮಾರ್ಗದರ್ಶನ ನೀಡಿ, ಹೆಚ್ಚಿನ ಸಂಖ್ಯೆಯಲ್ಲಿ ಶೈಕ್ಷಣಿಕರನ್ನಾಗಿ ಮಾಡಿ ಇವರ ಪಾರಂಪರಿಕ ಗೌಪ್ಯತೆಯನ್ನು ಕಾಪಾಡಿ ಇವರ ಸಾಂಸ್ಕೃತಿಕತೆಗೆ ಧಕ್ಕೆ ತರದ ಹಾಗೆ ಕಾಪಾಡಿಕೊಳ್ಳುವುದು ಸರ್ಕಾರದ ಕರ್ತವ್ಯವಾಗಿದೆ. ಆಧುನಿಕ ಶಿಕ್ಷಣವನ್ನು ದುರ್ಬಲಗೊಳಿಸದೆ ಈ ಮಕ್ಕಳಲ್ಲಿ ಅದನ್ನು ಸ್ಥಿರಪಡಿಸಿಕೊಂಡು ಇವರ ಬದುಕನ್ನು ಬದಲಾವಣೆಯ ಕಡೆ ಮುಖ ಮಾಡುವುದೇ ಸಮಾಜದ ನಿರೀಕ್ಷೆಯಾಗಿದೆ.

ಹಾಗೆ ಇವರ ಭಾಷೆ ಸಂಸ್ಕೃತಿ ಜ್ಞಾನ ಕುಶಲಕಲೆಗಳು ಕಸುಬುಗಳನ್ನು ನಂಬಿಕೊಂಡಿರುವ ಹಾಗೂ ಪೌರಾಣಿಕ ಪಾರಂಪರಿಕತೆಯನ್ನು ಜಗತಿನ ವರ್ತಮಾನವಲ್ಲದೆ ಭವಿಷ್ಯತ್ತಿನಲ್ಲಿ ಕಾಣುವುದಕ್ಕೆ ಸಾಧ್ಯವಾಗುತ್ತದೆ. ಸಾಂಸ್ಕೃತಿಕ ಚಿಂತಕರ ಆತ್ಮ ವಂಚನೆ ಮಾಡಿಕೊಳ್ಳದಂತೆ ಇವರ ಪೌರಾಣಿಕ ಪಾರಂಪರಿಕತೆಯು ಜಗತ್ತಿನ ವರ್ತಮಾನದ ಸವಾಲುಗಳು ಎದುರಿಸಲು ಅಣಿಗೊಳಿಸುವಂತಾಗಬೇಕು. ತದನಂತರ ಸಮಾಜದಲ್ಲಿ ಈ ಸಮುದಾಯಗಳಿಗೆ ಸಿಗುವ ಸವಲತ್ತುಗಳನ್ನು ದಕ್ಕಿಸಿಕೊಳ್ಳುವಷ್ಟು ಪ್ರಭುದತೆಯು ಇವರಿಗೆ ಇಲ್ಲ. ಸಾಮಾಜಿಕ ನ್ಯಾಯವನ್ನು ಕಲ್ಪಿಸಿಕೊಟ್ಟು ಅವಕಾಶ ವಂಚಿತರಾಗದೆ ಸಮಾಜದಲ್ಲಿನ ಇವರ ವ್ಯಕ್ತಿತ್ವವನ್ನು ನೆಲೆಗೊಳಿಸಬೇಕಾಗುತ್ತದೆ. ಈ ಸಮುದಾಯಗಳ ಸರ್ವತೋಮುಖ ಅಭಿವೃದ್ದಿಗೆ ಕಾರಣವಾಗುತ್ತದೆ. ನಮ್ಮ ವರ್ಗಗಳಂತು ಶಿಕ್ಷಣ ಹೋರಾಟ ಮತ್ತು ಸಂಘಟನೆಯಿಂದಲೆ ತಮ್ಮ ಹಕ್ಕನ್ನು ಪಡೆದುಕೊಳ್ಳಬೇಕು ಇಂದು ಆಧುನಿಕತೆಯ ತಂತ್ರಜ್ಞಾನದಿಂದ ಲೋಕವೇ ಒಂದು ಮುಷ್ಟಿಯಲ್ಲಿ ಹಿಡಿದಿರುವಾಗ ಶಿಕ್ಷಣದಿಂದ ಬಹುದುರ ಉಳಿದಿರುವ ನಿರ್ಗತಿಕ ಸಮುದಾಯಗಳಾದ ಅರೆ ಅಲೆಮಾರಿಗಳ ಮಕ್ಕಳು ಕುಲಕಸುಬುಗಳಲ್ಲಿ ಜೀವಿಸುವಂತಹ ಸ್ಥಿತಿಯು ಇನ್ನು ಜೀವಂತವಾಗಿಯೇ ಇದೆ. ತಮ್ಮ ಬದುಕು ಅಲೆಮಾರಿತನದಿಂದ ಆ ಪ್ರದೇಶಗಳ ಭಾಷೆ ತೊಡಕಾಗಿ ತಮ್ಮ ಮಕ್ಕಳನ್ನು ಯಾವ ಭಾಷೆಯಲ್ಲಿ ಶಿಕ್ಷಣ ಕೊಡಿಸಬೇಕು ಎಂಬ

ಗೊಂದಲದಿಂದಲೂ ಈ ಮಕ್ಕಳ ಶೈಕ್ಷಣಿಕತೆ ದೂರ ಉಳಿದಿರುವ ಸಾಧ್ಯತೆಗಳಾಗಿವೆ. ಇಂತಹ ಸ್ಥಿತಿಯಲ್ಲಿ ಸ್ವಾತಂತ್ರ್ಯ ಬಂದು ಎಪ್ಪತ್ತರ ದಶಕದಲ್ಲಿ ಇದ್ದರೂ ಇನ್ನು ಅತಂತ್ರ ಸ್ಥಿತಿಯಲ್ಲಿಯೇ ಬದುಕುವಂತಹ ಸಮುದಾಯಗಳು ನಮ್ಮ ಕಣ್ಣು ಮುಂದಿವೆ ಅಲೆಮಾರಿಗಳ ಭವಿಷ್ಯದ ಬದುಕು ಕತ್ತಲೆಯಿಂದ ಬೆಳಕಿನೆಡೆಗೆ ಸಾಗಬೇಕಾದರೆ ದಕ್ಕಲರು ಶೈಕ್ಷಣಿಕ ಅಗತ್ಯವಾಗಿ ಬೇಕಾಗಿದೆ.

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕೋಲಾರ ಜಿಲ್ಲೆಯ ದಕ್ಕಲ ಸಮುದಾಯಗಳಲ್ಲಿ ನೆಲೆಸಿರುವ ಹಳ್ಳಿಗಳಿಗೆ ಭೇಟಿಕೊಟ್ಟಾಗ ಶ್ರೀನಿವಾಸಪುರದ ರೇಷ್ಮೆ ಗೂಡು ಮಾರುಕಟ್ಟೆಯ ಪಕ್ಕದಲ್ಲಿ ಸರ್ಕಾರಿ ಬಯಲು ಪ್ರದೇಶದಲ್ಲಿ ನೆಲೆಸಿರುವ ದಕ್ಕಲ ಸಮುದಾಯಗಳ ಜೊತೆ ಕೂತು ಚರ್ಚಿಸಿದಾಗ ಅಲ್ಲಿನ ದಕ್ಕಲರ ಮನಸ್ಥಿತಿ ಶಿಕ್ಷಣ ಪಡೆಯುವುದಕ್ಕಿಂತ ಕೂಲಿ ಕೆಲಸಗಳ ಬಗ್ಗೆ ಹೆಚ್ಚು ಆಸಕ್ತಿ ಇದೆ. ನಮಗೆ ಯಾಕೆ ಶಿಕ್ಷಣ ನಾವು ಸಮಾಜದಲ್ಲಿ ಹಿಂದುಳಿದವರು ಶಿಕ್ಷಣ ಕಲಿತರು. ಒಂದೆ ಬಿಟ್ಟರು ಒಂದೆ ಕೂಲಿನಾಲಿ ಮಾಡಿ ಹೊಟ್ಟೆ ತುಂಬಿಸಿಕೊಳ್ಳುತ್ತೇವೆ. ದಿನಕ್ಕೆ ಮುನ್ನೂರು ರೂಪಾಯಿ ಕೊಡುತ್ತಾರೆ. ಎರಡು ಹೊತ್ತು ಊಟ ಕೊಡುತ್ತಾರೆ. ಶಾಲೆಗೆ ಹೋದರೆ ಊಟ ಎಲ್ಲಿಂದ ಸಿಗುತ್ತದೆ. ಶಿಕ್ಷಣ ಕಲಿತರು ನಮಗೆ ಸರ್ಕಾರಿ ಕೆಲಸ ಎಲ್ಲಿ ಸಿಗುತ್ತದೆ ಎಂದು ನಿರಾಸೆ ಭಾವನೆಯಿಂದ ಹೇಳುತ್ತಾರೆ. ನಂತರ ಬೆಳಗ್ಗೆ ೧೦ ಗಂಟೆಗೆ ಕೂಲಿ ಕೆಲಸಕ್ಕೆ ಹೋದರೆ ಸಂಜೆ ೫ ಗಂಟೆಗೆ ವಾಪಸ್ಸು ಬರುತ್ತೇವೆ. ಮಧ್ಯ ಸ್ವಲ್ಪ ವಿಶ್ರಾಂತಿ ಸಿಗುತ್ತದೆ ಎಂದು ಹೇಳಿದಾಗ ಈ ಸಮುದಾಯಗಳು ಇನ್ನು ಸಮಾಜ ಬದುಕಿನ ಕಡೆ ಮುಖ ಮಾಡದೆ ನಿರಾಸೆಯ ಮನಸ್ಸಿನಲ್ಲಿ ಇರುವುದು ಕಂಡರೆ ಸರಿಯಾದ ಮಾರ್ಗದರ್ಶನ ಇಲ್ಲವೆಂದು ತಿಳಿಯುತ್ತದೆ. ಈ ಮಕ್ಕಳ ಶಿಕ್ಷಣ ಎಷ್ಟರಮಟ್ಟಿಗೆ ಅದೋಗತಿಯತ್ತ ದಾಪುಗಾಲು ಹಾಕುತ್ತಿವೆ ಎಂಬುವುದು ಈ ಸಮುದಾಯಗಳನ್ನು ಗಮನಿಸಬಹುದು ನಾಗೇಶ ಎಂಬ ಹುಡುಗ ೯ನೇ ತರಗತಿ ಓದಿ ಶಾಲೆ ಬೇಡ ಎಂದು ಕೂಲಿಕೆಲಸಕ್ಕೆ ಹೋಗುತ್ತಿದ್ದಾನೆ. ದೇವರಾಜ ೬ನೇ ತರಗತಿಯ ತನಕ ಓದಿ ಶಾಲೆ ಬಿಟ್ಟು ಕೂಲಿಕೆಲಸ ಮಾಡುಕೊಂಡು ಮದುವೆಯಾಗಿ ಇಬ್ಬರು ಮಕ್ಕಳು ಇದ್ದಾರೆ. ಇವರ ಭಾವನೆಗಳಲ್ಲಿ ಶಿಕ್ಷಣ ಎಂಬುವುದು ಶ್ರೀಮಂತರು ಮತ್ತು ಮೇಲು ಜಾತಿಗೆ ಮಾತ್ರ ಸೀಮಿತ. ನಮ್ಮಂತಹ ಅಲೆಮಾರಿಗಳಿಗೆ ಒಲ್ಲದ ವಿಚಾರ ಎಂದು ಕೈ ಬಿಟ್ಟಿರುವುದು ತಿಳಿಯುತ್ತದೆ. ನಂತರ ಆರ್ಥಿಕತೆಯು ತುಂಬ ಸಮಸ್ಯೆಯಾಗಿದೆ ಎಂಬ ಅಂಶ ಈ ಸಮುದಾಯಗಳ ಮಾತಾಗಿದೆ. ತದನಂತರ ಅವರಿಗೆ ಬುದ್ದಿವಾದ ಹೇಳಿ ಸರ್ಕಾರ ಸೌಲಭ್ಯಗಳು ಉಪಯೋಗಿಸಿ ಯೋಜನೆಗಳನ್ನು ದಕ್ಕಲ ಸಮುದಾಯಗಳು ಮೈಗೂಡಿಸಿಕೊಂಡು ಆರ್ಥಿಕತೆಯನ್ನು ನೀಗಿಸಿಕೊಂಡು ಶಿಕ್ಷಣ ಪಡೆಯುವ ಮಾರ್ಗದರ್ಶನ ನೀಡಿದಾಗ ಅವರಲ್ಲಿ ಸ್ವಲ್ಪಮಟ್ಟಿನ ಶಿಕ್ಷಣ ಪಡೆಯಬೇಕಿತ್ತೆಂಬ ಕಳವಳ ಉಂಟಾಗಿ ತಮ್ಮ ಮಕ್ಕಳಿಗಾದರು ಶಿಕ್ಷಣ ಕೊಡಿಸಬೇಕು ಎಂಬ ಹಂಬಲ ಇವರಲ್ಲಿ ಮೂಡಿದಂತಾಯಿತು. ಸರಿಯಾದ ಮಾರ್ಗದರ್ಶನ ನೀಡಿದರೆ ನಾವು ಶಿಕ್ಷಣ ಕಲಿಯುತ್ತಿದ್ದೆವು ಎಂಬ ಮಾತು ಅವರದ್ದಾಗಿದೆ. ಇದಕ್ಕೆ ಮೂಲಕಾರಣ ಈ ಸಮುದಾಯಗಳ ಹಿರಿಯ ವ್ಯಕ್ತಿಗಳು ಶಿಕ್ಷಣ

ಪಡೆಯದೆ ಅವಿದ್ಯಾವಂತರಾಗಿರುವುದು. ಒಂದು ಹೊತ್ತು ಊಟದ ಬಗ್ಗೆ ಯೋಚಿಸುವ ಈ ಕುಟುಂಬಗಳು ಮುಂದಿನ ಭವಿಷ್ಯದ ಬಗ್ಗೆ ಚಿಂತೆಯಿಲ್ಲದ ಹಾಗೆ ಈ ಸಮುದಾಯಗಳ ಹಿರಿಯರು ಮಕ್ಕಳ ಭವಿಷ್ಯದ ಜೊತೆ ಆಟವಾಡುತ್ತಿದ್ದಾರೆ.

ಮಾದವ ಗುರ್ಜೀನಹಳ್ಳಿಯ ದಕ್ಕಲ ಸಮುದಾಯಗಳಲ್ಲಿ ಶೈಕ್ಷಣಿಕತೆ ನೋಡಿದಾಗ ಇಲ್ಲಿನ ಸಮುದಾಯಗಳು ಶಿಕ್ಷಣದ ಬಗ್ಗೆ ಸ್ವಲ್ಪಮಟ್ಟಿನ ಆಸಕ್ತಿ ಇದ್ದು ತಮ್ಮ ಮಕ್ಕಳ ಉತ್ತಮ ಭವಿಷ್ಯ ರೂಪಿಸಬೇಕು ಎಂದು ತಮ್ಮ ಎಲ್ಲಾ ಮಕ್ಕಳನ್ನು ಶಿಕ್ಷಣದ ಕಡೆ ಮುಖ ಮಾಡಿಸಿರುವುದು ಕಂಡು ಬರುತ್ತದೆ. ಈ ಸಮುದಾಯದಲ್ಲಿ ಒಬ್ಬ ಹೆಣ್ಣು ಮಗಳು ಚಾಂದನಿ ದ್ವಿತೀಯ ಬಿ.ಕಾಂ. ಓದುತ್ತಿದ್ದು ಉಳಿದ ಮಕ್ಕಳು ೩ನೇ ತರಗತಿ, ೮ನೇ ತರಗತಿ ಹೀಗೆ ೬ ಜನ ಮಕ್ಕಳು ವಿದ್ಯಾಭ್ಯಾಸದಲ್ಲಿ ತೊಡಗಿದ್ದಾರೆ. ದಕ್ಕಲ ಗೋವಿಂದಪ್ಪನ ಮಗಳು ಗಂಗಮ್ಮ ೬ನೇ ತರಗತಿಯ ತನಕ ಓದಿದ್ದು, ಸ್ವಲ್ಪಮಟ್ಟಿನ ತಿಳುವಳಿಕೆ ಇದ್ದು ಎಲ್ಲಾ ಮಕ್ಕಳನ್ನು ಓದಿಸುವುದಕ್ಕೆ ಮುಂದಾಗಿದ್ದಾಳೆ ಅಷ್ಟೇ ಅಲ್ಲದೆ ತಾನು ತಮ್ಮ ಸಮುದಾಯಗಳು ಹಿಂದುಳಿಯಬಾರದು ಎಂದು ಹೋರಾಟಗಳಲ್ಲಿ ಭಾಗವಹಿಸಿ ಸಂಘಟನೆಗಳಲ್ಲಿ ಸೇರಿ ಗ್ರಾಮಪಂಚಾಯ್ತಿಯ ಸದಸ್ಯರಾಗಿದ್ದಾರೆ. ತಮ್ಮ ಮಕ್ಕಳ ಭವಿಷ್ಯ ರೂಪಿಸುವುದಕ್ಕೆ ಮುಂದಾಗಿದ್ದಾಳೆ ತಮಗೆ ಸಿಗಬೇಕಾಗಿದ್ದ ಸರ್ಕಾರದ ಕನಿಷ್ಟ ಸೌಲಭ್ಯಗಳನ್ನು ಪಡೆಯಬೇಕು ಎಂಬ ಹಂಬಲದಲ್ಲಿ, ಹೋರಾಟಗಳಲ್ಲಿ ಭಾಗವಹಿಸುವುದು ತಿಳಿಯುತ್ತದೆ. ಸ್ವಲ್ಪ ಮಟ್ಟಿಗಾದರು ತಮ್ಮ ಸಮುದಾಯಗಳು ವಿದ್ಯಾವಂತರಾಗಿ ತಮ್ಮ ಭವಿಷ್ಯ ರೂಪಿಸುವುದಕ್ಕೆ ಮುಂದಾಗಿದ್ದಾಳೆ ತಮಗೆ ಸಿಗಬೇಕಾಗಿದ ಸರ್ಕಾರದ ಸೌಲಭ್ಯಗಳನ್ನು ಪಡೆಯುವುದಕ್ಕೆ ಹೋರಾಟಗಳಲ್ಲಿ ಮುಂದುವರೆಸಿದ್ದಾರೆ. ಸ್ವಲ್ಪಮಟ್ಟಿಗಾದರು ತಮ್ಮ ಸಮುದಾಯಗಳು ವಿದ್ಯಾವಂತರಾಗಿ ತಮ್ಮ ಭವಿಷ್ಯವನ್ನು ರೂಪಿಸಿಕೊಂಡು ಸಮಾಜದಲ್ಲಿ ಉತ್ತಮ ಭವಿಷ್ಯವನ್ನು ರೂಪಿಸಿಕೊಳ್ಳಬೇಕು ಎಂಬ ಛಲದಿಂದ ಬದುಕುತ್ತಿದ್ದಾಳೆ.

ಸುಗಟೂರು ಗ್ರಾಮದಲ್ಲಿ ೫ ಕುಟುಂಬಗಳಿದ್ದು ಇಲ್ಲಿ ಸಹ ಹಿರಿಯಕುಲಗಳು ವಿದ್ಯಾಭ್ಯಾಸವಿಲ್ಲದೆ ಇದ್ದರು ತಮ್ಮ ಮಕ್ಕಳಿಗೆ ಶಿಕ್ಷಣ ಕೊಡಿಸಿ ಅವರನ್ನು ಉತ್ತಮ ಪ್ರಯೋಜಕತ್ವ ಪಡೆಯಬೇಕು ಎಂಬ ಆಸೆ ಇದ್ದರೂ, ಉನ್ನತ ಶಿಕ್ಷಣ ಕೊಡಿಸುವುದಕ್ಕೆ ದುಡಿಮೆ ಇಲ್ಲ, ಸಹಾಯಹಸ್ತ ನೀಡುವವರು ಯಾರು ಇಲ್ಲ, ಸರ್ಕಾರ ಸೌಲಭ್ಯಗಳನ್ನು ಉಪಯೋಗಿಸಿಕೊಳ್ಳುವುದಕ್ಕೆ ಅದರ ಅರಿವು ಇಲ್ಲ, ನಮಗೆ ಸರಿಯಾದ ಮಾರ್ಗದರ್ಶವಿಲ್ಲ ಹಾಗೆ ನಮಗೆ ಸಹಾಯ ಮಾಡುವವರು ಯಾರು ಇಲ್ಲ ಎಂದು ಹೇಳುತ್ತಾರೆ. ಈ ಸಮುದಾಯಗಳಲ್ಲಿ ಎಲ್ಲಾ ಪ್ರಾಥಮಿಕ ಶಿಕ್ಷಣ ಓದುತ್ತಿದ್ದು ಒಬ್ಬ ಹುಡುವ ಮಾತ್ರ ಹರೀಶ ಪ್ರಥಮ ಬಿ.ಕಾಂ. ಓದುತ್ತಿದ್ದಾನೆ. ನಂತರ ಈ ಸಮುದಾಯಕ್ಕೆ ಬಂದ ಸೊಸೆ ಸುಶೀಲ ಅವರು ದ್ವಿತೀಯ ಪಿಯುಸಿ ಓದಿ ಕಂಪ್ಯೂಟರ್ ಟ್ರೈನಿಂಗ್ ಮಾಡಿದ್ದಾರೆ. ಹೀಗಾಗಿ ಇವರು ಮಕ್ಕಳ ವಿದ್ಯಾಭ್ಯಾಸವನ್ನು ಹೇಳಿ ಕೊಟ್ಟು ಅವರನ್ನು ವಿದ್ಯಾವಂತರನ್ನಾಗಿ ಮಾಡುತ್ತಿದ್ದಾರೆ. ಹಾಗೆ ಇವರು ತಮ್ಮ ಸಮುದಾಯದ ಮೂಲ ಪುರಾಣವಾದ

ಜಾಂಬವ ಪುರಾಣದ ಕೈಫಿಯತ್ತುಗಳು ಸಂಗ್ರಹಿಸಿ ಇಟ್ಟಿರುವುದು ಕಂಡುಬಂದಿದೆ. ಇವರಿಂದ ಮಕ್ಕಳ ಶಿಕ್ಷಣಕ್ಕೆ ಸಹಕಾರಿಯಾಗಿದ್ದು ಮಕ್ಕಳ ಗುರುವಾಗಿದ್ದಾಳೆ.

ಶ್ರೀರಾಮಪುರ ಗ್ರಾಮದಲ್ಲಿ ಒಂದು ಮನೆಯಿದ್ದು ಆ ಕುಟುಂಬದಲ್ಲಿ ರಾಮಕೃಷ್ಣ ಮತ್ತು ರತ್ನಮ್ಮ ಮಕ್ಕಳಾದ ಆಂಜನೇಯರೆಡ್ಡಿ ಮತ್ತು ರಾಮಾಂಜನೇಯ ಇವರು ಉತ್ತಮ ವಿದ್ಯಾಭ್ಯಾಸ ಹೊಂದಿದ್ದು, ಕೋಲಾರ ಮತ್ತು ಚಿಕ್ಕಬಳ್ಳಾಪುರ ಪ್ರದೇಶದಲ್ಲಿ ಪದವಿದರರಲ್ಲಿ ಇವರೇ ಮೊದಲಿಗರಾಗಿದ್ದಾರೆ. ಈ ಸಮುದಾಯಗಳಲ್ಲಿ ಹೆಚ್ಚು ತಿಳುವಳಿಕೆ ಹೊಂದಿದ್ದು ತಮ್ಮ ಸಮುದಾಯಗಳನ್ನು ಮುಂದುವರೆಸಿ ಎಲ್ಲಾ ಮಕ್ಕಳ ಶೈಕ್ಷಣಿಕತೆಯ ಹಂಬಲ ಮೂಡಿಸಬೇಕು ಎಂಬುವುದು ಇವರ ಅಭಿಮತವಾಗಿದೆ. ಆಂಜನೇಯ ಎಂಬುವರು ಬಿ.ಎ, ಬಿಎಡ್ ಮಾಡಿಕೊಂಡು ಚಿತ್ರಕಲೆಯಲ್ಲಿ ಹೆಚ್ಚು ಆಸಕ್ತಿ ಹೊಂದಿ ಚಿತ್ರಗಳನ್ನು ಬಿಡಿಸುವ ಕೆಲಸಗಳನ್ನು ಮಾಡುತ್ತಿದ್ದಾರೆ. ಹಾಗೆ ರಾಮಾಂಜನೇಯ ನವರು ಬಿಎಸ್ಸಿ ಮತ್ತು ಪ್ಯಾರಾಮೆಡಿಕಲ್ ಮಾಡಿ ಸತ್ಯಸಾಯಿ ಆಸ್ಪತ್ರೆಯಲ್ಲಿ ಲ್ಯಾಬ್‌ನಲ್ಲಿ ಕೆಲಸ ಮಾಡುತ್ತಿದ್ದು, ತಮ್ಮ ಸಮುದಾಯಗಳ ಬಗ್ಗೆ ಅಧ್ಯಯನ ಮಾಡಿ ಅವರ ಜನಗಣತಿ ಶೈಕ್ಷಣಿಕತೆ ಅನುಧಾನಗಳ ಬಗ್ಗೆ ವಿವರನ್ನು ತೆಗೆದುಕೊಂಡು ಅಧಿಕಾರಿಗಳಿಗೆ ನೀಡಿದ್ದಾರೆ. ಹಾಗೆಯೇ ಇವರ ಸಮುದಾಯಗಳ ಮಕ್ಕಳು ಶಿಕ್ಷಣ ಪಡೆಯುವುದಕ್ಕೆ ಹೆಚ್ಚು ಪ್ರೋತ್ಸಾಹಿಸುತ್ತಿದ್ದರೆ ಸರ್ಕಾರದ ವಿರುದ್ಧ ತಮಗೆ ಬರಬೇಕಾದ ಅನುದಾನಗಳ ಬಗ್ಗೆ ಹಾಗೂ ಜಾತಿ ಪ್ರಮಾಣಪತ್ರವನ್ನು ಪಡೆಯುವುದಕ್ಕೆ ಹೋರಾಟ ನಡೆಸುತ್ತಿದ್ದಾರೆ. ಇವರು ಓದುವ ಸಂದರ್ಭದಲ್ಲಿ ಸರಿಯಾದ ಮಾರ್ಗದರ್ಶನವಿಲ್ಲದೆ ಎಸ್.ಎಸ್.ಎಲ್.ಸಿ ಮತ್ತು ಪಿ.ಯು.ಸಿ ನಲ್ಲಿ ಪೇಲ್ ಆಗಿ ನಂತರ ತಮ್ಮ ಪ್ರಯತ್ನ ಬಿಡದೆ ಓದಿ ಪರೀಕ್ಷೆ ಬರೆದು ಉತ್ತೀರ್ಣರಾಗಿ ಪದವಿಯನ್ನು ಪಡೆದು ತದನಂತರ ಬೇರೆಯವರ ಮಾರ್ಗದರ್ಶನದಲ್ಲಿ ಪ್ಯಾರಾಮೆಡಿಕಲ್ ಓದಿ ಹೋಗಿ ಒಂದು ಹಂತದಲ್ಲಿ ಕೆಲಸ ಮಾಡುತ್ತಿರುವುದು ತಿಳಿಯುತ್ತದೆ. ಮುಂದುವರಿಯುತ್ತಿರುವ ಸಮಾಜದಲ್ಲಿ ಅರೆಅಲೆಮಾರಿಗಳ ಸ್ಥಿತಿಗತಿಗಳು ಸ್ವಲ್ಪ ಮಟ್ಟಿಗೆ ಸುಧಾರಿಸಿಕೊಳ್ಳುವುದಕ್ಕೆ ಪ್ರಾರಂಭಿಸಿದ್ದಾರೆ. ಇತರ ವರ್ಗಗಳ ಸಹಕಾರ ಮತ್ತು ಮಾರ್ಗದರ್ಶನಗಳು ಸೂಕ್ತ ಸಮಯಕ್ಕೆ ದೊರಕದೆ ನಿಧಾನಗತಿಯಲ್ಲಿ ಸಾಗುತ್ತಿರುವುದು ಒಂದು ವಿಪರ್ಯಾಸವಾಗಿದೆ ತಮಗೆ ತಾವೆ ಮಾರ್ಗದರ್ಶನ ಮಾಡಿಕೊಂಡು ಹಲವು ಸಂಘಟನೆಗಳನ್ನು ಕಟ್ಟಿ ತಮ್ಮ ಸಮುದಾಯಗಳಿಗೆ ತಿಳುವಳಿಕೆ ನೀಡುತ್ತಿರುವುದು ಈ ಪ್ರದೇಶಗಳಲ್ಲಿ ಕಂಡುಬರುತ್ತದೆ.

ದಕ್ಕಲ ಸಮುದಾಯದ ರಾಮಾಂಜಿಯವರು ಪ್ಯಾರ ಮೆಡಿಕಲ್ ಓದಿ ಸ್ವತಹ ಒಂದು ಲ್ಯಾಬನ್ನು ಪ್ರಾಂಭಿಸಬೇಕು ಎಂದು ಕಾತುರದಲ್ಲಿ ಇದ್ದರು. ಆರ್ಥಿಕ ಸಮಸ್ಯೆಯಿಂದ ಸಾಧ್ಯವಾಗುತ್ತಿಲ್ಲ ಎಂದು ಮಾಹಿತಿಯನ್ನು ತಿಳಿಸಿದರು. ಸ್ವಂತ ಲ್ಯಾಬ್ ಮಾಡಬೇಕಾದರೆ ಕನಿಷ್ಠ ೨೦ ಲಕ್ಷವಾದರು ಬೇಕಾಗುತ್ತದೆ. ಬರುವ ೧೨ ಸಾವಿರ ರೂ. ಸಂಬಳದಲ್ಲಿ ಮನೆಯ ಸಂಸಾರವನ್ನು ಸಾಗಿಸುವುದು ಹಾಗೂ ಬಂಡವಾಳ ಹೂಡಿ ಲ್ಯಾಬ್ ತಯಾರಿಸುವುದು ಕಷ್ಟಕರವಾಗಿ ಪರಿಣಮಿಸಿದೆ. ಯಾವುದೇ

ಸರ್ಕಾರ ಸಹಾಯ ಇಲ್ಲದೆ ಸ್ವತಹ ದುಡಿದು ಲ್ಯಾಬ್ ತಯಾರಿಸಬೇಕಾದರೆ ತುಂಬ ಸಮಯ ಬೇಕಾಗುತ್ತದೆ. ಈಗಿರುವಾಗ ಸರ್ಕಾರ ಅಲೆಮಾರಿಗಳಿಗೆ ನೀಡುವ ಅನುದಾನಗಳ ಸಹಾಯ ಹಸ್ತ ನೀಡಿದರೆ ಇವರ ಬದುಕು ಕಟ್ಟಿಕೊಳ್ಳುವುದಕ್ಕೆ ಸಾಧ್ಯವಾಗುತ್ತದೆ. ಈ ಪ್ರದೇಶಗಳಲ್ಲಿ ದಕ್ಕಲ ಸಮುದಾಯಗಳಿಗೆ ಮಾರ್ಗದರ್ಶಕರಾಗಿ ತಮ್ಮ ಜೀವನವನ್ನು ರೂಪಿಸಿಕೊಳ್ಳುವುದಕ್ಕೆ ತಾವೇ ಮುಂದಾಗಬೇಕು ಎಂದು ಇವರು ನೀಡಿದ ಮಾಹಿತಿಯಲ್ಲಿ ತಿಳಿಯುತ್ತದೆ.

ಶೈಕ್ಷಣಿಕವಾದ ಪ್ರಗತಿಗೆ ಆರ್ಥಿಕತೆಯೇ ಬಹುಮುಖ್ಯ ಸಾಧನ ಎಂಬುವುದು ಇವರ ಮಾತಿನಲ್ಲಿ ಬಹು ಸ್ಪಷ್ಟವಾಗಿ ತಿಳಿಯುತ್ತದೆ. ಈ ಸಮುದಾಯಗಳ ಆರ್ಥಿಕವಾದ ಸಾಮಾಜಿಕವಾದ ಶೈಕ್ಷಣಿಕವಾದ ಸ್ಪರ್ದೆಯಲ್ಲದೆ ನಿಶ್ಚಲವಾಗಿ ನಿಂತಿರುವುದಕ್ಕೆ ಇವರೆ ಉದಾಹರಣೆಯಾಗಿ ನಿಲ್ಲುತ್ತಾರೆ. ಉತ್ತಮ ಪದವಿ ಪಡೆದರು ಇದುವರೆವಿಗೂ ಸರ್ಕಾರಿ ಕೆಲಸ ಸಿಗದೆ ಖಾಸಗಿ ಆಸ್ಪತ್ರೆಯಲ್ಲಿ ದುಡಿಯುತ್ತಿರುವುದು ಹಾಗೂ ಸಾಮಾಜಿಕವಾಗಿ ಸಹಾಯವಿಲ್ಲದೆ ತಮ್ಮ ಕನಸು ಈಡೇರಿಸಿಕೊಳ್ಳುವುದಕ್ಕೆ ಸಾಧ್ಯವಾಗುತ್ತಿಲ್ಲ. ಸರ್ಕಾರದ ಯೋಜನೆಗಳು ತಳಸಮುದಾಯಗಳಿಗಾಗಿ ರೂಪಿಸಿದರೂ ಅವುಗಳನ್ನು ಇವರಿಗೆ ದಕ್ಕಿಸಿಕೊಳ್ಳುವುದಕ್ಕೆ ಪರಿಶಿಷ್ಟ ಜಾತಿ ಪ್ರಮಾಣ ಪತ್ರ ದೊಡ್ಡ ತೊಡಕಾಗಿ ಪರಿಣಮಿಸಿದೆ. ಸಮಾಜದ ವರ್ತಮಾನಗಳ ಸವಾಲುಗಳ ಎದುರಿಸಬೇಕಾದರೆ ಸರಿಯಾಗಿ ಸರ್ಕಾರಿ ಸವಲತ್ತುಗಳ ಅಗತ್ಯವಿದೆ. ಆಗ ಮಾತ್ರ ಈ ಸಮುದಾಯಗಳು ಸ್ವಲ್ಪ ಮಟ್ಟಿಗೆ ತಲೆ ಎತ್ತಿ ನಿಲ್ಲುವಂತಾಗುತ್ತದೆ. ನಂತರ ವೈಜ್ಞಾನಿಕತೆ ರೀತಿಯಲ್ಲಿ ಅವರಿಗು ಸಮಾಜದಲ್ಲಿ ಸಮಾನ ನ್ಯಾಯ ಕಲ್ಪಿಸದಿದ್ದಲ್ಲಿ ದಕ್ಕಲರೂ ಸಮಾಜದ ಮುಖ್ಯವಾಹಿನಿಗೆ ನಿಲ್ಲುವಂತಾದರೆ ಅವರಲ್ಲಿನ ಜಡತ್ವ ನೀಗುವುದಕ್ಕೆ ಸಾಧ್ಯವಾಗುತ್ತದೆ.

ಚಿಂತಾಮಣಿಯ ಬಾಣಮರಿಯಲ್ಲಿ ಇಬ್ಬರು ಮಾತ್ರ ಪದವಿ ಹಂತಕ್ಕೆ ತಲುಪಿದ್ದು ಒಬ್ಬ ಹೆಣ್ಣು ಮಗಳು ಬಿ.ಎ, ಬಿ.ಎಡ್, ಎಂ.ಎ ಮುಗಿಸಿ ನಂತರ ಟೈಲರಿಂಗ್ ಕಲಿತು ಸ್ವಲ್ಪ ದಿನಗಳು ಮಕ್ಕಳಿಗೆ ಪಾಠವನ್ನು ಹೇಳಿಕೊಟ್ಟು ಹೀಗೆ ಟೈಲರಿಂಗ್ ಮಾಡಿಕೊಂಡು ಶೈಕ್ಷಣಿಕ ಆಂದೋಲನ ನಡೆಸುತ್ತಿದ್ದಾರೆ. ಇವರು ಸಹ ಈ ಸಮುದಾಯಗಳ ಉದ್ಧಾರಕ್ಕಾಗಿ ಮಕ್ಕಳ ಶಿಕ್ಷಣಕ್ಕಾಗಿ ಹೋರಾಟಗಳಲ್ಲಿ ಭಾಗವಹಿಸಿ, ಈ ಸಮುದಾಯಗಳ ರಾಜ್ಯಾಧ್ಯಕ್ಷರಾಗಿ ಮಾಡಿ ಆನೇಕ ಸಭೆಗಳಲ್ಲಿ ಭಾಗವಹಿಸಿ, ಈ ಸಮುದಾಯಗಳ ಪರಿಸ್ಥಿತಿಯ ಮನವಿಯನ್ನು ಸಮಾಜ ಕಲ್ಯಾಣ ಇಲಾಖೆ ಅಧಿಕಾರಿಗಳಿಗೆ ನೀಡಿದ್ದಾರೆ. ಆ ಪ್ರದೇಶದ ದಕ್ಕಲ ಸಮುದಾಯಗಳಿಗೆ ಇವರೆ ಮಾರ್ಗದರ್ಶಕ ರಾಗಿದ್ದಾರೆ. ಉಳಿದ ಗೋವಿಂದರಾಜು ರವಿಚಂದ್ರ ದ್ವಿತೀಯ ಪಿ.ಯು.ಸಿ. ಪಾಸಾಗಿದ್ದು ಮುಂದೆ ಪದವಿಗೆ ಹೋಗುವ ಕಾತುರದಲ್ಲಿದ್ದು ಇವರಿಗೆ ಆರ್ಥಿಕ ನೆರವು ಇಲ್ಲದೆ ಇದ್ದರೂ ಪದವಿಗೆ ಹೋಗಬೇಕು ಎಂಬ ಹಂಬಲವಿದೆ. ಉಳಿದ ಮಕ್ಕಳು ಪ್ರಾಥಮಿಕ ಮತ್ತು ಪ್ರೌಢ ಶಾಲೆ ಓದುತ್ತಿದ್ದು ಈ ಪ್ರದೇಶದಲ್ಲಿ ಮಾತ್ರ ಹೆಚ್ಚು ವಿದ್ಯಾಭ್ಯಾಸ ಮಾಡುತ್ತಿರುವುದು ಕಂಡು ಬರುತ್ತದೆ. ಲಲಿತ ಎಂಬ ಹೆಣ್ಣು ಮಗಳು ಎಂ.ಎ. ಕನ್ನಡ ಉನ್ನತ ಪದವಿ ಪಡೆದರೂ ಇದುವರೆವಿಗೂ

ಸರ್ಕಾರಿ ಕೆಲಸ ಸಿಗದೆ ಟೈಲರಿಂಗ್ ಮಾಡುತ್ತಾ ಸಂಘಟನೆಗಳಲ್ಲಿ ಕೆಲಸ ಮಾಡಿಕೊಂಡು ಮಕ್ಕಳ ಮಾರ್ಗದರ್ಶಕರಾಗಿದ್ದಾರೆ. ಸರ್ಕಾರದ ಮೀಸಲಾತಿ ಇದ್ದರು ಯಾವುದೇ ಪ್ರಯೋಜನವಿಲ್ಲದೆ ಉದ್ಯೋಗಗಳನ್ನು ಕಡೆಗಣಿಸುವಂತಾಗಿದೆ. ಹೆಸರಿಗೆ ಮಾತ್ರ ದಕ್ಕಲರು ಸರ್ಕಾರದ ದೃಷ್ಟಿಗೆ ಇವರು ಪರಿಶಿಷ್ಟ ಜಾತಿಯವರಾಗಿ ಕಾಣುತ್ತಿದೆ. ಸರ್ಕಾರದ ಮುಂದೆ ತಮ್ಮ ಸಮಸ್ಯೆಗಳನ್ನು ಇಟ್ಟರೆ ನಿಮಗೆ ಯಾಕೆ ನಾವು ಮಾಡಿಕೊಡುತ್ತೇವೆ ಎಂದು ಅಶ್ವಾಸನೆ ಕೊಟ್ಟು, ಕೊನೆಯಲ್ಲಿ ನೀವು ದಕ್ಕಲ ಸಮುದಾಯಕ್ಕೆ ಸೇರಿಲ್ಲ ಎಂದು ತಿರಸ್ಕರಿಸುವುದು ಈ ಸಮುದಾಯಗಳ ದೌರ್ಬಲ್ಯವಾಗಿದೆ. ಇಂತಹ ಸ್ಥಿತಿಯಲ್ಲಿ ಈ ಸಮುದಾಯಗಳು ಯಾವುದೇ ಸವಲತ್ತುಗಳನ್ನು ಪಡೆದುಕೊಳ್ಳುವುದರಲ್ಲಿ ವಿಫಲರಾಗಿದ್ದಾರೆ.

ಇಂತಹ ಪರಿಸ್ಥಿತಿಯಲ್ಲಿ ದಕ್ಕಲ ಸಮುದಾಯಗಳು ತಮ್ಮ ಪಾರಂಪರಿಕ ಬದುಕಿನ ಮಾದಿಗರ ಮನೆ ಮಕ್ಕಳೆಂಬ ಭಾವುಕತನ ಭೂಲೋಕ ಸೃಷ್ಟಿ ಮಾಡಿದವರೆಂಬ ಭ್ರಮಾದೀನತೆಯಲ್ಲಿ ವರ್ತಮಾನದ ಬದುಕಿನಲ್ಲಿಯೂ ತಮ್ಮ ಪಾರಂಪರಿಕ ನೆಲೆಯಲ್ಲಿ ಇರುವುದು ತಿಳಿಯುತ್ತದೆ. ನಮಗೆ ಮಾದಿಗರ ಆಸರೆ ಅವರು ಬಿಟ್ಟು ಯಾರು ನಮಗೆ ಸಹಾಯ ಹಸ್ತ ನಿಡುತ್ತಿಲ್ಲ. ಎಂದು ತಮ್ಮ ಭಾವನೆಗಳನ್ನು ಹಂಚಿಕೊಂಡರು. ಹಾಗೆಯೆ ತಮ್ಮ ನಿರ್ಗತಿಕ ಅವಸ್ಥೆಯಲ್ಲಿ ಸರ್ಕಾರಿ ಸವಲತ್ತುಗಳ ಕನಸ್ಸು ಕಾಣುವ ಯುವಕರ ಕನಸಾಗಿ ಉಳಿಯುತ್ತದೆ. ಆದರೆ ಅವನ್ನ ದಕ್ಕಿಸಿ ಕೊಳ್ಳುತ್ತಿರುವ ಇತರ ಸಮುದಾಯಗಳು ನನಸಾಗಿಕೊಳ್ಳುತ್ತಿವೆ ಎಂಬ ಆಕ್ರೋಶ ಈ ಸಮುದಾಯಗಳಲ್ಲಿದೇ ಇಂತಹ ಅಸಮಾನತೆಯ ಕಂದರಗಳು ಸೃಷ್ಟಿಯಾಗದಂತೆ ಸಾಮಾಜಿಕ ಸಾಮರಸ್ಯಗಳು ಬಿಗಡಾಯಿಸಿದಂತೆ ಎಚ್ಚರವಹಿಸಿ ಈ ಸಮುದಾಯಗಳಿಗೆ ಹೆಚ್ಚು ಪ್ರೋತ್ಸಾಹಿಸಬೇಕಾಗಿದೆ.

ಹೀಗೆ ಕ್ಷೇತ್ರಕಾರ್ಯದ ಅಧ್ಯಯನದಲ್ಲಿ ದಕ್ಕಲರ ಶೈಕ್ಷಣಿಕತೆ ತಳ ಮಟ್ಟಕ್ಕೆ ಇರುವುದು ಕಂಡುಬರುತ್ತದೆ. ಈ ಸಮುದಾಯಗಳ ಸಾಕ್ಷರತೆ ಪ್ರಮಾಣವನ್ನು ಗಮನಿಸಿದಾಗ ದಕ್ಕಲರ ಒಟ್ಟು ಜನಸಂಖ್ಯೆಯಲ್ಲಿ ೪ ವರ್ಷದ ವಯೋಮಾನ ಮಕ್ಕಳು ಶಿಕ್ಷಣ ಪಡೆಯಲು ಅನರ್ಹರಾಗಿದ್ದು ಕೋಲಾರ ಮತ್ತು ಚಿಕ್ಕಬಳ್ಳಾಪುರ ಪ್ರದೇಶಕ್ಕೆ ಸಂಬಂಧಿಸಿದಾಗ ಲಿಂಗಾವರು ಗಂಡು ಮಕ್ಕಳು ಶೇ. ೨.೧ರಷ್ಟು ಹೆಣ್ಣು ಮಕ್ಕಳು ಶೇ. ೧.೩ರಷ್ಟಾಗಿದೆ. ಒಬ್ಬ ಪ್ರಮಾಣ ಶೇ. ೧.೨ರಷ್ಟು ಸಾಕ್ಷರತೆ ಪ್ರಮಾಣವನ್ನು ಹೊಂದಿರುವುದು ಕಂಡುಬರುತ್ತದೆ. ಇನ್ನು ಶಿಕ್ಷಣ ಪಡೆಯುತ್ತಿರುವವರ ಪ್ರಮಾಣವು ಗಮನಿಸಿದಾಗ ತುಂಬ ಕಡಿಮೆ ಪ್ರಮಾಣದಲ್ಲಿದ್ದು ಒಂದು ಕುಟುಂಬದಲ್ಲಿ ಇಬ್ಬರು ಅಥವಾ ಮೂರು ಜನ ಮಾತ್ರ ಎಸ್.ಎಸ್.ಎಲ್.ಸಿ ತನಕ ಓದಿ ಫೇಲ್ ಆಗಿದ್ದಾರೆ. ಇನ್ನು ಪಿಯುಸಿ ಓದುತ್ತಿರುವವರು. ಇಬ್ಬರು ಮಾತ್ರ ಇನ್ನೂ ಪದವಿ, ನಾಲ್ಕು ಜನ ಸ್ನಾತಕೋತ್ತರ ಪದವಿ ಮೂರು. ಇದರಲ್ಲಿ ಇಬ್ಬರು ಪುರುಷರು, ಒಬ್ಬ ಮಹಿಳೆ ಮಾತ್ರ ಸ್ನಾತಕೋತ್ತರ ಪದವಿ ಪಡೆದಿದ್ದಾರೆ.

೨೦೦೧ ಕರ್ನಾಟಕ ರಾಜ್ಯ ಜನಗಣತಿಯಲ್ಲಿ ಸಾಕ್ಷರತೆಯನ್ನು ಗಮನಿಸಿದಾಗ ಒಟ್ಟು ಸಾಕ್ಷರತೆ ಪ್ರಮಾಣ ಶೇ. ೬೭.೦೪ರಷ್ಟಿದ್ದು ಅದರಲ್ಲಿ ಪುರುಷರು ಶೇ. ೭೬.೨೯ರಷ್ಟು ಮಹಿಳೆಯರು ಶೇ. ೫೨.೪೫ರಷ್ಟಿದೆ. ಒಟ್ಟು ದಕ್ಕಲರ ಸಾಕ್ಷರತೆ ಪ್ರಮಾಣ ಜಾನಕಲ್ ರಾಜಣ್ಣನವರ ಸಮೀಕ್ಷೆಯನ್ನು ಗಮನಿಸಿದಾಗ ಕರ್ನಾಟಕದ ಒಟ್ಟು ಶೇ. ೧೪.೯೧ರಷ್ಟಿದೆ ಒಟ್ಪಾರೆ ಶೇ. ೪೧.೩೮ರಷ್ಟಿದೆ ೨೦೧೬ರ ನಡೆಸಿದ ಕ್ಷೇತ್ರ ಕಾರ್ಯ ಸಮಿಕ್ಷೆಯ ಪ್ರಕಾರ ದಕ್ಕಲರಲ್ಲಿನ ಸಾಕ್ಷರತೆ ಪ್ರಮಾಣ ಶೇ. ೪೫.೯೨ರಷ್ಟಿರುವುದು ಕಂಡುಬಂದಿದೆ. ಸಾಕ್ಷರತೆದವರಲ್ಲಿಯೇ ಪ್ರಾಥಮಿಕ ಶಿಕ್ಷಣವನ್ನು ಪಡೆಯುತ್ತಿರುವವರಲ್ಲಿ ಗಂಡು ಮಕ್ಕಳು ಶೇ. ೩೧.೫೪ರಷ್ಟು ಇದ್ದು ಹೆಣ್ಣು ಮಕ್ಕಳು ಶೇ. ೩೨.೯೪%ರಷ್ಟಿದ್ದಾರೆ. ಕೋಲಾರ ಮತ್ತು ಚಿಕ್ಕಬಳ್ಳಾಪುರ ಪ್ರದೇಶದಲ್ಲಿ ಒಟ್ಟು ಜನಸಂಖ್ಯೆ ೧೩೭ರಷ್ಟು ಇದ್ದು ಇದರಲ್ಲಿ ಶಿಕ್ಷಣ ಪಡೆಯುತ್ತಿರುವವರು ಶೇ. ೩೬ರಷ್ಟು ಜನ ಅದರಲ್ಲಿ ೨ ಮಕ್ಕಳು ಪಿಯುಸಿ ಓದುತ್ತಿರುವ ಮಗು ಸ್ನಾತಕ್ಕೋತ್ತರ ಪದವಿ ಮೂರು ಅದರಲ್ಲಿ ಪುರುಷರು ಒಬ್ಬರು ಮಹಿಳೆಯರು ಒಬ್ಬರು ಮಾತ್ರ ಓದುತ್ತಿದ್ದಾರೆ.

ದಕ್ಕಲ ಸಮುದಾಯಗಳಲ್ಲಿ ಪ್ರಾಥಮಿಕ ಶಿಕ್ಷಣ ಪಡೆಯುತ್ತಿರುವವರ ಸಂಖ್ಯೆಯ ಅಧಿಕವಿದ್ದು, ಪ್ರೌಢಶಾಲೆಗೆ ಬರುವ ವೇಳೆಗೆ ಮಕ್ಕಳ ಸಾಕ್ಷರತೆ ಪ್ರಮಾಣ ಕಡಿಮೆಯಾಗುತ್ತಿರುವುದು ಕಂಡು ಬರುತ್ತದೆ. ಪ್ರಾಥಮಿಕ ಹಂತದಲ್ಲಿ ೧೨ ವಿದ್ಯಾರ್ಥಿಗಳು ಅದರಲ್ಲಿ ೭ ಗಂಡು ೬ ಹೆಣ್ಣು ಮಕ್ಕಳು ಓದುತ್ತಿದ್ದು ಪ್ರೌಢಶಾಲೆಗೆ ಬರುವ ವೇಳೆಗೆ ಕೇವಲ ನಾಲ್ಕು ವಿದ್ಯಾಥಿಗಳು ಮಟ್ಟಕ್ಕೆ ಇಳಿದು ಪದವಿಗೆ ಒಬ್ಬ ಮತ್ತು ಇಬ್ಬರು ವಿದ್ಯಾರ್ಥಿಗಳು ಹೋಗುತ್ತಿದ್ದಾರೆ. ಇನ್ನು ಮಾಧ್ಯಮಿಕ ಹಂತದ ೧೦ ವಿದ್ಯಾರ್ಥಿಗಳು ಇದ್ದು ೬ ಗಂಡು ೪ ಹೆಣ್ಣು ಮಕ್ಕಳು ಇದ್ದು ಈ ಹಂತದಲ್ಲಿ ಕೆಲವು ವಿದ್ಯಾರ್ಥಿಗಳು ಓದು ನಿಲ್ಲಿಸಿ ಕೂಲಿ ಕೆಲಸಕ್ಕೆ ಹೋಗುವುದು ಹೆಚ್ಚು. ಹಾಗಾಗಿ ಪ್ರೌಢ ಹಂತಕ್ಕೆ ಹೋಗುವುದು ಕಡಿಮೆ. ಇದಕ್ಕೆ ಆರ್ಥಿಕತೆ ಮಾರ್ಗದರ್ಶನದ ಕೋರಿಕೆ ಹೆಚ್ಚಾಗಿದೆ. ಇನ್ನು ಪ್ರೌಢಶಾಲೆಗೆ ೪ ವಿದ್ಯಾರ್ಥಿಗಳು ಇದ್ದು ೩ ಗಂಡು ೧ ಹೆಣ್ಣು ಮಕ್ಕಳು ಓದುತ್ತಿದ್ದು, ಈ ಹಂತದಲ್ಲಿ ಮಕ್ಕಳ ಆಸಕ್ತಿ ತುಂಬ ಕಡಿಮೆ ಇದ್ದು ಹೆಚ್ಚು ಫೇಲ್ ಆಗುತ್ತಿದ್ದಾರೆ. ಸರಿಯಾದ ಮಾರ್ಗದರ್ಶನವಿಲ್ಲದೆ ಶಾಲೆ ಬಿಟ್ಟು ಕೂಲಿ ಕೆಲಸಗಳನ್ನು ತೊಡಗಿಸಿಕೊಂಡು ವಿವಾಹ ಮಾಡಿಕೊಳ್ಳುವುದು ಹೆಚ್ಚಾಗಿವೆ. ಹಾಗಾಗಿ ಮುಂದಿನ ವಿದ್ಯಾಭ್ಯಾಸ ಕೇಳುವುದಕ್ಕೆ ಸಾಧ್ಯವಿಲ್ಲ. ಪದವಿ ಹಂತದಲ್ಲಿ ಪದವಿ ಪೂರ್ವ ಇಬ್ಬರು ಅದರಲ್ಲಿ ಗಂಡು ಮಕ್ಕಳು ಮಾತ್ರ ಓದುತ್ತಿದ್ದು, ಇದರಲ್ಲಿ ಪಿಯುಸಿ ಪಾಸಾಗಿ ಮುಂದೆ ಪದವಿಗೆ ಹೋಗುವ ತವಕದಲ್ಲಿ ಇದ್ದಾರೆ ಪದವಿ ಮೂರು ವಿದ್ಯಾರ್ಥಿಗಳು ಓದುತ್ತಿದ್ದು, ಎರಡು ಗಂಡು ಒಂದು ಹೆಣ್ಣು ಮಗು ಪದವಿ ಓದುತ್ತಿದ್ದಾರೆ. ಸ್ನಾತಕೋತ್ತರ ಪದವಿ ಮೂರು ವಿದ್ಯಾರ್ಥಿಗಳು. ಇಬ್ಬರು ಗಂಡು, ಒಂದು ಹೆಣ್ಣು ಮಗು. ಸ್ನಾತಕೋತ್ತರ ಪದವಿ ಮುಗಿಸಿ, ಕೆಲಸ ಮಾಡುವುದಕ್ಕೆ ಮುಂದಾಗಿದ್ದು, ಈ ಸಮುದಾಯಗಳಲ್ಲಿ ಉನ್ನತ ಶಿಕ್ಷಣ ಪಡೆದವರು ಇವರು ಬಿಟ್ಟರೆ ಬೇರೆ ಯಾರೂ ಶಿಕ್ಷಣ ಪಡೆದಿಲ್ಲ ಎಂದು ಹೇಳಬಹುದು.

ಸ್ಪರ್ಧಾತ್ಮಕ ವರ್ತಮಾನದಲ್ಲಿ ಇವರ ಬದುಕು ತುಂಬ ಶೋಚನೀಯವಾಗಿದೆ. ಕೇವಲ ನಾಲ್ಕಾರು ಕುಟುಂಬಗಳಲ್ಲಿ ಮಾತ್ರ ಶಿಕ್ಷಣದ ಪ್ರಭಾವವಿದ್ದು, ಸಾಮಾಜಿಕ ಪ್ರಜ್ಞೆ ಹೊಂದಿ ತಮ್ಮ ಮಕ್ಕಳಿಗಾದರು ಶಿಕ್ಷಣ ಕೊಡಿಸಬೇಕು ಎಂಬ ಬಯಕೆ ಈ ಸಮುದಾಯಗಳಲ್ಲಿ ಇದೆ. ಇನ್ನು ಉಳಿದ ಸಮುದಾಯಗಳು ನಮ್ಮ ಆರ್ಥಿಕತೆ ಸ್ಥಿತಿ ಕಂಡು ಹಾಗೂ ಸಮಾಜದಲ್ಲಿ ತಮ್ಮ ಸಮುದಾಯ ನಡೆದುಕೊಳ್ಳುವ ರೀತಿಯಿಂದ ಮಕ್ಕಳನ್ನು ಶಾಲೆಗೆ ಕಳಿಸದೆ ಕೂಲಿ ಕೆಲಸಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಇನ್ನು ಅಲ್ಪ ಸ್ವಲ್ಪ ಭೂಮಿಯನ್ನು ಹೊಂದಿರುವ ಎರಡು ಸಮುದಾಯಗಳ ಎರಡು ಕಡೆ ಗಮನಹರಿಸಿ ತಮ್ಮ ಮಕ್ಕಳನ್ನು ಉನ್ನತ ಹಂತಕ್ಕೆ ಬೆಳೆಸಬೇಕು ಎಂಬ ಆಶಯ ಈ ಸಮುದಾಯಗಳದಾಗಿದೆ. ಉಳಿದ ಪ್ರದೇಶಗಳಲ್ಲಿ ದಕ್ಕಲರ ಸ್ಥಿತಿಗತಿಗಳು ಹೀನಾಯವಾಗಿದೆ. ದಕ್ಕಲರ ಪಾರಂಪರಿಕ ಸಂಕಥನಗಳಲ್ಲಿ ಇದ್ದರು ಅವುಗಳನ್ನು ನಂಬಿ ಜೀವಿಸುವುದು ವರ್ತಮಾನದಲ್ಲಿ ಸಾಧ್ಯವಾಗದ ಮಾತಾಗಿದೆ. ಹಾಗಾಗಿ ತಮ್ಮ ಪುರಾಣಗಳನ್ನು ಬಿಟ್ಟು ಸಾಂಸ್ಕೃತಿಕ ಪರಂಪರೆಗಳಿಂದಲೆ ವಾಸ್ತವತೆಯನ್ನು ಎದುರಿಸಲು ಸಾಧ್ಯವಾಗದು. ಇಂತಹ ಕ್ಲಿಷ್ಟತೆಯನ್ನು ಬಿಟ್ಟು ದಕ್ಕಲರು ಶೈಕ್ಷಣಿಕವಾಗಿ ಮುಂದೆ ತಮ್ಮ ಭವಿಷ್ಯತ್ತನ್ನು ರೂಪಿಸಿಕೊಳ್ಳಬೇಕಾಗಿದೆ. ಇದು ಇಂದಿನ ಸ್ಥಿತಿಯಲ್ಲಿ ಅಸಾಧ್ಯವೆ ಸರಿ. ಆದರೆ ತಮ್ಮ ಬದುಕು ಕಟ್ಟಿಕೊಂಡು ಸಮಾಜವನ್ನು ಎದುರಿಸಬೇಕಾದರೆ ಶಿಕ್ಷಣ ಪಡೆಯಲೇಬೇಕಾದ ಅಗತ್ಯವಿದೆ. ತಮ್ಮ ಪಾರಂಪರಿಕ ವೃತ್ತಿಗಳನ್ನು ನಡೆಸಿ, ಭವಿಷ್ಯತ್ತಿನಲ್ಲಿ ಬೆಳಕು ಕಾಣುವುದಕ್ಕೆ ಸಾಧ್ಯವಾಗದ ಮಾತಾಗಿದೆ. ಹೀಗೆ ದಕ್ಕಲ ಸಮಾಜದಲ್ಲಿ ಬದುಕಿಬಾಳಬೇಕಾದರೆ ಮೂಲ ಸೌಲಭ್ಯಗಳ ನೆರವು ಅಗತ್ಯವಾಗಿ ಬೇಕಾಗುತ್ತದೆ. ಆರ್ಥಿಕ ನೆರವು ಇಲ್ಲದೆ ಇವರು ಶಾಶ್ವತವಾಗಿ ಮೂಲೆ ಗುಂಪಾಗುತ್ತಾರೆ.

ಹೀಗೆ ದಕ್ಕಲರ ಮೂಲಭೂತ ಅಗತ್ಯಗಳು ಶೈಕ್ಷಣಿಕತೆ ಸಮರ್ಪಕವಾಗಿ ಪೂರೈಕೆಯಾಗದ ಕಾರಣ ಆರ್ಥಿಕ ಪರಿಸ್ಥಿತಿಗಳು ಗಂಭೀರವಾಗಿದೆ. ಸಾಮಾಜಿಕವಾಗಿ ಅಸ್ಪೃಶ್ಯತೆಯ ಜೊತೆಗೆ ಅಲೆಮಾರಿತನದ ಸಮಸ್ಯೆಗಳು ಅದನ್ನು ಎದುರಿಸಲಾದ ಅವಸ್ಥೆ ಈ ಸಮುದಾಯಗಳು ಕಂಡು ಬರುತ್ತದೆ. ಎಲ್ಲಾ ಕ್ಷೇತ್ರಗಳಲ್ಲೂ ಸ್ಪರ್ಧೆ ತೀವ್ರತರವಾಗಿದ್ದು, ಅದಕ್ಕೆ ಮುಖಾಮುಖಿಯಾಗಬಲ್ಲವೆಂಬ ಆತ್ಮಸ್ಥೈರ್ಯವು ಸಹ ಸಮುದಾಯಗಳಲ್ಲಿ ಬೆಳೆದಿಲ್ಲ. ಪ್ರತಿಯೊಂದು ವಿಷಯದಲ್ಲಿ ಇಂದು ರಾಜಕೀಯದಲ್ಲಿ ಈ ಸಮುದಾಯಗಳು ಪ್ರವೇಶಿಸುವುದಕ್ಕೆ ಅವಕಾಶವಿಲ್ಲದಾಗಿದೆ. ಸಾಮಾಜಿಕ ಪ್ರತಿಷ್ಠೆ ಅಸ್ತಿತ್ವಗಳಿಗಾಗಿ ಹುಡುಕಾಟ ಮತ್ತು ಹೋರಾಟಗಳು ನಡೆಯುತ್ತಿರುವ ವರ್ತಮಾನ ಸಂದರ್ಭದಲ್ಲಿ ದಕ್ಕಲರ ಸಾಮಾಜಿಕ ಸ್ಥಿತಿಗತಿಗಳು ಆರೋಗ್ಯ ಪೂರ್ಣವಾಗಿಲ್ಲ ಎಂಬುದು ತಿಳಿಯುತ್ತದೆ. ಸರ್ಕಾರದಿಂದ ಕೇವಲ ಸ್ಕಾಲರ್‌ಶಿಪ್ ಉಚಿತ ಶಿಕ್ಷಣ ಮಧ್ಯಾಹ್ನದ ಬಿಸಿ ಊಟ ಬಿಟ್ಟರೆ ಬೇರೆ ಯಾವುದೇ ಸೌಲಭ್ಯಗಳು ಸಿಗುತ್ತಿಲ್ಲ. ಇಂತಹ ಸ್ಥಿತಿ ಈ ಸಮುದಾಯಗಳಿಗೆ ಬೇಕಾದ ಆರ್ಥಿಕತೆ ಶಿಕ್ಷಣಕ್ಕೆ ಹೆಚ್ಚು ಪೆಟ್ಟು ಬಿದ್ದು ತಮ್ಮ ಪಾರಂಪರಿಕ ಕಸುಬುಗಳನ್ನು ನಿಲ್ಲಿಸಬೇಕಾದ ಸ್ಥಿತಿ ಈ ಸಮುದಾಯಗಳದ್ದಾಗಿದೆ.

### ೬.೪. ರಾಜಕೀಯ ಸ್ಥಿತಿಗತಿ

ಒಂದು ಸಮಾಜವನ್ನು ಉತ್ತಮವಾಗಿ ನಡೆಸಿಕೊಂಡು ಆ ಸಮಾಜದಲ್ಲಿನ ಸಮಸ್ಯೆಗಳು ಗೊಂದಲಗಳು ಬಗೆಹರಿಸಿ, ಒಂದು ಚೌಕಟ್ಟಿನೊಳಗೆ ತಂದು ಒಂದು ಉತ್ತಮ ಸಮಾಜವಾಗಿ ರೂಪಿಸುವುದಕ್ಕೆ, ಉತ್ತಮ ನಾಯಕರನ್ನು ನೇಮಿಸಿ, ಅವರಿಂದ ಸಮಾಜದ ಎಲ್ಲಾ ವರ್ಗಗಳ ಉದ್ಧಾರ ಮಾಡಿಸುವ ಒಂದು ಪ್ರಯತ್ನವಾಗಿದೆ. ಹಾಗೆ ಸಮಾಜದ ಎಲ್ಲಾ ಸಮುದಾಯಗಳನ್ನು ಕಾನೂನಿನ ಒಳಗೆ ಸಮಾನವಾಗಿ ಕಂಡು ಎಲ್ಲರಿಗೂ ಸಮಾನವಾಗಿ ಎಲ್ಲ ಕ್ಷೇತ್ರಗಳಲ್ಲಿ ಅವಕಾಶಕೊಟ್ಟು ಯುವ ಸಮುದಾಯವನ್ನು ಕಡಗಣಿಸದೆ ಕಾನೂನಿನ ಪ್ರಕಾರ ಎಲ್ಲರೂ ಒಂದೇ ಎಂಬ ಮನೋಭಾವದಿಂದ ವ್ಯಕ್ತಿಗಳನ್ನು ಆರಿಸಿ ಅವರಿಗೆ ಅವಕಾಶ ಕೊಟ್ಟು ಆ ವ್ಯಕ್ತಿ ಸಮಾಜವನ್ನು ಒಂದು ಹಂತಕ್ಕೆ ಕೊಂಡೊಯ್ಯುವುದೇ ರಾಜಕೀಯವಾಗಿದೆ. ಸಮಾಜದ ಹಲವು ಜಾತಿ ಧರ್ಮಗಳಿದ್ದು ನಾನಾ ಪಂಗಡಗಳು ನಾನಾ ರೀತಿಯಲ್ಲಿ ಬದುಕನ್ನು ಕಟ್ಟಿಕೊಂಡು ಜೀವಿಸುತ್ತಿದ್ದು ಇಂತಹ ಸಮಾಜದಲ್ಲಿ ಅತ್ಯಂತ ಕೆಳ ಮಟ್ಟದಲ್ಲಿ ಜೀವಿಸುತ್ತಿರುವ ಸಮುದಾಯ ದಕ್ಕಲ ಸಮುದಾಯವಾಗಿದ್ದು ಶ್ರೀಮಂತ ರಾಜಕೀಯ ಗಣ್ಯರ ಕಣ್ಣಿಗೆ ಕಾಣದೆ ಸಮಾಜದಿಂದ ದೂರವಾಗಿ ರಾಜಕೀಯದ ಗೊತ್ತುಗುರಿ ಇಲ್ಲದೆ ತಮ್ಮ ಪಾಡಿಗೆ ತಾವು ಅಲೆಮಾರಿ ಜೀವನ ನಡೆಸುತ್ತಿದ್ದಾರೆ. ಹಲವು ಅಲೆಮಾರಿ ಸಮುದಾಯಗಳಲ್ಲಿ ಈ ಸಮುದಾಯವು ಕಟ್ಟ ಕಡೆಯಾಗಿ ನಿಲ್ಲುತ್ತದೆ. ಇವರು ಮಾದಿಗರ ದತ್ತು ಮಕ್ಕಳು ಮನೆ ಮಕ್ಕಳಾಗಿ ಮಾದಿಗರ ಮನೆಯಲ್ಲಿ ಭಿಕ್ಷೆ ಬೇಡಿ ತಿನ್ನುವ ಸಮಾಜದ ಅತ್ಯಂತ ತಳಸಮುದಾಯವಾಗಿದೆ.

ಹೀಗೆ ಒಂದು ಕಡೆ ನೆಲೆ ನಿಲ್ಲದೆ ಊರಿಂದ ಊರಿಗೆ ಅಲೆಯುವ ದಕ್ಕಲರು ಆರ್ಥಿಕವಾಗಿ ಶೈಕ್ಷಣಿಕವಾಗಿ ಹಾಗೂ ರಾಜಕೀಯವಾಗಿಯು ತುಂಬ ಹಿಂದುಳಿದಿರುವ ಸಮುದಾಯಗಳಾಗಿವೆ. ಸಮಾಜದಲ್ಲಿ ಇವರ ಪರಿಗಣನೆ ಇಲ್ಲದ ಹಾಗೆ ಬದುಕುತ್ತಿದ್ದಾರೆ. ಶಿಕ್ಷಣವಲ್ಲದೆ ಬೌದ್ಧಿಕ ಮಟ್ಟವಿಲ್ಲದೆ ಸಾಮಾಜಿಕ ತಿಳುವಳಿಕೆ ಇಲ್ಲದೆ ಆರ್ಥಿಕವಾಗಿ ದುರ್ಬಲರಾಗಿದ್ದರೆ ಇಂತಹ ಸ್ಥಿತಿಯಲ್ಲಿ ರಾಜಕೀಯ ಪ್ರೇರಣ ಎಲ್ಲಿಂದ ಬರುವುದಕ್ಕೆ ಸಾಧ್ಯವಾಗುತ್ತದೆ. ಕೋಲಾರ ಚಿಕ್ಕಬಳ್ಳಾಪುರ ಪ್ರದೇಶದಲ್ಲಿ ದಕ್ಕಲ ಸಮುದಾಯಗಳು ಇದುವರೆಗೂ ಯಾರೂ ರಾಜಕೀಯದಲ್ಲಿ ತೊಡಗಿಸಿಕೊಂಡಿಲ್ಲ. ಯಾವುದೇ ಚುನಾವಣೆಗಳಿಗೆ ನಿಂತಿರುವ ಉದಾಹರಣೆಗಳಿಲ್ಲ. ನಮ್ಮ ಸಮುದಾಯಗಳಿಗೆ ರಾಜಕೀಯ ಅವಶ್ಯಕತೆ ಇಲ್ಲ. ತಿನ್ನುವುದಕ್ಕೆ ಆಹಾರವಿಲ್ಲದೆ ನೆಲೆನಿಲ್ಲುವುದಕ್ಕೆ ಸ್ಥಳವಿಲ್ಲದೆ ಇದ್ದಾಗ ಇನ್ನು ರಾಜಕೀಯ ಪ್ರವೇಶಿಸುವುದಾದರೂ ಹೇಗೆ ಸಾಧ್ಯ ಎಂಬ ಅಸಹಾಯಕತೆ ಇವರಲ್ಲಿ ಕಾಡುತ್ತದೆ. ನಮ್ಮ ಸಮುದಾಯಗಳು ಇರುವ ಕಡಿಮೆ ಜನಸಂಖ್ಯೆಯಲ್ಲಿ ಸಮಾಜ ಗೊತ್ತು ಗುರಿ ತಿಳಿದಿಲ್ಲ. ನಮಗೆ ಸಹಾಯ ಹಸ್ತ ನೀಡುವವರು ಯಾರೂ ಇಲ್ಲ. ಹೀಗಿರುವಾಗ ನಮಗೆ ಭಿಕ್ಷೆ ಬೇಡುವುದು ಬಿಟ್ಟು ರಾಜಕೀಯದ ಬಗ್ಗೆ ಗೊತ್ತಿಲ್ಲ ಎಂದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ತಿಳಿಸಿದರು.

ನಮ್ಮ ಸಮುದಾಯಗಳನ್ನು ಸರ್ಕಾರ ಕಡೆಗಣಿಸಿದ್ದು ನಮಗೆ ಸಿಗಬೇಕಾದ ಅನುದಾನ ಸಿಗುತ್ತಿಲ್ಲ. ರಾಜಕೀಯ ವ್ಯಕ್ತಿಗಳನ್ನು ಕೇಳಿದರೆ ಅನುಧಾನ ಸರ್ಕಾರದಿಂದ ಬಿಡಿಸಿಕೊಡುತ್ತೇವೆ ಎಂದು ಹೇಳಿ ಕೊಟ್ಟ ಅನುಧಾನಗಳು ನಮ್ಮ ಸಮುದಾಯಗಳ ತನಕ ತಲುಪುತಿಲ್ಲ. ಕಛೇರಿಗಳಿಗೆ ಹೋಗಿ ಕೇಳಿದರೆ ನೀವು ಮಾದಿಗರಿಗೆ ಸೇರಿದವರು ಅವರಿಗೆ ನೀಡುವ ಅನುದಾನ ಬಿಟ್ಟರೆ ಬೇರೆ ಯಾವುದೇ ಅನುದಾನ ಸಿಗುವುದಿಲ್ಲ ಎಂದು ತಾಕೀತು ಮಾಡುತ್ತಾರೆ. ನಮ್ಮ ಸಮುದಾಯಗಳು ಸಮಾಜದ ದೃಷ್ಟಿಯಲ್ಲಿ ಕಟ್ಟಕಡೆಯ ಸಮುದಾಯ. ಆದರೆ ಸರ್ಕಾರದ ದೃಷ್ಟಿಯಲ್ಲಿ ಮಾದಿಗ ಸಮುದಾಯಕ್ಕೆ ಸೇರಿದವರಾಗಿದ್ದೇವೆ. ಹೀಗಾಗಿ ಬರುವ ಅನುದಾನಗಳು ಪಡೆಯುವುದಕ್ಕೆ ಆಗುತ್ತಿಲ್ಲ. ಭಿಕ್ಷೇ ಬೇಡಿ ಕೂಲಿ ಕೆಲಸ ಮಾಡದೆ ನಮ್ಮ ಹೊಟ್ಟೆ ತುಂಬಿಸಿಕೊಳ್ಳಲು ಆಗುತ್ತಿಲ್ಲ. ಮತದಾನದ ವೇಳೆ ಮಾತ್ರ ರಾಜಕಾರಣಿಗಳು ಬಂದು ನಿಮ್ಮ ಸಮುದಾಯಗಳು ಜಾತಿ ಪ್ರಮಾಣ ಪತ್ರ ಕೊಡುತ್ತೇವೆ ಎಂದು ಆಶ್ವಾಸನೆ ಕೊಟ್ಟು ಮತ ಹಾಕಿಸಿಕೊಳ್ಳುತ್ತಾರೆ. ಗೆದ್ದ ನಂತರ ನಮ್ಮ ಕಡೆ ತಿರುಗಿ ನೋಡುವುದಿಲ್ಲ. ಒಂದು ವೇಳೆ ಕೇಳಿದರೆ ನಿಮ್ಮ ಸಮುದಾಯಗಳದ್ದು ಸಮಸ್ಯೆ ಹೆಚ್ಚಾಗಿದೆ ಆದ್ದರಿಂದ ಆಗುವುದಿಲ್ಲ ಎಂದು ತಪ್ಪಿಸಿಕೊಳ್ಳಲು ನೋಡುತ್ತಾರೆ. ಸರ್ಕಾರಿ ಕಛೇರಿಗಳಿಗೆ ಅಲೆದು ಅದರ ಮೇಲೆ ಆಸಕ್ತಿಯು ಕಡಿಮೆಯಾಗಿದೆ.

ರಾಜಕೀಯ ಸ್ವಾತಂತ್ರ್ಯವಿಲ್ಲದೆ ಸಮುದಾಯಗಳು ನೈಜ ಸ್ವಾತಂತ್ರ್ಯದ ಅನುಭವವಿಲ್ಲದೆ ಇಂದಿಗೂ ಪರಾವಂಲಭಿ ಜೀವನಕ್ಕೆ ಜೋತು ಬಿದ್ದು ರಾಜಕೀಯದ ಶ್ರೇಣಿಕರಣದಡಿಯಲ್ಲಿ ಸಿಲುಕಿಕೊಂಡು ದಕ್ಕಲ ಸಮುದಾಯಗಳು ಆಳುವ ವರ್ಗಗಳ ಅಧೀನದಲ್ಲಿ ಬದುಕುವ ಪರಿಸ್ಥಿತಿ ಈ ಸಮುದಾಯಗಳದ್ದಾಗಿದೆ. ಸ್ವಾತಂತ್ರ್ಯೋತ್ತರ ಸಮಾಜದಲ್ಲಿ ಬಂಡವಾಳಶಾಹಿ, ಪುರೋಹಿತಶಾಹಿ ವರ್ಗಗಳ ಉಳಿವಿಗೆ ಮಾನ್ಯ ವ್ಯವಸ್ಥೆಯತ್ತ ವರ್ತಮಾನದಲ್ಲೂ ಅದರಿಂದ ವಿಮೋಚನೆಗೊಳ್ಳದೆ ಇಂದಿನ ವ್ಯವಸ್ಥೆಯಲ್ಲಿ ಮೂಲ ಆರ್ಥಿಕತೆಯು ಇಲ್ಲದೆ ಸಮಾಜದಿಂದ ದೂರವಾಗಿ ಶ್ರೀಮಂತರ ಅಡಿಯಲ್ಲಿ ಜೀತದಾಳುಗಳಾಗಿ ಬದುಕುತ್ತಿವೆ. ಪರಿಸ್ಥಿತಿ ಕೆಳಸಮುದಾಯಗಳದ್ದಾಗಿದೆ. ವರ್ತಮಾನ ಮನಸ್ಥಿತಿಯನ್ನು ನೋಡಿದರೆ ಮತ ಚಲಾವಣೆಗೆ ಅಷ್ಟೇ ಸಿಮೀತರಾಗಿ ಕಾಣುತ್ತಿದ್ದಾರೆ ಹೊರತು ಮೂಲಸೌಕರ್ಯಗಳ ಕಡೆ ಗಮನಹರಿಸದೆ ಸಮಾಜದಲ್ಲಿ ಇವರ ವ್ಯಕ್ತಿತ್ವ ಗುರುತಿಸುವುದಕ್ಕೆ ಅವಕಾಶವಿಲ್ಲದ್ದಾಗಿದೆ. ಅಷ್ಟೇ ಅಲ್ಲದೆ ಮಧ್ಯವರ್ತಿಗಳ ಕೈಗೊಂಬೆಯಾಗಿದ್ದಾರೆ.

ಈ ಸಮುದಾಯಗಳಲ್ಲಿ ಇದುವರೆವಿಗೂ ಗ್ರಾಮ ಪಂಚಾಯಿತಿಯ ಸದಸ್ಯರಾಗಲೀ ಎಂ.ಎಲ್.ಎ. ಎಂ.ಎಲ್.ಸಿ.ಯಾಗಲೀ ಇದುವರೆವಿಗೂ ಸ್ಪರ್ಧಿಸಿಲ್ಲ. ಜಾನಕಲ್ ರಾಜಣ್ಣನವರೊಂದಿಗೆ ಚರ್ಚಿಸಿದಾಗ ನಮ್ಮ ಸಮುದಾಯಗಳು ಅರೆ ಅಲೆಮಾರಿಗಳಾಗಿರುವುದರಿಂದ ಒಂದು ಕಡೆ ನೆಲೆ ನಿಲ್ಲುವುದಕ್ಕೆ ಸ್ಥಳ ಇಲ್ಲದೆ ಇರುವ ಸಂದರ್ಭದಲ್ಲಿ ರಾಜಕೀಯದಲ್ಲಿ ತೊಡಗಿಸಿಕೊಳ್ಳುವುದಕ್ಕೆ ಹೇಗೆ ಸಾಧ್ಯ ಹಾಗೂ ನಮ್ಮ ಸಮುದಾಯಗಳು ಸಮಾಜದಿಂದ ಕಡೆಗಣಿಸದೆ ಯಾರು ಸಹ ನಮ್ಮ ಸಮುದಾಯಗಳಿಗೆ ಪ್ರೋತ್ಸಾಹ ಸಹಾಯ ಮಾಡುವವರು ಹಾಗೆ ಶೈಕ್ಷಣಿಕವಾಗಿ ತುಂಬ

ಹಿಂದುಳಿದಿದ್ದು ರಾಜಕೀಯದ ಬಗ್ಗೆ ತಿಳಿದುಕೊಳ್ಳುವಷ್ಟು ಸಾಮರ್ಥ್ಯ ನಮ್ಮ ಸಮುದಾಯಗಳಲ್ಲಿ, ಇತ್ತಿಚೀನ ದಿನಗಳಲ್ಲಿ ನಾವು ಸಂಘ ಪರಿವಾರಗಳಿಂದ ಓಡಾಡಿ ನಮ್ಮ ತಾಯಿ ಲಕ್ಷ್ಮಮ್ಮ ಒಬ್ಬರು ಗ್ರಾಮ ಪಂಚಾಯಿತಿ ಸದಸ್ಯರಾಗಿದ್ದಾರೆ. ಅಷ್ಟು ಬಿಟ್ಟರೆ ಯಾರು ಸಹ ರಾಜಕೀಯದಲ್ಲಿ ತೊಡಗಿಸಿಕೊಂಡಿಲ್ಲ. ಹಾಗೆ ಸಮಾಜ ಕಲ್ಯಾಣ ಇಲಾಖೆಗಳು ಸಹ ನಮ್ಮ ಸಮುದಾಯವನ್ನು ಕಡೆಗಣಿಸಿದ್ದಾರೆ. ಕೆಳ ಸಮುದಾಯಗಳಲ್ಲಿ ಕೆಲವು ಅಲೆಮಾರಿ ಜನಾಂಗಗಳಿಗೆ ಮಾತ್ರ ಅನುದಾನಗಳನ್ನು ಬಿಡುಗಡೆ ಮಾಡಿದ್ದಾರೆ. ಆದರೆ ದಕ್ಕಲಿಗರಿಗೆ ಮಾತ್ರ ಯಾವುದೇ ಅನುದಾನಗಳು ತಲುಪಿಲ್ಲ. ನಾನು ಕ್ಷೇತ್ರಕಾರ್ಯದ ಅಧ್ಯಯನ ಮಾಡಿ ಕರ್ನಾಟಕದಲ್ಲಿ ಇಡೀ ನಮ್ಮ ಸಮುದಾಯಗಳ ವಿವರ ಅವರ ಸ್ಥಿತಿಗತಿಗಳ ಪುಸ್ತಕವನ್ನು ಬರೆದು ಕೆಲವು ಸಂಘಗಳ ಜೊತೆ ಹೋರಾಟ ನಡೆಸುತ್ತಿದ್ದೇವೆ. ಇತ್ತೀಚೆಗೆ ನಮ್ಮ ಸಮುದಾಯಗಳು ಶೇ. ೬೦ರಷ್ಟು ಭಾಗ ಶಿಕ್ಷಣದ ಕಡೆ ಗಮನ ಹರಿಸಿದ್ದು ಇನ್ನು ಉಳಿದ ಶೇ. ೪೦ರಷ್ಟು ಭಾಗ ಅವಿದ್ಯಾವಂತರಾಗಿ ಇದ್ದಾರೆ. ಇವರು ಕೂಲಿ ಕೆಲಸಗಳಲ್ಲಿ ಭಿಕ್ಷೆಯಲ್ಲಿ ಜೀವನ ಸಾಗಿಸುತ್ತಿದ್ದು ಸರ್ಕಾರದಿಂದ ಕೊಟ್ಟ ಜಾತಿ ಪ್ರಮಾಣಪತ್ರ ಮಾದಿಗ ಸಮುದಾಯಕ್ಕೆ ಸೇರಿದವರು ಎಂದು ಕೊಟ್ಟಿರುವುದರಿಂದ ಅದನ್ನು ಸರಿಪಡಿಸಲು ಹೋರಾಡುತ್ತಿದ್ದೇವೆ. ನಮ್ಮ ಮನಸ್ಥಿತಿ ಯಾರೂ ಅರ್ಥಮಾಡಿಕೊಳ್ಳುತ್ತಿಲ್ಲ ಎಂದು ರಾಜಣ್ಣನವರು ತಿಳಿಸುತ್ತಾರೆ. ನಂತರ ನಮ್ಮ ಸಮುದಾಯದ ಮತಗಳ ವಿವರವನ್ನು ತಮ್ಮ ಪುಸ್ತಕದಲ್ಲಿ ಇರುವುದಾಗಿ ಹೇಳಿ ತಮ್ಮ ಮನಸ್ಥಿಯನ್ನು ಬಿಚ್ಚಿಟ್ಟರು.

**ಮತಗಳ ವಿವರ:–** ದಕ್ಕಲ ಸಮುದಾಯಗಳು ಕರ್ನಾಟಕದಲ್ಲಿ ವಾಸವಾಗಿರುವ ಜನಸಂಖ್ಯೆ. ೨೦೧೧ರ ಜನಗಣತಿಯ ಪ್ರಕಾರ ೧೨೯೫ ಎಂಬುದು ರಾಜಣ್ಣನವರ ಲೇಖನದಲ್ಲಿ ತಿಳಿಯುತ್ತದೆ. ಹಾಗೆ ಕೋಲಾರ ಚಿಕ್ಕಬಳ್ಳಾಪುರ ಪ್ರದೇಶಗಳನ್ನು ಗಮನಿಸಿದಾಗ ೧೩೭ ಜನ ವಾಸಿಸುತಿದ್ದು, ಅದರಲ್ಲಿ ಸಂವಿಧಾನದ ಕಾನೂನಿನ ಪ್ರಕಾರ ಮತ ಚಲಾವಣೆಗೆ ಅರ್ಹತೆ ಇರುವ ಜನಸಂಖ್ಯೆ ೯೬ ಜನ ಇದ್ದು, ಅದರಲ್ಲಿ ಪುರುಷರು ೫೦ ಸ್ತ್ರೀಯರು ೪೬ ಜನರಿದ್ದು, ಅದರಲ್ಲಿ ಕಾನೂನಿನ ಪ್ರಕಾರ ೧೮ ವರ್ಷದ ಮೇಲ್ಪಟ್ಟು ೮ ಜನ ಇದ್ದು, ಒಟ್ಟು ೯೬ ಮತಗಳು ಮಾತ್ರ ಅರ್ಹತೆ ಪಡೆದಿವೆ. ಇದರಲ್ಲಿ ಕೆಲವರಿಗೆ ಗುರುತಿನ ಚೀಟಿ ಇಲ್ಲದೆ ಮತದಾರರ ಪಟ್ಟಿಯಲ್ಲಿ ಸೇರ್ಪಡೆಯಾಗಿಲ್ಲ. ಈ ಸಮಸ್ಯೆಗಳಿಗೆ ಈ ಸಮುದಾಯಗಳು ನಿಂತ ಸ್ಥಳದಲ್ಲಿ ಇಲ್ಲದೆ ಅಲೆಮಾರಿತನದಿಂದ ಸಮಯಕ್ಕೆ ಸರಿಯಾಗಿ ಇಲ್ಲದ ಕಾರಣ ಸರ್ಕಾರದ ಗುರುತಿನ ಚೀಟಿ ಮುಂತಾದ ಸಾಲ ಸೌಲಭ್ಯಗಳಿಂದ ದೂರವಾಗಿ ಇದ್ದು ಈ ಕಾರಣದಿಂದ ಯಾವ ಸಹಾಯ ಹಸ್ತ ನೀಡಲಾಗದೆ ರಾಜಕೀಯ ಪ್ರವೇಶಿಸಲು ಎಲ್ಲಿಂದ ಸಾಧ್ಯವಾಗುತ್ತದೆ.[೬]

ಇತ್ತೀಚಿನ ದಿನಗಳಲ್ಲಿ ಅಲ್ಪಸ್ವಲ್ಪ ವಿದ್ಯಾವಂತರಾಗಿ ಹಲವು ಹೋರಾಟಗಳಲ್ಲಿ ಭಾಗವಹಿಸಿ ತಮ್ಮ ಸಮುದಾಯಗಳಲ್ಲಿ ಸಂಘಟನೆಗಳನ್ನು ಮಾಡಿಕೊಂಡು ತಮ್ಮ ಹಕ್ಕುಗಳಾಗಿ ಹೋರಾಟ ನಡೆಸುತ್ತಿದ್ದಾರೆ. ಅಷ್ಟೇ ಅಲ್ಲದೆ ರಾಜಕೀಯಕ್ಕೆ ಪ್ರವೇಶಿಸುವುದಕ್ಕೆ ಮುಂದಾಗಿದ್ದು ಈ ಸಮುದಾಯಗಳಲ್ಲಿ

ಮೊದಲ ಬಾರಿಗೆ ಗ್ರಾಮಪಂಚಾಯಿತಿ ಸದಸ್ಯರಾಗಿದ್ದಾರೆ. ಕೋಲಾರ ಜಿಲ್ಲೆಯ ಮಾಧವ ಗುರ್ಜೇನಹಳ್ಳಿಯ ದಕ್ಕಲ ಗೋವಿಂದಪ್ಪನ ಮಗಳು ಗಂಗಮ್ಮ ಊರಿನ ಸಿರಿಯನ್ನು ಹಿಡಿದುಕೊಂಡು ಗ್ರಾಮಪಂಚಾಯಿತಿ ಸದಸ್ಯರಾಗಿ ಸಂಘಟನೆಗಳಲ್ಲಿ ತೊಡಗಿಸಿಕೊಂಡು ಹೋರಾಟಗಳಲ್ಲಿ ಭಾಗವಹಿಸುತ್ತಿದ್ದಾರೆ. ಅಷ್ಟೇ ಅಲ್ಲದೆ ಜಾನಕ ರಾಜಣ್ಣನವರು ಈ ಸಮುದಾಯಗಳ ಹೆಚ್ಚು ಹೋರಾಟಗಳಲ್ಲಿ ಭಾಗವಹಿಸಿ ಜನರನ್ನು ಸೇರಿಸಿ ಸಂಘಟನೆಗಳ ಬಗ್ಗೆ ತಮ್ಮ ಸಮುದಾಯಗಳಿಗೆ ಮನವರಿಕೆ ಮಾಡಿ ಸಮಾಜ ಸೇವೆಯನ್ನು ಕೈಗೊಂಡು ಈ ಸಮುದಾಯಗಳ ಬಗ್ಗೆ ಅಧ್ಯಯನ ಮಾಡಿ ಪುಸ್ತಕವನ್ನು ಬರೆದಿದ್ದಾರೆ. ಇವರ ಸಮಾಜ ಸೇವೆಯಲ್ಲಿ ತೊಡಗಿಸಿಕೊಂಡಿದ್ದರಿಂದ ಚಿತ್ರದುರ್ಗ ಜಿಲ್ಲೆಯ ಹೊಸದುರ್ಗ ತಾಲೂಕಿನ ಜಾನಕಲ್ ಗ್ರಾಮದ ಸುತ್ತಮುತ್ತ ಜನರು ರಾಜಣ್ಣನವರ ತಾಯಿಯಾದ ಲಕ್ಷ್ಮಮ್ಮನವರನ್ನು ಗ್ರಾಮ ಪಂಚಾಯಿತಿ ಸದಸ್ಯತ್ವಕ್ಕೆ ಮತಹಾಕಿ ಗೆಲ್ಲಿಸಿದ್ದಾರೆ. ಈಗ ಇವರು ಸಮಾಜ ಸೇವೆಯಲ್ಲಿ ತೊಡಗಿದ್ದಾರೆ. ಈಗಲೂ ರಾಜಣ್ಣನವರು ತಮ್ಮ ಸಮುದಾಯಗಳಿಗಾಗಿ ಹೋರಾಟಗಳನ್ನು ಮುಂದುವರಿಸಿದ್ದಾರೆ.

**ಸಂಘಟನೆ:–** ಈ ಸಮುದಾಯಗಳು ಮೂರು ಸಂಘಟನೆಗಳು ಇದ್ದು ಈ ಸಂಘಟನೆಗಳು ಅಲೆಮಾರಿ ಸಮುದಾಯಗಳಲ್ಲಿನ ಸಮಸ್ಯೆಗಳು ಹಾಗೆ ಸಮುದಾಯದ ಕುಂದು ಕೊರತೆಗಳನ್ನು ನಿವಾರಿಸಲು ಕೆಳ ಸಮುದಾಯಗಳನ್ನು ಸಮಾಜದಲ್ಲಿ ದೂರವಾಗಿ ಅಲೆಮಾರಿಗಳಾಗಿ ಸರ್ಕಾರದ ವಿರುದ್ಧ ಹೋರಾಟ ಮಾಡಿ ಕತ್ತಲೆಯಲ್ಲಿ ಬದುಕುತ್ತಿರುವ ಈ ಸಮುದಾಯಗಳನ್ನು ಸಮಾಜದ ಬೆಳಕಿನ ಕಡೆಗೆ ಕರೆತಂದು ಅವರಿಗೂ ಸಮಾಜದಲ್ಲಿ ಬದುಕು ಕಟ್ಟಿಕೊಡುವುದಕ್ಕೆ ಸಹಾಯವಾಗುತ್ತದೆ. ಆದರೆ ಹಾಗೆ ಜೀವನ ಸಾಗಿಸುತ್ತಿದ್ದಾರೆ. ಇಂತಹ ಸ್ಥಿತಿಯಲ್ಲಿ ಈ ಸಮುದಾಯಗಳು ರಾಜಕೀಯ ಪ್ರವೇಶಿಸುವುದು ದೂರದ ಮಾತಾಗಿದೆ. ವರ್ತಮಾನದ ಪರಿವರ್ತನೆಯಲ್ಲಿ ಈ ಸಮುದಾಯಗಳು ಸಹ ಬದಲಾವಣೆಗಳಾಗಬೇಕು ತಮ್ಮ ಹಕ್ಕುಗಳನ್ನು ತಾವು ದಕ್ಕಿಸಿಕೊಳ್ಳಬೇಕು. ಶೈಕ್ಷಣಿಕತೆ ಆರ್ಥಿಕತೆಯಲ್ಲಿ ಮುಂದುವರೆಯ ಬೇಕಾದರೆ ಸಂಘಟನೆಗಳು ಸೇರಿ ಹೋರಾಟಗಳಲ್ಲಿ ಭಾಗವಹಿಸಿ ತಮ್ಮನ್ನು ಸಮಾಜದಲ್ಲಿ ತೊಡಗಿಸಿಕೊಳ್ಳಬೇಕಾಗುತ್ತದೆ.

**ಸರ್ಕಾರದ ಕೆಳಸಮುದಾಯಗಳ ಅಭಿವೃದ್ಧಿ ಮತ್ತು ಅನುದಾನಗಳು**

ಸರ್ಕಾರ ಎಂಬುವುದು ಎಲ್ಲರಿಗೂ ಸಮಾನವಾಗಿ ನೋಡುವ ಹಾಗೂ ಅತ್ಯಂತ ಬಡರೇಖೆಗಿಂತ ಕೆಳಗಿರುವ ಸಮುದಾಯಗಳನ್ನು ಹಾಗೂ ಸಮಾಜದಿಂದ ದೂರವಾಗಿ ಅರೆ ಅಲೆಮಾರಿಗಳಾಗಿ ಬದುಕುತ್ತಿರುವ ಸಮುದಾಯಗಳಿಗೆ ಪ್ರೋತ್ಸಾಹಿಸಿ ಅವರನ್ನು ಸಮಾಜದಲ್ಲಿ ಎಲ್ಲರಿಗೂ ಸಮಾನವಾಗಿ ಬದುಕು ಕಟ್ಟಿಕೊಡುವ ಒಂದು ವ್ಯವಸ್ಥೆಯಾಗಿದೆ. ಅಂತಹ ಸರ್ಕಾರವನ್ನೇ ಹಾಳುವ ರಾಜಕೀಯ ಪ್ರೇರಿತ ಅಧಿಕಾರಿಗಳು ಮೇಲ್ಮುಖವಾಗಿ ಅಭಿವೃದ್ಧಿ ಹೊಂದದೆ ತಮ್ಮ ಅಲೆಮಾರಿತನದಲ್ಲಿ ಉಳಿದಿರುವುದು ಶೋಚನೀಯವಾಗಿದೆ. ಬಂದ ಸರ್ಕಾರಗಳು ಹೆಚ್ಚು ಹೆಚ್ಚು ಅನುಧಾನಗಳು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟಪಂಗಡಗಳಿಗೆ ನೀಡಿದರು ಅವರ ಅಭಿವೃದ್ಧಿಗೆ

ಸಹಕರಿಸಿದರು ಮಧ್ಯವರ್ತಿಗಳಿಂದ ಈ ಸಮುದಾಯಗಳಿಗೆ ಯಾವುದೇ ಅನುದಾನ ಕೈಗೆಟುಕುತ್ತಿಲ್ಲ. ಕೋಲಾರದ ಭಾಗದಲ್ಲಿರುವ ದಕ್ಕಲ ಸಮುದಾಯಗಳು ಪರಿಶಿಷ್ಟಜಾತಿಯ ಪಟ್ಟಿಯಲ್ಲಿ ಸೇರಿದ್ದು ಪರಿಶಿಷ್ಟ ಜಾತಿಗಳ ಪಾಲಿಗೆ ಸರ್ಕಾರವು ಶೇ. ೧೮ರಷ್ಟು ಮೀಸಲಾತಿಯನ್ನು ಕಾನೂನುಬದ್ಧವಾಗಿ ದೊರಕದೆ ಇರುವುದು ತಿಳಿಯುತ್ತದೆ. ಜಾತಿ ಪ್ರಮಾಣ ಪತ್ರವು ದಕ್ಕಲರ ಜಾತಿ ಪ್ರಮಾಣಪತ್ರವಲ್ಲದೆ ಪರಿಶಿಷ್ಟ ಪಂಗಡ ಜಾತಿ ಪ್ರಮಾಣಪತ್ರ ಇರುವುದರಿಂದ ಈ ಸಮುದಾಯಗಳು ದಕ್ಕಲರಾಗಿ ಉಳಿದಿದ್ದಾರೆ ಹೊರತು ಯಾವುದೇ ಮೀಸಲಾತಿ ಸಿಗದೆ ಅನುಧಾನಗಳು ಸಂಘಟನೆಗಳಿಗೆ ಸಹಾಯವಾಗಿದೆ. ತಳಸಮುದಾಯಗಳ ಜನರನ್ನು ಸೇರಿಸಿ ಅವರಿಗೆ ತಮ್ಮ ಸಮುದಾಯಗಳ ಸಮಸ್ಯೆಯನ್ನು ತಿಳಿಸಿ ಸರ್ಕಾರದಿಂದ ನೀಡುವ ಅನುದಾನಗಳನ್ನು ಪಡೆಯುವುದಕ್ಕೆ ಅಧಿಕಾರಿಗಳು ನಡೆಸುತ್ತಿರುವ ದೌರ್ಜನ್ಯವನ್ನು ತಡೆದು ಸಿಗದೆ ಇರುವ ಅನುಧಾನಗಳನ್ನು ಪಡೆದುಕೊಳ್ಳುವ ರೀತಿ ಹೇಗೆ ಎಂದು ಜನರಿಗೆ ತಿಳುವಳಿಕೆ ಹೇಳಿ ಅವರನ್ನು ಸಂಘಟನೆಯಲ್ಲಿ ಭಾಗವಹಿಸುವಂತೆ ಮಾಡುವುದಾಗಿದೆ. ಅಧಿಕಾರಿಗಳು ತಮ್ಮ ಸ್ವಾರ್ಥಕ್ಕಾಗಿ ಬಳಸಿಕೊಳ್ಳುತ್ತಿರುವ ಅನುಧಾನವನ್ನು ತಮಗೆ ನೀಡಬೇಕು ಎಂದು ಸರ್ಕಾರದ ವಿರುದ್ಧ ನಡೆಸುವ ಹೋರಾಟವಾಗಿದೆ.

**ವಿಮುಕ್ತಿ ಬುಡುಕಟ್ಟುಗಳ ಒಕ್ಕೂಟ:-** ಮೊದಲ ಬಾರಿಗೆ ತಳಸಮುದಾಯಗಳಾದ ಅಲೆಮಾರಿಗಳು ಹಕ್ಕಿಪಿಕ್ಕಿ ಬುಡಕಟ್ಟು ಜನಾಂಗ ಬುಡಗ ಜನಾಂಗ ಮಾದಿಗರು ದಕ್ಕಲಿಗರು ಮಾಸ್ತೀಕರು ಸಿಂಧ್ ಮಾದಿಗರು ಇನ್ನು ಮುಂತಾದ ಸಮುದಾಯಗಳು ಸೇರಿಸಿ ವಿಮುಕ್ತಿ ಬುಡುಕಟ್ಟುಗಳ ಒಕ್ಕೂಟ ಎಂಬ ಸಂಘಟನೆಯನ್ನು ಮಾಡಿ ತಳಸಮುದಾಯಗಳ ಅಲೆಮಾರಿತನವನ್ನ ವಿಮುಕ್ತಿಗೊಳಿಸಿ, ಸಮಾಜದಲ್ಲಿ ಒಂದು ಕಡೆ ನೆಲೆನಿಂತು ತಮ್ಮ ಬದುಕನ್ನು ಕಟ್ಟಿಕೊಳ್ಳುವುದಕ್ಕೆ ಸಮುದಾಯಗಳ ಜನರು ಸಂಘಟನೆಯನ್ನು ಮಾಡಿದ್ದು. ಆದರೆ ಇದರಲ್ಲಿ ಕೆಲವು ವ್ಯಕ್ತಿಗಳು ತಮ್ಮ ಸ್ವಾರ್ಥಕ್ಕೆ ಬಳಸಿಕೊಂಡಿದ್ದರಿಂದ ಈ ಸಂಘಟನೆ ಹೆಚ್ಚುಕಾಲ ಉಳಿಯದೆ ವಿಭಾಗವಾಗಿ ತಮ್ಮ ತಮ್ಮ ಸಮುದಾಯಗಳು ಸಂಘಟನೆಯನ್ನು ಮಾಡಿಕೊಂಡಿದ್ದಾರೆ.

೧. ಅಲೆಮಾರಿ ಒಕ್ಕೂಟ ಸಂಘ.

೨. ಅಲೆಮಾರಿ ಮಹಾಸಭೆ ಸಂಘ.

ಹೀಗೆ ಈ ಎರಡು ಸಂಘಟನೆಗಳು ತಮ್ಮ ಸಮುದಾಯಗಳನ್ನು ಸಮಾಜದಲ್ಲಿ ಉನ್ನತ ಸ್ಥಾನಕ್ಕೆ ಏರಿಸುವ ಪ್ರಯತ್ನ ನಡೆಸುತ್ತಿದ್ದು ಆರ್ಥಿಕತೆ, ಶಿಕ್ಷಣ ಕೊರತೆಯಿಂದ ಸಂಘಟನೆಗಳಲ್ಲಿ ಭಾಗವಹಿಸುವುದಕ್ಕೆ ಹಿಂಜರಿಯುತ್ತಿದ್ದಾರೆ, ಬೌದ್ಧಿಕವಾಗಿ ಸಾಮಾಜಿಕ ಜ್ಞಾನ ಇಲ್ಲದೆ ಕೂಲಿ ಕೆಲಸಗಳನ್ನು ತೊಡಗಿಸಿಕೊಂಡ ಸಂಘಟನೆಗಳು ಭಾಗವಹಿಸದೆ ಇರುವುದು ತಿಳಿಯುತ್ತದೆ. ಈ ಸಮುದಾಯಗಳಿಗೆ ಶಿಕ್ಷಣ, ಉದ್ಯೋಗ ರಾಜಕೀಯಗಳಲ್ಲಿ ಮೀಸಲಾತಿ ಇದ್ದರು ಅದು ದಕ್ಕಲರಿಗೆ ದಕ್ಕದೆ ಯಾರೂ ಸಹ ಸರ್ಕಾರಿ ಉದ್ಯೋಗಸ್ಥನಾಗದೆ ಇರುವುದು ಕಂಡುಬರುತ್ತದೆ ಮತ್ತು

ಬ್ಯಾಂಕ್‌ಗಳನ್ನು ಬಂಡವಾಳವಾಗಿಸಿ ಮುಂದುವರಿದ ಸಮುದಾಯಗಳ ಪ್ರತಿ ಸ್ಪರ್ಧೆಗಳ ಮುಂದೆ ತಳ ಸಮುದಾಯಗಳು ಎದ್ದು ನಿಲ್ಲುವ ಪರಿಸ್ಥಿತಿ ಈ ಸಮುದಾಯಗಳಿಗೆ ಇಲ್ಲವಾಗಿದೆ.

೧೯೮೬ ರಾಷ್ಟ್ರೀಯ ಶಿಕ್ಷಣ ನೀತಿಯ ಚೌಕಟ್ಟಿನೊಳಗೆ ಎಲ್ಲರಿಗೂ ಸಮಾನ ಶಿಕ್ಷಣವನ್ನು ಕೊಡಬೇಕು ಎಂಬ ಅಂಶ ಸರ್ವ ಶಿಕ್ಷಣ ಅಭಿಯಾನದ ಅಡಿಯಲ್ಲಿದ್ದರೂ ದಕ್ಕಲ ಸಮುದಾಯಗಳು ಮಾತ್ರ ಶಿಕ್ಷಣದಿಂದ ದೂರ ಉಳಿದಿದ್ದಾರೆ. ಸರ್ಕಾರದಿಂದ ನೀಡಿದ ಮೀಸಲಾತಿಗಳ ಬಗ್ಗೆ ಯಾವುದೇ ಅರಿವು ಈ ಸಮುದಾಯಗಳಿಗೆ ಇಲ್ಲದೆ ಮೂಕ ಪ್ರೇಕ್ಷಕರಾಗಿದ್ದಾರೆ. ಈ ಸಮುದಾಯಗಳನ್ನು ಅಭಿವೃದ್ಧಿಗೊಳಿಸಲು ಸಮಾಜ ಕಲ್ಯಾಣ ಇಲಾಖೆ ಇದೆ. ಹಾಗೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ ಅನೇಕ ರೀತಿಯ ಕಲ್ಯಾಣ ಯೋಜನೆಗಳನ್ನು ಹೊರತಂದಿದೆ . ಅದರ ಅಡಿಯಲ್ಲಿ ಪ್ರತ್ಯೇಕ ಅಭಿವೃದ್ಧಿ ಇಲಾಖೆಯೂ ಸಹ ಕಾರ್ಯನಿರ್ವಹಿಸುತ್ತದೆ. ಇಷ್ಟು ಯೋಜನೆಗಳು ರೂಪಿತವಾಗಿದ್ದರು ಸಹ ಅಭಿವೃದ್ಧಿಯಿಂದ ದಕ್ಕಲ ಸಮುದಾಯಗಳು ದೂರ ಉಳಿದಿದ್ದಾರೆ. ರಾಜ್ಯ ಸರ್ಕಾರದ ಯೋಜನೆಗಳು ಅಲ್ಲದೆ ಕೇಂದ್ರ ಸರ್ಕಾರ ಸಹ ತಳಸಮುದಾಯ ಗಳಿಗೆ ಅನೇಕ ಯೋಜನೆಗಳು ತಂದರೂ ಪ್ರಯೋಜನವಿಲ್ಲವಾಗಿದೆ.

**ಸಮಾಜ ಕಲ್ಯಾಣ ಇಲಾಖೆ:-** ಪರಿಶಿಷ್ಟ ಜಾತಿ ಪರಿಶಿಷ್ಟ ಪಂಗಡಗಳ ಶೈಕ್ಷಣಿಕ ಅಭಿವೃದ್ಧಿಯನ್ನು ಹೆಚ್ಚಿಸುವುದಕ್ಕಾಗಿ ಈ ಸಮುದಾಯಗಳ ಮಕ್ಕಳಿಗೆ ಶಿಕ್ಷಣದ ಕಡೆ ಪ್ರೋತ್ಸಾಹಿಸುವುದಕ್ಕಾಗಿ ಸರ್ಕಾರ ಸಮಾಜ ಕಲ್ಯಾಣ ಇಲಾಖೆ ಯೋಜನೆಯನ್ನು ತಂದಿದ್ದು, ಇದರಡಿಯಲ್ಲಿ ಶಿಕ್ಷಣಕ್ಕೆ ಪ್ರೋತ್ಸಾಹಿಸಿ ವಿದ್ಯಾರ್ಥಿಗಳ ವಸತಿ ಶಾಲೆಗಳನ್ನು ನಿರ್ಮಿಸಿ ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳಿಗೆ ಉಚಿತ ವಸತಿ ಸೌಲಭ್ಯಗಳನ್ನು ಕಲ್ಪಿಸಿ ಅಲ್ಲಿ ಉಳಿದು ಶಿಕ್ಷಣ ಪಡೆಯುವುದಕ್ಕೆ ಅವಕಾಶ ನೀಡಿದೆ. ಈ ವಸತಿ ನಿಲಯಗಳಲ್ಲಿ ಉಚಿತ ಊಟ, ದೈನಂದಿನ ಬಳಸುವ ವಸ್ತುಗಳನ್ನು ಕೊಟ್ಟು ಮಕ್ಕಳ ಶಿಕ್ಷಣಕ್ಕೆ ಪ್ರೋತ್ಸಾಹ ನೀಡುತ್ತಿದೆ. ಅಷ್ಟೇ ಅಲ್ಲದೆ ಸ್ಕಾಲರ್ ಶಿಪ್ ಹಾಗೂ ವಸತಿ ನಿಲಯದಲ್ಲಿ ಪ್ರತ್ಯೇಕ ಶಿಕ್ಷಣ ನೀಡಲಾಗುತ್ತದೆ.

**ಗಂಗ ಕಲ್ಯಾಣ ಯೋಜನೆ:-** ಪರಿಶಿಷ್ಟ ಜಾತಿ ಪರಿಶಿಷ್ಟ ಪಂಗಡಗಳ ಭೂಮಿಯಿಂದ ನೀರಾವರಿ ಇಲ್ಲದೆ ಇದ್ದವರಿಗೆ ಬೋರ್‌ವೆಲ್ ವ್ಯವಸ್ಥೆ ಮಾಡಿಸಿ ವ್ಯವಸಾಯಕ್ಕೆ ಸಹಾಯ ಮಾಡುವುದು. ಈ ಯೋಜನೆಯ ಅಡಿಯಲ್ಲಿ ಯಾರಿಗೂ ಇದುವರೆವಿಗೂ ಬೋರ್‌ವೆಲ್ ಹಾಕಿಸಿಲ್ಲ. ಈ ಅನುದಾನವು ದಕ್ಕಲರ ಪಾಲಿಗೆ ದೂರವಾಗಿದೆ. ಚಿಂತಾಮಣಿಯ ಬಾಣಮರಿಯಲ್ಲಿ ದಕ್ಕಲ ಮುನಿಶಾಮಿ ಎಂಬುವರು ಸ್ವಂತ ದುಡಿದು ಎರಡು ಎಕರೆ ಜಮೀನು ಖರೀದಿಸಿ ಬೋರ್ ವೆಲ್ ಹಾಕಿಸಿದ್ದಾರೆ. ಆದರೆ ಸರ್ಕಾರದಿಂದ ಇವರಿಗೆ ಯಾವುದೇ ಅನುದಾನ ದೊರೆಯದೇ ಇರುವುದು ಅವರ ಹೇಳುವ ಮಾತಿನಲ್ಲಿ ಸ್ಪಷ್ಟವಾಗುತ್ತದೆ.

**ಅಂಬೇಡ್ಕರ್ ಅಭಿವೃದ್ಧಿ ನಿಗಮ:-** ಅಲೆಮಾರಿ ಸಮುದಾಯಗಳಿಗೆ ಜೀವನಕ್ಕಾಗಿ ಅಂಬೇಡ್ಕರ್ ಅಭಿವೃದ್ಧಿ ನಿಗಮದಿಂದ ಉಚಿತ ವಾಹನಗಳ ವಿತರಣೆಮಾಡಿದ್ದು ಆಗಸ್ಟ ೨೦೧೮ರಲ್ಲಿ ವಿಧಾನಸೌಧದ

ಬಳಿ ನಡೆದ ಅಲೆಮಾರಿ ಸಮುದಾಯಗಳ ಹಾಗೂ ಹಿಂದುಳಿದ ವರ್ಗಗಳ ಮಹಾಸಭೆಯಲ್ಲಿ ರಾಜ್ಯ ಸರ್ಕಾರ ಮಹತ್ವ ನಿರ್ಧಾರ ಕೈಗೊಂಡು, ಉಚಿತ ಸಬ್ಸಿಡಿಯಲ್ಲಿ ಕಾರು, ಟೆಂಪೋ ಟಾಟಾ ಎ.ಸಿ. ಕೊಟ್ಟಿದ್ದು ಇದರಿಂದ ದುಡಿದು ತಮ್ಮ ಜೀವನವನ್ನು ಸುಧಾರಿಕೊಳ್ಳಲು ಅವಕಾಶ ಮಾಡಿಕೊಟ್ಟಿದೆ. ಈ ಸೌಲಭ್ಯವು ಕೆಲವು ಸಮುದಾಯಗಳಿಗೆ ಮಾತ್ರ ದೊರೆತಿದ್ದು ಉಳಿದ ಸಮುದಾಯಗಳಿಗೆ ಸಿಕ್ಕಿರುವುದಿಲ್ಲ. ಕೋಲಾರ ಮತ್ತು ಚಿಕ್ಕಬಳ್ಳಾಪುರ ಕ್ಷೇತ್ರದ ದಕ್ಕಲ ಕುಟುಂಬಗಳಿಗೆ ಯಾವುದೇ ಅನುದಾನ ದೊರೆತಿಲ್ಲ. ಇದು ಸರ್ಕಾರದ ವಿಫಲ ಪ್ರಯತ್ನವಾಗಿದೆ. ಹಾಗೆ ೨೦೧೩ರಲ್ಲಿ ಮುಖ್ಯಮಂತ್ರಿಗಳಾದ ಸನ್ಮಾನ್ಯ ಸಿದ್ಧರಾಮಯ್ಯನವರ ಅಧಿಕಾರ ಅವಧಿಯಲ್ಲಿ ಕೆಲವು ಕುಟುಂಬಗಳ ಆಶ್ರಯ ಸಾಲ ಮನ್ನವಾಗಿರುವುದರಿಂದ ಅನುಕೂಲವಾಗಿದೆ. ಆದರೆ ಕೋಲಾರ ಪ್ರದೇಶದ ದಕ್ಕಲರ ಸಮುದಾಯಗಳಿಗೆ ಯಾವುದೇ ಸಾಲ ಮನ್ನವಾಗಿಲ್ಲ. ಈ ಸಮುದಾಯಗಳು ಯಾರು ಸಾಲದ ಹೊರೆಯಲ್ಲಿ ಬದುಕುತ್ತಿಲ್ಲ. ವೈಯಕ್ತಿಕ ಸಾಲ ಬಿಟ್ಟರೆ ಸರ್ಕಾರದ ಸಾಲಗಳು ಯಾವುದು ಪಡೆದಿಲ್ಲ.

**ಸಾಲದ ಯೋಜನೆಗಳು:-** ಈ ಯೋಜನೆಯ ಅಡಿಯಲ್ಲಿ ಕೆಲವರಿಗೆ ಮನೆಗಳಾಗಿದ್ದು ಅವರು ತಕ್ಕ ಮಟ್ಟಿಗೆ ಅನುಕೂಲತೆಯನ್ನು ಮಾಡಿಕೊಂಡಿದ್ದಾರೆ. ಇದರಿಂದ ಕೆಲವು ಸಮುದಾಯಗಳು ಆಸ್ಥಳದಲ್ಲೆ ನೆಲೆನಿಂತು ತಾವೆ ದುಡಿದು ಆಶ್ರಯಗಳನ್ನು ನಿರ್ಮಿಸಿಕೊಂಡಿದ್ದಾರೆ. ದೊಡ್ಡಬಳ್ಳಾಪುರ ಮತ್ತು ಶ್ರೀನಿವಾಸಪುರ ಪ್ರದೇಶಗಳಲ್ಲಿ ಮನೆಗಳು ಇಲ್ಲದೆ ಇಂದಿಗೂ ಗುಡಿಸಲುಗಳಲ್ಲಿ ಜೀವನ ಸಾಗಿಸುತಿದ್ದಾರೆ. ಶಿವನಾಪುರದ ಒಂದು ಕುಟುಂಬವಂತು ಇಂದಿಗೂ ಅಲೆಮಾರಿಯಾಗಿ ಜೀವನ ನಡೆಸುತ್ತಿದ್ದರೆ. ಶಿವನಾಪುರದದಲ್ಲಿ ನೆಲೆನಿಂತು ಜೀವಿಸುತ್ತಿದ್ದು ಆದರೆ ಜೀವನಾಧಾರದ ಸಮಸ್ಯೆಯಿಂದ ದೊಡ್ಡಬಳ್ಳಾಪುರದ ಕಡೆ ವಲಸೆ ಹೋಗಿ ನೆಲೆ ನಿಂತಿದ್ದಾರೆ. ಸರ್ಕಾರದಿಂದ ಎಷ್ಟೇ ಯೋಜನೆಗಳು ತಂದರೂ ಈ ಸಮುದಾಯಗಳಿಗೆ ದೊರಕದೆ ಅಲೆಮಾರಿಗಳಾಗಿ ಜೀವಿಸುವಂತಾಗಿದೆ. ಚಿಂತಾಮಣಿಯ ಬಾಣಮರಿಯಲ್ಲಿ ಸ್ವಲ್ಪಮಟ್ಟಿಗೆ ಸುಧಾರಿಸಿಕೊಂಡು ಸ್ವಂತ ಮನೆಗಳನ್ನು ನಿರ್ಮಿಸಿಕೊಂಡು ಜೀವನಕ್ಕೆ ಸ್ವಲ್ಪಮಟ್ಟಿಗೆ ಆಧಾರ ಕಲ್ಪಿಸಿಕೊಂಡಿದ್ದಾರೆ. ಹಾಗೆ ಸುಗಟೂರು ಮಾಧವ ಗುರ್ಜೇನಹಳ್ಳಿಯಲ್ಲಿ ಸಹ ಮನೆಗಳನ್ನು ನಿರ್ಮಿಸಿಕೊಂಡು ಜೀವಿಸುತ್ತಿದ್ದಾರೆ. ಸರ್ಕಾರ ಎಷ್ಟೇ ಶಿಸ್ತುಬದ್ಧ ಯೋಜನೆಗಳು ತಂದರೂ, ಹಿಂದುಳಿದ ಸಮುದಾಯದವರಿಗೆ ಹೊಗದೇ ಇರುವುದು ದುರಾದೃಷ್ಟವಾಗಿದೆ. ಆಶ್ರಯ ಯೋಜನೆಯ ಅಡಿಯ ಬ್ಯಾಂಕ್‌ಗಳಲ್ಲಿ ಸಾಲ ತೆಗೆದುಕೊಳ್ಳುವುದಕ್ಕೆ ಬ್ಯಾಂಕ್ ಖಾತೆ ತೆರೆಯಲು ಇವರ ಬಳಿ ಸರ್ಕಾರದ ಗುರುತಿನ ಚೀಟಿ ಸಹ ಇಲ್ಲ. ಇದಕ್ಕೆ ಕಾರಣ ಅಲೆಮಾರಿಗಳಾಗಿದ್ದು ಒಂದು ಕಡೆ ನೆಲೆ ನಿಲ್ಲದೆ ಊರಿಂದ ಊರಿಗೆ ಅಲೆಯುವುದೇ ಇದಕ್ಕೆ ಮೂಲ ಕಾರಣವಾಗಿದೆ. ಸರ್ಕಾರದ ಸ್ಕೀಂಗಳ ಸಮಯದಲ್ಲಿ ಆ ಪ್ರದೇಶಗಳಲ್ಲಿ ಇರುವುದಿಲ್ಲ. ಹಾಗೆಯೇ ಸ್ವಂತ ಮನೆ ಇಲ್ಲದೆ ಊರು ಇಲ್ಲದೆ ಕಾರಣ ಗುರುತಿನ ಚೀಟಿಗೆ ಸ್ಥಿರವಾದ ವಿಳಾಸವಿಲ್ಲ. ಹೀಗಾಗಿ ಗುರುತಿನ ಚೀಟಿ ತೆಗೆದುಕೊಳ್ಳುವುದಕ್ಕೆ ವಿಫಲವಾಗಿದ್ದು, ಇನ್ನು ಕೆಲವರು ಖಾಯಂ ಪ್ರದೇಶದಲ್ಲಿ ನೆಲೆ ನಿಂತಿದ್ದರು. ನಿವೇಶನಗಳು

ಇಲ್ಲದೇ ತಮ್ಮ ಜಾತಿ ಪ್ರಮಾಣಪತ್ರ ಇಲ್ಲದೆ ಯಾವುದೇ ರೀತಿಯಾದ ಗುರುತಿನ ಚೀಟಿ ತೆಗೆದುಕೊಳ್ಳುವುದಕ್ಕೆ ಗೊಂದಲವಾಗಿದೆ. ಸರ್ಕಾರದ ಗುರುತಿನ ಚೀಟಿಯು ಸಿಕ್ಕಿಲ್ಲ. ಸರ್ಕಾರದ ಗುರುತಿನ ಚೀಟಿ, ಆಧಾರ್‌ಕಾರ್ಡ್, ರೇಷನ್‌ಕಾರ್ಡ್, ಪಾನ್‌ಕಾರ್ಡ್, ಚುನಾವಣೆ ಗುರುತಿನ ಚೀಟಿ ಇವು ಕೆಲವರಿಗೆ ಅಷ್ಟೇ ಲಭ್ಯವಾಗಿವೆ. ಆಶ್ರಯ ಯೋಜನೆಗಾಗಿ ಬ್ಯಾಂಕ್‌ನಲ್ಲಿ ಸಾಲ ಪಡೆಯಲು ಅಡ ಇಡಲು ಯಾವ ಆಭರಣ ಜಮೀನುಗಳು ಇಲ್ಲ. ದೈಹಿಕವಾಗಿ ದುಡಿದು ಹಣ ಸಂಪಾದಿಸಿ ಜೀವಿಸಬೇಕಾದರೆ ಜಮೀನು ಆಶ್ರಯಗಳು ಎಲ್ಲಿಂದ ಬರುವುದಕ್ಕೆ ಸಾಧ್ಯವಾಗುತ್ತದೆ. ಅಸ್ಪತ್ರೆಗಳಲ್ಲಿ ಉಚಿತ ಚಿಕಿತ್ಸೆಗಾಗಿ ಯಶಸ್ವಿನಿ ಕಾರ್ಡ್ ಹೊಂದಿರುವವರಿಗೆ ಮಾತ್ರ ಉಚಿತ ಚಿಕಿತ್ಸೆ ದೊರೆಯುತ್ತದೆ. ಇದು ದಕ್ಕಲ ಸಮುದಾಯಗಳಿಗೆ ದೊರೆತಿಲ್ಲವಾಗಿದೆ.

ಹಿಂದುಳಿದ ಸಮುದಾಯಗಳಿಗೆ ಸರ್ಕಾರದ ಉದ್ಯೋಗ ಖಾತ್ರಿಯಲ್ಲಿ ಮೀಸಲಾತಿ ಇದ್ದರು ದಕ್ಕಲ ಸಮುದಾಯಗಳಲ್ಲಿ ಇದುವರಿಗೂ ಯಾರು ಸರ್ಕಾರಿ ಉದ್ಯೋಗಿಗಳಾಗಲಿಲ್ಲ. ಶೈಕ್ಷಣಿಕವಾಗಿ ತುಂಬಾ ಹಿಂದುಳಿದಿದ್ದು ಬೆರಳೆಣಿಕೆಯಷ್ಟು ವಿದ್ಯಾಭ್ಯಾಸ ಮಾಡಿದ್ದರು ಅವರಿಗೆ ಸರ್ಕಾರಿ ಕೆಲಸ ಸಿಕ್ಕಿಲ್ಲ. ದಕ್ಕಲರು ಸರ್ಕಾರಿ ಸೌಲಭ್ಯಗಳಿಂದ ದೂರವಿದ್ದಾರೆ. ಅಧಿಕಾರಿಗಳು ಸರ್ಕಾರಿ ಸೌಲಭ್ಯಗಳನ್ನು ಕಲ್ಪಿಸಿಕೊಡುವುದರಲ್ಲಿ ವಿಫಲರಾಗಿದ್ದಾರೆ. ಸರ್ಕಾರದ ಯೋಜನೆಗಳ ಬಗ್ಗೆ ಗೊತ್ತಿಲ್ಲದಿದ್ದರು ಅದರ ಬಗ್ಗೆ ಮಾರ್ಗದರ್ಶನ ಮಾಡಿಲ್ಲ. ಅಸ್ಪೃಶ್ಯರಲ್ಲೆ ಅಸ್ಪೃಶ್ಯರಾದ ದಕ್ಕಲರು ಇವರಿಗೆ ಪ್ರತ್ಯೇಕ ಸ್ಮಶಾನ ವ್ಯವಸ್ಥೆಯು ಇಲ್ಲವಾಗಿದೆ ಸರ್ಕಾರದಿಂದ ಪ್ರತ್ಯೇಕ ಸ್ಮಶಾನ ನೀಡಿಲ್ಲ. ಕೆಲವು ಕುಟುಂಬಗಳು ತಮ್ಮ ಸ್ವಂತ ಜಮೀನಿನಲ್ಲಿ ಶವವನ್ನು ದಹನ ಮಾಡಿದರೆ ಉಳಿದ ಕುಟುಂಬಗಳು ಶವವನ್ನು ಹಳ್ಳ-ಕೊಳ್ಳಗಳಲ್ಲಿ ಹೂಳುತ್ತಿದ್ದಾರೆ. ಇವರಿಗೆ ಪ್ರತ್ಯೇಕ ಶವಸಂಸ್ಕಾರ ಮಾಡುವ ಸ್ಥಳ ಈ ಸಮುದಾಯಗಳಲ್ಲಿ ಇಲ್ಲವಾಗಿದೆ.

ಇನ್ನು ಸರ್ಕಾರದಿಂದ ಸಿಗುವ ಗ್ಯಾಸ್ ಬಳಕೆದಾರರು ತುಂಬ ವಿರಳವಿದ್ದು, ಇಂದಿಗೂ ಸೌದೆಯನ್ನು ಬಳಸಿ ಅಡುಗೆ ಮಾಡುತ್ತಿದ್ದಾರೆ. ಗ್ಯಾಸ್‌ಗೆ ಕೊಡುವ ಹಣ ಇವರಲ್ಲಿ ಇಲ್ಲದೆ ಇರುವುದರಿಂದ ಹಾಗೂ ಸರಿಯಾದ ಗುರುತಿನ ಚೀಟಿಗಳು ಇಲ್ಲದೆ ಗ್ಯಾಸ್ ಸೌಲಭ್ಯ ಸಿಕ್ಕಿಲ್ಲವಾಗಿದೆ. ಶೌಚಾಲಯಕ್ಕೆ ಬಯಲು ಪ್ರದೇಶಗಳಲ್ಲಿ ಬಳಸುತ್ತಿದ್ದು, ಸರ್ಕಾರದಿಂದ ನೀಡಿದ ಶೌಚಾಲಯಗಳ ವ್ಯವಸ್ಥೆಯು ಇಲ್ಲದೆ ಇಂದಿಗೂ ಬಯಲು ಸೀಮೆಯೆ ಇವರ ಶೌಚಾಲಯಗಳಾಗಿವೆ. ಕೆಲವು ಕುಟುಂಬಗಳಲ್ಲಿ ಶೌಚಾಲಯದ ವ್ಯವಸ್ಥೆ ಮಾಡಿಕೊಂಡಿದ್ದಾರೆ. ಉಳಿದ ಕುಟುಂಬಗಳು ಬಯಲು ಪ್ರದೇಶಗಳನ್ನು ಆಶ್ರಯಿಸಿವೆ. ಒಟ್ಟಾರೆಯಾಗಿ ಸರ್ಕಾರದಿಂದ ಸಿಗುವ ಯಾವುದೇ ಸೌಲಭ್ಯಗಳು ಕನಿಷ್ಠ ಮಟ್ಟದಲ್ಲಿಯಾದರೂ ಈ ಸಮುದಾಯಗಳಿಗೆ ತಲುಪದೆ ಇರುವುದು ವಾಸ್ತವಾಂಶವಾಗಿದೆ. ಇನ್ನೂ ಮುಂದೆಯಾದರೂ ಸರ್ಕಾರ ಎಚ್ಚೆತ್ತುಕೊಂಡು ಈ ಸಮುದಾಯಗಳನ್ನು ಕಡೆಗಣಿಸದೆ ಅನುದಾನಗಳು ಯೋಜನೆಗಳು ತಲುಪುವಂತಾಗಲಿ. ಈ ಸಮುದಾಯಗಳು ಅಭಿವೃದ್ಧಿ ಪಥದತ್ತ ಸಾಗಲಿ ಎಂಬುದು ಈ ಅಧ್ಯಯನದ ಆಶಯವಾಗಿದೆ.

**ಕೊನೆ ಟಿಪ್ಪಣಿಗಳು**

೧. ಡಾ. ಕೆ. ಕೃಷ್ಣಪ್ಪ, **ದಕ್ಕಲಿಗ ಸಮುದಾಯ,** ಪು. ೬೪, ೯೦, ೯೧, ೧೦೧.

೨. ಲಕ್ಷ್ಮೀಪತಿ ಕೋಲಾರ, **ಮಾಸ್ತಿಕರ ಸಂಸ್ಕೃತಿ,** ಪು. ೨೪೦, ೨೪೧.

೩. ಡಾ. ಸ.ಚಿ. ರಮೇಶ್, **ಅಲೆಮಾರಿಗಳ ಸ್ಥಿತಿಗತಿಗಳು,** ಪು. ೮೦, ೮೭.

೪. ಕೋಟಿಗಾನಹಳ್ಳಿ ರಾಮಯ್ಯ, **ಸಿಂಧ್ ಮಾದಿಗರ ಸಂಸ್ಕೃತಿ,** ಪು. ೧೮೭, ೧೮೮.

೫. ಡಾ. ಚಲುವರಾಜು, **ದಕ್ಕಲಿಗ ಸಂಸ್ಕೃತಿ,** ಪು. ೧೨೧.

೬. ಜಾನಕಲ್ ರಾಜಣ್ಣ, **ದಕ್ಕಲಿಗ,** ಪು. ೧೪೨, ೧೪೩.

♦♦♦

ಅಧ್ಯಾಯ : ಏಳು

# ದಕ್ಕಲರ ಭಾಷಾ ಸಾಹಿತ್ಯ

ಅಧ್ಯಾಯ : ಏಳು

# ದಕ್ಕಲರ ಭಾಷಾ ಸಾಹಿತ್ಯ

## ೭.೧. ಭಾಷಾ ಸಾಹಿತ್ಯ

ಭಾಷಾ ಸಾಹಿತ್ಯ ಎಂಬುವುದು ಮಾಹಿತಿಯ ಸಂವಹನೆಗೆ ನಿರೂಪಿತವಾಗಿರುವ ಸಂಕೇತಗಳ ಪದ್ಧತಿ ಈ ಸಂಕೇತಗಳನ್ನು ಉಚ್ಚರಿತವಾಗಿರಬಹುದು, ಲಿಖಿತವಾಗಿರಬಹುದು ಅಥವಾ ಅಭಿನಿತವಾಗಿರಬಹುದು. ಭಾಷೆ ಮಾನವನ ಅನುಪಮ ಗುಣಗಳಲ್ಲಿ ಒಂದಾಗಿದೆ. ಭಾಷಾ ಸಾಹಿತ್ಯ ಎನ್ನುವುದು ಮಾನವನಿಗೆ ಮಾತ್ರ ಸಾಧಿಸಲ್ಪಡಬಹುದಾದ ಒಂದು ಸಂಕೀರ್ಣ ಸಂವಹನ ಮಾಧ್ಯಮವಾಗಿದೆ. ಹಾಗೆಯೇ ಜನಪದ ಸಾಹಿತ್ಯವು ಯಾವುದೇ ಒಂದು ಪ್ರದೇಶದ ಜನ ಸಮುದಾಯದಲ್ಲಿ ಅವರ ಜೀವನ ಪದ್ಧತಿ ಆಚರಣೆ, ನಂಬಿಕೆ ಸಂಪ್ರದಾಯಗಳೂ ಸೇರಿದಂತೆ ಇತರ ವಿಚಾರಗಳನ್ನು ಕುರಿತಾದ ಅಗಾಧವಾದ ಜ್ಞಾನವು ಮೌಖಿಕ ಪರಂಪರೆಯ ಮೂಲಕ ಒಂದು ತಲೆಮಾರಿನಿಂದ ಇನ್ನೊಂದು ತಲೆಮಾರಿಗೆ ಸಾಗಿ ಬಂದಿರುತ್ತದೆ. ಹೀಗೇ ಅದು ಸಾಗಿಬರಲು ಜನಪದ ಸಾಹಿತ್ಯವು ಒಂದು ಮಾಧ್ಯಮವಾಗಿದೆ.

ಬಾಲ ಬಾಯಿಯಲ್ಲಿ ಬ್ರಹ್ಮಾಂಡವು ಅಡಗಿರುವ ಹಾಗೆ ಜನಪದ ಸಾಹಿತ್ಯದ ಬಾಯಿಯಲ್ಲಿ ಬ್ರಹ್ಮಾಂಡವು ಅಡಗಿರುವ ಹಾಗೆ ಜನಪದ ಸಾಹಿತ್ಯದ ಬಾಯಿಯಲ್ಲಿ ಬ್ರಹ್ಮಾಂಡವು ತುಂಬಿಕೊಂಡಿರುವ ಅನಕ್ಷರಸ್ಥ ಸಮಾಜದ ಸಾಹಿತ್ಯವಾಗಿದೆ. ಸಮಾಜದ ಹಲವು ಸಮುದಾಯಗಳು ತಮ್ಮದೇ ಆದಂತಹ ಮೌಖಿಕ ಭಾಷೆಯನ್ನು ಹುಟ್ಟಿ ಹಾಕಿಕೊಂಡಿರುವ ಹಾಗೆ ಸಮಾಜದ ಅತ್ಯಂತ ಕಟ್ಟ ಕಡೆಯ ಸಮುದಾಯವಾದ ದಕ್ಕಲ ಸಮುದಾಯಗಳು ತಮ್ಮದೇ ಆದಂತಹ ಒಂದು ಭಾಷೆಯನ್ನು ಸೃಷ್ಟಿಸಿಕೊಂಡಿದ್ದಾರೆ. ಈ ಸಮುದಾಯಗಳ ಬದುಕನ್ನು ಹಾಡಾಗಿ ತಮ್ಮ ಪುರಾಣವನ್ನು ಬದುಕಿನ ಹಾಡನ್ನಾಗಿಸಿ ಜೀವನದ ನೋವು-ನಲಿವುಗಳನ್ನು ಆಚಾರ ವಿಚಾರಗಳನ್ನು ರೂಢಿ ಸಂಪ್ರದಾಯಗಳನ್ನು ಹಾಡಿನ ಮೂಲಕ ಸಮಾಜಕ್ಕೆ ವಿಶ್ಲೇಷಿಸುವ ಭಾಷಾ ಸಾಹಿತ್ಯದ ಅಂಶವಾಗಿದೆ. ಈ ಸಮುದಾಯಗಳ ಭಾಷೆಯನ್ನು "ಪಡುಗು" ಭಾಷೆ ಹಾಗೂ ಮರುಗು ಭಾಷೆ ಎಂದು ಕರೆದುಕೊಳ್ಳುತ್ತಾರೆ. ತೆಲುಗು ಮತ್ತು ಕನ್ನಡ ಭಾಷಾ ಪ್ರದೇಶದಲ್ಲಿರುವ ಮಾದಿಗ ಸಮುದಾಯಗಳು ಹಾಗೂ ದಕ್ಕಲರು ಪಡುಗು ಎಂಬ ಗುಪ್ತ

ಭಾಷೆಯನ್ನು ತಮ್ಮ ಸಮುದಾಯಗಳ ನಡುವೆ ಗುಟ್ಟಾಗಿ ಮಾತನಾಡಿಕೊಳ್ಳುತ್ತಾರೆ. ಹಾಗೂ ಇತರರೆದುರು ಗುಟ್ಟಾಗಿ ವ್ಯವಹರಿಸಬೇಕಾದಾಗ ಮತ್ತು ಕುಲ ಆಚರಣೆಗಳು ಮಾಡುವ ಸಂದರ್ಭದಲ್ಲಿ ಈ ಭಾಷೆಯನ್ನು ಉಪಯೋಗಿಸುತ್ತಾರೆ.

ದಕ್ಕಲ ಸಮುದಾಯಗಳಲ್ಲಿ ಮಾತನಾಡಿಕೊಳ್ಳುವ ಮರುಗು ಭಾಷೆ ಲಿಖಿತ ರೂಪ ಇಲ್ಲದೆ ಇದ್ದರು ಇತರರಿಗೆ ಅರ್ಥವಾಗದ ಹಾಗೆ ತಮ್ಮಲ್ಲೇ ವ್ಯವಹರಿಸಿಕೊಳ್ಳುವುದಕ್ಕೆ ಗುಪ್ತ ಭಾಷೆಯಾಗಿ ಬಳಸುತ್ತಾರೆ. ಇಂತಹ ಭಾಷೆಗಳು ಬುಡಕಟ್ಟು ಸಮುದಾಯಗಳಲ್ಲಿ ಹಾಗೂ ಅಲೆಮಾರಿ ಸಮುದಾಯಗಳಲ್ಲಿ ಕಾಣಬಹುದು ಇನ್ನು ಛೀಜಾಡು ಸಮುದಾಯದವರು ತಮ್ಮ ಭಾಷೆಯಲ್ಲಿ ಮರಾಠಿ ಭಾಷೆಯನ್ನು ಹೆಚ್ಚಾಗಿ ಮಾತನಾಡುತ್ತಾರೆ. ಇತ್ತಿಚಿನ ದಿನಗಳಲ್ಲಿ ಕನ್ನಡ ಭಾಷೆಗೆ ಒಗ್ಗಿಕೊಂಡು ಕನ್ನಡ ಭಾಷೆಯಲ್ಲಿ ವ್ಯವಹರಿಸುತ್ತಾ ಕನ್ನಡ ಭಾಷೆಯಲ್ಲಿ ಹಾಡುಗಳನ್ನು ಹಾಡುತ್ತಾರೆ. ದಕ್ಕಲರ ಮೂಲ ಭಾಷೆ ತೆಲುಗು ಭಾಷೆಯಾಗಿದ್ದು, ಇದಕ್ಕೆ ಹೆಚ್ಚು ಪ್ರಾಮುಖ್ಯತೆಗಳಲ್ಲಿ ಮಾತ್ರ ಬಳಸುತ್ತಾರೆ. ಅದಕ್ಕೆ ಹೆಚ್ಚಿನ ಆದ್ಯತೆ ನೀಡುವುದಿಲ್ಲ. ಗಂಗಾಭಾರತ, ಜಾಂಬವಪುರಾಣ, ಬುರ್ರ ಕಥೆಗಳು, ಕಿನ್ನರಿ ಹಾಡುಗಳು, ಸೋಬಾನೆ ಪದಗಳು, ಗಾದೆ, ಒಗಟುಗಳು ತೆಲುಗು ಭಾಷೆಯಲ್ಲಿ ಹೇಳುತ್ತಾರೆ. ಕಿನ್ನರಿ ಹಾಡುಗಳನ್ನು ತೆಲುಗು ಭಾಷೆಯಲ್ಲಿ ಹಾಡುತ್ತಾರೆ. ಈ ಸಮುದಾಯಗಳು ತೆಲುಗು ಭಾಷೆಗೆ ಹೆಚ್ಚು ಪ್ರಾಮುಖ್ಯತೆ ನೀಡುತ್ತಾ ಕನ್ನಡ ಭಾಷೆಗೂ ಹೊಂದಿಕೊಂಡು ಆಯಾ ಪರಿಸರಕ್ಕೆ ಅನುಗುಣವಾಗಿ ಕನ್ನಡ ಭಾಷೆಯಲ್ಲಿ ವ್ಯವಹರಿಸುತ್ತಿರುವುದು ಕ್ಷೇತ್ರಕಾರ್ಯದಲ್ಲಿ ಕಂಡುಬಂದಿದೆ. ಆದರೆ ಕುಲ ಸಂಬಂಧಿಗಳ ಜೊತೆ ಮಾತ್ರ ತೆಲುಗು ಭಾಷೆಯಲ್ಲಿ ವ್ಯವಹರಿಸುತ್ತಾರೆ.

ಕರ್ನಾಟಕದ ಗಡಿಭಾಗಗಳಲ್ಲಿ ವಾಸಿಸುವ ದಕ್ಕಲ ಸಮುದಾಯಗಳು ಆಯಾ ಪ್ರದೇಶಗಳಿಗೆ ತಕ್ಕಂತೆ ಆಯಾ ಭಾಷೆಯನ್ನು ಮಿಶ್ರಣ ಮಾಡಿಕೊಂಡು ವ್ಯವಹರಿಸುತ್ತಾರೆ. ತಮಿಳುನಾಡಿನ ಗಡಿಭಾಗದ ತಮಿಳು ಮಿಶ್ರಿತ ಭಾಷೆ ಮಹಾರಾಷ್ಟ್ರ ಗಡಿಭಾಗದಲ್ಲಿ ಮರಾಠಿ ಹಾಗೂ ಛೀಜಾಡು ಭಾಷೆಯನ್ನು ಆಂಧ್ರಪ್ರದೇಶದ ಗಡಿಭಾಗದ ತೆಲುಗು, ಭಾಷೆಯನ್ನು ಮಾತನಾಡುತ್ತಾ ತಮ್ಮ ಬದುಕನ್ನು ಸಾಗಿಸುತ್ತಿದ್ದಾರೆ. ಇತ್ತೀಚೆಗೆ ಕರ್ನಾಟಕದಲ್ಲಿ ವಾಸಿಸುವ ದಕ್ಕಲ ಸಮುದಾಯ ಕನ್ನಡ ಭಾಷೆಯನ್ನು ಬಳಸಿ ವ್ಯವಹರಿಸುತ್ತಿರುವುದು ಈ ಪ್ರದೇಶಗಳಲ್ಲಿ ಕಂಡು ಬರುತ್ತದೆ. ಸಾಮಾಜಿಕ ಬದಲಾವಣೆಯ ಗಾಳಿಯಲ್ಲಿ ಮರುಗು ಭಾಷೆ ತರಗೆಲೆಯಾಗಿ ತೂರಿಕೊಂಡು ಹೋಗುತ್ತಿದೆ ಎಂಬ ಭಾವನೆ ಮೂಡುತ್ತದೆ. ಈ ಸಮುದಾಯಗಳ ಗುಪ್ತ ಭಾಷೆ ಧಾರ್ಮಿಕ ಆಚರಣೆಗಳಿಗೆ ಕಟ್ಟುನಿಟ್ಟಾಗಿ ಸೀಮಿತಗೊಳಿಸಿ ಮರೆಯಲ್ಲಿಯೇ ಉಳಿಸಿಕೊಂಡಿರುವ ಸಾಧ್ಯತೆಗಳು ಇರಬಹುದು ಹಾಗಾದಾಗ ದಕ್ಕಲರ ಗುಪ್ತ ಭಾಷೆಯ ಬೆಳವಣಿಗೆಯೇ ನಿಂತುಹೋಗಿ ಅಕ್ಷರಶಃ ಅದು ನಶಿಸಿ ಹೋಗಿರಬಹುದಾಗಿತ್ತು. ಬಹುಶ ಈ ರಹಸ್ಯ ಭಾಷೆಯನ್ನು ಕನಿಷ್ಠ ತಮ್ಮ ಸಮುದಾಯಗಳ ಒಳಗೆ ಆಡು ಭಾಷೆಯನ್ನಾಗಿ ಪ್ರಯೋಗಿಸುತ್ತ ಪರಿಸರದಲ್ಲಿನ ಇತರೆ ಭಾಷೆಗಳೊಂದಿಗೆ ಪದಗಳು ಕೂಡುಕೊಳ್ಳುವಿಕೆಯ ಜೀವಂತವಾಗಿ ಸಂಬಂಧವನ್ನು ಬೆಸೆಯುವ ಪ್ರಯತ್ನಿಸಬಹುದಾಗಿತ್ತೇನೋ?

ತಳ ಸಮುದಾಯಗಳಾದ ಮಾದಿಗ ಮಾಸ್ತಿಕ ಹಾಗೂ ದಕ್ಕಲ ಸಮುದಾಯಗಳ ಗುಪ್ತ ಭಾಷೆಯ ಮಾತು ನಿಜವಾಗಿದಂತಿದೆ. ಧಾರ್ಮಿಕ ಭಾಷೆಯೊಂದನ್ನು ಸಾಮಾಜಿಕ ಭಾಷೆಯಾಗಿಸಿರುವ ಪ್ರಯೋಗಶೀಲತೆ ದಕ್ಕಲ ಸಮುದಾಯಗಳಲ್ಲಿ ಕಂಡುಬರುತ್ತದೆ.[೧]

ಅಲೆಮಾರಿಗಳಾಗಿದ್ದ ದಕ್ಕಲರಿಗೆ ಭಾಷಾ ಭೂಗೋಳದ ಎಲ್ಲೆಗಳನ್ನು ಗುರುತಿಸುವುದು ಕೂಡ ಕರಾರುವಕ್ಕಾಗಿ ಸಾಧ್ಯವಿಲ್ಲದ ಕೆಲಸ. ಇವರದು ಮೂಲತಃ ಆಂಧ್ರಪ್ರದೇಶವಾದ್ದರಿಂದ ತೆಲುಗು ಹೆಚ್ಚಾಗಿ ಮಾತನಾಡುತ್ತಾರೆ. ಉಳಿದ ಕನ್ನಡ ಮತ್ತು ತಮಿಳು ಮರಾಠಿ ಪಿಗಾಡು ಭಾಷೆಗಳ ಅಲೆಮಾರಿತನದಿಂದ ತಮ್ಮ ಜೀವನಕ್ಕೆ ಕಲಿಯಬೇಕಾದ ಸ್ಥಿತಿ ಒದಗಿದೆ. ಪದೇ ಪದೇ ಭಾಷಾ ಭೌಗೋಳಿಕ ಗಡಿಗಳ ಉಲ್ಲಂಘನೆ ಆಗುತ್ತಲೇ ಬಂದಿದೆ. ಈ ಸಮುದಾಯಗಳ ಮರುಗು ಭಾಷೆಯ ಪದಗಳಿಂದ ಕನ್ನಡ ಮತ್ತು ತೆಲುಗು ಭಾಷೆಗಳಿಗೆ ಪದಗಳು ಹರಿದು ಬಂದಿರುವುದು ತೀರಾ ಅಪರೂಪವೆಂದೆ ಹೇಳಬಹುದು. ಬದಲಾಗಿ ತಮ್ಮ ಪರಿಸರದಲ್ಲಿನ ಬಹುಮುಖ್ಯ ಭಾಷೆಗಳಾದ ಕನ್ನಡ ಮತ್ತು ತೆಲುಗು ಭಾಷೆಗಳಿಂದಲೇ ಪಡುಗು ಭಾಷೆ ದಕ್ಕಿಸಿಕೊಂಡಿದೆ ಎಂಬ ಭಾವನೆ ಮೂಡುತ್ತದೆ. ಇಲ್ಲಿ ಕೆಲವು ಪದಗಳ ಸಾಮ್ಯತೆಯನ್ನು ನೋಡಬಹುದು ಉದಾ:- "ಕೈಪು"ಮರುಗು ಪದವಾದರೆ "ತಿನು" ತೆಲುಗು ಪದವಾಗಿದೆ ಇದನ್ನು ಕನ್ನಡಲ್ಲಿ "ತಿನ್ನು" ಎಂದು ಉಚ್ಚರಿಸುತ್ತೇವೆ. ಈ ಪದಗಳನ್ನು ಗಮನಿಸಿದಾಗ ತೆಲುಗು ಮತ್ತು ಕನ್ನಡ ಪದಗಳ ನಡುವೆ ಪರಸ್ಪರ ಸಾಮ್ಯತೆ ಇದೆ. ಇವು ತೀರಾ ಹತ್ತಿರವಾಗುತ್ತಿದೆ. ಅದರೆ ಮರುಗು ಪದವಾದ ಕೈಪು ಎಂಬ ಪದ ಭಾಷೆಗಳ ನಡುವೆ ಸಾಮ್ಯತೆ ಇಲ್ಲದೆ ಇದ್ದರು ಇವರು ಮಾತನಾಡಿಕೊಳ್ಳುವ ಕೆಲವು ಪದಗಳು ಇವುಗಳ ನಡುವೆ ಸಾಮ್ಯತೆ ಹೊಂದಬಹುದು. ಇಂತಹ ಹಲವು ಪದಗಳು ಈ ಕೆಳಗಿನ ಕೋಷ್ಟಕದಲ್ಲಿ ಕಾಣಬಹುದು.

**೭.೨. ದಕ್ಕಲರ ಭಾಷೆ ಪದಗಳ ತುಲನಾತ್ಮಕ ವಿವರ**

| ಮರುಗು | ತೆಲುಗು | ಕನ್ನಡ |
|---|---|---|
| ಕೈಪು | ತಿನು | ತಿನ್ನು |
| ಕವಟ | ಸಾರಾಯಿ | ಮದ್ಯಪಾನ |
| ನಾಶಾಲು | ಮಟನ್ | ಮಾಂಸ |
| ಕರವಲೋಳು | ಊರಿನಜನರು | ಊರುಜನರು |
| ಶಾರಮ್ | ಆಡಮನಿಷಿ | ಸ್ತ್ರೀ |
| ಸಾವಗಡು | ಮಗೋಡು | ಪುರುಷ |
| ಬಡಶಮು | ಹಾವು | ಹಸು |

| ನಲಬಡಶಮು | ಎನಾಲು | ಎಮ್ಮೆಗಳು |
|---|---|---|
| ಮಿಡ್ರಿಗಮು | ಗೋರ್ರ | ಕುರಿ |
| ಗೇಡ ಕೈಪೆವಾಡು | ಅಡುಕುತಿನೆವಾಡು | ಭಿಕ್ಷೆ ಬೇಡುವವನು |
| ನಾಸ್ತಿಗಾಡು | ದಕ್ಕಲೋಡು | ದಕ್ಕಲಿಗ |
| ಸಾಧಿಚಿರಿ | ವಚ್ಚಿರಿ | ಬಂದರು |
| ಹಿಕರಗಾಳು | ಪೋಲಿಸೋಳು | ಪೋಲಿಸರು |
| ಮಂಗರಗಾಳು | ಮಾದಿಗೋಳು | ಮಾದಿಗರು |
| ಸುರಂಗಾಳು | ತೂರುಕೋಳೂ | ಮುಸ್ಲಿಂ |
| ಕಿನೀಗಾಳು | ಮಾಲೋಳು | ಪೋಲಿಯರು |
| ಮಂಡಿಗ್ಯಾಲು | ಪಂದಲು | ಹಂದಿಗಳು |
| ನಡುವಲು | ಗಾಡದಲು | ಕತ್ತೆಗಳು |
| ಕೊಕ್ಕಡಿಗಂ | ಕೊಳ್ಳು | ಕೋಳಿ |
| ನಾಗನ್‌ನಬ್ಬು | ಉರುಕೆಲುಂಡು | ಸುನ್ನಮಿರು |
| ಅರ್ಲಕುಂಡ | ತಲಿಲೆದು | ತಿಳಿಯದಂತೆ |
| ನಚ್ಚೆಪಟ್ಟು | ಬಚ್ಚಿಡು | ಮುಚ್ಚಿಡು |
| ಕರವ | ಇಲ್ಲು | ಮನೆ |
| ಪಾಣ್ಯಾಲು | ನಿಳ್ಳು | ನೀರು |
| ಕೈಕ | ಕುಕ್ಕ | ನಾಯಿ |
| ನೆಟ್ಟಳಗಾಳು | ಕಾಪೋಳು | ವಕ್ಕಲಿಗರು |
| ಗೋಚಕಮು | ಗುರಮು | ಕುದುರೆ |
| ಲಿವುಡು | ಚಿನ್ನೋಡು | ಹುಡುಗ |
| ನಲ್ಲಮಸ್ಸೆ | ಮುದ್ದ | ಮುದ್ದೆ |
| ಚತ್ತಮು | ಚೇನು | ಹೊಲಗದ್ದೆ |
| ಸೊನ್ನಿಸಾದಿಯ | ಪೋಯಿರಾ | ಹೋಗಿ ಬಾ |

| ಸಿರುಗ | ಓಲ್ಲಿ | ಬೆಕ್ಕು |
| --- | --- | --- |
| ನೆಟ್ಟಿನೇಲು | ಬೊಟ್ಟನೇಲು | ಹೆಬ್ಬೆರಳು |
| ಕಿಂದಿ ಅಸ್ಸಾಲು | ಕಾಲುವಳ್ಳು | ಕಾಲ್ಬೆರಳು |
| ಅಂದಾಲು | ಕಂಡ್ಲು | ಕಣ್ಣುಗಳು |
| ದೇವಕಂ | ದೇವುಡು | ದೇವರು |

| ದಕ್ಕಲರ ಮರುಗ ಭಾಷೆ | ಸಿಂದ್ ಮಾದಿಗರ ಮರುಗ ಭಾಷೆ | ಮಾಸ್ತೀಕರ ತಾಂಬ್ರಾಭಾಷೆ | ತೆಲುಗು | ಕನ್ನಡ |
| --- | --- | --- | --- | --- |
| ಕೈಪು | ಕಯಿಪು | ಪೆಡಮು, ಪಡವು | ತಿನು | ತಿನ್ನು |
| ಕವಟ | ಕವಟ, ಗಂಧಿಮು | ತೆಲಿಪೀಸು | ಸಾರಾಯಿ | ಮದ್ಯಪಾನ |
| ಕೈಕ | ಜಲಾಲು | ಸೀತಾಲು | ನೀಳ್ಳು | ನೀರು |
| ಬಡಶಮು | ಬಡಿಸಮು/ಜಾರ ಬಡಿತಿಮು | ನಡವ | ಎನುಮು | ಎಮ್ಮೆ |
| ತಸ್ಸು | ಏಡಿ | ಪಡ್ಲು | ನಂಜರ | ಮಾಂಸ |
| ದೇವಕಂ | ಪೂಜಿಪಾಯಿತಮು | ದೇವುಗಲು | ದೇವುಡು | ದೇವರು |
| ಅಂದಾಲು | ಮಣಕಾಯಿಕಾಲು | ನೈನಾಲು | ಕನ್ನುಲು | ಕಣ್ಣುಗಳು |
| ಗಡದು | ಕತ್ತಾಲಿಕೆ | ಕತ್ತಲಾವತ್ತು | ರಾತ್ರಿ | ರಾತ್ರಿ |
| ಬಾಡಿಕೆ | ಪಲ್ಲಿ | ಪಲ್ಲಿ | ಸ್ಯಾರು | ಸಾರು |
| ಮಿಟಂ | ನಿಮಾಯಿತಾಮು | ಉಪಾಮಂದು | ಉಪ್ಪು | ಉಪ್ಪು |
| ಪೊರಕ | ಕೊಡಪ | ವಾಗಡಮು | ಪೊರಕ | ಪೊರಕೆ |
| ಶ್ಯಾಪಾಲು | ಜಲಪಾಯಿತಾಲು | ಜಲಕುಪ್ಪಲು | ಶ್ಯಾಪಲು | ಮೀನುಗಳು |
| ಕಿಚಕಮು | ಕಾಶಿಕಮು | ಕಾತಾಗಡಮು | ದಯಿಮು | ದೆವ್ವ |
| ಎಂಗಿಲು/ ತುಪರಮು | ಊಗುರುಮಿ | ಉಗಿಲಿ | ಎಂಗಿಲಿ | ಉಗುಳು |
| ತೆಲುಪು | ಶೀಲಾಲು | ಜಿಲ್ಲೀಲು | ಪಾಲು | ಹಾಲು |
| ತೀಪಾ | ತೀಪಾಯಿತಮು | ತೀಪಾಗಡಂ | ಬೆಲ್ಲಮು | ಬೆಲ್ಲ |

| ವಾಗಡ | ಪಚ್ಚಾಯಿ | ತಪಲ | ತಮಲಪಾಕು | ವೀಳ್ಯದೆಲೆ |
|---|---|---|---|---|
| ಪುಲುಗರಕಂ | ಪುಲುಪಾಯಿತಮು | ಪುಲೆಮಂತಪಿಚ್ಚೆ | ಚಿಂತಪಂಡು | ಹುಣಸೆಹಣ್ಣು |
| ಕಶಿಶಿಪೈನಾಡು | ಬಿದ್ದಪೊಯ್ಸಿಂಡಾಡು | ಬಿದ್ದಾಕಿನಾಡು | ಪೀನಿಗ | ಹೆಣ |
| ನಾವಕಾಲಮದುಗ | ಮರಿಸ್ತಾರು | ಬೊಗುಲುಸೆದ್ದು | ಪಾಟ | ಹಾಡು |
| ಕರಿಪಿಲಿ | ಪೀಗಿರಿಲಿ | ಬೊಗಲಾಕು | ಕೂತ | ಕೂಗು |
| ವಾಗಡಲು | ಮಾತಕಲಾಡು | ಬಾಯಿ | ಮಾಟಲು | ಮಾತುಕತೆ |
| ಮಟ್ಟಿ | ಕೊಡಿಮೆ | ಮಟಕಿ | ಮಟ್ಟ | ಮಣ್ಣು |
| ಟೋರಸಿಮು | ಜಲಾಲುವಾಯಿತಮು | ಮೋರಿ | ಬಿಂದಾಗಿ | ಬಿಂದಿಗೆ |
| ಮುದುಕಿಶರಮ | ಮುದಕಮೆಂಟಿಮು | ಮುತ್ತುಕಿದಿ | ಮುಸಲಿದಿ | ಮುದುಕಿ |
| ಯರಪು | ನೆಟ್ಲುವಾಯಿತಮು | ವೊತ್ತು | ಬಂಗಾರು | ಬಂಗಾರ |
| ನೆಟಂದಿ | ನಬ್ಬಿಂದಿ | ಇದ್ದಿಂದಿ | ವುಂದಿ | ಇದೆ |
| ರಕ್ತಡ | ಕತ್ತಾಲಿಕೆ | ಕತ್ತಲಾವತ್ತು | ರಾತ್ರಿ | ರಾತ್ರಿ |
| ಸಿಟ್ಲತಾವುಡು | ಸಿಟ್ಲೇದಿ | ಸಿಗಶ್ಯಾರು | ನವ್ವ | ನಗು |
| ಮುದುಕಶಾಗಡ | ಮುತಕವುರು | ಮುತಿಕೊಡು | ಮುದುಕ | ಮುದುಕ |
| ನರಜೀವಿತಾಲು | ಸುದ್ದಾನೆ | ಅಕ್ಕೀಲು | ಭೀಮು | ಅಕ್ಕಿ |

ಹೀಗೆ ಲಿಪಿಯಿರದ ಮರುಗು ಭಾಷೆಯ ಪದಗಳನ್ನು ದೈನಂದಿನ ಬದುಕಿನ ಭಾಷೆಗಳಾಗಿ ಬಳಸುತ್ತಾರೆ. ಇವರು ಬಳಸುವ ಮರುಗು ಭಾಷೆಯ ಪದಗಳ ತೆಲುಗು ಮತ್ತು ಕನ್ನಡ ಭಾಷೆಯ ಪದಗಳಲ್ಲಿ ಕೆಲವೊಂದು ಭಾರಿ ಮಿಶ್ರಣ ಮಾಡುವುದುಂಟು. ಹೀಗೆ ಮಾಸ್ತೀಕರ ತಾಂಬ್ರಾ ಭಾಷೆ ಪದಗಳು ಮತ್ತು ದಕ್ಕಲಿಗರ ಮರುಗು ಭಾಷೆ ತದನಂತರ ತೆಲುಗು ಕನ್ನಡ ಭಾಷೆ ಪದಗಳ ನಡುವೆ ಎಷ್ಟು ಸಾಮ್ಯ ಇದೆ ಎಂಬುವುದು ಈ ಕೆಳಗಿನ ಪದಗಳ ಮೂಲಕ ತಿಳಿಯಬಹುದು.[೨]

| **ಮರುಗು** | **ತಾಂಬ್ರಾ** | **ತೆಲುಗು** | **ಕನ್ನಡ** |
|---|---|---|---|
| ಪಾಣ್ಯಾಲು | ಸೀತಾಲು | ನಿಳ್ಳು | ನೀರು |
| ಕವಟ | ತೆಲಿಪೀಸು | ಸಾರಾಯಿ | ಮದ್ಯಪಾನ |
| ಕರ್ವ | ಕರ್ವ | ಇಲ್ಲು | ಮನೆ |

| ಕೈಕ | ಕೈಕ | ಕುಕ್ಕ | ನಾಯಿ |
|---|---|---|---|
| ಬಡಶಮು | ನಡವ | ಎನುಮು | ಎಮ್ಮೆ |
| ತಸ್ಸು (ನಾಶಾಲು) | ವಡ್ಲು | ನಂಜರ | ಮಾಂಸ |
| ದೇವಕಂ | ದೇವುಗಲು | ದೇವುಡು | ದೇವರು |
| ಅಂದಾಲು | ನಯನಾಲು | ಕಂಡ್ಲು | ಕಣ್ಣುಗಳು |

ಮೇಲಿನ ಮರುಗು ಮತ್ತು ತಾಂಬ್ರಾ ಭಾಷೆಯ ಪದಗಳನ್ನು ಗಮನಿಸಿದಾಗ ಮರುಗು ಭಾಷೆಗಿಂತ ತಾಂಬ್ರಾ ಭಾಷೆ ತೆಲುಗು ಮತ್ತು ಕನ್ನಡ ಭಾಷೆಗೆ ಹೋಲುತ್ತವೆಂದೆನಿಸುತ್ತದೆ. ತಾಂಬ್ರಾ ಭಾಷೆಯ ಪದಗಳು ಕನ್ನಡದ ಪದಗಳೊಂದಿಗೆ ಪರಿಶೀಲಿಸಬಹುದೆನಿಸುತ್ತದೆ. ಉದಾ:- ನಯನಾಲು ಎಂಬ ಪದ ಕನ್ನಡದ ನಯನಗಳು ಪರ್ಯಾಯ ಪದದೊಂದಿಗೆ ಹೊಂದಿಕೊಳ್ಳುತ್ತದೆ. ಮಟಕಿ ಎಂಬ ಪದ ಮಣ್ಣು ಎಂಬ ಪದದೊಂದಿಗೆ ಸಮೀಪವಾಗುತ್ತಿದೆ. ಹಾಗೆ ಜಲಂ ಎಂಬ ಪದ ಜಲ ಪದದ ಪರ್ಯಾಯ ಪದವಾಗಿ ಪರಿಗಣಿಸಲಾಗುತ್ತದೆ. ಹೀಗೆ ಕೆಲವು ಪದಗಳು ಕನ್ನಡ ಪದದ ಪರ್ಯಾಯ ಪದಗಳನ್ನು ತಾಂಬ್ರಾ ಭಾಷೆಯಾಗಿ ಉಚ್ಚರಿಸುತ್ತಿದ್ದಾರೆ ಎಂದು ಭಾಸವಾಗುತ್ತದೆ.

ಬುಡಕಟ್ಟು ಹಾಗೂ ಅಲೆಮಾರಿ ಸಮುದಾಯಗಳಿಗೆ ಅವರದೇ ಆದ ಒಂದು ಮೂಲ ಸ್ಥಳವಿರುವಂತೆ ಅವರದೆ ಆದ ಮೂಲ ಭಾಷೆ ಅವರೆ ಸೃಷ್ಟಿಸಿಕೊಂಡಿರುವುದು ತಿಳಿಯುತ್ತದೆ. ಆದರೆ ಈ ಪ್ರದೇಶದ ದಕ್ಕಲ ಸಮುದಾಯಗಳಲ್ಲಿ ಮರುಗು ಭಾಷೆ ಲೆಕ್ಕಕ್ಕೆ ಇಲ್ಲ, ಇತ್ತೀಚೆಗೆ ಉಪಯೋಗಿಸುತ್ತಿಲ್ಲ. ಈ ಭಾಷೆ ಮರೆತ್ತಿದ್ದೇವೆ ಎಂದು ದಕ್ಕಲ ನಾರಾಯಣಸ್ವಾಮಿ ಮತ್ತು ಆಂಜಿನಮ್ಮ ಹೇಳುತ್ತಾರೆ. ನಾವು ಅಲೆಮಾರಿಗಳಾಗಿ ಒಂದು ಈ ಪ್ರದೇಶಗಳಲ್ಲಿ ವಾಸಿಸುತ್ತ ಈ ವಾತಾವರಣಕ್ಕೆ ಹೊಂದಿಕೊಂಡು ಇಲ್ಲಿನ ಭಾಷೆಯನ್ನು ಮಾತನಾಡುತ್ತೇವೆ. ನಮ್ಮ ಮರುಗು ಭಾಷೆ ನಾವು ಲೆಕ್ಕಕ್ಕೆ ಇಟ್ಟುಕೊಂಡಿಲ್ಲ. ನಾವು ಮಾತನಾಡುವುದು ಇಲ್ಲ. ಇತ್ತೀಚಿನ ಹುಡುಗರಿಗೆ ಅದರ ಅರಿವು ಇಲ್ಲ, ಮರುಗು ಭಾಷೆಯ ಒಂದು ಪದವು ಗೊತ್ತಿಲ್ಲ. ಅವರಿಗೆ ಅದರ ಬಗ್ಗೆ ಹೇಳಿದರು ಅರ್ಥವಾಗುವುದಿಲ್ಲ. ನಮ್ಮ ಮತ್ತು ಹಿರಿಯರ ಕಾಲಕ್ಕೆ ಹೋಯಿತು ಎಂದು ಹೇಳುತ್ತಾರೆ. ಈ ಸಮುದಾಯಗಳು ಹೇಳುವ ಮಾಹಿತಿಯನ್ನು ಗಮನಿಸಿದಾಗ ಪಡುಗು ಭಾಷೆ ಇವರ ಮೂಲ ಅಥವಾ ತಾಯಿ ಭಾಷೆಯೆಂದು ಕರೆಯುವುದಕ್ಕೆ ಸಾಧ್ಯವಿಲ್ಲ. ದಕ್ಕಲಿಗ ಜನಾಂಗದೊಂದಿಗೆ ಹುಟ್ಟಿಕೊಂಡ ಭಾಷೆಗಳು ಇವಲ್ಲ ಎಂದು ಸಂಶಯ ಮೂಡುತ್ತದೆ. ಕಾಲಾಂತರದಲ್ಲಿ ರೂಪಿಸಿಕೊಂಡಿರಬಹುದಾದ ಅದರ ಮೂಲ ಭಾಷೆಗಿಂತ ಕೊಂಚ ಭಿನ್ನವಾದ ಉಪಭಾಷೆಯಂತಿದೆ. ದಕ್ಕಲರ ಬದುಕು ಅವರ ಸಾಂಸ್ಕೃತಿಕ ಪುರಾಣಗಳ ಸಾಹಿತ್ಯವಲ್ಲ. ತೆಲುಗು ಪುರಾಣವಾಗಿದ್ದು ಪಡುಗು ಭಾಷೆಯಲಿಲ್ಲದಿರುವುದನ್ನು ಗಮನಿಸಬಹುದು. ಈ ಗುಪ್ತ ಭಾಷೆ ಅವರ ಸಾಹಿತ್ಯದಷ್ಟು ಪ್ರಾಚೀನವು ಅಲ್ಲ ಹಾಗೂ ಮೂಲವಲ್ಲವೆಂಬ ಅಂಶ ಸ್ಪಷ್ಟವಾಗುತ್ತದೆ.

**ಸಾಹಿತ್ಯದ ಸಾಂಸ್ಕೃತಿಕ ನೆಲಗಳ ವಿಶ್ಲೇಷಣೆ**

ದಕ್ಕಲರ ಜಾನಪದ ಸಾಹಿತ್ಯದ ಮೂಲ ಪುರುಷರಂತೆ ಹಾಗೂ ಪ್ರಾಚೀನ ಭಾವಬಿತ್ತಿಗಳಲ್ಲಿ ಮತ್ತು ಪುರಾಣ ದಂತಲೋಕದ ಪ್ರತಿಬಿಂಬಗಳ ನಡುವೆ ಓಡುತ್ತಾ ಬದುಕುವ ಜಾನಪದ ಕನಸುಗಾರರು ದಕ್ಕಲಗರು ಇವರ ಪುರಾಣ ಸಾಹಿತ್ಯ ಈ ಸಮುದಾಯಗಳ ಮೂಲ ಪುರಾಣ ನೈಸರ್ಗಿಕವಾದ ಅಥವಾ ಸಾಂಸ್ಕೃತಿಕವಾದೊಂದು ವಿಶ್ವಾಸ ದಕ್ಕಲರ ದಂತ ಕಾವ್ಯ ಕಥನಗಳಲ್ಲಿ ಇದುವರೆವಿಗೂ ಪಡೆಯುತ್ತಲೇ ಬಂದಿದೆ. ದಕ್ಕಲರ ಜಾನಪದೀಯ ಪುರಾಣಗಳು ಸ್ಥಳೀಯ ಮೂಲದ ಸೃಷ್ಟಿಗಳಾದರೂ ಅವುಪುರಾಣದ ಕಲಾತ್ಮಕ ಶಕ್ತಿಗಳನ್ನು ಪಡೆದುಕೊಂಡಿದೆ. ವಿಶ್ವದ ಎಲ್ಲಾ ಆದಿಮ ಸಂಸ್ಕೃತಿಗಳ ಈ ಬಗೆಯ ಜಾನಪದೀಯ ಪುರಾಣಗಳ ಬಹುಮುಖ್ಯ ಲಕ್ಷ್ಮಣವೆಂದರೆ ಕುರಿತು ಸಾಮಾನ್ಯವಾದ ಮತ್ತೊಂದನ್ನು ಆಡಬಹುದೆನಿಸುತ್ತದೆ. ಶಿಷ್ಟಪುರಾಣಗಳ ಶ್ರೇಷ್ಠತೆಯ ಪರಿಕಲ್ಪನೆಯೊಂದನ್ನು ಆಯಾ ಸ್ಥಳೀಯ ಜಾನಪದೀಯ ಪುರಾಣಗಳನ್ನು ವಿಡಂಬಿಸುವ ನೆಲಹೀನವಾಗಿಸುವ ಅಪಮೌಲ್ಯಗೊಳಿಸುವಂತಹ ಅಂಶವಾಗಿದೆ.

ವಿಶಿಷ್ಟ ಸಂಸ್ಕೃತಿ ಪರಂಪರೆಯನ್ನು ದಕ್ಕಲ ಸಮುದಾಯಗಳು ತಮ್ಮ ಪಡುಗು ಭಾಷೆಯನ್ನು ಬಿಟ್ಟು ತೆಲುಗು ಹಾಗೂ ಕನ್ನಡದಲ್ಲಿ ಪುರಾಣಗಳ ಕಥೆಗಳನ್ನು ಕಿನ್ನರಿ ಹಾಡುಗಳನ್ನು ಹಾಡುತ್ತಾರೆ. ಭಾರತದ ಮೂಲ ಪುರಾಣಗಳಾದ ರಾಮಾಯಣ, ಮಹಾಭಾರತ, ಪುರಾಣಗಳಷ್ಟೆ ಶ್ರೇಷ್ಠತೆಯನ್ನು ದಕ್ಕಲರಿಗೆ ಜಾಂಬಪುರಾಣದ ಗಂಗಭಾರತ ಶ್ರೇಷ್ಠ ಪುರಾಣವೆನಿಸಿಕೊಂಡಿದೆ. ಸಮಾಜದ ಎಷ್ಟೆಲ್ಲಾ ಪುರಾಣಗಳು ಇದ್ದರು ಜಾಂಬವ ಪುರಾಣ ಗಂಗಭಾರತವೆ ಶ್ರೇಷ್ಠ ಎಂಬ ಸತ್ಯ ಈ ಸಮುದಾಯಗಳಲ್ಲಿ ಅಡಗಿಕೊಂಡಿದೆ. ಭಾರತದ ಇನ್ನಿತರ ಭಾಗಗಳಲ್ಲಿನ ಜಾನಪದ ಪುರಾಣಗಳ ಅಂತಃಸ್ಮರಣೀಯ ಮತ್ತು ದಕ್ಕಲರ ಪುರಾಣಗಳ ಅಂತಃಸ್ಮರಣಿಯೂ ಒಂದೇ ಆಗಿರಬಹುದು. ಜಾನಪದ ವಿಶ್ವದ ಇಂಥ ಒಳ ವಿನ್ಯಾಸ ಒಟ್ಟಾರೆಯಾಗಿ ಮನುಕುಲಕ್ಕೆ ದೊರೆತಿರುವ ಬಹುದೊಡ್ಡ ಸಾಂಸ್ಕೃತಿಕ ಕೊಡುಗೆಯಾಗಿದೆ. ಗಂಗಭಾರತದ ಮೂಲ ಪುರಾಣದಲ್ಲಿ ವಿಶ್ವ ಸೃಷ್ಟಿಯ ಕಲ್ಪನೆಯಿಂದ ಪ್ರಾರಂಭವಾಗಿ ದಕ್ಕಲರ ಹುಟ್ಟಿನ ವಿಧಿ ವಿಧಾನಗಳು ಈ ಪುರಾಣಗಳು ಮುಗ್ಧ ಮನಸ್ಸು ಹರಿದಾಡುತ್ತದೆ. ಭಾರತದ ಆದಿ ಮೂಲಕ ಸಂಸ್ಕೃತಿಗಳ ವಿಸ್ತೃತವಾದ ತೌಲನಿಕ ಅಧ್ಯಯನ ನಡೆಯಬೇಕಾಗಿದೆ.

ಇಂತಹ ಸಾಂಸ್ಕೃತಿಕ ನೆಲೆಗಳನ್ನು ಹೊಂದಿರುವ ದಕ್ಕಲರು ತಮ್ಮ ಮೂಲ ಪುರಾಣ ವನ್ನು ತೆಲುಗು ಭಾಷೆಯಲ್ಲಿ ರಾತ್ರಿಯಿಡಿ ಹಾಡುತ್ತಾರೆ. ಜೋಂಕಿಣೀ ಮುನಿಯಪ್ಪ ಜೋಂಕಿಣೀಯನ್ನು ಕೈಗೆ ಎತ್ತಿಕೊಂಡು ಗಂಗಭಾರತದ ಇಡೀ ಕಥೆಯನ್ನು ರಾತ್ರಿಯಿಡಿ ಹಾಡಿ ಅರ್ಥೈಸುತ್ತಿದ್ದರು. ಇವರು ಹಾಡುವಾಗ ಒಂದು ಪದವು ಮರುಗು ಭಾಷೆಯ ಪದಗಳು ಬಳಸುತ್ತಿರಲಿಲ್ಲ ಎಲ್ಲಾ ತೆಲುಗು ಭಾಷೆಯಲ್ಲೇ ಹೇಳುತ್ತಿದ್ದರು. ಇದರಲ್ಲಿ ಬರುವ ವಿಶ್ವ ಸೃಷ್ಟಿ ಅರುಂಧತಿ ಕಲ್ಯಾಣ, ಪಾರ್ವತಿ ಕಲ್ಯಾಣ, ಜಾಂಬವಂತನ ಸೃಷ್ಟಿ ದಕ್ಕಲರ ಹುಟ್ಟಿನ ಕಥೆ ತಂಗಡಿ ಗಿಡದ ದ್ಯಾವರಕ್ಕೆ

ಸಂಬಂಧಿಸಿದಂತಿರುವ ಪುರಾಣ ದಕ್ಕಲರು ಮಾಸ್ಟೀಕರು ಸಿಂಧ್, ಮಾದಿಗರೆಲ್ಲರ ಮೂಲ ಪುರಾಣವಿದ್ದಂತಿದೆ. ದಕ್ಕಲರು ಈ ಪುರಾಣವನ್ನು ಗಂಗಭಾರತವೆಂಬ ಗೇಯ ಕಥೆಯನ್ನಾಗಿಸಿ ರಾತ್ರಿಯಿಡಿ ಹಾಡುತ್ತಿದ್ದರು. ಇದರಲ್ಲಿ ಬರುವ ಸನ್ನಿವೇಷಗಳ ಅಲ್ಪಸ್ವಲ್ಪ ಬದಾವಣೆಗಳೊಂದಿಗೆ ಚೌಂಕಿಣಿ (ಚೌಡಿಕೆ) ನುಡಿಸುತ್ತ ಚೌಂಕಿಣಿ ಮುನಿಯಪ್ಪ ಹಾಡುತ್ತಿದ್ದರು. ಇಂತಹ ಜಾನಪದ ಪುರಾಣ ಮನುಕುಲಕ್ಕೆ ದೊರೆತಿರುವ ಬಹುದೊಡ್ಡ ಸಾಂಸ್ಕೃತಿಕ ಕೊಡುಗೆಯಾಗಿದೆ.

**೭.೩. ಗಂಗಾಭಾರತ ಪುರಾಣದ ವಿಶ್ಲೇಷಣೆ**

ಭಾಷಾ ಸಾಹಿತ್ಯದಲ್ಲಿ ಹಲವು ಪುರಾಣಗಳಿಗಿಂತ ತಳಸಮುದಾಯಗಳಲ್ಲಿ ಸಮಾಜದ ಕಟ್ಟ ಕಡೆಯದು ದಕ್ಕಲ ಸಮುದಾಯ. ಈ ಸಮುದಾಯಗಳು ಎಲ್ಲಾ ಪುರಾಣಗಳಿಗಿಂತ ತಮ್ಮದೇ ಆದಂತಹ ಗಂಗಭಾರತವು ಹಲವು ಪುರಾಣಗಳೊಂದಿಗೆ ಹೋಲಿಕೆ ಮಾಡಿ ತಮ್ಮ ಪುರಾಣವೇ ಶ್ರೇಷ್ಠ ಎಂಬ ಭಾವನೆ ಈ ಸಮುದಾಯಗಳಲ್ಲಿದೆ. ಜಾಂಬವಂತ ಪುರಾಣವನ್ನು ಗಂಗಾಭಾರತ ಎಂಬ ಹೆಸರಿನ ಮುಖಾಂತರ ನಾವು ಹಾಡುತ್ತೇವೆ ಎಂಬ ಮಾತು ದಕ್ಕಲರದ್ದು. ಹಾಗೆ ಈ ಪುರಾಣ ಕಥೆಗಳಲ್ಲಿ ತುಂಬಾ ಮುಖ್ಯವಾದ ಅಂಶ ವಿಶಿಷ್ಟ ಸೃಷ್ಟಿಯ ಕಥೆಯೇ ಈ ವಿಶ್ವದ ಸೃಷ್ಟಿಗೆ ಒಂದು ಸಣ್ಣ ಪದಾರ್ಥ ಅಥವಾ ನವಿಲಿನ ಮೊಟ್ಟೆ, ಇದು ನವಿಲಿನ ಮೊಟ್ಟೆಯಾಗಿದ್ದು, ಇದರಿಂದ ಹುಟ್ಟಿದ ಜಗತ್ತು ಸೌಂದರ್ಯಾದ್ಭುತಗಳ ಅಪೂರ್ವ ಸೃಷ್ಟಿಯಾಗಿದೆಯೆಂಬ ಅಂಶ ಮನದಟ್ಟು ಮಾಡುತ್ತಾ. ನೀರಾಕಾರವಾದ ಜಗತ್ತು ಜಲಮಯವಾದ ಭೂಮಿ ಇವುಗಳನ್ನು ಒಂದು ಆಕಾರ ರೂಪವಾಗಿಸಿ ಈ ನವಿಲುಗಳೇ ಒಂದು ಶಂಖುವಿನಲ್ಲಿ ಹುಟ್ಟಿ ಈ ಶಂಖು ಜಲಮೂಲದ್ದೆಂಬ ಅಂತಿಮ ಜ್ಞಾನ ನೀಡುತ್ತ ಅತ್ಯದ್ಭುತವಾದ ಜಗತ್ತಿನ ಸೃಷ್ಟಿ ರಹಸ್ಯವನ್ನು ತುಂಬಾ ಸರಳವಾಗಿ ಹೇಳುವ ಈ ಪುರಾಣ ಕಥೆಯು ಬಹುಮುಖ್ಯ ಪಾತ್ರವಾಗಿದೆ. ದಕ್ಕಲಿಗರ ಪುರಾಣ ಕಥೆಗಳು ಸಾಂಸ್ಕೃತಿಕ ಲೋಕವೊಂದರ ಪರಿಚಯವನ್ನು ಸಮಾಜಕ್ಕೆ ನೀಡುವುದರ ಮುಖಾಂತರ ಜಲಮಯವಾದ ಭೂಮಿಯು ಹೆಪ್ಪುಮುನಿಯ ರಕ್ತತಾಕಿ ಸಮುದ್ರ ಹೆಪ್ಪುಗಟ್ಟಿ ಭೂಮಿಕಾಣಿಸಿಕೊಂಡಿದ್ದು, ಅವರ ಸಾಮಾಜಿಕ ನೆಲೆಗಳಾದ ಪ್ರೇರಣೆ ಪಡೆದಂತಿದೆ. ಜಾಂಬವಂತ ಭೂಮಿಯನ್ನು ಕಾಣಲು ತನ್ನಮಗನನ್ನ ಬಲಿಕೊಟ್ಟು ಆ ಮಗನ ನೆತ್ತರು ಬೆರತ ಭೂಮಿ ಗಟ್ಟಿಯಾಗಿದೆ ಎಂಬ ನಂಬಿಕೆ ಈ ಗಟ್ಟಿಯಾದ ಭೂಮಿಯಿಂದ ಇಂದು ಇಡೀ ವಿಶ್ವವೇ ಬದುಕುತ್ತಿದೆ ಎಂಬ ಆಶಾ ಭಾವನೆ ಈ ಸಮುದಾಯಗಳ ಮುಖಗಳಲ್ಲಿ ಕಾಣಿಸುತ್ತಿದೆ. ಇದನ್ನು ಗಮನಿಸಿದಾಗ ಭೂಮಿಯೊಂದಿಗಿನ ಈ ಸಮುದಾಯಗಳ ಸಂಬಂಧಗಳು ಆದಿಮ ಸಂಸ್ಕೃತಿಯ ಬಹುಮುಖ್ಯ ಲಕ್ಷಣವಾಗಿರುವಂತ ಸಹಜ ಸಾಂಸ್ಕೃತಿಕ ನಿಲುವಾಗಿ ಕಾಣಿಸುತ್ತದೆ.

ಈ ಪುರಾಣ ಕಥೆಯು ಕೇವಲ ದಕ್ಕಲ ಸಮುದಾಯಗಳು ಅಲ್ಲದೆ ಮಾದಿಗರ ಉಪಕುಲಗಳಾದ ಮಾಸ್ಟೀಕರು, ಸಿಂದ್, ಮಾದಿಗರು ಸಹ ಜಾಂಬಪುರಾಣ ಹೇಳುತ್ತಾರೆ. ಅಲ್ಪಸ್ವಲ್ಪ ಬದಲಾವಣೆ ಗಳೊಂದಿಗೆ ಕಥೆಯನ್ನು ಹೇಳುತ್ತಾರೆ. ಈ ಮೂರು ಜನರು ಜಾಂಬಕುಲದ ಮೂಲಸ್ಥರೂ

ಮಾದಿಗರ ಮನೆಮಕ್ಕಳಾದರಿಂದ ಈ ಪುರಾಣಗಳ ಈ ಮೂರು ಸಮುದಾಯಗಳ ಜನರಿಗೂ ಸಂಬಂಧಿಸುವುದರಿಂದ ಇವರ ಮೂಲ ಸಾಂಸ್ಕೃತಿಕನೆಲೆ ಒಂದೆ ಎಂಬುದನ್ನು ತಿಳಿಯಬಹುದಾಗಿದೆ. ಈ ಪುರಾಣಗಳಲ್ಲಿ ಬರುವ ಶಿವ-ಪಾರ್ವತಿಯರ ಮದುವೆಯಲ್ಲಿ ಎದುರಾಗುವ ಸಮಸ್ಯೆ ಈ ಸಮಸ್ಯೆಯ ಪರಿಹಾರಕ್ಕೆ ಆದಿಜಾಂಬವಂತ ತಾತನ ಬಳಿ ಪರಿಹಾರ ಕಂಡುಕೊಳ್ಳುವ ಅಂಶವಾಗಿರಬಹುದು ನಂತರ ಮಾದಿಗರು ಆಚರಿಸುವ ತಂಗಡಿ ಗಿಡದ ದ್ಯಾವರು ಆಚರಣೆ ಮತ್ತು ವಿಶ್ವಕರ್ಮನಿಗೂ ಮಾದಿಗ ಮತ್ತು ಉಪಕುಲಗಳಿಗೂ ಇರುವ ಸಂಬಂಧವಿರುವುದು ಹೇಳುವ ಈ ಸಾಲುಗಳು

ಕಾದುಕೂಡದಂಟಾರು ಖಾಯಾನಿಕೊಸ್ತಾರು
ಕಂಚೀಲೋ ಉಂದನ್ನ ಶಾಸನವು।
ಕಂಚೀಲೋ ಶಾಸನ ಮಂತಂಗಾ ಸೇದಿವೀನಾ।
ಪಂಚಾಲ ಗುರುವುಲಕಿ ಬಿಡ್ಡಾಲು ಮೇಮು॥

ಇದರಲ್ಲಿ ಸೂಚಿಸುವ ಅಂಶ ಸಲ್ಲಕೂಡದೆಂದು ಸತ್ಯಕ್ಕೆ ಒಮ್ದರೆ ಕಂಚೀಲೋ ಇದೆಯಣ್ಣ ಶಾಸನವು ಕಂಚೀಲಿ ಶಾಸನವೆಷ್ಟಾದರೂ ಓದಿದರು ಪಂಚಾಲ ಗುರುಗಳಿಗೆ ಮಕ್ಕಳು ನಾವು ಎಂದು ಈ ಸಮುದಾಯಗಳು ಶಾಸನ ಹೇಳುತ್ತಿದೆ. ಹೀಗೆ ಶಿವ ಪಾರ್ವತಿಯ ಮದುವೆಗಾಗಿ ತನ್ನ ಮಗನನ್ನು ಬಲಿಕೊಟ್ಟು, ಆ ಮಗುವಿನ ದೇಹದ ಭಾಗಗಳನ್ನು ಆಭರಣ ಮಾಡುವುದಕ್ಕೆ ವಿಶ್ವಕರ್ಮನಿಗೆ ನೀಡುವ ಭಾಗ ಬೇಲಿಯಾಚೆ ಎಸೆದ ಪಟ್ಟಕ್ಕೆ ದೇವರುಗಳಿಂದ ಮತ್ತೆ ಜೀವ ಪಡೆದರೂ ನನ್ನ ಮಗನಲ್ಲಿ ಎಂದು ಆದಿಜಾಂಬವಂತ ಅವರ ಪೋಷಣೆಯ ಹೊಣೆಯನ್ನು ವಿಶ್ವಕರ್ಮನಿಗೆ ವಹಿಸುವಂತೆ ದೇವರುಗಳಿಗೆ ಹೇಳುತ್ತಾ ವಿಶ್ವಕರ್ಮ ಕೆಲವುಕಾಲ ಪೋಷಿಸ್ ನಂತರ ತನಗೆ ಪೋಷಿಸುವುದು ಸಾಧ್ಯವಾಗದೆ ಜಾಂಬವಂತನಿಗೆ ಹಿಂತಿರುಗಿಸುತ್ತಾನೆ. ಆಗ ಆದಿ ಜಾಂಬವಂತ ದಕ್ಕೆಯಲ್ಲಿ ಹುಟ್ಟಿದ ಮಗುವನ್ನು ಮನೆಯೊಳಗೆ ಸೇರಿಸದೆ ಬೆಲಿಯಾಚೆ ಇರಿಸಿ ಊಟದ ಹೊತ್ತಿಗೆ ಭಿಕ್ಷೆಯನ್ನು ಹಾಕಿ ಇನ್ನು ಮುಂದೆ ಮಾದಿಗರ ಕೇರಿಗಳಲ್ಲಿ ಭಿಕ್ಷೆಯನ್ನು ಬೇಡುತ್ತ ದಕ್ಕಲ ಮಗು ಜೀವನ ಸಾಗಿಸಬೇಕು ಎಂದು ಹೇಳುತ್ತಾನೆ. ಅಕ್ಕಸಾಲಿಗಳ ಗುರುವಾದ ವಿಶ್ವಕರ್ಮದ ಮಗನಾಗಿಯೂ ಅನಂತರದಲ್ಲಿ ತನ್ನ ಜನಕನಾದ ಆದಿಜಾಂಬವಂತನೆ ಒಳಗೊಂಡ ಯಾರಿಗೂ ದಕ್ಕದೆ ಇಂದಿಗೂ ದಕ್ಕಲನಾಗಿಯ ಉಳಿದಿರುವುದು ಈ ಪುರಾಣದ ಮೂಲಕ ತಿಳಿಯುತ್ತದೆ. ಹೀಗೆ ಈ ಸಮುದಾಯಗಳ ದಕ್ಕಲರು ಮಾಸ್ಪೀಕರು ಸಿಂದ್ ಮಾದಿಗರ ಸಾಹಿತ್ಯ ಮತ್ತು ಸಾಂಸ್ಕೃತಿಗಳ ನೆಲೆಗಳನ್ನು ಸಹ ಭಿನ್ನವಾಗಿ ಗುರುತಿಸಲಿಕ್ಕಾಗದಂತೆ ಎಲ್ಲವನ್ನೂ ಒಂದು ಸಾಂಸ್ಕೃತಿಕ ಲೋಕದೃಷ್ಟಿಯಲ್ಲಿ ನೋಡಬಹುದು ಎಂಬ ಅಂಶ ಇವರ ಪುರಾಣಗಳ ಮುಖಾಂತರ ನೋಡಲು ಸಾಧ್ಯವಾಗಿದೆ.

ಹೀಗೆ ದಕ್ಕಲರಪುರಾಣಗಳು ಅವರ ಸಾಂಸ್ಕೃತಿಕ ಕೇಂದ್ರ ನೆಲೆಯಲ್ಲಿ ನಿಂತು ಮಾತನಾಡುವ ಇವರ ಮೌಖಿಕ ಸಾಹಿತ್ಯಪುರಾಣಗಳ ನಡುವೆ ಕಾಲವನ್ನು ಬಿಟ್ಟರೆ ಬೇರೆ ದಾರಿ ಈ ಸಮುದಾಯಗಳಿಗೆ ಇಲ್ಲವಾಗಿದೆ. ಈ ಪುರಾಣಗಳನ್ನು ಹೇಳುವುದಕಷ್ಟೇ ಸೀಮಿತವಾಗಿದೆ ಹೊರತು ಅದನ್ನು ಅರ್ಥೈಸಿ ಅವರಿಗೆ ಯಾವುದೇ ಬದುಕು ಕಟ್ಟಿಕೊಡುವುದಕ್ಕೆ ಸಾಧ್ಯವಾಗದಾಗಿದೆ. ನಾಗರೀಕ ಪ್ರಪಂಚದ ಕನಿಷ್ಠ ಸೌಲಭ್ಯಗಳನ್ನು ನೀಡದೇ ದಕ್ಕಲರನ್ನು ಅವರ ಮೂಲಕ ಸಂಸ್ಕೃತಿಯ ನೆಲೆಯಿಂದ ಪಲ್ಲಟಗೊಳಿಸಿ ಅನುಕರಣಶೀಲ ಪ್ರವೃತ್ತಿಗೆ ಸುಲಭವಾಗಿ ದೂಡ್ಡಬಲ್ಲದು. ಇವರ ಪುರಾಣಗಳು ಅವರ ನೆತ್ತರ ನೆನಪಿನಲ್ಲಷ್ಟೆ ಬದುಕುಳಿಯಬೇಕಾಗಿದೆ ಹೊರತು ಅದರಿಂದ ಈ ಸಮುದಾಯಗಳಿಗೆ ಯಾವುದು ಅನುಕೂಲತೆಗಳು ಸಾಧ್ಯವಾಗುತ್ತಿಲ್ಲ. ಇದು ಸಹ ಕೆಲವು ತಲೆಮಾರುಗಳ ತನಕ ಮಾತ್ರ ಬದುಕಿ ಉಳಿಯುವುದಕ್ಕೆ ಸಾಧ್ಯ. ಯುವ ಜನತೆಗೆ ಅದರ ಅರಿವು ಇಲ್ಲದೆ ಆದಿ ಮೂಲಕದ ಶಾಖವನ್ನು ಉಳಿಸಿಕೊಂಡು ಆರ್ಥಿಕವಾದ, ಸಾಮಾಜಿಕವಾದ ಸ್ಥಿರತೆಯನ್ನು ಒಟ್ಟಿಗೆ ಸಾಧಿಸುವುದು ಹೇಗೆ ಸಾಧ್ಯ ಸಾಮಾಜಿಕ ಸಾಂಸ್ಕೃತಿಕ ಸವಾಲು ಮಾತ್ರ ಪ್ರತಿಯೊಬ್ಬ ವ್ಯಕ್ತಿಯ ಮುಂದೆ ಎಂದು ನಿಲ್ಲುತ್ತದೆ.

### ೭.೪. ದಕ್ಕಲರ ಜಾನಪದ

ಜಾನಪದ ಸಾಹಿತ್ಯ ತಳ ಸಮುದಾಯಗಳಲ್ಲಿ ಒಂದು ಸಾಂಸ್ಕೃತಿಕ ಪ್ರತೀಕವಾಗಿದೆ. ಈ ಸಮುದಾಯಗಳು ಜಾನಪದ ಸಾಂಸ್ಕೃತಿಕ ಒಂದು ಪ್ರತ್ಯೇಕ ಸ್ಥಾನವನ್ನು ನೀಡಿದ್ದಾರೆ. ಅಷ್ಟೇ ಅಲ್ಲದೆ ತಮ್ಮ ಪುರಾಣಗಳಿಗೆ ಎಷ್ಟು ಮಹತ್ವವನ್ನು ನೀಡುತ್ತಾರೋ ಅಷ್ಟೇ ಮಹತ್ವವನ್ನು ಜಾನಪದಕ್ಕೂ ನೀಡುತ್ತಾರೆ ಎಂಬುವುದಕ್ಕೆ ಮಾಡುವ ಆಚರಣೆಗಳು, ನಂಬಿಕೆಗಳು ಅವರ ಸಂಸ್ಕೃತಿಯ ಚಟುವಟಿಕೆಗಳನ್ನು ಗಮನಿಸಿದರೆ ತಿಳಿಯುತ್ತದೆ. ಹಾಗೆ ದಕ್ಕಲ ಸಮುದಾಯಗಳು ಜಾನಪದದ ಬಗ್ಗೆ ಹೆಚ್ಚು ಗೌರವವನ್ನು ಹೊಂದಿರುವುದು ಅವರ ಮಾತಿನಲ್ಲಿ ಹಾಗೂ ಅವರು ಹೇಳುವ ಪುರಾಣದ ಮೂಲಕವೇ ತಿಳಿಯುತ್ತದೆ. ಈ ಸಮುದಾಯಗಳು ಪುರಾಣದ ಮೌಲ್ಯಗಳನ್ನು ಎತ್ತಿ ಹಿಡಿಯುವ ಹಾಗೆ ತಮ್ಮ ದೈನಂದಿನ ಬದುಕಿನ ಘಟನೆಗಳನ್ನು ವ್ಯವಹರಿಸುವ ಭಾಷಾ ವೈವಿಧ್ಯಗಳಲ್ಲಿ ಜಾನಪದ ಸಾಹಿತ್ಯ ಅಂಶಗಳಲ್ಲಿ ಕಾಣಬಹುದು. ಎಲ್ಲಾ ಸಮುದಾಯಗಳ ಹಾಗೆ ಒಗಟು, ಗಾದೆಗಳು, ಒಡವುಗಳು, ಕಿನ್ನರಿ ಹಾಡುಗಳು ಜಾನಪದ ಕಥೆಗಳು ಒಳಗೊಂಡಂತೆ ಹಲವಾರು ಕಲೆಗಳು ಈ ಸಮುದಾಯಗಳು ಮೈಗೂಡಿಸಿಕೊಂಡಿವೆ. ದಕ್ಕಲರ ಕೆಲವು ಕಲೆಗಳನ್ನು ಮಾತ್ರ ಸಂಗ್ರಹಿಸಲಾಗಿದೆ.

#### ಒಗಟುಗಳು

ಜಾನಪದ ಸಾಹಿತ್ಯದ ಒಂದು ಪ್ರಕಾರವಾಗಿದ್ದು, ಜನರ ಕಲ್ಪನೆಗಳ ಒಂದು ಅದ್ಭುತವಾಗಿದೆ. ದಕ್ಕಲ ಸಮುದಾಯ ಕೇವಲ ಕಲ್ಪನೆಯಲ್ಲಿ ಬದುಕಿನ ಅನುಭವಗಳನ್ನು ಇವರ ಅನಿಸಿಕೆಗಳನ್ನು ವ್ಯಕ್ತಿರೂಪ ನೀಡುವ ಒಗಟುಗಳಾಗಿ ಈ ಸಮುದಾಯಗಳು ಶುಭಕಾರ್ಯಗಳಲ್ಲಿ ಕೆಲಸದ

ವೇಳೆಯಲ್ಲಿ ಮನೆಯಲ್ಲಿ ಬಿಡುವಿನ ವೇಳೆಯಲ್ಲಿ ಒಗಟುಗಳನ್ನು ಹಾಕಿಕೊಳ್ಳುತ್ತಾರೆ. ಈ ಸಮುದಾಯಗಳ ಒಗಟುಗಳು ಜಾನಪದ ಸಂಸ್ಕೃತಿಯ ಪ್ರತಿಬಿಂಬಿತವಾಗಿದೆ. ಇವರು ಹೇಳುವ ಒಗಟುಗಳು ಹೆಚ್ಚು ತೆಲುಗು ಭಾಷೆಯಲ್ಲಿವೆ ಮಾಹಿತಿಯನ್ನು ನೀಡಲಾಗಿತ್ತು. ಇವುಗಳನ್ನು ಕನ್ನಡ ಭಾಷೆಯಲ್ಲಿ ಬರೆಯಲಾಗಿದೆ.

೧. ನೀರಲ್ಲೆ ಹುಟ್ಟಿ ನೀರಾಗೆ ಬೆಳೆಯೋದು ನೀರು ಸೋಕಿದರೆ ನೀರಾಗಿ ಹೋಗೋದು ನಿಜವೇನು ತಿಳಿಯರ್‍ರ್ಯ – ಉಪ್ಪು.

೨. ತಂದೆ ಗರಗರ ತಾಯಿ ಪೀಸು ಪೀಸು ಮಕ್ಕಳು ರತ್ನಗಳು ಮಾಣಿಕ್ಯಗಳು – ಹಲಸಿನ ಕಾಯಿ.

೩. ಚಿಕ್ಕ ಹುಡುಗನಿಗೆ ಚಿಕ್ಕ ಕುಲಾಯಿ – ಬೆಂಕಿಕಡ್ಡಿ,

೪. ಎರಡು ಮನೆಗೆ ಒಂದೇ ಗೋಡೆ – ಮೂಗು.

೫. ಅರಕಲು ಮೂರಕಲು ಅರ್ಧ ಟೋಪಿ ತಲೆಯಲ್ಲಿ ಎತ್ತಿ ತಿರುಗುವ ಅತಾಸತ್ತ ಬದುಕಿದವಳ ಕೈಯಿಡಿದು ಒಬ್ಬರ ಕಂಡರೆ ಒಬ್ಬರಿಗೆ ಆಗದು ಆದರೆ ಹತ್ತು ಜನ ಒಟ್ಟಿಗೆ ಇರುವರು– ಶಿವಪಾರ್ವತಿ ಕುಟುಂಬ.

೬. ಗುಡ್ಡ ಗುದ್ದಿದರೆ ಮನೆ ತುಂಬಾ ಮಕ್ಕಳು – ಬೆಳ್ಳುಳ್ಳಿ.

೭. ಕೆರೆ ಕಟ್ಟೆಯ ಮೇಲೆ ಬದಲೆಕಾಯಿ – ಮೂಗುನೆತ್ತು.

೮. ಅಪ್ಪನ ಕೈಯಲ್ಲಿ ಮಡಚೊಕ್ಕೆ ಆಗಲ್ಲ ಅಮ್ಮನ ಕೈಯಲ್ಲಿ ಎಣಿಸೊಕ್ಕೆ ಆಗಲ್ಲ – ಆಕಾಶ ನಕ್ಷತ್ರ

೯. ತಾಯಿ ಪಾತಾಳಕೆಕ್ ತಂದೆ ಆಕಾಶಕ್ಕೆ ಮಗಳು ಹಲ್ಲು ಬೀರಿ ದಾರಿಲಿ ಹೋಗಿ ಬರೋರ್‍ನ ಕೈಬೀಸಿ ಕರಿತಾಳೆ (ತೇವಿಗೆ ಮರ)

೧೦. ಒಂದು ಕಾಲುಪಕ್ಷಿ ಸಾವಿರಾರು ತತ್ತಿ (ಜೋಳದ ತೆನೆ)

೧೧. ನೆಟ್ಟರೆ ಹುಟ್ಟೊದಲ್ಲ ಕಿತ್ತರೆ ಬಾಡೊದಲ್ಲ — ಕೂದಲು

೧೨. ಗಿಡ್ಡ ಪೋಲೀಸ ನೆಲದಾಗ ಕುಂತವನೆ – ಸೇಂಗಾ

೧೩. ಹಿಡಿದರೆ ಕೈಗೆ ಸಿಗೋದಿಲ್ಲ ಕಡಿದರೆ ಕಚ್ಚಕ್ಕೆ ಆಗೋದಿಲ್ಲ – ನೀರು

೧೪. ಬಿಳಿ ಅಂಗಿಗೆ ಹಸಿರು ಝುಂಡಾಸುತ್ತವರೆ – ಮೂಲಂಗಿ

೧೫. ಒಂಟಿ ಕಾಲು ಕೊಕ್ಕರೆ ಒಂಬೈನೂರು ಮೊಟ್ಟೆ ಹಾಕ್ತದೆ – ತೆಂಗಿನ ಮರ

೧೬. ಅಂಗಣ್ಣ ಮಂಗಣ್ಣ ಅಂಗಿ ಬಿಚ್ಚಿ ನುಂಗಣ್ಣ – ಬಾಳೆಹಣ್ಣು

೧೭. ಮೇಲೆ ಸಿಹಿ ಒಳ ಸಿಹಿ ಪೂರ್ತಿ ಸಿಹಿ – ಖರ್ಜೂರ, ಬಾಳೆಹಣ್ಣು ಕಲ್ಲುಸಕ್ಕರೆ

೧೮. ಕೊಂಟ ಉಂಟು ಎತ್ತಲ್ಲ ರೆಕ್ಕೆಯುಂಟು ಹಕ್ಕಿಯಲ್ಲ ಬಾಲವುಂಟು ಹನುಮಂತನಲ್ಲ ಆದರೆ ನಾನು ಯಾರು – ಗಾಳಿಪಟ.

೧೯. ದೊಡ್ಡಕೆರೆಯಲ್ಲಿ ಎಮ್ಮೆಗಳು ಹೊರಳಾಡುತ್ತಿವೆ – ತಲೆಯ ಹೇನುಗಳು

೨೦. ಕಣ್ಣಿಗೆ ಕಾಣೋದಿಲ್ಲ ಕೈಯಿಗೆ ಸಿಗೋದಿಲ್ಲ ನಾನು ಯಾರು – ಗಾಳಿ

**ಗಾದೆಗಳು**

ಗಾದೆಗಳನ್ನು ಜನಪದ ಹಿತನುಡಿಗಳು ಎಂದು ಕರೆಯುವರು. ಈ ಸಮುದಾಯಗಳು ತಮ್ಮ ಕೆಲಸದ ವೇಳೆಯಲ್ಲಿ ಭಿಕ್ಷೆ ಬೇಡುವ ಸಂದರ್ಭದಲ್ಲಿ ಒಬ್ಬರಿಗೆ ಬುದ್ಧಿವಾದ ಹೇಳಲು ಮದುವೆ ಸಂದರ್ಭದಲ್ಲಿ ತಮಾಷೆ ಮಾಡಲು ಹಿತನುಡಿಗಳಾಗಿ ಬಳಸುತ್ತಾರೆ. ವೇದ ಸುಳ್ಳಾದರು ಗಾದೆ ಸುಳ್ಳು ಆಗುವುದಿಲ್ಲ ಎಂಬ ನಂಬಿಕೆ ಈ ಸಮುದಾಯಗಳಲ್ಲಿ ಇದೆ. ಇವು ಬದುಕಿನ ಅನುಭವಗಳ ಔಚಿತ್ಯವನ್ನು ತಿಳಿಸುತ್ತಾರೆ. ಗಾದೆಯನ್ನು ಜನಪದ ವೇದ ಎನ್ನುತ್ತಾರೆ. ವೇದಕ್ಕಿಂತಲೂ ಗಾದೆ ಜನಸಾಮಾನ್ಯರಲ್ಲಿ ನಂಬಿಕೆಯ ರೂಪದಲ್ಲಿ ಬಂದಿವೆ. ಜನಸಾಮಾನ್ಯರು ಹೇಳುವ ಗಾದೆಗಳು ಕೂಡ ಪ್ರಾಸ ಲಯಬದ್ಧವಾಗಿ ಜನರ ಮನಸ್ಸಿನ ಮೌಲ್ಯಗಳನ್ನು ಎತ್ತಿ ಹಿಡಿಯುವ ಹಿತನುಡಿಗಳಾಗಿವೆ.

೧. ಗಾಯದ ಮೇಲೆ ಉಪ್ಪು ತಿಕ್ಕಿದಂಗೆ.

೨. ಕೂದಲು ಸುತ್ತ ಬೂದಿ ಬಂದಾತ.

೩. ಪಾಲಿಗೆ ಬಂದಿದ್ದು, ಪಂಚಾಮೃತ.

೪. ಮಳೆನೀರು ಹೊಳೆಗೋತು.

೫. ಕಾಸಿದ್ರೆ ಕೈಲಾಸ.

೬. ಹೊಟ್ಟೆಗೆ ಹಿಟ್ಟಿಲ್ಲಾಂದ್ರು ಜುಟ್ಟಿಗೆ ಮಲ್ಲಿಗೆ ಹೂವು.

೭. ಐನೋರು ಇಲ್ಲದಿದ್ದರೆ ಅಮಾವಾಸೆ ನಿಲ್ಲುತ್ತಾ.

೮. ಅತ್ತೆಗೆ ಒಂದು ಕಾಲ ಸೊಸೆಗೆ ಒಂದು ಕಾಲ

೯. ನಾಯಿ ಮುಟ್ಟಿದ್ದು ಗಡಿಗೆ ನಾಯಿಗೆ.

೧೦. ಬೆಳ್ಳಗೆ ಇರೋದೆಲ್ಲ ಹಾಲಲ್ಲ.

೧೧. ಮುಖ ನೋಡಿ ಮಣೇ ಹಾಕು.

೧೨. ಕಂಕುಳಲ್ಲಿ ಮಗುನೆತ್ತಿಕೊಂಡು ಸಂತೆಯಲ್ಲಿ ಸುತ್ತಾಡಿದಾಗೆ.

೧೩. ಉಂಡು ಮನೆಗೆ ಎರಡು ಬಗಿದಂಗೆ.

೧೪. ಬಡಗಿ ಮನೆ ಸೌಟು ತೂತು.

೧೫. ಕೈಯಿಂದ ಜಾರಿದ ಉಪ್ಪು ನೀರಲ್ಲಿ ಬಿದ್ದಂಗೆ.

೧೬. ಒಲಿದರೆ ನಾರಿ ಮುನಿದರೆ ಮಾರಿ.

೧೭. ಎಣ್ಣೆ ಮಡಿಕೆಯ ಮೇಲೆ ಹೆಸರು ಬರದಂಗೆ.

೧೮. ಹೆಣ್ಣು ಹುಟ್ಟಿದ ಮನೆ ತಣ್ಣಗೆ

೧೯. ಹಸಿದು ಹಲಸು ತಿನ್ನು ಉಂಡು ಮಾವು ತಿನ್ನು

೨೦. ಬುದ್ಧಿಯಿದ್ದರೆ ಅನ್ನ ತಿಂತಿಯ್ಯ ಇಲ್ಲಾಂದರೆ ಮಣ್ಣು ತಿಂತಿಯಾ

**ಕಿನ್ನರಿ ಹಾಡುಗಳು**

ತಂದನಾನು ತಂದಾನಿನಾನು ತಾನೇ ಬಂದಾನು ಜಾಂಬುಮುನಿ
ಕಿನ್ನರಿ ನುಡಿಸುತ ಕವಿಗಳ ಆಲಿಸುತ ಕಿಡಿಕಿಡಿ ಕಾರುತ ತಾನೆ ನಿಂದಾನ
ಎಲೆ ತಂದಾನಾನು ತಾನೆ ಬಂದಾನು ಜಾಂಬುಮುನಿ
ಸೇರಿದ ಸಭೆಗೆಲ್ಲ ಶರಣೆಂದು ನಿಂದಾನ
ಕಿನ್ನರಿ ಮೇಲಾಣೆ ನವಿಲು ಮೇಲಾಣೆ
ತಾಯಿ ಆದಿಶಕ್ತಿ ಮೇಲಾಣೆ ಸಾಕ್ಷಿ ಗುರುವಿನಾಣೆ
ಇಲ್ಲಿ ನೆರೆದ ಸಭಿಕರಾಣೆ ನಾ ನುಡಿಸೋದೆಲ್ಲ ದೈವರಾಣೆ ಪ
ಬಂದಾನು ಜಾಂಬವಮುನಿ ಕಿನ್ನರಿ ನುಡಿಸುತ ಕವಿಗಳ ಆಲಿಸುತ
ಕೇರಿಯಲಿ ನಿಂದಾನು ಅಯ್ಯಾ ಅಯ್ಯಾ ಕೇಳಿರಣ್ಣಾ
ತಾಯಿ ತಂದೆ ಗೌಡ್ರ ಕೇಳಿರಣ್ಣಾ
ಈ ನೆಲ ನಮ್ಮದಣ್ಣ ಈಜನ ನಮ್ಮದಣ್ಣಾ
ಬಿತ್ತಿ ಬೆಳೆವ ಈ ಭೂಮಿ ಕಸಿದವರಯ್ಯ
ದೊಕ್ಕಲಿಗರು ಎನ್ನುವರಯ್ಯಾ ನಾವು ಯಾರಿಗೆ ದಕ್ಕಿಲ್ಲ
ಯಾರಿಗೆ ದಕ್ಕಿಲ್ಲವಯ್ಯಾ ಮಾದಿಗರಿಗೆ ಮಕ್ಕಳು ನಾವು
ಅಯ್ಯೋ ಮರೆತು ಹೋಗಿವೆ ನಮ್ಮಯ ಮನೆಗಳು
ದಾರ ನಮ್ಮದು ಶಿವಧಾರ ಉಡಿದಾರ ನಮ್ಮದು
ಜನಿವಾರ ಇವದಾರ ಬಿಚ್ಚಿಟ್ಟು
ದನದ ಕತ್ತು ಕೊಯ್ದು ಪಾಲು ಮಾಡುವಾಗ
ತಂಗಡಿ ಗಿಡಕ್ಕೆ ಹಾಕಿದ್ವಿಯ್ಯ ಕದ್ದು ನೀವು ಧರಿಸಿ ಬಿತ್ತರಯ್ಯ

ರೆಡ್ಡಿ ನಮ್ಮವರು ಗೌಡ ನಮ್ಮವರು
ಕೋಮಟಿಗನು ನಮ್ಮ ಮನೆ ಅಳಿಯನಯ್ಯ
ಬ್ರಾಹ್ಮಣರು ನಮ್ಮ ಮನೆ ಬೀಗರಯ್ಯ
ಪೂಜೆ ನಮ್ಮದು ಪೂಜಾ ಮಂದಿಅರ ನಮ್ಮದು
ಪೂಜಾರಿ ನಮ್ಮ ಮನೆ ಮಗನಯ್ಯ
ಜಂಬೂದ್ವೀಪ ನಮ್ಮದು ಜಂಬೂ ನೇರಳೆ ನಮ್ಮದು
ಹೆಪ್ಪುಮುನಿಯ ಕಣ್ಣುಗುಡ್ಡೆಗಳಿವು
ತೆಪ್ಪಗೆ ಕಪ್ಪ ಕಾಣಿಕೆ ಕೊಡಿರಯ್ಯಾ ದೊಕ್ಕಲಿಗರ ಹರಕೆ ಕೇಳಿರಯ್ಯಾ ॥

**ಲೋಲು ಕಿನ್ನರಿ ಹಾಡು**

ಸಿಟ್ಟು ಬಿದುರು ಬೇಲಿ ಮ್ಯಾಲಿನ ಸ್ವಾರೊಬರೆ
ಯಾರು ಮಾಡಿದ ಲೋಲು ಕಿನ್ನರಿ
ಮಾಮಯ್ಯು ಮಗನೆ
ಯಾರು ಮಾಡಿದ ಲೋಲು ಕಿನ್ನಾರಿ?

ಲೋಲು ಕಿನ್ನರಿ ನುಡಿಸಿಕೊಂಡು ಲೋಲು ಕಿನ್ನರಿ ನುಡಿಸಿಕೊಂಡು
ಬೀದಿ ಬೀದಿ ತಿರುಗುವೋನೆ
ನಮ್ಮ ಗೇರಿಕ್ಯಾಕು ಬರಲಿಲ್ಲೋ
ಸಂಗಾತಿರುಡುಗಾ ನಮ್ಮಗೇರಿ  ಕ್ಯಾಕು ಬರಲಿಲ್ಲೋ
ನಮ್ಮ ಕೇರಿಕೆ ನೀನು ಬಂದರೆ
ನಮ್ಮ ಕೇರಿಕೆ ನೀನು ಬಂದರೆ
ಸನ್ನ ಗಂಬಳ ಗೆದ್ದಿದ್ಯಾಕೆ
ತಂದು ಕೊಡುವೆನು ಗಂಧದೀಳ್ಯಾವು
ಮಾಮಯ್ಯ ಮಗನೆ
ಅಂದಿ ಕೊಡುವೆನು ಗಂಧಿದೀಳ್ಯಾವು ।

ಮುತ್ತು ಬಿದ್ದರೆ ಒಂದು ಗ್ಯಾನ
ವತ್ತ ಬಿದ್ದರೆ ಒಂದು ಗ್ಯಾನ
ಸಿತ್ತ ಬಿದ್ದರೆ ವ್ರನಿ ಗ್ಯಾನ
ನೆಲಕ ಬಿದ್ದರೆ ಎಮ್ಮಿಕೋಣಂಗೆ
ಮಾಮಯ್ಯು ಮಗನೆ

ನೆಲಕ ಬಿದ್ದರೆ ಎಮ್ಮಿಕೋಣಂಗೆ
ಆಗುದೋನೆಭೋಗುದೋನೆ
ಆಗುದೋನೆ ಭೋಗುದೋನೆ
ನಾಗರಾವು ಬಣ್ಣದೋಸೆ
ಕೋಗಿಲಾಗೆ ಕೂಗುತೀಯಲ್ಲೋ
ಮಾಮಯ್ಯು ಮಗನೆ
ಕೋಗಿಲಾಗೆ ಕೂಗುತೀಯಲ್ಲೋ?
ಮಾಮುಯ್ಯು ಮಗನೆ
ಕೋಗಿಲಾಗೆ ಕೂಗುತ್ತೀಯಲ್ಲೋ
ಅಚ್ಚುದಂದೊಂದಚ್ಚು ದಚ್ಚು
ಅಚ್ಚುದಂದೊಂದಚ್ಚು ದಚ್ಚು
ಅವರ ಮ್ಯಾಲೆ ರಸ್ಸಾಳಿ ಕಬ್ಬು
ಕಬ್ಬು ತಿಂದು ಕನ್ನು ಬಿಡುತ್ತಾನೆ
ಮಾಮಯ್ಯು ಮಗನು
ಬೆಲ್ಲ ತಿಂದು ಬಾಯಿ ಬಿಡುತಾನೆ?[೩]

ಹೀಗೆ ದಕ್ಕಲರ ಭಾಷಾ ಸಾಹಿತ್ಯವನ್ನು ಅವಲೋಕಿಸಿದಾಗ ದಕ್ಕಲರ ಪುರಾಣಗಳು ಗಂಗಭಾರತದ ಭಾಷಾ ಸಾಹಿತ್ಯ ಸಾಂಸ್ಕೃತಿಕ ಕೇಂದ್ರಬಿಂದುವಿನಲ್ಲಿ ನಿಂತು ಮಾತನಾಡುವಂತಾಗುತ್ತದೆ. ಹಾಗೆಯೇ ಜಾನಪದ ವೈವಿಧ್ಯತೆಗಳು ಕಿನ್ನರಿ ಹಾಡುಗಳು ಅವರ ಭಾಷಾ ಪದಗಳು ವೈವಿಧ್ಯಮಯವಾದ ಕಾವ್ಯ ಪ್ರಪಂಚ ದಕ್ಕಲರ ಬದುಕಿನ ಸಾಂಸ್ಕೃತಿಕ ವೈವಿಧ್ಯತೆಯನ್ನು ಪರಿಚಯಿಸುವಂತಿದೆ. ದಕ್ಕಲ ಸಾಹಿತ್ಯದತ್ತ ನಿಂತು ಅವಲೋಕಿಸಿದಾಗ ಅವರ ಮೌಖಿಕ ಸಾಹಿತ್ಯ ಪ್ರಪಂಚ ಪುರಾಣ ಐತಿಹ್ಯ ಜಾನಪದ ಮತ್ತು ಚರಿತ್ರೆಯ ನಡುವೆ ಕಾಲದ ಹಂಗಿಲ್ಲದಂತೆ ತುಯ್ದಾಡುತ್ತದೆ. ಇವರ ಪುರಾಣಗಳನ್ನು ಪುರಾಣಗಳ ನೆಲೆಯಲ್ಲಿಯೇ ಗ್ರಹಿಸುವ ಕುರುಹುಗಳನ್ನು ಕುರುಹುಗಳನ್ನಾಗಿಯೇ ಉಳಿಸುವ ಜಾನಪದಗಳನ್ನು ಜಾನಪದೀಯ ಶೈಲಿಯಲ್ಲಿಯೇ ಪರಿಭಾವಿಸುವುದರ ಜೊತೆಗೆ ಈ ಕಾಲಾತೀತವಾದ ನೆಲೆಗಳ ಸಂಬಂಧಗಳಲ್ಲಿನ ಸಾಮ್ಯತೆಯನ್ನು ಗುರುತಿಸಿ ಸತ್ಯದ ಕೆಲವಾದರೂ ಅಂಶಗಳನ್ನು ಅರಿತು ಅದನ್ನು ಗ್ರಹಿಸಿದರೆ ಅಧ್ಯಯನದ ಶ್ರಮಕ್ಕೆ ಪ್ರತಿಫಲ ಸಿಕ್ಕಂತಾಗುತ್ತದೆ.

ದಕ್ಕಲರ ಪುರಾಣಗಳು ಅವರ ಸಾಂಸ್ಕೃತಿಕ ಶರೀರದ ಜೀವಧಾತುಗಳು. ಆದರೆ ಆಧುನಿಕ ಸಮಾಜದಲ್ಲಿ ಹೊಸ ಬದುಕಿನ ನಡುವೆ ಆಕ್ರಮಣಶೀಲ ಸಂಸ್ಕೃತಿ ನಿಧನಿಧಾನವಾಗಿಯಾದರು ದಕ್ಕಲರು ಬದುಕಿನೊಳಗೆ ಪ್ರವೇಶಿಸುವಂತಾಗಲಿ ನಾಗರಿಕ ಪ್ರಪಂಚದ ಕನಿಷ್ಠ ಸೌಲಭ್ಯಗಳನ್ನು

ನೀಡದೆ ಇಂದಿಗೂ ದಕ್ಕಲರು ಮೂಲೆ ಗುಂಪಾಗಿದ್ದಾರೆ. ಇನ್ನಾದರೂ ದಕ್ಕಲರನ್ನು ಮೂಲ ಸೌಲಭ್ಯಗಳು ನೀಡಿ ಅವರ ಮೂಲ ಸಂಸ್ಕೃತಿಯ ನೆಲೆಯಿಂದ ಪಲ್ಲಟಗೊಳಿಸಿ ಅನುಕರಣಶೀಲ ಪ್ರವೃತ್ತಿಗೆ ಸುಲಭವಾಗಿ ದೂಡಬಲ್ಲದು. ಆಗ ಅವರ ನೆನಪಿನಲ್ಲಷ್ಟೇ ಈ ಪುರಾಣ ಪ್ರಪಂಚ ಬದುಕುಳಿಯಬೇಕಾಗಬಹುದು. ಇದು ಕೂಡ ಕೆಲವು ತಲೆಮಾರುಗಳ ತನಕ ಮಾತ್ರ, ಆನಂತರವು ದಕ್ಕಲರ ಆದಿ ಮೂಲ ಸ್ಥಾನವನ್ನು ಉಳಿಸಿಕೊಂಡು ಆರ್ಥಿಕವಾಗಿ, ಸಾಮಾಜಿಕವಾದ ಸ್ಥಿರತೆಯನ್ನು ಒಟ್ಟಿಗೆ ಸಾಧಿಸುವುದು ಹೇಗೆ ಸಾಧ್ಯ ಎಂಬ ಸಾಂಸ್ಕೃತಿಕ ಸವಾಲು ಸಮಾಜದ ಮುಂದಿದೆ.

**ಕೊನೆ ಟಿಪ್ಪಣಿಗಳು**

೧. ಜಾನಕಲ್ ರಾಜಣ್ಣ, **ದಕ್ಕಲಿಗ,** ಪು. ೧೧೦, ೧೧೪.

೨. ಲಕ್ಷ್ಮೀಪತಿ, ಕೋಲಾರ, **ಮಾಸ್ತಿಕರ ಸಂಸ್ಕೃತಿ,** ಪು. ೨೭೧.

೩. ಕೋಟಿಗಾನಹಳ್ಳಿ ರಾಮಯ್ಯ, **ಸಿಂಧ್‌ಮಾದಿಗರ ಸಂಸ್ಕೃತಿ,** ಪು. ೨೨೧.



ಅಧ್ಯಾಯ : ಎಂಟು

# ಸಮಾರೋಪ

"ದಕ್ಕಲ ಜಾಂಬಪುರಾಣ ಮತ್ತು ಗಂಗಭಾರತದ ಬಹುಪಠ್ಯಗಳ ಕಥನ" ಎಂಬ ಶೀರ್ಷಿಕೆಯಡಿಯಲ್ಲಿ ಅಧ್ಯಯನವನ್ನು ಕೈಗೊಂಡಿದ್ದು, ಅದಕ್ಕೆ ಸಂಬಂಧಿಸಿದಂತೆ ಪರಿವಿಡಿಯನ್ನು ಮಾಡಿಕೊಂಡಿದ್ದು, ಏಳು ಅಧ್ಯಾಯಗಳಾಗಿ ವಿಂಗಡಿಸಿಕೊಂಡಿರುತ್ತೇನೆ. ಪ್ರಸ್ತುತ ಅಧ್ಯಯನದಲ್ಲಿ ಸಮಾಜದ ಅತ್ಯಂತ ಕೆಳಸ್ತರದಲ್ಲಿದ್ದು ಮಾದಿಗರ ಉಪಜಾತಿಗಳಲ್ಲಿ ಒಂದಾದ ದಕ್ಕಲ ಸಮುದಾಯಗಳ ಜೀವನದ ವಿಧಾನಗಳು ಮತ್ತು ಜಾಂಬಪುರಾಣ ಗಂಗಭಾರತವನ್ನು ಕುರಿತು ಅಧ್ಯಯನ ಮಾಡಲಾಗಿದೆ.

ಮೊದಲನೇ ಅಧ್ಯಾಯದಲ್ಲಿ ಅಧ್ಯಯನ ಉದ್ದೇಶ, ಸ್ವರೂಪ, ಮಹತ್ವ, ವಿಧಾನ ಮತ್ತು ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆಯನ್ನು ಒಳಗೊಂಡಿದೆ.

ಎರಡನೇ ಅಧ್ಯಾಯದಲ್ಲಿ ದಕ್ಕಲ ಸಮುದಾಯ ಚಾರಿತ್ರಿಕ ಮತ್ತು ಸಾಮಾಜಿಕ ಹಿನ್ನೆಲೆಯನ್ನು ಒಳಗೊಂಡಿದೆ.

ಮೂರನೇ ಅಧ್ಯಾಯನದಲ್ಲಿ ದಕ್ಕಲ ಸಮುದಾಯಗಳ ಮೂಲಪುರಾಣವಾದ ಜಾಂಬಪುರಾಣದ ಗಂಗಭಾರತದ ಕಥೆಗಳನ್ನು ಒಳಗೊಂಡಿರುವುದು. ದಕ್ಕಲ ಹುಟ್ಟು ಬಗ್ಗೆ ನಾಲ್ಕು ಕಥೆಗಳನ್ನು ಹಾಗೂ ಆದಿಶಕ್ತಿಯ ಜನನ ಪಾರ್ವತಿ ಕಲ್ಯಾಣ ಮೂಲಚನ್ನಯ ಕಥೆ ಬಲಭದ್ರ ವಿಜಯ ಮುಂತಾದ ಕಥೆಗಳನ್ನು ಒಳಗೊಂಡಿದೆ.

ನಾಲ್ಕನೇ ಅಧ್ಯಾಯದಲ್ಲಿ ಗಂಗಭಾರತದ ಹಾಡುಗಳಲ್ಲಿ ಬರುವ ದರುವು, ದರುವು ಪದದ ಅರ್ಥ ದರುವು ಪದದ ವಿಸ್ತಾರ ದರುವು ಪದದ ಐತಿಹಾಸಿಕ ಹಿನ್ನೆಲೆ ಮತ್ತು ದರುವು ಹಾಡುಗಳನ್ನು ಸಂಗ್ರಹಿಸಲಾಗಿದೆ.

ಐದನೇ ಅಧ್ಯಾಯದಲ್ಲಿ ದಕ್ಕಲರ ರಕ್ತ ಸಂಬಂಧ ಮತ್ತು ಇವರ ಕುಲದ ಆಚರಣೆಗಳ ಬಗ್ಗೆ ಅಧ್ಯಯನ ಮಾಡಲಾಗಿದೆ. ಮದುವೆ ಆಚರಣೆಗಳು ಶವಸಂಸ್ಕಾರ ಜಾನಪದ ವೈದ್ಯ ಪದ್ಧತಿ ಕುಲಶಾಸ್ತ್ರಗಳ ಬಗ್ಗೆ ತಿಳಿಸಲಾಗಿದೆ.

ಆರನೇ ಅಧ್ಯಾಯದಲ್ಲಿ ದಕ್ಕಲರ ಸಾಮಾಜಿಕತೆ, ಆರ್ಥಿಕ, ಶೈಕ್ಷಣಿಕತೆ ಹಾಗೂ ರಾಜಕೀಯ ಸನ್ನಿವೇಶಗಳನ್ನು ಒಳಗೊಂಡಿದ್ದು, ಸಮಾಜದಲ್ಲಿ ದಕ್ಕಲರ ಸ್ಥಿತಿಗಳನ್ನು ಒಳಗೊಂಡಿದೆ ವರ್ತಮಾನದ ಸಂದರ್ಭದ ಬದಲಾವಣೆಗಳ ಬಗ್ಗೆ ತಿಳಿಸಲಾಗಿದೆ.

ಏಳನೇ ಅಧ್ಯಾಯದಲ್ಲಿ ದಕ್ಕಲ ಸಮುದಾಯಗಳ ಭಾಷಾ ಸಾಹಿತ್ಯ ಸಮುದಾಯಗಳಲ್ಲಿ ಮಾತನಾಡಿಕೊಳ್ಳುವ ಗುಟ್ಟಾದ ಭಾಷೆ ಮರುಗು ಭಾಷೆ ಹಾಗೂ ಇವರು ಸಮಾಜದೊಂದಿಗೆ ವ್ಯವಹರಿಸುತ್ತಿರುವ ತೆಲುಗು ಭಾಷೆಯ ಬಗ್ಗೆ ಚರ್ಚಿಸಲಾಗಿದೆ.

ಎಂಟನೇ ಅಧ್ಯಾಯವು ಸಮಾರೋಪವಾಗಿದ್ದು, ಈ ಅಧ್ಯಯನದಲ್ಲಿ ಕಂಡುಕೊಂಡ ಫಲಿತಗಳನ್ನು ನೀಡಲಾಗಿದೆ. ಅನುಬಂಧದಲ್ಲಿ ಪರಾಮರ್ಶನ ಗ್ರಂಥಗಳು, ವಕ್ತೃ ವಿವರ ಮತ್ತು ಛಾಯಾಚಿತ್ರಗಳನ್ನು ಒಳಗೊಂಡಿದೆ.

**ಅಧ್ಯಯನದ ಫಲಿತಗಳು**

೧. ದಕ್ಕಲ ಸಮುದಾಯಗಳು ಶ್ರೇಣೀಕೃತ ಸಮಾಜದ ಅತ್ಯಂತ ಕೆಳಸ್ತರದಲ್ಲಿದ್ದು ಮಾದಿಗರ ಉಪಕುಲಗಳಲ್ಲಿ ದಕ್ಕಲರು ಒಂದು ಉಪಕುಲವಾಗಿದ್ದು ಆಂಧ್ರಪ್ರದೇಶದಿಂದ ವಲಸೆ ಬಂದು ಎಲ್ಲಾ ಕಡೆ ವಿಸ್ತರಿಸಿದ್ದು ಹೀಗೆ ಶತಶತಮಾನಗಳಿಂದ ಅಲೆಮಾರಿಗಳಾಗಿ ಜೀವಿಸುತ್ತಿರುವುದು ಈ ಸಮುದಾಯಗಳ ಅಧ್ಯಯನದ ವೇಳೆಯಲ್ಲಿ ತಿಳಿಯುತ್ತದೆ.

೨. ಈ ಸಮುದಾಯಗಳ ಕ್ಷೇತ್ರಕಾರ್ಯದಲ್ಲಿ ಗಮನಿಸಿದಂತೆ ದಕ್ಕಲರು ಗ್ರಾಮೀಣ ಪ್ರದೇಶದಲ್ಲಿ ಜೀವಿಸುತ್ತಿದ್ದು, ಮಾದಿಗರ ಕೇರಿಗಳ ಸ್ವಲ್ಪ ದೂರದಲ್ಲಿ ಬಯಲು ಪ್ರದೇಶದಲ್ಲಿ ವಾಸಿಸುತ್ತಿರುವುದು ಕಂಡುಬರುತ್ತದೆ. ತಮ್ಮ ಬದುಕಿಗೆ ಮಾದಿಗರನ್ನು ಆಧಾರವಾಗಿ ಇಟ್ಟುಕೊಂಡು ಇಂದಿಗೂ ಕೆಲ ಸಮುದಾಯಗಳು ಬದುಕುತ್ತಿರುವುದು ಈ ಪ್ರದೇಶಗಳಲ್ಲಿ ಕಂಡುಬರುತ್ತದೆ.

೩. ತದನಂತರ ದಕ್ಕಲ ಸಮುದಾಯಗಳ ಕುಲಕಸುಬುಗಳು ಅವರ ಪಾರಂಪರಿಕವಾದ ಹಿನ್ನೆಲೆಯನ್ನು ಗಮನಿಸಿದಾಗ ಚಾರಿತ್ರಿಕವಾಗಿ ಅಲೆಮಾರಿ ಸಮುದಾಯಗಳ ವಸ್ತುನಿಷ್ಠ ಸ್ಥಿತಿಗತಿಗಳನ್ನು ಅಧ್ಯಯನಕ್ಕೊಳಪಡಿಸಿ ತನ್ನ ಕ್ಷೇತ್ರ ಕಾರ್ಯದ ಆಧಾರದ ಮೇಲೆ ದಕ್ಕಲರ ಸಾಮಾಜಿಕ ಆರ್ಥಿಕ, ಶೈಕ್ಷಣಿಕ, ರಾಜಕೀಯ ಸ್ಥಿತಿಗತಿಗಳು ವರ್ತಮಾನದ ಸಂದರ್ಭ ಮೇಲೆ ಹೇಗೆ ಪರಿಣಾಮ ಬೀಳುತ್ತದೆ ಎಂದು ಗಮನ ಹರಿಸಲಾಗಿದೆ.

೪. ದಕ್ಕಲ ಸಮುದಾಯಗಳ ಬಡತನಕ್ಕೆ ಪುರಾಣ ಹಿನ್ನೆಲೆಯಾದರೆ ಏನು ಆ ಪುರಾಣವೇ ಹೆಚ್ಚು ಪ್ರಸಿದ್ಧಿ ಪಡೆದಿರುವುದು ಈ ಸಮುದಾಯಗಳು ವ್ಯಕ್ತಿಗಳಿಂದ ಕೇಳಿ ತಿಳಿಯಬೇಕಾಗುತ್ತದೆ. ಇವರ ಕುಲ ಕಸುಬು ಭಿಕ್ಷಾಟನೆ ಮಾಡುವುದು ಆದರು ವರ್ತಮಾನದ ಸಂದರ್ಭದಲ್ಲಿ ಸ್ವಲ್ಪ ಬದಲಾವಣೆಯಿಂದ ಕೂಲಿ ಕೆಲಸಗಳಿಗೆ ಹೋಗಿ ದುಡಿದು ತಿನ್ನುವುದು ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ತಿಳಿಯಲಾಗಿದೆ.

೫. ದಕ್ಕಲರು ನೆಲೆಸಿರುವ ಭೌಗೋಳಿಕ ಪ್ರದೇಶಗಳಲ್ಲಿ ಅವರ ಆಚರಣೆಗಳು ಕುಲಶಾಸ್ತ್ರೀ ನಂತರ ವಲಸೆ ಬಂದು ಅವರು ಅನುಸರಿಸುತ್ತಿರುವ ಜೀವನ ವಿಧಾನ, ಸಾಂಸ್ಕೃತಿಕ ವಿಚಾರಗಳು ಅವರು ನಡೆಸುವ ಪಂಚಾಯ್ತಿ ಕಟ್ಟೆಯ ಕಟ್ಟುನಿಟ್ಟು ತೀರ್ಮಾನಗಳು ಹಾಗೂ ಸಮುದಾಯಗಳ ವಿಶಿಷ್ಟತೆಗಳನ್ನು ಅಧ್ಯಯನ ಮಾಡಲಾಗಿದೆ.

೬. ದಕ್ಕಲ ಸಮುದಾಯಗಳ ಪೌರಾಣಿಕ ಹಿನ್ನೆಲೆಗಳನ್ನು ನೋಡಿದಾಗ ಜಾಂಬವ ಪುರಾಣವನ್ನು ಗಂಗಭಾರತ ಎಂಬ ಗೇಯ ಕಥೆಯನ್ನಾಗಿಸಿ ಹೇಳುವ ವಿಧಾನ ಗಮನಿಸಲಾಗಿದೆ. ಈ ಕಥೆಯನ್ನು ಮಾಸ್ತೀಕರು ದಕ್ಕಲರು ಮತ್ತು ಸಿಂದ್ ಮಾದಿಗರು ಮೂಲ ಪುರಾಣವಾಗಿದೆ ಈ ಪುರಾಣವನ್ನು ಅಲ್ಪಸ್ವಲ್ಪ ಬದಲಾವಣೆಗಳೊಂದಿಗೆ ಜಾಂಕಿಣಿ ನುಡಿಸುತ್ತ ಹಾಡುತ್ತಿದ್ದರು.

೭. ದಕ್ಕಲ ಸಮುದಾಯ ಸಮಾಜಿಕವಾಗಿ ಬೆಳೆದು ಬಂದ ಮಾರ್ಗಗಳು ತಮ್ಮ ಸಾಂಸ್ಕೃತಿಕ ಪುರಾಣದ ಆಧಿಜಾಂಬವಂತಹ ವಸ್ತು ವಿಷಯವಿರುವ ಪುರಾಣದ ಕಥೆಗಳನ್ನು ವಿಶ್ಲೇಷಣಗೆ ಒಳಪಡಿಸಲಾಗಿದೆ. ಸಮುದಾಯದ ಸಾಮಾಜಿಕ ಸಂರಚನೆಯ ವಿವರಗಳನ್ನು ಅಧ್ಯಯನ ಮಾಡಿ ಈ ಸಮುದಾಯಗಳ ಕೌಟುಂಬಿಕ ಲಿಂಗ ಸಂಬಂಧಿತವಾದ ವಿವರಗಳನ್ನು ಚರ್ಚಿಸಿ ಇಂದಿನ ಬದುಕಿನ ಸ್ಥಿತ್ಯಂತರಗೊಂಡ ವರ್ತಮಾನದ ಸಂಗತಿಗಳನ್ನು ತಿಳಿಸಲಾಗಿದೆ.

೮. ಪ್ರಸ್ತುತ ಸಮಾಜದಲ್ಲಿ ದಕ್ಕಲರು ಎದುರಿಸುತ್ತಿರುವ ಸಮಸ್ಯೆಗಳು ಹಾಗೂ ಆರ್ಥಿಕ ಬಿಕ್ಕಟ್ಟುಗಳಿಗೆ ಸರ್ಕಾರದಿಂದ ನೀಡಿರುವ ಜಾತಿ ಪ್ರಮಾಣ ಪತ್ರ ಈ ಸಮುದಾಯಗಳಿಗೆ ಶಾಪವಾಗಿ ಪರಿಣಮಿಸಿ ಸರ್ಕಾರದಿಂದ ಕನಿಷ್ಠ ಸೌಲಭ್ಯಗಳು ಸಿಗದೆ ಇರುವುದು ಜಾತಿ ಪ್ರಮಾಣ ಪತ್ರದಿಂದ ಸಮಾಜದ ದೃಷ್ಟಿಯಲ್ಲಿ ಅತ್ಯಂತ ಕೆಳಸ್ತರ ದಕ್ಕಲ ಸಮುದಾಯಗಳ ವರ್ಗ. ಆದರೆ ಸರ್ಕಾರದ ದೃಷ್ಟಿಯಲ್ಲಿ ಮಾದಿಗರ ಜಾತಿಗೆ ಸೇರಿದವರಾಗಿದ್ದಾರೆ. ಜಾತಿ ಪ್ರಮಾಣ ಪತ್ರದಲ್ಲಿ ಪರಿಶಿಷ್ಟ ಪಂಗಡ ಎಂದು ನಮೂದಾಗಿದ್ದು, ಇದರಿಂದ ಎಲ್ಲಾ ಸೌಲಭ್ಯಗಳಿಂದ ವಂಚಿತರಾಗಿರುವುದು ಕ್ಷೇತ್ರಕಾರ್ಯದಲ್ಲಿ ತಿಳಿದು ಬಂದಿದೆ.

೯. ದಕ್ಕಲ ಸಮುದಾಯಗಳು ವರ್ತಮಾನ ಸಂದರ್ಭದಲ್ಲಿ ಸ್ವಲ್ಪಮಟ್ಟಿಗೆ ಚೇತರಿಸಿಕೊಂಡು ಶೈಕ್ಷಣಿಕತೆಗೆ ಹೆಚ್ಚು ಒತ್ತು ನೀಡಿದರು ಆರ್ಥಿಕತೆಗೆ ಹೆಚ್ಚು ಪೆಟ್ಟು ಬೀಳುತ್ತದೆ. ಈ ಸಮುದಾಯಗಳಲ್ಲಿ ಓದುವುದಕ್ಕೆ ಆಸೆ ಇದ್ದರೂ ಆರ್ಥಿಕತೆ ತುಂಬ ದುರ್ಬಲವಾಗಿರುವುದು ಕಂಡುಬರುತ್ತದೆ.

೧೦. ದಕ್ಕಲ ಸಮುದಾಯಗಳ ಹಿನ್ನೆಲೆಗೆ ಜಾಂಬವಪುರಾಣವೆ ಮೂಲ ಆಧಾರವಾಗಿ ರುವುದರಿಂದ ಈ ಸಮುದಾಯಗಳಲ್ಲಿ ಪ್ರತಿಯೊಬ್ಬರು ಗಂಗಭಾರತದ ಗೇಯ ಕಥೆಗಳಾಗಿಸಿಕೊಂಡು ಅದನ್ನು ಹೆಚ್ಚು ಪ್ರಸಿದ್ಧ ಪಡಿಸುತ್ತಿದ್ದು ಅದನ್ನು ತಮ್ಮ ಜೀವನಾಧಾರವಾಗಿಸಿಕೊಂಡಿರುವುದು ಈ ಪ್ರದೇಶಗಳಲ್ಲಿ ಕಂಡುಬರುತ್ತದೆ.

೧೧. ದಕ್ಕಲ ಸಮುದಾಯಗಳಿಗೆ ಸರ್ಕಾರದಿಂದ ಮೂಲ ಸೌಲಭ್ಯಗಳು ಸಿಗದೆ ಇರುವುದಕ್ಕಾಗಿ ಜಾತಿ ಪ್ರಮಾಣ ಪತ್ರ ಒಂದು ಕಾರಣವಾದರೆ ಮತ್ತೊಂದು ಭ್ರಷ್ಟ ಅಧಿಕಾರಿಗಳು ಮಧ್ಯವರ್ತಿಗಳ ಪಾಲಾಗುತ್ತಿರುವುದು ಕಾರಣವಾಗಿದೆ. ಹೀಗಾಗಿ ದಕ್ಕಲ ಸಮುದಾಯಗಳಿಗೆ ಯಾವುದೇ ಸೌಲಭ್ಯಗಳು ಸಿಗದೆ ಅಲೆಮಾರಿಗಳಾಗಿ ಉಳಿದಿದ್ದಾರೆ.

೧೨. ದಕ್ಕಲ ಸಮುದಾಯಗಳು ಮುಖ್ಯವಾಹಿನಿಗೆ ತರುವ ಯೋಜನೆಗಳು ಸರ್ಕಾರಗಳು ವಿಫಲವಾಗಿವೆ. ದಕ್ಕಲರು ಸಮಾಜದಿಂದ ದೂರವಾಗಿ ಬದುಕುತ್ತ ಭಿಕ್ಷೆ ಬೇಡಿ ತಿನ್ನುತ್ತಿದ್ದಾರೆ. ಇಂದಿಗೂ ಕೈಬಿಡದೆ ಇರುವುದು ತಿಳಿಯುತ್ತದೆ. ಸರ್ಕಾರದಿಂದ ಈ ಸಮುದಾಯಗಳಿಗೆ ಪ್ರತ್ಯೇಕ ಯೋಜನೆಗಳು ಪ್ರಕಟಿಸಿದರು ಇದರ ಬಗ್ಗೆ ಸೂಕ್ತ ಮಾಹಿತಿ ನೀಡುವಲ್ಲಿ ವಿಫಲವಾಗಿರುವುದು ಹಾಗೂ ಈ ಸಮುದಾಯಗಳು ಅನಕ್ಷರಸ್ಥರಾಗಿ ಇರುವುದರಿಂದ ಮಾಹಿತಿ ಪಡೆಯುವಲ್ಲಿ ವಿಫಲವಾಗಿರುವುದು ಗಮನಿಸಬಹುದಾಗಿದೆ.

೧೩. ದಕ್ಕಲ ಸಮುದಾಯಗಳು ಸಾಂಸ್ಕೃತಿಕವಾಗಿ ಬಲಿಷ್ಠವಾಗಿದ್ದರೂ ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ದೂರವಾಗಿದ್ದಾರೆ. ಕ್ಷೇತ್ರಕಾರ್ಯದ ಅಧ್ಯಯನದ ವೇಳೆ ತಿಳಿಯಲಾಗಿದೆ. ರಾಜಕೀಯವಾಗಿ ಈ ಸಮುದಾಯಗಳು ಇದುವರಿಗೂ ಯಾರು ಪ್ರಬಲರಾಗಿಲ್ಲ. ಅದರಲ್ಲಿ ಪ್ರವೇಶ ಪಡೆಯುವಲ್ಲಿ ವಿಫಲರಾಗಿದ್ದು ಇತ್ತೀಚೆಗೆ ಗ್ರಾಮ ಪಂಚಾಯ್ತಿ ಸದಸ್ಯರಲ್ಲಿ ಕಾಣಿಸಿಕೊಳ್ಳುವುದಕ್ಕೆ ಪ್ರಯತ್ನಿಸುತ್ತಿದ್ದಾರೆ. ಸರ್ಕಾರದಿಂದ ಪ್ರತ್ಯೇಕ ಮೀಸಲಾತಿ ಇದ್ದರೂ ಅದರ ಪ್ರಯೋಜನವನ್ನು ಪಡೆದುಕೊಳ್ಳಲು ಈ ಸಮುದಾಯಗಳು ವಿಫಲರಾಗಿದ್ದಾರೆ.

೧೪. ವರ್ತಮಾನದ ಸಂದರ್ಭದಲ್ಲಿ ದಕ್ಕಲರು ಎದುರಿಸುತ್ತಿರುವ ಆರ್ಥಿಕ ಬಿಕ್ಕಟ್ಟುಗಳನ್ನು ಪರಾಮರ್ಶನ ಮಾಡಿ, ಕ್ಷೇತ್ರಕಾರ್ಯದ ಅಧ್ಯಯನದ ಬೆಂಬಲದಿಂದ ಈ ಸಮುದಾಯಗಳು ವಾಸ್ತವದಲ್ಲಿ ಎದುರಿಸುತ್ತಿರುವ ಸಮಸ್ಯೆಗಳನ್ನು ಅಧ್ಯಯನ ಮಾಡಿದ್ದು ಅವರ ಪಾರಂಪರಿಕ ಕುಲಸಬುಗಳಲ್ಲಿ ಎದುರಾಗಿರುವ ಸಮಸ್ಯೆ ಸವಾಲುಗಳು ಗುರುತಿಸಲಾಗಿದೆ. ಶೈಕ್ಷಣಿಕವಾಗಿ ಆರ್ಥಿಕವಾಗಿ, ರಾಜಕೀಯವಾಗಿ ಮತ್ತು ಸಾಮಾಜಿಕ ಸನ್ನಿವೇಶದಲ್ಲಿ ಆದಂತಹ ಬದಲಾವಣೆಗಳನ್ನು ಇವರ ಜೀವನದ ವಿಧಾನಗಳನ್ನು ವಿಶ್ಲೇಷಿಸಲಾಗಿದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ವಸ್ತುನಿಷ್ಠವಾಗಿ ಮಾಹಿತಿಯನ್ನು ಸಂಗ್ರಹಿಸಿದ್ದು ಸಂದರ್ಶನದ ಮಾಹಿತಿ ಸಂಗ್ರಹಿಸಿ ದಕ್ಕಲ ಸಮುದಾಯಗಳು ಹಿಂದುಳಿದಿರುವುದಕ್ಕೆ ಈ ಅಧ್ಯಯನದಲ್ಲಿ ತಿಳಿಸಲಾಗಿದೆ

♦♦♦

# ಅನುಬಂಧ

೧. ಪರಾಮರ್ಶನ ಗ್ರಂಥಗಳು
೨. ವಕ್ತೃಗಳ ವಿವರ
೩. ಛಾಯಾಚಿತ್ರಗಳು

# ೧. ಪರಾಮರ್ಶನ ಗ್ರಂಥಗಳು

೧. ಯಲ್ಲಪ ಕೆ.ಕೆ. ಪುರ, ೧೯೯೭, **ದೊಕ್ಕಲು ಮಕ್ಕಳು,** ಶ್ರೀದುರ್ಗ ಪ್ರಕಾಶನ.

೨. ಕೃಷ್ಣಪ್ಪ.ಕೆ, ೨೦೧೬, **ದಕ್ಕಲಿಗ ಸಮುದಾಯ,** ಡಾ. ಬಿ.ಆರ್. ಅಂಬೇಡ್ಕರ್ ಭವನ, ವಸಂತ ನಗರ, ಬೆಂಗಳೂರು.

೩. ಕೋಟಿಗಾನಹಳ್ಳಿ ರಾಮಯ್ಯ, ೧೯೯೩-೨೦೧೧, **ಸಿಂಧ್ ಮಾದಿಗರ ಸಂಸ್ಕೃತಿ,** ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು.

೪. ಚೆಲುವರಾಜು, ೧೯೯೩, **ದಕ್ಕಲರ ಸಂಸ್ಕೃತಿ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೫. ಚಿದಾನಂದಮೂರ್ತಿ.ಎಂ., **ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ,** ಗುಂಡಪ್ಪ ಗ್ರಂಥಾಲಯ, ಕೋಲಾರ.

೬. ಗೆಡ್ಡಂ ಮೋಹನ್‌ರಾವ್, ೨೦೧೩, **ಚಿಂದುಲ ಎಲ್ಲಮ್ಮ(ತೆಲುಗು ಸಾಹಿತ್ಯ),** ಚಿಂದು ಪಬ್ಲಿಕೇಷನ್, ಆಂಧ್ರಪ್ರದೇಶ್.

೭. ಜಾನಕಲ್ ರಾಜಣ್ಣ.ಎಂ., ೨೦೦೮, **ದಕ್ಕಲಿಗ,** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೮. ಜಯದಿರ್ ತಿರುವಲರಾವ್, ೨೦೧೧, **ಡಕ್ಕಲಿ ಜಾಂಬಪುರಾಣ(ತೆಲುಗು ಸಾಹಿತ್ಯ),** ಆಕೃತಿ ಆಫ್‌ಸೆಟ್ ಪ್ರಿಂಟರ್ಸ್, ಹೈದರಾಬಾದ್.

೯. ಜವರಯ್ಯ, ೧೯೯೭ **ದಲಿತ ವರ್ಗದ ಶರಣರು ಮತ್ತು ಶರಣೆಯರು,** ಮೈಸೂರು.

೧೦. ದ್ವಾರಕನಾಥ್.ಸಿ.ಎಸ್., ೨೦೧೨, **ಹಿಂದುಳಿದ ವರ್ಗಗಳ ಆಯೋಗದ ತೆರೆದ ವರದಿಯ ಆಯ್ದ ಭಾಗಗಳು,** ಅವಿರತ ಪುಸ್ತಕ ಪ್ರಕಾಶನ.

೧೧. ನನುಮಾಸಸ್ವಾಮಿ, ೨೦೧೪, **ವೃತ್ತಿ ಪುರಾಣಾಲು(ತೆಲುಗು ಸಾಹಿತ್ಯ),** ವೃತ್ತಿಪುರಾಣ ಸಂಶೋಧನ ಕೇಂದ್ರ, ಸಿಕಿಂದ್ರಾಬಾದ್.

೧೨. ನಾಯಕ ಹಾ.ಮಾ., ೨೦೧೫, **ಜಾನಪದ ಸ್ವರೂಪ,** ಗೀತಾಂಜಲಿ ಪುಸ್ತಕ ಪ್ರಕಾಶನ, ಬೆಂಗಳೂರು.

೧೩. ನಾಗರಾಜಯ್ಯ.ವಿ.ಎಚ್., ೨೦೧೪, ಗೆಲ್ಲೆಬಾನಿ ಕೆ.ಬ.ಸಿದ್ದಯ್ಯ ೨೦೦೯, **ಕರ್ನಾಟಕದ ಆದಿಜಾಂಬವ ಮಾತಂಗ ಪರಂಪರೆ ಸಾಂಸ್ಕೃತಿಕ ವಿಶ್ಲೇಷಣೆ,** ಅಪ್ರಕಟಿತ ಸಂಶೋಧನಾ ಪ್ರಬಂಧ.

೧೪. ಪುಲಿಕೊಂಡ ಸುಬ್ಬಾಚಾರಿ, ೨೦೦೮, **ನುಲುಕ ಚಂದಯ್ಯಲ ಆದಿ ಜಾಂಬವ ಮಹಾಪುರಾಣಂ,** ದ್ರಾವಿಡ ವಿಶ್ವವಿದ್ಯಾಲಯ, ಕುಪ್ಪಂ.

೧೫. ಪವಾರ್ ಹರಿಲಾಲ್ ಕೆ., ೧೯೯೩, **ಕರ್ನಾಟಕದ ಹೆಳವರು ಒಂದು ಜಾನಪದೀಯ ಅಧ್ಯಯನ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೬. ಬಿ.ವಿ.ಕೆ.ಶಾಸ್ತ್ರೀ, ೧೯೯೮, **ಗಾನಕಲಾ ಮಂಜರಿ ಸಂಪುಟ–೨,** ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೧೭. ಮೈತ್ರಿ ಕೆ.ಎಂ., ೨೦೦೨, **ಬುಡಕಟ್ಟು ಕುಲಕಸುಬುಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೮. ಮೊಗಳ್ಳಿ ಗಣೇಶ್, ೨೦೦೮: **ಅನಾದಿ,** ಪಲ್ಲವ ಪ್ರಕಾಶ, ಚನ್ನಪಟ್ಟಣ.

೧೯. ಮಧುಗುಂಡ್ಲಪೇಟೆ, ೨೦೦೨, **ಕರ್ನಾಟಕ ಬುಡಕಟ್ಟು ಜನಾಂಗಗಳು ಅಭಿವೃದ್ಧಿ,** ಅಕ್ಷತಾ ಪ್ರಕಾಶನ, ಮೈಸೂರು.

೨೦. ರಘುನಾಥ.ಸ., ಬರೆದಿರುವ **ಜಾಂಬ ಪುರಾಣದ ಸಣ್ಣ ಲೇಖನ.**

೨೧. ರಘುನಾಥ.ಸ., ಬರೆದಿರುವ **ದರುವು ಲೇಖನ.**

೨೨. ರಮೇಶ್ ಸ.ಚಿ. (ಸಂ)., ೨೦೦೫, **ಅಲೆಮಾರಿಗಳ ಸ್ಥಿತಿಗತಿ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೩. ಲಕ್ಷ್ಮೀಪತಿ ಕೋಲಾರ, ೧೯೯೨, **ಮಾಸ್ತೀಕರ ಸಂಸ್ಕೃತಿ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೨೪. ಶ್ರೀ ರಾ.ಸತ್ಯನಾರಾಯಣ, ೧೯೮೦, **ಕರ್ನಾಟಕ ಸಂಗೀತ ವಾಹಿನಿ,** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೨೫. ಹರಿಲಾಲ್ ಪವಾರ್, ೧೯೯೨, **ದಕ್ಕಲಿಗರು,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

26. enthoven R.E., 1975, **The tribes and castes of the Bombay.**

27. **Gazatter of Indian Karanataka Gazatter,** 1961 and 1979.

28. Havanur L.G., 1975 **The Karnataka State Government for Backward clasees special report.** Govt Press, Bangalore.

29. Meshr, 1970, **The Study of Nomads.**

30. Nanjundaiah. H.V., 1906, **The Mysore Tribes and castes vol-IV,** Govt Press-Kolar

31. Thurston E., 1975, **Caste and tribers of Southern India Vol: 2 and 7.**

**ಲೇಖನಗಳು**

೧. ಪ್ರಜಾವಾಣಿ ದಿನಪತ್ರಿಕೆ, ೧೩-೧೧-೨೦೧೭.

೨. ಸ. ರಘುನಾಥ ಅವರ ಜಾಂಬಪುರಾಣದ ಬರವಣಿಗೆ ಲೇಖನ.

೩. ಸ. ರಘುನಾಥ ಅವರ ದರುವುದು ಬರವಣಿಗೆ ಲೇಖನ.



## ೨. ವಕ್ತೃಗಳ ವಿವರ

| | | | |
|---|---|---|---|
| ೧. | ಶ್ರೀನಿವಾಸ | – | ಮಾತಂಗಪುರ |
| ೨. | ನಾರಾಯಣಸ್ವಾಮಿ | – | ಮಾತಂಗಪುರ |
| ೩. | ದೇವರಾಜ | – | ಮಾತಂಗಪುರ |
| ೪. | ಹರೀಶ್ | – | ಮಾತಂಗಪುರ |
| ೫. | ದಕ್ಕಲ ಮುನಿಸ್ವಾಮಿ | – | ಶಿವನಾಪುರ |
| ೬. | ನಾರಾಯಣಸ್ವಾಮಿ | – | ಸುಗಟೂರು |
| ೭. | ಆಂಜನಮ್ಮ | – | ಸುಗಟೂರು. |
| ೮. | ದಕ್ಕಲ ನಾರಾಯಣಸ್ವಾಮಿ | – | ಸುಗಟೂರು. |
| ೯. | ಹರೀಶ್ | – | ಸುಗಟೂರು. |
| ೧೦. | ಲಲಿತ | – | ಸುಗಟೂರು |
| ೧೧. | ಸುಶೀಲ | – | ಸುಗಟೂರು |
| ೧೨. | ರೇಣುಕಾ | – | ಸುಗಟೂರು |
| ೧೩. | ಗಂಗಮ್ಮ | – | ಮಾದವಗುರ್ಜೇನಹಳ್ಳಿ |
| ೧೪. | ಅಂಜನಪ್ಪ | – | ಮಾದವಗುರ್ಜೇನಹಳ್ಳಿ |
| ೧೫. | ಚಾಂದನಿ | – | ಮಾದವಗುರ್ಜೇನಹಳ್ಳಿ |
| ೧೬. | ರಾಜಪ್ಪ | – | ಮಾದವಗುರ್ಜೇನಹಳ್ಳಿ |
| ೧೭. | ದುರ್ಗಮ್ಮ | – | ಮಾದವಗುರ್ಜೇನಹಳ್ಳಿ |
| ೧೮. | ದೇವರಾಜ | – | ಶ್ರೀನಿವಾಸಪುರ |

೧೯. ಸ.ರಘುನಾಥ – ಶ್ರೀನಿವಾಸಪುರ

೨೦. ಲಕ್ಷ್ಮಪ್ಪ – ಶ್ರೀನಿವಾಸಪುರ

೨೧. ಪದ್ದೇ ಏಸು – ಶ್ರೀನಿವಾಸಪುರ

೨೨. ನಾಗರಾಜ – ಶ್ರೀನಿವಾಸಪುರ

೨೩. ದಕ್ಕಲ್ ಸೀನಪ್ಪ – ಶ್ರೀನಿವಾಸಪುರ

೨೪. ಚಿನ್ನಮ್ಮ – ಶ್ರೀನಿವಾಸಪುರ

೨೫. ರಾಮಯ್ಯ – ಕೋಟಿಗಾನಹಳ್ಳೀ

೨೬. ಲಕ್ಷ್ಮೀಪತಿ – ಕೋಲಾರ

೨೭. ನನುಮಾಸಸ್ವಾಮಿ – ಹೈದ್ರಾಬಾದ್
(ಉಸ್ಮನೀಯ ವಿಶ್ವವಿದ್ಯಾಲಯ)

೨೮. ರಾಮಾಂಜನೇಯ – ಶ್ರೀರಾಮಪುರ

೨೯. ರಾಮಕೃಷ್ಣ – ಶ್ರೀರಾಮಪುರ

೩೦. ರತ್ನಮ್ಮ – ಶ್ರೀನಿವಾಸಪುರ

೩೧. ಆಂಜನೇಯ – ಶ್ರೀರಾಮಪುರ

೩೨. ಶಿಲ್ಪ – ಶ್ರೀರಾಮಪುರ

೩೩. ನಾಗಪ್ಪ – ಬಾಣಮರಿ

೩೪. ಮಂಜುನಾಥ – ಬಾಣಮರಿ

೩೫. ಮುನಿರಾಜು – ಬಾಣಮರಿ

೩೬. ಮಂಜುನಾಥ – ಬಾಣಮರಿ

೩೭. ಮಂಜಮ್ಮ – ಬಾಣಮರಿ

೩೮. ಬಾಲಗುರುಮೂರ್ತಿ – ಬೆಂಗಳೂರು.

೩೯. ಜಾನಕಲ್ಲ ರಾಜಣ್ಣ – ಜಾನಕಲ್ಲ

೪೦. ಡಾ. ಚೆಲುವರಾಜು – ಹಂಪಿ ವಿಶ್ವವಿದ್ಯಾಲಯ

೪೧. ಮಲ್ಲಿಕಾರ್ಜುನ ಮಾನ್ಪಡೆ – ಹಂಪಿ ವಿಶ್ವವಿದ್ಯಾಲಯ

೪೨. ರಾಮಚಂದ್ರಪ್ಪ – ಹೆಚ್.ಕ್ರಾಸ್

೪೩. ವಿಜಯಕುಮಾರ – ದೊಡ್ಡಬಳ್ಳಾಪುರ

೪೪. ಲಲಿತ – ಬಾಣಮರಿ

೪೫. ಚಂದ್ರಶೇಖರ್ – ಜನಘಟ್ಟ

♦♦♦

# ೩. ಛಾಯಾಚಿತ್ರಗಳು



ದಕ್ಕಲ ಮುನಿಸ್ವಾಮಿಯೊಂದಿಗೆ ಮಾಹಿತಿ ಸಂಗ್ರಹಣೆ




ಕಿನ್ನರಿಯೊಂದಿಗೆ ದಕ್ಕಲ ನಾರಾಯಣಸ್ವಾಮಿ



ಕಿನ್ನರಿಯೊಂದಿಗೆ ದಕ್ಕಲ ಆಂಜನಮ್ಮ



ಈಚಲು ಚಾಪೆ ಎಣೆಯುತ್ತಿರುವ ದಕ್ಕಲ ಆಂಜನಮ್ಮ



ಮಗುವಿಗೆ ತಲೆಕೂದಲು ತೆಗೆಯುವುದಕ್ಕೆ ಮುನೇಶ್ವರ ಗುಡಿ
ತಯಾರಿಸುತ್ತಿರುವ ದಕ್ಕಲರ ಹರೀಶ್



ಮಗುವಿಗೆ ತಲೆಕೂದಲು ತೆಗೆಯುವುದಕ್ಕೆ ಮುನೇಶ್ವರನಿಗೆ
ಪೂಜಾ ವಿಧಿವಿಧಾನ ಪದ್ಧತಿ



ದಕ್ಕಲರು ಬೇಟೆಯಾಡುವ ಸಂದರ್ಭದಲ್ಲಿ ಬಳಸುವ ಕೌಜುಗ ಮತ್ತು ಮೊಲದ ಬಲೆ



ಕೌಜುಗ ಮತ್ತು ಮೊಲದ ಬಲೆಯೊಂದಿಗೆ ದಕ್ಕಲ ನಾಗೇಶ ಮತ್ತು ದೇವರಾಜ



ತಿಂಗಳ ತಿಥಿಯ ಕಾರ್ಯಕ್ರಮ



ದಕ್ಕಲರು ಭಿಕ್ಷೆ ಬೇಡಿದ ಆಹಾರವನ್ನು ರಕ್ಷಿಸುವ ಹುಟ್ಟಿ



ಅರುಂಧತಿ ವಿಗ್ರಹಕ್ಕೆ ಪೂಜೆ ಸಲ್ಲಿಸುತ್ತಿರುವ ಮಾದಿಗ ನಾರಾಯಣಸ್ವಾಮಿ



ದಕ್ಕಲ ಮುನಿಸ್ವಾಮಿ ಅವರಿಗೆ ದಕ್ಕಲ ಜಾಂಬ ಪುರಾಣ ಹಾಡುಗಾರಿಕೆಗಾಗಿ ಪ್ರಶಸ್ತಿ



ದಕ್ಕಲ ಆಂಜನಮ್ಮ ಮತ್ತು ನಾರಾಯಣಸ್ವಾಮಿ ಕುಟುಂಬದೊಂದಿಗೆ ಸಂಶೋಧಕರು



ದಕ್ಕಲ ಮುನಿಸ್ವಾಮಿ ಹೆಂಡತಿ ಆಂಜನಮ್ಮ ಪಾತ್ರೆ ತೊಳೆಯುವುದರಲ್ಲಿ
ಮಗ್ನರಾಗಿರುವುದು



ಆವಣಿ ಬೆಟ್ಟದಲ್ಲಿರುವ ಜಾಂಬುವತನ ವಿಗ್ರಹ



ದಕ್ಕಲರ ಮುನಿಸ್ವಾಮಿ ಕುಟುಂಬ

